# ಚಾಮರಾಜನಗರ ತಾಲೂಕಿನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ

(ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಮಹಾಪ್ರಬಂಧ)

ಸಂಶೋಧಕ
ಜಯಶಂಕರ ಎನ್.

ಮಾರ್ಗದರ್ಶಕರು
ಡಾ. ವಾಸುದೇವ ಬಡಿಗೇರ
ಸಹ ಪ್ರಾಧ್ಯಾಪಕರು





ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ
ಸಮಾಜವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ-೫೮೩ ೨೭೬
೨೦೧೭

# ಚಾಮರಾಜನಗರ ತಾಲೂಕಿನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ

(ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಮಹಾಪ್ರಬಂಧ)

ಸಂಶೋಧಕ
ಜಯಶಂಕರ ಎಸ್.

ಮಾರ್ಗದರ್ಶಕರು
ಡಾ. ವಾಸುದೇವ ಬಡಿಗೇರ
ಸಹ ಪ್ರಾಧ್ಯಾಪಕರು



ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ
ಸಮಾಜವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ-೫೮೩ ೨೭೬

೨೦೧೨

# ಪ್ರಮಾಣ ಪತ್ರ

ಚಾಮರಾಜನಗರ ತಾಲೂಕಿನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ಎಂಬ ಮಹಾಪ್ರಬಂಧ ವನ್ನು ಕನ್ನಡ ವಿಶ್ವವಿದ್ಯಾಲಯದ ಪಿಎಚ್.ಡಿ. ಪದವಿಗಾಗಿ ಡಾ. ವಾಸುದೇವ ಬಡಿಗೇರ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ, ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗಕ್ಕೆ ಸಲ್ಲಿಸಿದ್ದೇನೆ. ಪ್ರಸ್ತುತ ಮಹಾಪ್ರಬಂಧವು ನನ್ನ ಸ್ವಂತ ಪರಿಶ್ರಮದ ಫಲ ವಾಗಿದ್ದು, ಈ ಮೊದಲು ಇದನ್ನು ಇನ್ನಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ಜಯಶಂಕರ ಎನ್.
ಸಂಶೋಧಕ
ಪ್ರಾ.ಇ. ಮತ್ತು ಪು. ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

ಸ್ಥಳ : ವಿದ್ಯಾರಣ್ಯ
ದಿನಾಂಕ : 30/11/2012

# ದೃಢೀಕರಣ ಪತ್ರ

ಚಾಮರಾಜನಗರ ತಾಲೂಕಿನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ಎಂಬ ಮಹಾಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಪಿಎಚ್.ಡಿ.ಪದವಿಗಾಗಿ ಜಯಶಂಕರ ಎನ್. ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ, ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗಕ್ಕೆ ಸಲ್ಲಿಸುತ್ತಿದ್ದಾರೆ. ಪ್ರಸ್ತುತ ಪ್ರಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ಡಾ. ವಾಸುದೇವ ಬಡಿಗೇರ
ಮಾರ್ಗದರ್ಶಕರು ಮತ್ತು ಸಹ ಪ್ರಾಧ್ಯಾಪಕರು
ಪ್ರಾ.ಇ. ಮತ್ತು ಪು. ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

ಸ್ಥಳ : ವಿದ್ಯಾರಣ್ಯ
ದಿನಾಂಕ : 30/11/2012

# ಪರಿವಿಡಿ

ಗತಕಾಲದ ಘಟನಾವಳಿಗಳನ್ನು ನಿರಂತರವಾಗಿ ಸಂಶೋಧನೆ, ಅನ್ವೇಷಣೆ ಮಾಡುವ ಮೂಲಕ ಇತಿಹಾಸವು ಒಂದು ರೂಪವನ್ನು ಪಡೆಯುತ್ತ ಸಾಗುತ್ತದೆ. ಪ್ರಾಚೀನ ಕಾಲದಿಂದಲೂ ಸಂಸ್ಕೃತಿ ಎಂದು ಅರ್ಥೈಸುವ ಪರಂಪರೆಯು ಪ್ರತಿ ಕಾಲಘಟ್ಟದಲ್ಲಿ ಹೊಸದನ್ನು ತನ್ನೊಳಗೆ ಸೇರಿಸಿಕೊಳ್ಳುತ್ತಾ ಪರಿವರ್ತನೆಯಾಗುತ್ತದೆ. ಆದರೆ ಸಂಸ್ಕೃತಿಯು ಏಕಕಾಲಕ್ಕೆ ಯಾವುದೇ ಪ್ರಬಲವಾದ ಒತ್ತಡಕ್ಕೆ ಒಳಪಡುವುದಿಲ್ಲ ಹಾಗೂ ಸಂಪೂರ್ಣವಾಗಿ ಬದಲಾಗುವುದಿಲ್ಲ. ಅದು ನೈಸರ್ಗಿಕ ಪ್ರಭಾವಗಳಿಂದ ಮತ್ತು ಮಾನವನ ಕಾರ್ಯಚಟುವಟಿಕೆಗಳಿಂದ ಬೆಳವಣಿಗೆ ಹೊಂದುತ್ತವೆ.

ಇತಿಹಾಸವು ಜೀವನಕ್ಕೆ ಯಾವಾಗಲೂ ಅಂಟಿಕೊಂಡಿರುತ್ತದೆ. ನಾವು ಆಲೋಚಿಸುವ ಬಗೆ ನಮ್ಮ ತಾರ್ಕಿಕ ಚೌಕಟ್ಟು ಹಾಗೂ ನಮ್ಮ ವ್ಯವಹಾರ ವಿಧಾನಗಳೆಲ್ಲವು ಹಿಂದೆ ನಡೆದದ್ದರ ಅಥವಾ ಮುಂದಿನ ಯೋಜನೆಗಳ ಮೇಲೆ ಅವಲಂಬಿಸಿವೆ. ಇತಿಹಾಸ ಅಧ್ಯಯನಗಳು ಮುಖ್ಯವಾಗಿ ದಾಖಲಾಗಿರುವ, ಪ್ರತ್ಯೇಕವಾಗಿ ಕಂಡುಬರುವ ಅವಶೇಷಗಳು ಮಾತ್ರ ಚರಿತ್ರೆ ಅಧ್ಯಯನಗಳಿಗೆ ಮುಖ್ಯ ಆಕರಗಳಾಗಿ ಉಳಿಯುದಿಲ್ಲ. ಸುಮಾರು ವರ್ಷಗಳಿಂದ ಜನರು ಅನೇಕ ಸಾಂಸ್ಕೃತಿಕ ಅಂಶಗಳೂ ಕೂಡಾ ಇತಿಹಾಸದ ಅಧ್ಯಯನಗಳಿಗೆ ಪೂರಕವಾಗಿ ಬಳಸಿಕೊಳ್ಳುವುದು ಪ್ರಸ್ತುತ ಸಂದರ್ಭದಲ್ಲಿ ಅವಶ್ಯಕತೆಯಿದೆ.

ಕರ್ನಾಟಕ ಭೌಗೋಳಿಕ ಪರಿಸರವು ವೈವಿಧ್ಯತೆಯಿಂದ ಕೂಡಿದೆ. ಇಲ್ಲಿನ ನೈಸರ್ಗಿಕ ಸಂಪತ್ತಿನೊಂದಿಗೆ ಆಯಾ ಪರಿಸರದ ಪ್ರಭಾವಕ್ಕೆ ಒಳಗಾಗಿ ಮಾನವ ಹೇಗೆ ನಾಗರಿಕತೆಯ ವಿವಿಧ ಹಂತಗಳನ್ನು ಮುಟ್ಟಿದನು ಎಂಬ ಅಂಶವು ಪುರಾತತ್ವ ಶೋಧನೆ ಮತ್ತು ಇತಿಹಾಸ ಅಧ್ಯಯನದಿಂದ ತಿಳಿಯುತ್ತದೆ. ಇತಿಹಾಸ ಪೂರ್ವ ಕಾಲದಲ್ಲಿ ಮಾನವನ ಜೀವನ ಚರಿತ್ರೆಯನ್ನು ತಿಳಿಯಲು ನಮಗೆ ಆಧಾರಗಳ ಸಮಸ್ಯೆಗಳಾಗಿತ್ತು. ಈ ಹಂತದ ಮಾನವನು ಅಲೆಮಾರಿಯಾಗಿ ಬೆಟ್ಟ ಗುಡ್ಡಗಳು, ಗವಿ, ಕಲ್ಲಾಸರೆ, ಕಣಿವೆ, ನದಿ ಸರೋವರಗಳ ಸಮೀಪದಲ್ಲಿ ವಾಸಿಸುತ್ತಿದ್ದು, ಆಹಾರ ಅನ್ವೇಷಣೆಯನ್ನು ಮೈಗೂಡಿಸಿಕೊಂಡಿದ್ದನು. ನಂತರ ಗೆಡ್ಡೆ ಗೆಣಸು, ಹಣ್ಣು ಹಂಪಲುಗಳನ್ನು ತಿನ್ನುತ್ತಿದ್ದ ಇವನು ಬೇಟೆಯಾಡುವುದನ್ನು ಕಲಿತುಕೊಂಡನು. ಮುಂದೆ ಪಶು ಸಂಗೋಪನೆಯಲ್ಲದೆ ಕೃಷಿಯನ್ನು ರೂಢಿಸಿಕೊಂಡನು. ಇಂತಹ ಸಂದರ್ಭದಲ್ಲಿ ಮಾನವನು ತನಗೆ ಇಷ್ಟ ಬಂದ ವಸ್ತುಗಳನ್ನು ತಯಾರಿಸಿಕೊಂಡು ಉಪಯೋಗಿಸಿ ಬಿಟ್ಟು ಹೋದ ಅವಶೇಷಗಳನ್ನು ಅನ್ವೇಷಿಸಿ ಮತ್ತು ಉತ್ಖನನ ಮಾಡುವುದರ ಮೂಲಕ ಅಲ್ಲಿ ದೊರೆಯುವ ವಸ್ತುಗಳಿಂದ ಅಲ್ಲಿನ ಕಾಲಘಟ್ಟದ ಇತಿಹಾಸ ನಿರ್ಮಾಣ ಹಾಗೂ ಸಮಾಜ ಹೊಸ ವ್ಯವಸ್ಥೆಯ ಕಡೆಗೆ ಹೆಜ್ಜೆ ಹಾಕಿದನು. ಹೀಗೆ ಹಂತ ಹಂತವಾಗಿ ಪ್ರಗತಿಯತ್ತ ನಡೆದು ಬಂದ ಮಾನವನ ಚರಿತ್ರೆಯನ್ನು ಸೂಕ್ತ ರೂಪಗಳಿಂದ ಅಧ್ಯಯನ

ನಡೆಸುವುದು ಅವಶ್ಯಕವಾಗಿದೆ. ಈ ಬಗೆಯ ಅಧ್ಯಯನಗಳು ಸಮಗ್ರ ಇತಿಹಾಸ ರಚನೆಗೆ ಸಹಾಯಕವಾಗುತ್ತದೆ.

ರಾಜವಂಶ, ಅವರ ಕಾಲಮಾನ, ಯುದ್ಧ ಹಾಗೂ ಸಾಂಸ್ಕೃತಿಕ ಬದುಕನ್ನು ಗಮನದಲ್ಲಿಟ್ಟುಕೊಂಡು ಇತಿಹಾಸವನ್ನು ರಚಿಸುವ ಕಾಲವೊಂದಿತ್ತು, ಆದರೆ ಆಧುನಿಕ ಇತಿಹಾಸ ಲೇಖನ ಕಲೆ, ಸಂಶೋಧನೆ ದೃಷ್ಟಿಕೋನ ಬದಲಾಗದೆ ಅಂದರೆ ಜನ ಇತಿಹಾಸ, ಪರಿಸರ ಇತಿಹಾಸ, ಮೌಖಿಕ ಇತಿಹಾಸ ಹಾಗೂ ಇನ್ನೂ ಅನೇಕ ವಿವಿಧ ಇತಿಹಾಸದ ಬಗೆಗೆ ಸಮಗ್ರ ಮತ್ತು ಸೂಕ್ಷ್ಮ ಅಧ್ಯಯನಗಳಾಗುತ್ತಿವೆ. ಅದರಲ್ಲೂ ಪ್ರಾದೇಶಿಕ ಮಟ್ಟದಲ್ಲಿ ಇಂತಹ ಸಮಗ್ರ ಹಾಗೂ ಸೂಕ್ಷ್ಮ ಅಧ್ಯಯನಗಳನ್ನು ನಡೆಸುವುದರ ಮೂಲಕ ಪ್ರದೇಶದ ಮಾನವನ ಚಟುವಟಿಕೆ ಜೀವನ ಕ್ರಮ ಮತ್ತು ಸಂಸ್ಕೃತಿಯ ಬಗ್ಗೆ ತಿಳಿಯಲು ಸಾಧ್ಯವಾಗುತ್ತದೆ.

## ಅಧ್ಯಯನದ ಹಿನ್ನೆಲೆ

ಕರ್ನಾಟಕ ರಾಜ್ಯದ ದಕ್ಷಿಣ ತುದಿಯಲ್ಲಿರುವ ಚಾಮರಾಜನಗರ ಜಿಲ್ಲೆಯು ಭವ್ಯವಾದ ಇತಿಹಾಸ ಹಾಗೂ ಸಾಂಸ್ಕೃತಿಕ ಪರಂಪರೆಯಿಂದ ಕೂಡಿದ್ದು ಗಡಿ ಜಿಲ್ಲೆಯಾಗಿ ರಾಜ್ಯ ಭೂಪಟದಲ್ಲಿ ವಿಶಿಷ್ಟ ಸ್ಥಾನ ಪಡೆದಿದೆ. ಇದು ಮೈಸೂರಿನ ಆಗ್ನೇಯ ಭಾಗದಲ್ಲಿದೆ. ಜಿಲ್ಲೆಯ ಶ್ರೀಮಂತವಾದ ಭೌಗೋಳಿಕ, ಚಾರಿತ್ರಿಕ ಮತ್ತು ಪುರಾತತ್ವ ಹಿನ್ನಲೆಯನ್ನು ಹೊಂದಿದೆ. ಜಾನಪದ ಮಹಾ ನಾಯಕನಾಗಿ ಇಡೀ ನಾಡಿನ ಸಮಸ್ತ ಜನಮನದಲ್ಲಿ ಶಾಶ್ವತವಾಗಿ ನೆಲೆಸಿರುವ ಮಲೆ ಮಹದೇಶ್ವರ ಮತ್ತು ಮಂಟೇಸ್ವಾಮಿಯಂತಹ ಜಂಗಮ ಶ್ರೇಷ್ಠರು ನೆಲೆಸಿದ ಪುಣ್ಯ ಪ್ರಾಂತ್ಯವಿದು. ಹಾಗೆಯೇ ಪಶ್ಚಿಮ ಘಟ್ಟಕ್ಕೆ ಹೊಂದಿಕೊಂಡಿರುವ ಬಿಳಿಗಿರಿರಂಗನ ಬೆಟ್ಟ ಸುಮಾರು ೨೦,೦೦೦ ಚ.ಕಿ.ಮೀ, ಭೂಪ್ರದೇಶವನ್ನು ಆವರಿಸಿಕೊಂಡಿದೆ. ಸಮುದ್ರದಿಂದ ೫೪೦೦ ಅಡಿ ಎತ್ತರದಲ್ಲಿರುವ ಈ ಬೆಟ್ಟ ಪ್ರದೇಶವು ಪ್ರಪಂಚದಲ್ಲೇ ವಿಶಿಷ್ಟವಾದ ಸಸ್ಯ ವರ್ಗವನ್ನು ಹೊಂದಿದೆ.

ಅಸಂಖ್ಯಾತ ವನ್ಯ ಜೀವಿಗಳ, ಆದಿವಾಸಿಗಳ ತಾಣವೂ ಆಗಿದೆ. ಹೀಗೆ ಭೌಗೋಳಿಕವಾಗಿ, ಚಾರಿತ್ರಿಕವಾಗಿ ಮತ್ತು ಸಾಂಸ್ಕೃತಿಕವಾಗಿ ಬಹಳ ಸಂಪದ್ಭರಿತವಾಗಿದ್ದ ಆಳುವ ಶಕ್ತಿಯ ನಿರಂತರ ಜಡತ್ವದಿಂದ ಕರ್ನಾಟಕ ಭೂಪಟದಲ್ಲಿ ಚಾಮರಾಜನಗರ ಬರ ಮತ್ತು ಹಿಂದುಳಿದ ಜಿಲ್ಲೆ ಎಂದು ಸ್ಥಿರವಾಗಿ ಉಳಿದಿದೆ.

ಈ ತಾಲೂಕು ಹತ್ತನೆಯ ಶತಮಾನದ ತನಕ ಗಂಗರ ಆಳ್ವಿಕೆಗೆ ಒಳಪಟ್ಟಿತ್ತು. ಈಗ ಗಂಗವಾಡಿ ಎಂಬ ಪ್ರಾಂತ್ಯಕ್ಕೆ ಮೈಸೂರು ಮತ್ತು ಚಾಮರಾಜನಗರ ಎರಡು ಜಿಲ್ಲೆಗಳೂ ಸೇರಿದ್ದವು. ಕ್ರಿ.ಶ.೧೦೦೦-೧೧೧೬ರವರೆಗೆ ಚೋಳರು ಈ ಪ್ರಾಂತ್ಯದ ಅಧಿಪತಿಗಳಾಗಿದ್ದವು. ಕ್ರಿ.ಶ.೧೧೧೬ ರಿಂದ ಹೊಯ್ಸಳ ಚಕ್ರವರ್ತಿ ವಿಷ್ಣುವರ್ಧನ ಇದರ ಅಧಿಪತ್ಯ ಹೊಂದಿದ. ಹೊಯ್ಸಳರ ಅನಂತರ ವಿಜಯನಗರದ ಸಾರ್ವಭೌಮರು ಸಹ ಈ ಪ್ರಾಂತ್ಯವನ್ನು ಆಳಿದರು. ಹೊಯ್ಸಳರು ಕಾಲದಲ್ಲಿ ಚಾಮರಾಜನಗರಕ್ಕೆ 'ಅರಿ ಕೊಠಾರ' ಎಂಬ ಹೆಸರಿತ್ತು. ಇದು ಮುಂದೆ 'ಅರಿಕುಠಾರ'ವಾಯಿತು. ಇದನ್ನ ಪುರಾಣದಲ್ಲಿ "ಮಣಿಪುರ" ಎಂದು

ಕರೆಯಲಾಗಿದೆ. 'ಒಡೆಯೂರು" ಎಂಬ ಹೆಸರೂ ಚಾಮಾರಾಜನಗರಕ್ಕೆ ಇತ್ತೆಂದು ಹೇಳಲಾಗಿದೆ. ಉಮತ್ತೂರು ನಾಯಕರು ವಿಜಯನಗರದ ದೊರೆಗಳ ಸಾಮಂತರಾಗಿ ಈ ಪ್ರಾಂತ್ಯದಲ್ಲಿ ಆಡಳಿತ ಮಾಡಿಕೊಂಡಿದ್ದರು. ಕಾಲ ಕಳೆದಂತೆ ಮೈಸೂರಿನ ಒಡೆಯರು ಇಲ್ಲಿ ಪ್ರಬಲವಾಗಿ ಬೆಳೆದಿದ್ದರೂ ಕ್ರಿ.ಶ.೧೭೬೧-೧೭೯೯ರವರೆಗೂ ಹೈದರಆಲಿ ಮತ್ತು ಟಿಪ್ಪುಸುಲ್ತಾನ ಒಡೆಯರನ್ನು ಹಿಂದಿಕ್ಕಿ ತಮ್ಮ ಅಧಿಪತ್ಯವನ್ನು ಸ್ಥಾಪಿಸಿದರು. ಮುಂದೆ ಯದುಕುಲ ಮನೆತನದ ಮುಮ್ಮಡಿ ಕೃಷ್ಣರಾಜ ಒಡೆಯರ ತಂದೆ ಚಾಮರಾಜ ಒಡೆಯರು ೧೮೧೮ರಲ್ಲಿ ಇಲ್ಲಿ ಜನ್ಮ ತಾಳಿದ್ದರಿಂದ ಅಲ್ಲಿಂದೀಚೆಗೆ ಈ ಅರಿಕುಠಾರವು ಚಾಮರಾಜನಗರ ಎಂದು ನಾಮ ನಿರ್ದೇಶನವನ್ನು ಹೊಂದಿತ್ತು.

ಚಾಮರಾಜನಗರ ಮೈಸೂರು ಜಿಲ್ಲೆಯ ಹನ್ನೊಂದು ತಾಲೂಕುಗಳ ಪೈಕಿ ಒಂದಾಗಿತ್ತು. ನಂತರ ೧೯೯೭ ಆಗಸ್ಟ್ ೧೫ ರಂದು ಜಿಲ್ಲಾ ಕೇಂದ್ರವಾಗಿ, ಕರ್ನಾಟಕದ ರಾಜ್ಯದ ೨೭ ಜಿಲ್ಲೆಗಳಲ್ಲಿ ಒಂದಾಗಿ ಸೇರ್ಪಡೆಯಾಗಿದ್ದ ಚಾಮರಾಜನಗರ, ಕೊಳ್ಳೆಗಾಲ, ಗುಂಡ್ಲುಪೇಟೆ, ಯಳಂದೂರು ಎಂಬ ನಾಲ್ಕು ತಾಲೂಕುಗಳನ್ನು ಹೊಂದಿದೆ. ಮೈಸೂರು ನಗರದ ಅಗ್ನೇಯಕ್ಕೆ ೬೧ ಕಿ.ಮೀ. ದೂರದಲ್ಲಿರುವ ಚಾಮರಾಜನಗರದ ಪೂರ್ವ ಭಾಗದಲ್ಲಿ ಕೊಳ್ಳೇಗಾಲ, ಯಳಂದೂರು ತಾಲೂಕುಗಳು ದಕ್ಷಿಣದಲ್ಲಿ ತಮಿಳುನಾಡಿನ ಕೊಯಮತ್ತೂರು ಜಿಲ್ಲೆ, ಪಶ್ಚಿಮದಲ್ಲಿ ಗುಂಡ್ಲುಪೇಟೆ, ಮೈಸೂರು ಜಿಲ್ಲೆಗೆ ಸೇರಿದ ನಂಜನಗೂಡು ತಾಲೂಕು. ಉತ್ತರದಲ್ಲಿ ತಿರುಮಕೂಡಲು ನರಸೀಪುರ ತಾಲೂಕು ಇದ್ದು, ಇವು ಚಾಮರಾಜನಗರ ತಾಲೂಕಿನ ಎಲ್ಲೆಗಳಾಗಿವೆ. ಈ ತಾಲೂಕುಗಳನ್ನು ಚಂದಕವಾಡಿ, ಸಂತೇಮರಳ್ಳಿ, ಕಸಬಾ, ಹರವೆ, ಹರದನಹಳ್ಳಿ ಎಂದು ೫ ಹೋಬಳಿ ಕೇಂದ್ರಗಳಾಗಿ ವಿಂಗಡಿಸಲಾಗಿದೆ.

ಚಾಮರಾಜನಗರ ತಾಲೂಕಿನ ಮಡಿಲಲ್ಲಿ ಹಲವು ಅಮೂಲ್ಯವಾದ ಐತಿಹಾಸಿಕ ದಾಖಲೆಗಳು, ಇತಿಹಾಸಗಳು, ದೇವಾಲಯಗಳು, ಆಡಳಿತ ವಿಭಾಗ, ಸಂಪ್ರದಾಯ ಆಚರಣೆ ಹಾಗೂ ಸಾಂಸ್ಕೃತಿಕ ಅಂಶಗಳನ್ನು ಒಳಗೊಂಡಿದೆ.

## ಅಧ್ಯಯನದ ಉದ್ದೇಶ ಮತ್ತು ಮಹತ್ವ

ಈ ಪ್ರದೇಶದ ಪರಿಸರಕ್ಕೆ ಅನುಗುಣವಾಗಿ ಸಂಸ್ಕೃತಿ ಮೈ ತಳೆದಿರುತ್ತದೆ. ಕಾಲ ದೇಶಗಳಿಗನುಗುಣ ವಾಗಿ ಸಮಾಜದಲ್ಲಾದ ಬದಲಾವಣೆಗಳಿಂದ ಸಂಸ್ಕೃತಿಯ ಚಲನ ಶೀಲತ್ವದಿಂದಾಗಿ ಅದರ ಸ್ವರೂಪ ವಿನ್ಯಾಸದಲ್ಲಿ ಬದಲಾವಣೆ ಅನಿವಾರ್ಯ.

ವಿವಿಧ ಜ್ಞಾನ ಶಿಸ್ತುಗಳ ಅನ್ಯೋನ್ಯ ಸಹಕಾರದಿಂದ ಅಧ್ಯಯನದ ವಸ್ತುವನ್ನು ಬಹುಮುಖಿಯ ದೃಷ್ಟಿಕೋನಗಳಿಂದ ವಿಶದವಾಗಿ ಅರಿಯಲು ಶಕ್ಯ. ಭೌಗೋಳಿಕ ಕ್ಷೇತ್ರದ ಸಾಂಸ್ಕೃತಿಕ ಸಂಶೋಧನೆಯ

ಕ್ಷೇತ್ರ ಕಾರ್ಯದ ಸಂದರ್ಭದಲ್ಲಿ ಸೂಕ್ಷ್ಮ ಅವಲೋಕನದಿಂದ ಈ ಎಲ್ಲ ಶಿಸ್ತುಗಳ ಪರಿಸ್ಥಿರಾಂತರ್ಗತವಾದ ನೆಲೆಯಲ್ಲಿ ಕಾರ್ಯ ನಿರತವಾಗಿರುವುದನ್ನು ಕಾಣಬಹುದು.

ಸ್ಥಳ ಕೇಂದ್ರಿತ ಅಧ್ಯಯನದಲ್ಲಿ ಸ್ಥಳದ ಇತಿಹಾಸವನ್ನು ಗ್ರಹಿಸುವಾಗ ಎರಡು ವಿಭಿನ್ನ ಪರಂಪರೆಗಳಿಂದ ನೆರವು ಪಡೆಯಬಹುದು. ಪುರಾತತ್ವವು ಒಂದು ಬಗೆಯಾದ ಚಿತ್ರಣವನ್ನು ಕಟ್ಟಿಕೊಟ್ಟರೆ, ಲಿಖಿತ ದಾಖಲೆಗಳನ್ನೊಳಗೊಂಡ ಇತಿಹಾಸವು ಮತ್ತೊಂದು ಬಗೆಯ ಚಿತ್ರವನ್ನು ಕಟ್ಟಿ ಕೊಡುತ್ತದೆ. ಈ ಎರಡನ್ನು ನಾವು ನಿರ್ಲಕ್ಷಿಸುವಂತಿಲ್ಲ. ತಲೆ ಮಾರುಗಳಿಂದ ದಾಟಿ ಮುಂದುವರೆದುಕೊಂಡು ಬಂದ ವಾಕ್ ಸಂಪ್ರದಾಯದ ಸರಣಿಯಲ್ಲಿ ಐತಿಹಾಸಿಕ ಭೌಗೋಳಿಕ ಹಿನ್ನಲೆಗಳ ವಿವರಗಳು ಸಿಗುವ ಸಾಧ್ಯತೆಯಿಂದ, ಆಯಾ ಕಾಲಗಳಲ್ಲಿ ಆಳ್ವಿಕೆ ಮಾಡಿದ ಅರಸರನ್ನು ಗಮನಿಸುವಾಗಲೇ ಅದರೊಂದಿಗೆ ಸಾಮಾಜಿಕ, ಆರ್ಥಿಕ, ಧಾರ್ಮಿಕ ಮುಂತಾದ ಅಂಶಗಳನ್ನು ಪ್ರಾಮುಖತೆಯನ್ನು ಪಡೆದುಕೊಳ್ಳುತ್ತವೆ. ಅದೇ ಕಾಲದಲ್ಲಿ ಹಲವಾರು ವಿಚಾರವನ್ನು ಒಟ್ಟು ಇರಿಸಿಕೊಂಡು ಎನ್ನುವುದು ಅಷ್ಟೇ ಮುಖ್ಯ.

ಈ ಒಂದು ಪ್ರದೇಶಕ್ಕೆ ಅದರ ಎಲ್ಲೆಗಳ ಮುಖೇನ ಸಂಪರ್ಕದ ಸೇತುಗಳು ಇರುತ್ತವೆ. ಕೊಡು ಪಡೆಯುವ ದ್ವಿಮುಖ ಕ್ರಿಯೆ ಅರಿವಿಗೆ ಬಂದು ನಿರ್ದಿಷ್ಟ ಸ್ಥಳದ ಅಧ್ಯಯನವೆಂದರೆ ಪ್ರತ್ಯೇಕ ಪರೋಕ್ಷವಾಗಿ ಇವೆಲ್ಲವುಗಳ ಅಧ್ಯಯನ ಬಹಳ ಮುಖ್ಯ.

ಚಾಮರಾಜನಗರ ತಾಲೂಕು ಸಾಂಸ್ಕೃತಿಕವಾಗಿ ಶ್ರೀಮಂತವಾದ ಒಂದು ಪ್ರದೇಶ. ಇಲ್ಲಿ ಅನೇಕ ಪಂಗಡಗಳ ಮತ್ತು ಮತಪಂಥಗಳ ತಳ ಸಮುದಾಯಗಳ ಕೇಂದ್ರ. ಅಲ್ಲದೇ ಕರ್ನಾಟಕ, ತಮಿಳು ಸಂಸ್ಕೃತಿಗಳ ಸಮ್ಮಿಶ್ರಣ, ಕರ್ನಾಟಕ ಭೂಪಟದಲ್ಲಿ ಕೇವಲ ಗಡಿ ಜಿಲ್ಲೆಯಾಗಿ, ಬರಪೀಡಿತ ಪ್ರದೇಶವಾಗಿ, ಒಂದು ರೀತಿಯ ಶಾಪಗ್ರಸ್ತ ಜಿಲ್ಲೆಯಾಗಿ ಗುರುತಿಸಲ್ಪಟ್ಟಿರುವ ಈ ಪ್ರದೇಶದಲ್ಲಿ ಪ್ರಾಚೀನ ಅರಸು ಮನೆತನ, ಗಂಗರ ಕಾಲದಿಂದ ದೇವಾಲಯ ನಿರ್ಮಾಣ, ಆಚರಣೆಗಳನ್ನು ಕಾಣಬಹುದು. ಈ ಪ್ರದೇಶದಲ್ಲಿ ಪ್ರಾಚೀನ ಅವಶೇಷಗಳ ಶಿಲ್ಪಗಳು, ಶಾಸನಗಳ, ಪ್ರಾಗೈತಿಹಾಸ ನೆಲೆಗಳನ್ನು ಗುರುತಿಸುವ ಪ್ರಯತ್ನಕ್ಕೆ ಹೆಚ್ಚಿನ ಒತ್ತು ನೀಡಲಾಗಿದೆ. ಆದರೆ ಬೇರೆ ಬೇರೆ ಸಂಸ್ಕೃತಿಗಳ ಕುರುಹುಗಳನ್ನು ಹೊಂದುವ ಹಲವು ನೆಲೆಗಳೂ ಈ ಪರಿಸರದಲ್ಲಿವೆ.

ಈ ಪರಿಸರದಲ್ಲಿ ಆದಿವಾಸಿ ಬುಡಕಟ್ಟು ಸಮುದಾಯಗಳೂ ಕೂಡಾ ವೈಷ್ಣವ ಹಾಗೂ ಶೈವಪಂಥಗಳಲ್ಲಿ ಕ್ರಿಯಾಶೀಲವಾಗಿರುವುದನ್ನು ನಾವು ನೋಡಬಹುದಾಗಿದೆ. ಇಲ್ಲಿನ ಸೋಲಿಗ ಸಮುದಾಯದ ಶ್ರೀವೈಷ್ಣವ ಮತ್ತು ಶೈವ ಸಂಸ್ಕೃತಿಯಲ್ಲಿ ಹಂಚಿಕೆಯಾಗಿದೆ. ಅದರಲ್ಲೂ ವಿಶೇಷವಾಗಿ ಉಪ್ಪಾರ ಸಮುದಾಯ ಈ ತಾಲೂಕು ಹೆಚ್ಚು ಇರುವುದರಿಂದ ಇದರ ಮೇಲೆ ವಿಶೇಷ ಸಂಶೋಧನೆಗೆ ಆಯ್ದುಕೊಳ್ಳಲಾಗಿದೆ.

ಈ ಪರಿಸರದಲ್ಲಿ ಇತಿಹಾಸ ಮತ್ತು ಸಾಂಸ್ಕೃತಿಕ ಸಂಗತಿಗಳನ್ನು ಕಟ್ಟಿಕೊಡುವ ಮಹತ್ವದ ಆಕರಗಳಾದ ಸ್ಥಳನಾಮ, ದೇವಾಲಯಗಳು ಶಾಸನಗಳು ಇವೆ. ಈ ವಾಸ್ತು ಶಿಲ್ಪಕಲೆಯ ದೃಷ್ಟಿಯಿಂದ ಮಾತ್ರವಲ್ಲದೇ ಸಾಂಸ್ಕೃತಿಕವಾಗಿ ಅವುಗಳ ಅಧ್ಯಯನ ವಿಶ್ಲೇಷಿಸುವ ಅಗತ್ಯವಿದೆ. ಇದುವರೆಗೆ ನಡೆದಿರುವ ಅಧ್ಯಯನಗಳನ್ನು ಗಮನದಲ್ಲಿರಿಸಿಕೊಂಡು, ಅವುಗಳನ್ನು ಸಮನ್ವಗೊಳಿಸಿಕೊಂಡು ವಿಶ್ಲೇಷಿಸುವ ಪ್ರಯತ್ನವನ್ನು ಪ್ರಸ್ತುತ ಪ್ರಬಂಧದಲ್ಲಿ ಮಾಡಲಾಗಿದೆ.

## ಅಧ್ಯಯನದ ವ್ಯಾಪ್ತಿ

ಚಾಮರಾಜನಗರ ತಾಲೂಕಿನ ಪರಿಸರದ ಮತ್ತು ಕಾಲದೃಷ್ಟಿಯಿಂದ ನಿರ್ದಿಷ್ಟ ಪಡಿಸಿಕೊಳ್ಳಲಾಗಿದೆ. ಈ ಪರಿಸರದಲ್ಲಿ ಕಸಬಾ ಸಂತೇಮರಹಳ್ಳಿ, ಚಂದಕವಾಡಿ, ಹರವೆ ಮತ್ತು ಹರದನಹಳ್ಳಿ ಮುಂತಾದ ಗ್ರಾಮಗಳು ಈ ಅಧ್ಯಯನದ ವ್ಯಾಪ್ತಿಯಲ್ಲಿ ಬರುತ್ತವೆ. ಪ್ರಸ್ತುತ ಅಧ್ಯಯನದಲ್ಲಿ ಗಂಗರಿಂದ ಮೈಸೂರು ಒಡೆಯರ ಆಡಳಿತಾವಧಿಯ ಕೊನೆಯ ಕಾಲಘಟ್ಟವನ್ನು ಆಯ್ದುಕೊಳ್ಳಲಾಗಿದೆ. ಈ ಕಾಲದ ನಂತರ ಕೆಲವು ವಿಚಾರಗಳನ್ನು ಸಂದರ್ಭೋಚಿತವಾಗಿ ಬಳಸಿಕೊಳ್ಳಲಾಗಿದೆ.

## ಅಧ್ಯಯನದ ವಿಧಾನ

ಪ್ರಸ್ತುತ ಅಧ್ಯಯನವು ಪ್ರಮುಖವಾಗಿ ಪ್ರಾಥಮಿಕ ಮತ್ತು ಅನುಷಂಗಿಕ ಮಾಹಿತಿಗಳನ್ನು ಸಂಗ್ರಹಿಸಿ ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ. ಪ್ರತಿ ಗ್ರಾಮದ ಸ್ಥಳನಾಮ ಮತ್ತು ಪುರಾತತ್ವ ಇತಿಹಾಸ ಅಂಶಗಳನ್ನು ಸಮಗ್ರವಾಗಿ ಮತ್ತು ಸೂಕ್ಷ್ಮವಾಗಿ ಅವಲೋಕಿಸಿ, ವಿಶ್ಲೇಷಿಸುವ ಕಾರ್ಯವಿಧಾನಗಳನ್ನು ಅಳವಡಿತವಾಗಿದೆ.

ಈ ತಾಲೂಕಿನ ಸುಮಾರು ೯೦ಕ್ಕೂ ಹೆಚ್ಚು ಹಳ್ಳಿಗಳಲ್ಲಿ ಕ್ಷೇತ್ರಕಾರ್ಯ ನಡೆಸಿ, ಅವರಲ್ಲಿರುವ ಆಚರಣೆ, ನಂಬಿಕೆ, ಹಬ್ಬ, ಜಾತ್ರೆ, ಉತ್ಸವ, ದೇವಾಲಯ ಇತ್ಯಾದಿ ಅಂಶಗಳ ಬಗ್ಗೆ ಆಯಾಯ ಗ್ರಾಮಗಳ ಹಿರಿಯರಿಂದ ವಿಷಯಗಳನ್ನು ಕೇಳಿ, ಪಡೆದು, ಸಂಗ್ರಹಿಸಿದ ಮಾಹಿತಿಗಳನ್ನು ಒಂದೆಡೆ ದಾಖಲೆ ಮಾಡಿಕೊಂಡ ಬಾಹ್ಯ ಮತ್ತು ಆಂತರಿಕ ವಿಮರ್ಶೆಯ ಸೂತ್ರಗಳಡಿಯಲ್ಲಿ ವಿಶ್ಲೇಷಣೆ, ವಿವರಣೆ ಮತ್ತು ನಿರೂಪಣೆಯ ತತ್ವವನ್ನು ಸಂಶೋಧನೆಯಲ್ಲಿ ಅಳವಡಿಸಿಕೊಂಡು ಪ್ರಸ್ತುತ ಮಹಾಪ್ರಬಂಧವನ್ನು ರಚಿಸಲಾಗಿದೆ. ಅಲ್ಲದೇ ಸಂಶೋಧನಾ ಕಾರ್ಯನಿಮಿತ್ತ ಮಹದೇಶ್ವರ ಬೆಟ್ಟ, ಕೊಳ್ಳೆಗಾಲ, ಟಿ.ನರಸೀಪುರ, ಮುಡುಕುತೊರೆ, ತಲಕಾಡು, ಬಿಳಿಗಿರಂಗನ ಬೆಟ್ಟ, ಗುಂಡ್ಲುಪೇಟೆಯ ಗೋಪಾಲಸ್ವಾಮಿ ಬೆಟ್ಟ, ನಂಜನಗೂಡು ಮೊದಲಾದ ಸ್ಥಳಗಳಿಗೆ ಭೇಟಿ ನೀಡಿ ಆ ಸ್ಥಳಗಳಲೆಲ್ಲ ನೆರವಾಗಬಹುದಾದ ಸಾಮಗ್ರಿಗಳನ್ನು ದೊರಕಿಸಿಕೊಳ್ಳಲು ಪ್ರಯತ್ನ ಪಟ್ಟಿದ್ದೇನೆ. ಕೆಲವು ಪ್ರಮುಖ ಸ್ಥಳಗಳನ್ನು, ಛಾಯಚಿತ್ರ ತೆಗೆಯಲಾಗಿದೆ. ಇತಿಹಾಸ ಮತ್ತು ಸಾಂಸ್ಕೃತಿಕ ಅಧ್ಯಯನಗಳಲ್ಲಿ ಚಾಲ್ತಿಯಲ್ಲಿರುವ ಅಧ್ಯಯನ ವಿಧಾನಗಳನ್ನು ಅಳವಡಿಸಿಕೊಂಡು ಚಾರಿತ್ರಿಕ ಆಕರಗಳನ್ನು ಕ್ಷೇತ್ರಕಾರ್ಯದಿಂದ

ಸಂಯೋಜಿಸಿ, ವಿಷಯನುಸಾರ ವಿಭಾಗಿಸಿ, ವಿಶ್ಲೇಷಣೆ ಮತ್ತು ವಿಮರ್ಶೆಗಳ ಮೂಲಕ ಈ ಪ್ರದೇಶದ ಪೂರ್ಣ ಚರಿತ್ರೆಯನ್ನು ಕಟ್ಟಲು ಪ್ರಯತ್ನಿಸಲಾಗಿದೆ.

**ಇದುವರೆಗೆ ನಡೆದ ಅಧ್ಯಯನಗಳು**

ಯಾವುದೇ ಒಂದು ಸ್ಥಳವಾದರೂ ಅದಕ್ಕೆ ತನ್ನದೇಯಾದ ಇತಿಹಾಸ, ಐತಿಹ್ಯ ಮತ್ತು ಸಾಂಸ್ಕೃತಿಕ ವೈಶಿಷ್ಟತೆ ಇದ್ದೆ ಇರುತ್ತದೆ. ಈ ನೆಲೆಯಲ್ಲಿ ತಾಲೂಕು ಕೇಂದ್ರವಾದ ಚಾಮರಾಜನಗರ ಭೌಗೋಳಿಕ, ಐತಿಹಾಸಿಕ, ಧಾರ್ಮಿಕ, ಸಾಮಾಜಿಕ ಮತ್ತು ಸಾಂಸ್ಕೃತಿಕವಾಗಿ ಎಲ್ಲ ನಿಟ್ಟಿನಿಂದಲೂ ಗುರುತಿಸಬಹುದಾದ ತಾಲೂಕಾಗಿದೆ.

ಈ ತಾಲೂಕಿಗೆ ಸಂಬಂಧಿಸಿದಂತೆ ಇದುವರೆಗೂ ವಿದ್ವಾಂಸರೂ ಲೇಖನಗಳನ್ನು ಸಂಗ್ರಹಿಸಿ, ಸಂಪಾದಿತ ಕೃತಿಗಳನ್ನು ಪ್ರಕಟಿಸಲಾಗಿದೆ. ವ್ಯಾಪ್ತಿಯ ದೃಷ್ಟಿಯಿಂದ ಸಮಗ್ರವಾಗಿ ಸೂಕ್ಷ್ಮವಾಗಿ ಅವಲೋಕಿಸುವ ಪ್ರಯತ್ನಗಳು ಕಡಿಮೆ ಎಂದು ಹೇಳಬಹುದು. ಇಂತಹ ಕೊರತೆಗಳನ್ನು ಈ ಅಧ್ಯಯನಗಳ ಮೂಲಕ ತುಂಬಿಕೊಡುವ ಪ್ರಯತ್ನ ಆಗಿದೆ.

ಇತ್ತೀಚಿನ ದಿನಗಳಲ್ಲಿ ಚಾಮರಾಜನಗರವನ್ನು ಕುರಿತು ಕೆಲವು ಸಂಶೋಧನಾತ್ಮಕ ಅಧ್ಯಯನಗಳು ನಡೆದಿವೆ. ೧೯೮೭ರಲ್ಲಿ ಡಾ.ಆರ್.ರಾಮಕೃಷ್ಣರವರು ಚಾಮರಾಜನಗರ ತಾಲೂಕು ದರ್ಶನ ಎಂಬ ಕಿರುಕೃತಿಯನ್ನು ರಚಿಸಿದ್ದಾರೆ. ಇದು ಇಡೀ ಚಾಮರಾಜನಗರ ಕೈಗನ್ನಡಿಯಂತಿವೆ.

ಹೆಚ್.ಗಂಗಾಧರರವರು ಶ್ರೀಗೋಸಲ ಪೀಠದ ಪರಂಪರೆ ಹರದನಹಳ್ಳಿ ಒಂದು ಸಂಕ್ಷಿಪ್ತ ಕೋಶ. ಡಾ.ಲೀಲಾ ಅಪ್ಪಾಜಿ ನಡೆಸಿರುವ ಬಿಳಿಗಿರಿರಂಗನ ಬೆಟ್ಟದ ಸಾಂಸ್ಕೃತಿಕ ಅಧ್ಯಯನ, ಸೋಲಿಗರ ಬದುಕಿನ ಹಿನ್ನಲೆಯಲ್ಲಿ ಅತ್ಯುತ್ತಮ ಸಂಶೋಧನೆ. ಡಾ.ಬಿ.ಬಸವರಾಜು ತಗರಪುರರವರ ಚೋಳದ ವಾಸ್ತು ಮತ್ತು ಶಿಲ್ಪ ಇವು ಕರ್ನಾಟಕ ಸಾಂಸ್ಕೃತಿಕ ಪರಂಪರೆಯಲ್ಲಿ ವಾಸ್ತು ಮತ್ತು ಶಿಲ್ಪ ಕಲೆಗೆ ಬಹಳ ಮಹತ್ವವಾದ ಸ್ಥಾನವಿದೆ. ೨೦೦೬ರಲ್ಲಿ ಡಾ.ಶ್ರೀನಿವಾಸ ನಡೆಸಿರುವ ಚಾಮರಾಜನಗರ ಜಿಲ್ಲೆಯ ಕೃಷಿ ವೃತ್ತಿ ಪದಗಳು. ಬಹಳ ಪ್ರಮುಖವಾದ ಸಂಶೋಧನಾ ಕೃತಿ. ಹಾಗೆಯೇ ಡಾ.ಚುಂಚಯ್ಯರವರು ಚಾಮರಾಜನಗರ ಮತ್ತು ಮೈಸೂರು ಜಿಲ್ಲೆಯ ದ್ರಾವಿಡ ವಾಸ್ತು ಮತ್ತು ಶಿಲ್ಪ ಬೆಳವಣಿಗೆಯಿಂದ ಸಾಂಸ್ಕೃತಿಕ ಹಾಗೂ ಧಾರ್ಮಿಕ ಸಂಗತಿಗಳನ್ನು ಒಳಗೊಂಡ ಅತ್ಯುತ್ತಮವಾದ ಸಂಶೋಧನೆ.

ಈ ಕೃತಿಗಳಲ್ಲಿ ಜಿಲ್ಲೆಯ ಬಗೆಗಿನ ಕೆಲವು ವಿಷಯಕ್ಕನುಗುಣವಾಗಿ ಮಾಹಿತಿ ಲಭಿಸುತ್ತದೆಯೇ ಹೊರತು ತಾಲೂಕಿನ ಬಗ್ಗೆ ಸಮಗ್ರ ಸ್ವರೂಪದ ಮಾಹಿತಿಯಿಲ್ಲ. ಹಾಗಾಗಿ ತಾಲೂಕಿನ ಬಗೆಗೆ ಸಾಧ್ಯವಾದಷ್ಟು ಸಮಗ್ರವಾಗಿ ಅಧ್ಯಯನ ಪೂರ್ಣ ಮಾಹಿತಿಗಳನ್ನು ಒಂದೆಡೆ ನೀಡುವ ಆಶಯ ನನ್ನ ಅಧ್ಯಯನದ ಸಾಮಾನ್ಯ ಉದ್ದೇಶಗಳಲ್ಲೊಂದು.

### ಅಧ್ಯಯನದ ಸ್ವರೂಪ

ಪ್ರಸ್ತುತ ಚಾಮರಾಜನಗರ ತಾಲೂಕಿನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ಎಂಬ ಪ್ರಬಂಧದ ವಿಷಯವನ್ನು ವ್ಯವಸ್ಥಿತವಾಗಿ ಮತ್ತು ಅರ್ಥಪೂರ್ಣವಾಗಿ ವಿಶ್ಲೇಷಿಸಿ ಅಧ್ಯಯನ ಮಾಡುವ ಸಲುವಾಗಿ ಎಂಟು ಅಧ್ಯಾಯಗಳಾಗಿ ವಿಭಾಗಿಸಿಕೊಳ್ಳಲಾಗಿದೆ.

### ಅಧ್ಯಾಯ ಒಂದು: ಪ್ರಸ್ತಾವನೆ

ಈ ಭಾಗದಲ್ಲಿ ಪ್ರಸ್ತಾವನೆ, ಅಧ್ಯಯನದ ಉದ್ದೇಶ, ಅಧ್ಯಯನ ಸಮೀಕ್ಷೆ, ಅಧ್ಯಯನ ಸ್ವರೂಪ ಮತ್ತು ಅಧ್ಯಯನ ವಿಧಾನವನ್ನು ಒಳಗೊಂಡಿದ್ದು, ಅಧ್ಯಯನ ಒಟ್ಟು ರೂಪುರೇಷೆಯ ಕುರಿತು ಚರ್ಚಿಸಲಾಗಿದೆ.

### ಅಧ್ಯಾಯ ೨: ಭೌಗೋಳಿಕ ಹಾಗೂ ಚಾರಿತ್ರಿಕ ಹಿನ್ನೆಲೆ

ಈ ಅಧ್ಯಯನದಲ್ಲಿ ಚಾಮರಾಜನಗರ ತಾಲೂಕಿನ ಭೌಗೋಳಿಕ ಹಾಗೂ ಚಾರಿತ್ರಿಕ ಹಿನ್ನೆಲೆಯನ್ನು ಒಳಗೊಂಡಿದೆ. ಈ ತಾಲೂಕಿನ ಭೌಗೋಳಿಕವಾ, ಸಾಂಸ್ಕೃತಿಕ ಪರಂಪರೆಯಿಂದ ಕೂಡಿದ ಒಂದು ವಿಶಿಷ್ಟವಾದ ಪ್ರದೇಶವಾಗಿದೆ. ಇದೊಂದು ಅರೆ ಮಲೆನಾಡು ಪರಿಸರವಾಗಿದೆ. ಇಲ್ಲಿನ ಭೌಗೋಳಿಕ ಸನ್ನಿವೇಶಗಳು, ಸಾಂಸ್ಕೃತಿಕ ಚರಿತ್ರೆಯ ನಿರ್ಮಾಣದಲ್ಲಿ ಹೇಗೆ ಪೂರಕವಾಗಿವೆ ಎಂಬ ಅಂಶಗಳನ್ನು ಕುರಿತು ಈ ಅಧ್ಯಾಯದಲ್ಲಿ ಸವಿವರವಾಗಿ ಚರ್ಚಿಸಲಾಗಿದೆ.

ಚಾಮರಾಜನಗರ ತಾಲೂಕಿನ ಪರಿಸರದ ಪ್ರಾಗೈತಿಹಾಸಿಕ ಸಂಸ್ಕೃತಿ ಅಧ್ಯಯನಕ್ಕೆ ಸಂಬಂಧಿಸಿದಂತೆ ಸೂಕ್ಷ್ಮ ಶಿಲಾಯುಗ, ನೂತನ ಶಿಲಾಯುಗ ಹಾಗೂ ಬೃಹತ್ ಶಿಲಾಯುಗದ ನೆಲೆಗಳು ದೊರೆತಿವೆ. ಪ್ರಸ್ತುತ ಅಧ್ಯಯನದ ಮೂಲಕ ಬೆಳಕಿಗೆ ತರಲಾಗಿರುವ ಪ್ರಾಗೈತಿಹಾಸಿಕ ನೆಲೆಗಳು, ಆದಿ ಹಳೇ ಶಿಲಾಯುಗ, ಮಧ್ಯ ಹಳೇ ಶಿಲಾಯುಗ, ಸೂಕ್ಷ್ಮ ಶಿಲಾಯುಗ, ನೂತನ ಶಿಲಾಯುಗ ಹಾಗೂ ಬೃಹತ್ ಶಿಲಾಯುಗ ಕಾಲಘಟ್ಟಕ್ಕೆ ಸೇರಿದವುಗಳಾಗಿವೆ. ಎಂ.ಶೇಷಾದ್ರಿಯವರು ಗುಮ್ಮಳ್ಳಿ ಗ್ರಾಮದಲ್ಲಿ ದೊರೆತೆ ಶಿಲೋಪಕರಣಗಳು ದೊರೆತಿವೆ. ನೂತನ ಶಿಲಾಯುಗದ ನೆಲೆಗಳನ್ನು ಬೂದಿತಿಟ್ಟು, ಹೊಸಹಳ್ಳಿ ಗ್ರಾಮಗಳ ಪರಿಸರದಲ್ಲಿ ಶೋಧಿಸಲಾಗಿದೆ. ಇವುಗಳಲ್ಲಿ ದಪ್ಪನಾದ ನಸು ಬೂದು ಹಾಗೂ ಕಂದುವರ್ಣದ ಮಡಕೆ ಭಾಗಗಳು ಕಂಡುಬಂದಿವೆ. ಬೃಹತ್ ಶಿಲಾಯುಗ ಸಂಸ್ಕೃತಿಯ ನೆಲೆಗಳಲ್ಲಿ ಮುಖ್ಯವಾಗಿ ಅರಕಲವಾಡಿ, ಕಣಿಕೆರೆ, ಕಲ್ಲಿದೊಡ್ಡಿ, ಗುಂಡಿಮಲ, ನರಸಮಂಗಲ, ಬೆಟ್ಟದಪುರ, ಬೂದಿತಿಟ್ಟು, ಹೆಬ್ಬಸೂರು ಗ್ರಾಮಗಳ ಪರಿಸರದಲ್ಲಿ ಶೋಧಿಸಲಾಗಿದೆ. ಇವುಗಳಲ್ಲಿ ಬೂದಿತಿಟ್ಟು ಬೃಹತ್ ಶಿಲಾ ಸಾಮಾಧಿಗಳಲ್ಲಿ ಸಂಖ್ಯಾ ದೃಷ್ಟಿಯಿಂದ ಅತ್ಯಂತ ದೊಡ್ಡ ನೆಲೆಯಾಗಿದೆ. ಇಲ್ಲಿನ ಬೃಹತ್ ಶಿಲಾಯುಗ ಸಂಸ್ಕೃತಿಯ ಪರಿಸರದಲ್ಲಿ ಶವಕುಣಿಗಳು, ವಾಸ್ತವ್ಯದ ನೆಲೆ, ಅಲ್ಪ ಪ್ರಮಾಣದಲ್ಲಿ ಕಪ್ಪು, ಕೆಂಪು ವರ್ಣದ ಮಡಕೆ ಭಾಗಗಳು ದೊರೆತಿವೆ.

ಈ ತಾಲೂಕು ಪರಿಸರದಲ್ಲಿ ಕಂಡುಬಂದಿರುವ ಗಂಗರು, ಚಾಲುಕ್ಯ, ಚೋಳರು, ಹೊಯ್ಸಳರು, ವಿಜಯನಗರ ಅರಸರು, ಮೈಸೂರು ಒಡೆಯರು, ಉಮತ್ತೂರಿನ ಪಾಳೇಗಾರರನ್ನು ಒಳಗೊಂಡಂತೆ ಹಲವು ಚಾರಿತ್ರಿಕ ಕುರುಹುಗಳನ್ನು ಚಾರಿತ್ರಿಕ ಹಿನ್ನೆಲೆ ಎಂಬ ಉಪಶೀರ್ಷಿಕೆಯ ಅಡಿಯಲ್ಲಿ ಚರ್ಚಿಸಲಾಗಿದೆ. ಈ ಚಾರಿತ್ರಿಕ ಅಧ್ಯಯನಕ್ಕೆ ಕ್ಷೇತ್ರಕಾರ್ಯದಲ್ಲಿ ಸಂಗ್ರಹಿಸಿದ ಮಾಹಿತಿ, ಚಾರಿತ್ರಿಕ ದಾಖಲೆ, ಶಾಸನ ಹಾಗೂ ಸಮಕಾಲೀನ ಸಾಹಿತ್ಯ ಗ್ರಂಥಗಳನ್ನು ಬಳಸಿಕೊಳ್ಳಲಾಗಿದೆ.

### ಅಧ್ಯಾಯ ೩: ಸ್ಥಳನಾಮ

ಯಾವುದೇ ಪ್ರದೇಶದ ಚರಿತ್ರೆಯನ್ನು ಕುರಿತು ಅಧ್ಯಯನ ಮಾಡುವಾಗ ಅಲ್ಲಿನ ಸ್ಥಳನಾಮ ಕುರಿತು ವಿವೇಚಿಸುವುದು ಅವಶ್ಯಕವಾದದ್ದು. ಇಲ್ಲಿನ ಸ್ಥಳನಾಮಗಳು ಸಾಮಾನ್ಯವಾಗಿ ಭೌಗೋಳಿಕ, ನೈಸರ್ಗಿಕ, ಸಾಂಸ್ಕೃತಿಕ, ಚಾರಿತ್ರಿಕ ಹಾಗೂ ಭಾಷಿಕ ಹಿನ್ನೆಲೆಯನ್ನು ನಿಷ್ಪತ್ತಿಗೊಂಡಿದೆ. ಭೌಗೋಳಿಕವಾಗಿ ಇಲ್ಲಿ ಬೆಟ್ಟ ಗುಡ್ಡ, ಅನೇಕ ನದಿ-ತೊರೆ, ಹಳ್ಳ-ಕೊಳ್ಳ, ಅರಣ್ಯ ಪ್ರದೇಶಗಳು ಕಂಡುಬರುವುದರಿಂದ ಆದಿ ಮಾನವನ ಪ್ರಾಗೈತಿಹಾಸಿಕ ಕಾಲ ಘಟ್ಟದಿಂದ ಚಾರಿತ್ರಿಕ ಕಾಲದ ಕರ್ನಾಟಕದ ಬಹುತೇಕ ರಾಜಮನೆತನಗಳು, ಅರಸರು ಹಾಗೂ ಪಾಳೇಗಾರರ ಪ್ರಾಚೀನ ಕುರುಹುಗಳು ಈ ಭಾಗದಲ್ಲಿ ಗುರುತಿಸಬಹುದಾಗಿದ್ದು, ಇಲ್ಲಿನ ಸ್ಥಳನಾಮಗಳು ಈ ಹಿನ್ನೆಲೆಯಿಂದಲೇ ನಿಷ್ಪನ್ನಗೊಂಡಿವೆ. ಸ್ಥಳನಾಮಗಳನ್ನು ಬಹುಮುಖ್ಯವಾಗಿ ಪ್ರಾಕೃತಿಕ ಮತ್ತು ಸಾಂಸ್ಕೃತಿಕ ಸ್ಥಳನಾಮಗಳು ಎಂಬುದಾಗಿ ವಿಭಾಗಿಸಿಕೊಂಡು ಚರ್ಚಿಸಲಾಗಿದೆ. ಪ್ರಾಕೃತಿಕ ಸ್ಥಳನಾಮಗಳಲ್ಲಿ ಜಲವಾಚಕ, ಶಿಲಾವಾಚಕ, ಭೂಸ್ಥಿತಿ ವಾಚಕ, ಪ್ರಾಣಿ ಪಕ್ಷಿ ವಾಚಕ, ಸಸ್ಯವಾಚಕ, ಪ್ರಮಾಣ ವಾಚಕ, ದಿಕ್ಕು ಸೂಚಕ, ಖನಿಜ ಸೂಚಕ ಎಂದು ಸಾಂಸ್ಕೃತಿಕ ಸ್ಥಳನಾಮಗಳಲ್ಲಿ ಪೌರಣಿಕ, ದೈವವಾಚಕ, ವ್ಯಕ್ತಿವಾಚಕ, ಜಾತಿವಾಚಕ, ವೃತ್ತಿವಾಚಕ, ನಿರ್ಮಾಣ ವಾಚಕ ಎಂಬುದಾಗಿ ವಿಭಾಗಿಸಿಕೊಂಡು ವಿಶ್ಲೇಷಿಸಲಾಗಿದೆ. ಅಲ್ಲದೆ ಕೆಲವು ಪ್ರಮುಖ ಸ್ಥಳನಾಮಗಳಾದ, ಅಮಚವಾಡಿ, ಆಲೂರು, ಬಸವಾಪುರ, ಕೋಡಿಮೋಳೆ, ಬದನಗುಪ್ಪೆ, ದಡದಹಳ್ಳಿ, ಚಿಕ್ಕಬೇಗೂರು, ಮೂಡಲ ಮೋಳೆ, ಮಂಗಲ, ಅರಕಲವಾಡಿ, ಕಾಡಳ್ಳಿ, ಕಾರೇಪುರ, ಕರಡಿ ಮೋಳೆ, ಗೂಳಿಪುರ, ವೀರನಪುರ, ಹರಳಕೋಟೆ, ಸಂತೇಮರಹಳ್ಳಿ, ಕರಿನಂಜನಪುರ, ಸಪ್ಪಯ್ಯಪುರ ಇವುಗಳನ್ನು ಶಾಸನ, ಚಾರಿತ್ರಿಕ ದಾಖಲೆ, ಪ್ರಾಕ್ಚಾರಿತ್ರಿಕ ಕುರುಹುಗಳು, ಭೌಗೋಳಿಕ ಲಕ್ಷಣಗಳ ಮೂಲಕ ವಿಶ್ಲೇಷಿಸಲಾಗಿದೆ.

### ಅಧ್ಯಾಯ ೪: ಶಾಸನಗಳು

ಯಾವುದೇ ಒಂದು ಪ್ರದೇಶ ಇತಿಹಾಸವನ್ನು ಪುನರ್‌ರಚಿಸಲು ಇರುವ ಪ್ರಾಕ್ತನ ಆಧಾರಗಳಲ್ಲಿ ಶಾಸನಗಳಿಗೆ ಅಗ್ರಸ್ಥಾನ ಸಲ್ಲುತ್ತದೆ. ಇಲ್ಲಿನ ಶಾಸನ ಸಂಪತ್ತು ಚಾಮರಾಜನಗರ ತಾಲೂಕಿನ ಚಾರಿತ್ರಿಕ ಹಾಗೂ ಸಾಂಸ್ಕೃತಿಕ ಅಧ್ಯಯನಕ್ಕೆ ಅಮೂಲ್ಯವಾದ ಆಕರ ಸಂಪತ್ತುಗಳಾಗಿವೆ. ಪ್ರಾಚೀನ ಕಾಲದಿಂದಲೂ

ಮಾನವನ ಬದುಕಿದ ನಮ್ಮ ಪೂರ್ವಿಕರ ರಾಜಕೀಯ, ಸಾಮಾಜಿಕ, ಆರ್ಥಿಕ, ಧಾರ್ಮಿಕ ಹಾಗೂ ಸಾಂಸ್ಕೃತಿಕ ಇತಿಹಾಸವನ್ನು ಪರಿಚಯ ಮಾಡಲು ಶಾಸನಗಳು ಬಹಳ ಮುಖ್ಯವಾಗಿವೆ.

ಚಾಮರಾಜನಗರ ತಾಲೂಕಿನ ಪ್ರದೇಶವು ಬಹಳ ಸಮೃದ್ಧವಾದ ಸಾಂಸ್ಕೃತಿಕ ಪ್ರದೇಶವಾಗಿದೆ. ಈ ತಾಲೂಕಿನಲ್ಲಿ ಇರುವ ೧೯೦ ಗ್ರಾಮಗಳ ಪೈಕಿ ೧೦೪ ಗ್ರಾಮಗಳಲ್ಲಿ ಶಾಸನಗಳು ಗುರುತಿಸಿ ಇವುಗಳನ್ನು ೧೦ ಶಾಸನಗಳ ಸಂಸ್ಕೃತ ಮತ್ತು ಕನ್ನಡ ಭಾಷೆಯಲ್ಲಿಯೂ ೫೪ ಶಾಸನಗಳು ತಮಿಳು ಭಾಷೆಯಲ್ಲಿಯೂ ವಿಂಗಡನೆಯೊಂದಿಗೆ ವಿಶ್ಲೇಷಿಸಲಾಗಿದೆ.

ಈ ಪ್ರದೇಶದಲ್ಲಿ ಗಂಗರಿಂದ ಕಳಲೆ ದಳವಾಯಿಗಳ ಕಾಲದವರೆಗಿನ ಶಾಸನಗಳನ್ನು ಗುರುತಿಸ ಲಾಗಿದ್ದು, ಅವು ಬೇರೆ ಬೇರೆ ಆಕರ ಗ್ರಂಥಗಳಲ್ಲಿ ಚದುರಿ ಹೋಗಿವೆ. ಅವುಗಳಲ್ಲಿ ಗಂಗರ ಕಾಲದಲ್ಲಿ ೧೫, ಕಲ್ಯಾಣಿ ಚಾಲುಕ್ಯರ ಕಾಲದಲ್ಲಿ ೧, ಚೋಳರ ಕಾಲದಲ್ಲಿ ೮, ಹೊಯ್ಸಳರ ಕಾಲದಲ್ಲಿ ೫೫, ವಿಜಯನಗರ ಅರಸರ ಕಾಲದಲ್ಲಿ ೬೧, ಉಮ್ಮತ್ತೂರು ಪಾಳೇಗಾರರ ಕಾಲದಲ್ಲಿ ೯, ಕಳಲೆಯ ದಳವಾಯಿಗಳ ಕಾಲದಲ್ಲಿ ೪, ಮೈಸೂರು ಒಡೆಯರ ಕಾಲದಲ್ಲಿ ೨೫ ಶಾಸನಗಳು ಪ್ರಕಟವಾಗಿವೆ. ಈ ಶಾಸನಗಳ ಆಕರಗಳಿಂದ ಚಾರಿತ್ರಿಕ ಹಿನ್ನೆಲೆ ಸಾಮಾಜಿಕ, ಧಾರ್ಮಿಕ ಮತ್ತು ದಾನದತ್ತಿಗಳ ಬಗ್ಗೆ ಚರ್ಚಿಸಲಾಗಿದೆ.

## ಅಧ್ಯಾಯ ೫: ದೇವಾಲಯಗಳು

ಈ ತಾಲೂಕಿನಲ್ಲಿ ಹಲವು ದೇವಾಲಯಗಳಿದ್ದು, ಶೈವ, ವೈಷ್ಣವ, ಜೈನ ದೇವಾಲಯಗಳು ಎಂಬ ವಿಂಗಡಣೆಯೊಂದಿಗೆ ವಿಶ್ಲೇಷಿಸಲಾಗಿದೆ. ಚಾಮರಾಜನಗರ ತಾಲೂಕಿನಲ್ಲಿ ವಾಸ್ತು ಮತ್ತು ಶಿಲ್ಪಕಲೆ ಯಾವ ರೀತಿ ಉಗಮವಾಯಿತ್ತು ಅವುಗಳಿಗಿರುವ ಆಧಾರಗಳು, ಅವುಗಳ ರೀತಿ, ಅವು ಬೆಳೆದು ಬಂದ ದಾರಿ ಇತ್ಯಾದಿ ಅಂಶಗಳೊಂದಿಗೆ ವಿಶ್ಲೇಷಿಸಲಾಗಿದೆ

ಪ್ರಸ್ತುತ ಅಧ್ಯಯನದಲ್ಲಿ ಭೌಗೋಳಿಕ ವ್ಯಾಪ್ತಿಗೆ ಬರುವ ಕೆಲವು ಮುಖ್ಯ ದೇವಾಲಯಗಳು ಆಲೂರು, ನರಸಮಂಗಲ, ಉಮ್ಮತ್ತೂರು, ಚಾಮರಾಜನಗರ, ಕೆಂಪನಪುರ, ಕುದೇರು ಮುಂತಾದ ಕಡೆಗಳಲ್ಲಿರುವ ದೇವಾಲಯಗಳ ಮುಖ್ಯ ಲಕ್ಷಣಗಳನ್ನು ವಿವರಿಸಲಾಗಿದೆ. ಈ ಲಕ್ಷಣಗಳನ್ನು ಹೇಳುವಾಗ ಅಧಿಷ್ಠಾನ, ಭಿತ್ತಿ, ಕಪೋತ, ಹಾರ, ಕಂಬಗಳ ಮುಂತಾದವುಗಳೆಲ್ಲವನ್ನು ಗಣನೆಗೆ ತೆಗೆದುಕೊಂಡು ಚರ್ಚಿಸಲಾಗಿದೆ. ಇವುಗಳಲ್ಲದೇ ಚಾಮರಾಜನಗರ ತಾಲೂಕಿನ ಸಣ್ಣಪುಟ್ಟ ದೇವಾಲಯಗಳನ್ನು ವಾಸ್ತು ಸಂಬಂಧವಾದ ಅಲಂಕರಣೆಗಳು, ಸಂಕೇತಗಳು ಮುಂತಾದ ಲಕ್ಷಣಗಳ ಬಗ್ಗೆ ಸವಿವರವಾಗಿ ಚರ್ಚಿಸಲಾಗಿದೆ. ಇಲ್ಲಿನ ದೇವಾಲಯಗಳ ವಾಸ್ತುಶೈಲಿಯನ್ನು ಗಮನಿಸಿದಾಗ ಚೋಳರು, ಹೊಯ್ಸಳ, ವಿಜಯನಗರ ಹಾಗೂ ವಿಜಯನಗರೋತ್ತರ ಕಾಲದ ವಾಸ್ತು ಶೈಲಿಯಲ್ಲಿ ನಿರ್ಮಾಣಗೊಂಡಿವೆ.

### ಅಧ್ಯಾಯ ೬: ಸಾಮಾಜಿಕ ಮತ್ತು ಧಾರ್ಮಿಕ ವ್ಯವಸ್ಥೆ

ಈ ಅಧ್ಯಾದಲ್ಲಿ ವಿವಿಧ ಕಾಲಘಟ್ಟಗಳಲ್ಲಿ ವಾಸವಾಗಿದ್ದ ಜನರ ಜೀವನಕ್ರಮ, ಜಾತಿವ್ಯವಸ್ಥೆಯು ಬಹು ಕಟ್ಟುನಿಟ್ಟಾಗಿದ್ದು, ಜಾತಿ ಜಾತಿಗಳ ನಡುವೆ ಅಂತರವನ್ನು ಹಿಂದಿನಿಂದಲೂ ಉಳಿಸಿಕೊಂಡ ಅಂಶಗಳ ಬಗ್ಗೆ ವಿಶ್ಲೇಷಿಸಲಾಗಿದೆ. ಈ ತಾಲೂಕಿನ ಗ್ರಾಮಗಳಲ್ಲಿ ವ್ಯಾಪಕವಾದ ಕ್ಷೇತ್ರಕಾರ್ಯ ನಡೆಸಿ, ಪ್ರಸ್ತುತ ಎಲ್ಲ ಸಮುದಾಯದ ಧರ್ಮ ಆಚಾರ-ವಿಚಾರ, ವೈವಾಹಿಕ ಅಂಶಗಳು, ನಗರ ಮತ್ತು ಗ್ರಾಮಾಂತರ ಪ್ರದೇಶಗ ಆಡಳಿತ ವ್ಯವಸ್ಥೆ ಮತ್ತು ಸಾಂಸ್ಕೃತಿಕ ವ್ಯವಸ್ಥೆಗಳ ಸ್ವರೂಪಗಳ ಬದಲಾವಣೆಗಳ ಬಗ್ಗೆ ಕುರಿತು ಸವಿವರವಾಗಿ ವಿವರಿಸಲಾಗಿದೆ.

ಪ್ರಾಚೀನ ಕಾಲದಿಂದ ಆಧುನಿಕ ಕಾಲದವರೆಗೆ ಈ ತಾಲೂಕಿನ ಮೇಲೆ ಪ್ರಭಾವ ಬೀರಿದ ಬೌದ್ಧ, ಜೈನ, ಶೈವ, ವೀರಶೈವ, ಮಾತೃದೇವತಾರಾಧನ ಇಸ್ಲಾಂ, ಕ್ರೈಸ್ತ ಮೊದಲಾದ ಪ್ರಮುಖ ಧರ್ಮಗಳು, ಧಾರ್ಮಿಕ ಪಂಥಗಳು ಈ ತಾಲೂಕಿನಲ್ಲಿ ಎಂದಿನಿಂದ ಪ್ರಚಾರದಲ್ಲಿದ್ದವು, ಅವುಗಳ ಅಸ್ತಿತ್ವದಲ್ಲಿದ್ದುದಕ್ಕೆ ಕುರುಹುಗಳೇನು? ಇಂದು ಅವು ಅಸ್ತಿತ್ವದಲ್ಲಿವೆಯೇ? ಅವುಗಳ ಅವನತಿಗೆ ಕಾರಣಗಳೇನು? ಮುಂತಾದ ವಿಚಾರಗಳನ್ನು ಕುರಿತು ಈ ಅಧ್ಯಾಯದಲ್ಲಿ ಸವಿವರವಾಗಿ ಚರ್ಚಿಸಲಾಗಿದೆ.

### ಅಧ್ಯಾಯ ೭: ಜಾತ್ರೆ ಮತ್ತು ಉತ್ಸವಗಳು

ಈ ಅಧ್ಯಾಯದಲ್ಲಿ ಚಾಮರಾಜನಗರ ತಾಲೂಕಿನ ಜಾತ್ರೆ ಮತ್ತು ಉತ್ಸವಗಳು ಧಾರ್ಮಿಕ ಪರಂಪರೆಯನ್ನು ಕಟ್ಟಿಕೊಡುವುದರ ಮೂಲಕ ಸಾಮಾಜಿಕ ಸಾಮರಸ್ಯವನ್ನು ಬೆಸೆಯುತ್ತದೆ. ಹಾಗೆಯೇ ಇಲ್ಲಿ ಆಚರಣೆಯಿಂದ ಆಯಾ ಕಾಲದ ರಾಜರ ಇತಿಹಾಸವನ್ನು, ಪರಂಪರೆಯನ್ನು ಉದ್ದೇಶ ಮತ್ತು ಹಿನ್ನೆಲೆಯನ್ನು ಕಂಡುಕೊಳ್ಳಲು ಸಾಧ್ಯವಾಗಿದೆ. ಈ ಅಂಶದಿಂದ ಚರಿತ್ರೆಯನ್ನು ರೂಪಿಸಲು ಅನುಕೂಲ ವಾಗುತ್ತದೆ.

ಈ ಪರಿಸರದಲ್ಲಿ ಸ್ತ್ರೀ ದೇವತೆ ಜಾತ್ರೆ ಉತ್ಸವಗಳು ಹೆಚ್ಚು ಆಚರಣೆಯಲ್ಲಿವೆ. ಅವುಗಳಲ್ಲಿ ಬೆಂಡರವಾಡಿ ಜಾತ್ರೆ, ಚಂದಕವಾಡಿ ಜಾತ್ರೆ, ಕಸ್ತೂರಬಂಡಿ ಜಾತ್ರೆ, ಹರದನಹಳ್ಳಿ ಉತ್ಸವ, ಉಮತ್ತೂರಿನ ಉರುಕಾತೇಶ್ವರಿ ಉತ್ಸವ ಮುಂತಾದವುಗಳನ್ನು ಕಾಣಬಹುದಾಗಿದೆ. ಗ್ರಾಮೀಣ ಪ್ರದೇಶಗಳಲ್ಲಿ ನಡೆಯುವ ಜಾತ್ರೆ ರಥೋತ್ಸವ, ಹಲವು ವಿವಿಧ ಸೂಕ್ಷ್ಮ ಸಂಸ್ಕೃತಿಯನ್ನು ಒಳಗೊಂಡಿರುವುದನ್ನು ಕಾಣಬಹುದಾಗಿದೆ.

### ಅಧ್ಯಾಯ ೮: ಸಮಾರೋಪ

ಇಡೀ ಅಧ್ಯಯನದಲ್ಲಿ ಕಂಡುಕೊಂಡ ಒಟ್ಟಾರೆ ಸಂಶೋಧನೆಯ ಫಲಿತಗಳ ಸಂಕ್ಷಿಪ್ತ ರೂಪವನ್ನು ಒಳಗೊಂಡಿದೆ. ಪ್ರಸ್ತುತ ಅಧ್ಯಯನಕ್ಕೆ ಬಳಸಿಕೊಂಡ ಕೃತಿ, ಲೇಖನ, ಶಾಸನ ಸಂಪುಟ ಮುಂತಾದ ವಿವರಗಳನ್ನು ಗ್ರಂಥಋಣದಲ್ಲಿ ನೀಡಲಾಗಿದೆ. ಅಧ್ಯಯನಕ್ಕೆ ಸಂಬಂಧಿಸಿದ ಕ್ಷೇತ್ರಕಾರ್ಯ ಸಂದರ್ಭದಲ್ಲಿ ತೆಗೆದಿರುವ ಛಾಯಾಚಿತ್ರಗಳು, ಅಗತ್ಯ ನಕ್ಷೆಗಳನ್ನು ಅನುಬಂಧದಲ್ಲಿ ಅಳವಡಿಸಲಾಗಿದೆ..

## ಭೌಗೋಳಿಕ ಪರಿಸರ

ಒಂದು ಸ್ಥಳ ಅಥವಾ ಪ್ರದೇಶದ ಸಂಸ್ಕೃತಿಯ ವಿಕಾಸ ಮತ್ತು ಭೌಗೋಳಿಕ ಹಿನ್ನಲೆಗಳ ನಡುವ ಪರಸ್ಪರ ಸಂಬಂಧವಿದೆ. ಭೌಗೋಳಿಕ ಹಿನ್ನಲೆ ಪ್ರಕೃತಿಯ ಕೊಡುಗೆ. ಪ್ರಕೃತಿಯ ಅಸ್ತಿತ್ವ ಮೊದಲು ಅನಂತರ ಅದರಲ್ಲಿ ಮಾನವನ ಪ್ರವೇಶ. ಮಾನವನಿಗೆ ಪ್ರಕೃತಿ ಅಪಾರ ಸಂಪನ್ಮೂಲಗಳನ್ನು ನೀಡಿದೆ. ಅವುಗಳನ್ನು ತನ್ನ ಅನುಕೂಲಕ್ಕೆ ಬಳಕೆ ಮಾಡಿಕೊಳ್ಳುವ ಅಥವಾ ಪ್ರಕೃತಿಗೆ ಹೊಂದಿಕೊಂಡು ಬದುಕುವಲ್ಲಿ ಮನುಷ್ಯ ತನ್ನ ಶ್ರಮ ಮತ್ತು ಬುದ್ಧಿವಂತಿಕೆಯನ್ನು ಬಳಸುವನು. ತನ್ಮೂಲಕ ಮಾನವ ಸ್ವಂತ ಪರಿಸರವನ್ನು ರೂಪಿಸಿಕೊಳ್ಳುವುದೇ ಸಂಸ್ಕೃತಿ.

ಭೌಗೋಳಿಕ ಹಿನ್ನೆಲೆಯಲ್ಲಿ ಆ ಪ್ರದೇಶ, ಸ್ಥಳದ ಸನ್ನಿವೇಶ, ಭೂಸ್ವರೂಪಗಳು (ಪರ್ವತ, ಬೆಟ್ಟ, ಗುಡ್ಡ, ಮೈದಾನ) ಜನವ್ಯವಸ್ಥೆ, ಮಣ್ಣು ಹಾಗೂ ಫಲವತ್ತತೆ, ಅರಣ್ಯ-ಪ್ರಾಣಿ ಸಂಪತ್ತು ಇತ್ಯಾದಿಗಳು ಸೇರುತ್ತವೆ. ಇವುಗಳಲ್ಲಿ ಪರ್ವತ-ಶಿಖರ, ಬೆಟ್ಟಗಳ ಸರಣಿ, ಸಂಸ್ಕೃತಿ-ಸಂಪ್ರದಾಯದ ಪ್ರತೀಕವಾಗಿ ಪವಿತ್ರ ಯಾತ್ರಾ ಸ್ಥಳ ಅಥವಾ ದೇವಾಲಯಗಳನ್ನು ಕಾಣಬಹುದು. ಪ್ರಪಂಚದ ಪ್ರಸಿದ್ಧ ಪ್ರಧಾನ ನಾಗರಿಕತೆಗಳು ಹಲವು ನದಿಗಳ ಬಯಲಿನಲ್ಲಿ ವಿಕಾಸಗೊಂಡಿರುವುದಕ್ಕೆ ನಿದರ್ಶನಗಳಿವೆ. ಆಯಾ ಭೌಗೋಳಿಕ ಹಿನ್ನಲೆಗಳಿಗನುಗುಣವಾಗಿ ವಿವಿಧ ಸಾಮಾಜಿಕ, ಸಾಂಸ್ಕೃತಿಕ, ಆರ್ಥಿಕ ಚಟುವಟಿಕೆಗಳು, ಭಾವನೆ, ಸಂಪ್ರದಾಯ, ರೂಢಿಗೆ ಬರುತ್ತವೆ. ಹೀಗೆ ಪ್ರದೇಶವೊಂದರ ಸಂಸ್ಕೃತಿಯ ಹಿರಿಮೆ-ಗರಿಮೆಯ ಮೇಲೆ ಭೌಗೋಳಿಕ ಪರಿಸರದ ಪ್ರಭಾವ ನಿಚ್ಚಳವಾದುದು.

ಯಾವುದೇ ಒಂದು ಪ್ರದೇಶದ ಸಂಸ್ಕೃತಿಯ ವಿಕಾಸಕ್ಕೆ ಆರ್ಥಿಕ ಸ್ಥಿತಿಯೂ ಒಂದು ಮುಖ್ಯ ಸಾಧನ. ಆರ್ಥಿಕ ಸ್ಥಿತಿಯೂ ಭೌಗೋಳಿಕ ಸ್ವರೂಪವನ್ನು ಅವಲಂಬಿಸುತ್ತದೆ. ಭೂಗುಣಗಳು ಮಾನವನ ರಾಜಕೀಯ ಸಾಮಾಜಿಕ, ಧಾರ್ಮಿಕ ಪರಿಸ್ಥಿಗಳ ಮೇಲೆ ತಮ್ಮ ಪ್ರಭಾವವನ್ನು ಬೀರುತ್ತವೆ. ಹಾಗಾಗಿ ಚಾಮರಾಜನಗರ ಭೌಗೋಳಿಕ ಸ್ವರೂಪವನ್ನು ವಿಮರ್ಶಿಸದ ಹೊರತು ಚರಿತ್ರೆಯನ್ನು ಪರಿಪೂರ್ಣವಾಗಿ ಅಧ್ಯಯನ ಮಾಡಲಾಗದು.

## ಭೌಗೋಳಿಕ ಹಿನ್ನೆಲೆ

ಚಾಮರಾಜನಗರ ಜಿಲ್ಲೆಯ ನಾಲ್ಕು ತಾಲೂಕುಗಳಲ್ಲಿ ಚಾಮರಾಜನಗರ ತಾಲೂಕು ಒಂದು. ಇದು ಹಿಂದಿರುವ ಐತಿಹಾಸಿಕ ಮತ್ತು ಭೌಗೋಳಿಕ ಲಕ್ಷಣದ ಆಧಾರದ ಮೇಲೆ ಇಂದು ಭಾರತದಾದ್ಯಂತ ಹೆಸರುವಾಸಿಯಾಗಿದೆ. ಅದಕ್ಕೆ ಪ್ರಮುಖವಾದ ಕಾರಣಗಳೆಂದರೆ ಅಪಾರ ಪ್ರಮಾಣದಲ್ಲಿ ಹೊಂದಿರುವ

ಗ್ರಾನೈಟ್ ಶಿಲೆ, ಕಾಡಿನಿಂದ ಆವರಿಸಿದ ಬೆಟ್ಟಗಳು, ನದಿಗಳು ಅತಿ ಮುಖ್ಯವಾದ ಅಂಶವೆಂದರೆ ಶ್ರೀಗಂಧ ಮತ್ತು ಆನೆದಂತ.[೧]

ಈ ಜಿಲ್ಲೆಯು ಕರ್ನಾಟಕ ರಾಜ್ಯದ ದಕ್ಷಿಣ ಗಡಿಯ ಜಿಲ್ಲೆಯಾಗಿದ್ದು, ಮೈಸೂರು ಜಿಲ್ಲೆಯಿಂದ ೧೫ ಆಗಸ್ಟ್ ೧೯೯೭ರಲ್ಲಿ ಬೇರ್ಪಟ್ಟಿತ್ತು. ಈ ಜಿಲ್ಲೆಯು ಚಾಮರಾಜನಗರ, ಗುಂಡ್ಲುಪೇಟೆ, ಯಳಂದೂರು ಮತ್ತು ಕೊಳ್ಳೆಗಾಲ ತಾಲೂಕುಗಳನ್ನು ಒಳಗೊಂಡಿದೆ. ಮೈಸೂರು ನಗರದ ಆಗ್ನೇಯಕ್ಕೆ ೬೧ ಕಿ.ಮೀ. ದೂರದಲ್ಲಿರುವ ಚಾಮರಾಜನಗರ ಪೂರ್ವ ಭಾಗದಲ್ಲಿ ಕೊಳ್ಳೆಗಾಲ, ಯಳಂದೂರು ತಾಲೂಕುಗಳು, ದಕ್ಷಿಣದಲ್ಲಿ ತಮಿಳುನಾಡಿನ ಕೊಯಮತ್ತೂರು ಜಿಲ್ಲೆ, ಪಶ್ಚಿಮದಲ್ಲಿ ಗುಂಡ್ಲುಪೇಟೆ ಮತ್ತು ಮೈಸೂರು ಜಿಲ್ಲೆಗೆ ಸೇರಿದ ನಂಜನಗೂಡು ತಾಲೂಕು, ಉತ್ತರದಲ್ಲಿ ತಿರುಮಕೂಡಲು ನರಸೀಪುರ ತಾಲೂಕು ಇದ್ದು, ಇವು ಚಾಮರಾಜನಗರ ತಾಲೂಕಿನ ಎಲ್ಲೆಗಳಾಗಿವೆ. ಈ ತಾಲೂಕನ್ನು ಚಂದಕವಾಡಿ, ಸಂತೇಮರಹಳ್ಳಿ ಕಸಬಾ, ಹರವೆ ಮತ್ತು ಹರದನಗಳ್ಳಿ ಎಂದು ಐದು ಹೋಬಳಿ ಕೇಂದ್ರಗಳಾಗಿ ವರ್ಗೀಕರಿಸಲಾಗಿದೆ.[೨]

### ಭೌಗೋಳಿಕ ಸ್ಥಾನ

ಕರ್ನಾಟಕ ಅತ್ಯಂತ ದಕ್ಷಿಣದ ಜಿಲ್ಲೆಯಾಗಿರುವ ಚಾಮರಾಜನಗರವು ಪೂರ್ವ ಮತ್ತು ಪಶ್ಚಿಮ ಘಟ್ಟಗಳು ಸಂಧಿಸುವ ನೀಲಗಿರಿ ಸರಣಿಗೆ ಚಾಚಿಕೊಂಡಿದೆ. ಚಾಮರಾಜನಗರ ತಾಲೂಕಿನ ಅಕ್ಷಾಂಶ ೧೧-೫೫ ರೇಖಾಂಶದಿಂದ ೧೨ ೧೮ - ೧೧ ಉತ್ತರ ಅಕ್ಷಾಂಶದವರೆಗೆ ಮತ್ತು ೭೬ ೨೦ ೧೯ ಪೂರ್ವ ರೇಖಾಂಶದಿಂದ ೭೭ ೪೬ ೫೫ ಪೂರ್ವ ರೇಖಾಂಶದವರೆಗೆ ಹಬ್ಬಿದೆ. ಚಾಮರಾಜನಗರ ತಾಲೂಕು ಒಟ್ಟು ಭೌಗೋಳಿಕ ವಿಸ್ತೀರ್ಣ ೧೨೪೯ ಚ.ಕಿ.ಮೀ.ಗಳು. ಈ ತಾಲೂಕಿನಲ್ಲಿ ಸರ್ಕಾರಿ ದಾಖಲೆಯಂತೆ ೧೮೮ ಗ್ರಾಮಗಳಿದ್ದು, ಜನವಸತಿ ಗ್ರಾಮಗಳಿರುವ ಸಂಖ್ಯೆ ೧೭೩. ಉಳಿದ ೧೫ ಗ್ರಾಮಗಳಲ್ಲಿ ಯಾವುದೇ ಜನವಸತಿ ಇರಲಿಲ್ಲ. ಆದರೆ ತಾಲೂಕಿನಾದ್ಯಾಂತ ಕ್ಷೇತ್ರ ಕಾರ್ಯ ಮಾಡಿದಾಗ ಜನವಸತಿ ಇರುವ ಗ್ರಾಮಗಳ ಸಂಖ್ಯೆ ೨೩೬. ಜನವಸತಿ ಇಲ್ಲದ ಗ್ರಾಮಗಳ ಸಂಖ್ಯೆ ೬೧. ಅಂದರೆ ಒಟ್ಟು ಗ್ರಾಮಗಳು ಚಾಮರಾಜನಗರ ತಾಲೂಕಿನ ವ್ಯಾಪ್ತಿಯಲ್ಲಿ ಕಂಡುಬರುತ್ತವೆ.[೩]

೨೦೧೧ರ ಜನಗಣತಿ ಪ್ರಕಾರ ತಾಲೂಕಿನಲ್ಲಿ ಒಟ್ಟು ೩.೩೭೫೭೧ ಜನರಿದ್ದಾರೆ. ಈ ತಾಲೂಕಿನ ಜನ ಸಾಂದ್ರತೆ ಪ್ರತಿ ಚ.ಕಿ.ಮೀ. ೨೨೮ ಆಗಿದೆ. ತಾಲೂಕುವಾರು ಜನಸಾಂದ್ರತೆಯನ್ನು ನೋಡಿದಾಗ ಯಳಂದೂರು ತಾಲೂಕು ಜಿಲ್ಲೆಯ ಅತಿ ಹೆಚ್ಚು ಜನಸಾಂದ್ರತೆಯನ್ನು ಹೊಂದಿರುವ ತಾಲೂಕು ಆಗಿದೆ.[೪]

ಈ ತಾಲೂಕಿನಲ್ಲಿ ೧,೭೦,೨೨೫ ಲಕ್ಷ ಪುರುಷರು ೧,೬೭,೩೪೬ ಲಕ್ಷ ಮಹಿಳೆಯರಿದ್ದಾರೆ. ತಾಲೂಕುವಾರು ಲಿಂಗಾನುಪಾತ ಗಮನಿಸಿದಾಗ ಗುಂಡ್ಲುಪೇಟೆ ತಾಲೂಕು ಪ್ರತಿ ಸಾವಿರ ಪುರುಷರಿಗೆ ೯೮೪ ಸ್ತ್ರೀಯರನ್ನು ಹೊಂದಿದ್ದು, ಜಿಲ್ಲೆಯ ಅತಿ ಹೆಚ್ಚು ಲಿಂಗಾನುಪಾತ ಹೊಂದಿರುವ ತಾಲೂಕಾಗಿದೆ. ಇದಕ್ಕೆ

ಬದಲಾಗಿ ಕೊಳ್ಳೆಗಾಲ ಪ್ರತಿ ಸಾವಿರ ಪುರುಷರಿಗೆ ೯೪೭ ಸ್ತ್ರೀಯರನ್ನು ಹೊಂದಿದ್ದು, ಜಿಲ್ಲೆಯ ಕಡಿಮೆ ಲಿಂಗಾನುಪಾತ ಹೊಂದಿರುವ ತಾಲೂಕು.

**ವಾಯುಗುಣ**

ಚಾಮರಾಜನಗರ ತಾಲೂಕಿನ ವಾಯುಗುಣವನ್ನು ನಾಲ್ಕು ಋತುಮಾನಗಳನ್ನಾಗಿ ವಿಂಗಡಿಸಲಾಗಿದೆ. ಅವುಗಳೆಂದರೆ

೧. ಬೇಸಿಗೆ ಕಾಲ(ಮಾರ್ಚ್-ಮೇ)

೨. ನೈರುತ್ಯ ಮಾನ್ಸೂನ ಕಾಲ(ಮೇ-ಸೆಪ್ಟೆಂಬರ್)

೩. ಈಶಾನ್ಯ ಮಾನ್ಸೂನ ಮಾರುತಗಳ ಕಾಲ(ಆಕ್ಟೋಬರ್-ನವೆಂಬರ್)

೪. ಚಳಿಗಾಲ (ಡಿಸೆಂಬರ್-ಫೆಬ್ರವರಿ)

ಬೇಸಿಗೆ ಕಾಲ : ಇದು ಮಾರ್ಚ್ ತಿಂಗಳಿನಿಂದ ಪ್ರಾರಂಭವಾಗಿ ಮೇ ತಿಂಗಳಿನಲ್ಲಿ ಕೊನೆಗೊಳ್ಳುತ್ತದೆ. ಹವಾಮಾನ ಇಲಾಖೆಯು ಗಮನಿಸಿರುವಂತೆ ಮಾರ್ಚ್ ತಿಂಗಳ ನಂತರ ಉಷ್ಣಾಂಶವು ಗಣನೀಯವಾಗಿ ಹೆಚ್ಚಾಗುತ್ತಾ ಹೋಗುತ್ತದೆ. ಏಪ್ರಿಲ್ ತಿಂಗಳಿನಲ್ಲಿ ಹೆಚ್ಚು ಉಷ್ಣಾಂಶವಿರುವುದನ್ನು ಕಾಣಬಹುದು. ಹಾಗಾಗಿ ಏಪ್ರಿಲ್ ತಿಂಗಳು ತಾಲೂಕಿನ ಅತಿ ಹೆಚ್ಚು ಉಷ್ಣತೆಯನ್ನು ಹೊಂದಿರುವ ಮಾಸವಾಗಿದೆ. ಬೇಸಿಗೆಯ ಕಾಲದಲ್ಲಿ ಕನಿಷ್ಠ ೩೩ ಸೆಂ.ಗ್ರೇಡ್ ನಿಂದ ೩೭ ಸೆಂ.ಗ್ರೇಡ್ ಉಷ್ಣಾಂಶವಿರುವುದನ್ನು ಕಾಣಬಹುದಾಗಿದೆ.[*]

ನೈರುತ್ಯ ಮಾನ್ಸೂನ್ ಮಾರುತಗಳ ಕಾಲ : ಮೇ ತಿಂಗಳಿನಿಂದ ಪ್ರಾರಂಭವಾಗಿ ಸೆಪ್ಟೆಂಬರ್ ತಿಂಗಳವರೆಗೆ ಕಂಡುಬರುತ್ತದೆ. ಏಪ್ರಿಲ್ ತಿಂಗಳಿನಿಂದ ಅಂತ್ಯದ ವೇಳೆಗೆ ದಕ್ಷಿಣ ಪ್ರಸ್ಥಭೂಮಿಯ ಅತಿ ಹೆಚ್ಚು ಉಷ್ಣಾಂಶದಿಂದಾಗಿ ಕಡಿಮೆ ಒತ್ತಡ ಪ್ರದೇಶವಾಗಿ ರೂಪುಗೊಳ್ಳುತ್ತದೆ. ತೇವಾಂಶ ಭರಿತವಾದ ನೈರುತ್ಯ ಮಾನ್ಸೂನ ಮಾರುತವು ಪಶ್ಚಿಮ ಘಟ್ಟಗಳಿಂದ ತಡೆಯಲ್ಪಟ್ಟು ಈ ಘಟ್ಟಗಳು ಪಶ್ಚಿಮ ಭಾಗವು ಅಧಿಕ ಮಳೆಯನ್ನು ಪಡೆದರೆ, ವಿರುದ್ಧ ಭಾಗವಾದ ಪೂರ್ವಭಾಗವು ಮಳೆಯ ನೆರಳಿನ ಪ್ರದೇಶವಾಗಿದ್ದು, ಸಾಧಾರಣ ಪ್ರಮಾಣದ ಮಳೆಯನ್ನು ಪಡೆಯುತ್ತದೆ. ಚಾಮರಾಜನಗರ ತಾಲೂಕಿನ ಈ ಮಳೆಯ ನೆರಳಿನ ಪ್ರದೇಶದಲ್ಲಿ ನೆಲಸಿರುವುದರಿಂದ ಅನಾವೃಷ್ಟಿ ಸರ್ವೇ ಸಾಮಾನ್ಯವಾಗಿ ಬಿಟ್ಟಿದೆ. ಹಾಗಾಗಿ ಇಲ್ಲಿನ ರೈತ ಮಳೆಯಾಶ್ರಿತನಾಗಿದ್ದು, ಮಾಸಿಕ ಸರಾಸರಿ ಮಳೆಯ ಪ್ರಮಾಣ ೭೭೫.೯ ಮಿ.ಮೀ. ವಾಸ್ತವಿಕ ಸರಾಸರಿ ಮಳೆ ೫೧೩.೪ ಮಿ.ಮೀ. ಹಾಗೂ ಏಳು ವೃಷ್ಟಿಮಾಪಕಗಳೂ ಈ ತಾಲೂಕಿನಲ್ಲಿವೆ.[೬]

ಈಶಾನ್ಯ ಮಾನ್ಸೂನ ಮಾರುತಗಳ ಕಾಲ : ಇದನ್ನು ಹಿಂಗಾರು ಮಳೆಗಾಲವೆಂತಲೂ ಕರೆಯುತ್ತಾರೆ. ಇದು ಅಕ್ಟೋಬರ್ ನವೆಂಬರ್ ತಿಂಗಳಗಳಲ್ಲಿ ಕಂಡುಬರುತ್ತದೆ. ಇದು ಕಡಿಮೆ ಅವಧಿಯ ಋತುವಾದರೂ ನೈರುತ್ಯ ಮಾರುತದ ಕಾಲಕ್ಕೆ ಹೋಲಿಕೆ ಮಾಡಿದಾಗ ಅತಿ ಹೆಚ್ಚು ಮಳೆ ಬೀಳುತ್ತದೆ. ಈ ಅವಧಿಯಲ್ಲಿ

ಆವರ್ತ ಮಾರುತಗಳ ಪ್ರಭಾವ ಜಿಲ್ಲೆಯ ನಿಚ್ಚಳವಾಗಿರುತ್ತದೆ. ಆಗಾಗಿ ಅಲ್ಪಾವಧಿಯಲ್ಲಿ ಹೆಚ್ಚು ಮಳೆ ಬೀಳುತ್ತದೆ. ತಾಲೂಕಿನ ಸರಾಸರಿ ಮಾಸಿಕ ಮಳೆಯ ಪ್ರಮಾಣವನ್ನು ಗಮನಿಸಿದಾಗ ಅಕ್ಟೋಬರ್ ತಿಂಗಳು ಅತಿ ಹೆಚ್ಚು ಮಳೆ ಪಡೆಯುತ್ತಿರುವ ಮಾಸವಾಗಿದೆ.[೬]

ಚಳಿಗಾಲ : ಇದು ಡಿಸೆಂಬರ್‌ನಿಂದ ಪ್ರಾರಂಭವಾಗಿ ಫೆಬ್ರವರಿಯಲ್ಲಿ ಅಂತ್ಯವಾಗುವುದು. ಈ ಅವಧಿಯಲ್ಲಿ ಕಡಿಮೆ ಉಷ್ಣಾಂಶ ಕಂಡುಬರುವುದರಿಂದ ಚಳಿಗಾಲದಲ್ಲಿ ಸೌಮ್ಯ ವಾತಾವರಣವಿರುತ್ತದೆ. ಡಿಸೆಂಬರ್ ತಿಂಗಳು ಅತ್ಯಂತ ಕೊರೆಯುವ ಚಳಿಯಿದ್ದು, ಆ ತಿಂಗಳಲ್ಲಿ ಗರಿಷ್ಠ ಉಷ್ಣಾಂಶ ೨೭ ಗಳಿಷ್ಟಿರುತ್ತದೆ.

## ಭೂ ಮೇಲ್ಮೈ ಲಕ್ಷಣ

ಚಾಮರಾಜನಗರ ತಾಲೂಕಿನ ಪೂರ್ವ ಮತ್ತು ದಕ್ಷಿಣ ಮೇರೆಯಲ್ಲಿ ಬಿಳಿಗಿರಿರಂಗನ ಬೆಟ್ಟ ಸಾಲುಗಳು ಪೂರ್ವ ಘಟ್ಟಗಳು ಕೊನೆಗೊಳ್ಳುವ ತುದಿಯಾಗಿದ್ದು, ಪೂರ್ವ-ಪಶ್ಚಿಮ ಘಟ್ಟಗಳಿಗೆ ಸೇತುವೆಯಾಗಿದೆ. ಈ ಭಾಗವನ್ನು ಬಿಟ್ಟರೆ ತಾಲೂಕಿನಲ್ಲಿ ಮೈದಾನ ಪ್ರದೇಶವೇ ಹೆಚ್ಚು. ಬಿಳಿಗಿರಿರಂಗನ ಬೆಟ್ಟದ ಸಾಲುಗಳು ಚಾಮರಾಜನಗರ ವಲಯ ವ್ಯಾಪ್ತಿಗೆ ಒಳಪಡುತ್ತದೆ. ಆದರೆ ಕಂದಾಯ ಇಲಾಖೆಯನ್ವಯ ಕೆ.ಗುಡಿ ಬೆಟ್ಟಗುಳಿ ಮತ್ತು ಪುಣಜನೂರು ಪ್ರದೇಶಗಳು ಮಾತ್ರ ಚಾಮರಾಜನಗರ ವ್ಯಾಪ್ತಿಗೆ ಬರುತ್ತವೆ. ಸುಮಾರು ೨೭,೯೦೪ ಹೆಕ್ಟೇರು ವಿಸ್ತೀರ್ಣ ದಷ್ಟ ಸಂಪದ್ಭರಿತವಾದ ಅರಣ್ಯ ಪ್ರದೇಶವನ್ನು ಹೊಂದಿದೆ.

ಚಾಮರಾಜನಗರ ತಾಲೂಕಿನ ಪೂರ್ವಘಟ್ಟಗಳ ಸರಣಿಗಳ ಪ್ರಮುಖವಾದ ಬೆಟ್ಟಗಳಲ್ಲಿ ಬಿಳಿಗಿರಿರಂಗನ ಬೆಟ್ಟದ ಸರಣಿಯೂ ಒಂದಾಗಿದೆ. ಇದು ಸುಮಾರು ೧೬ ಕಿ.ಮೀ.ಗಳಷ್ಟು ಉದ್ದವಾಗಿದ್ದು, ಉತ್ತರ-ದಕ್ಷಿಣವಾಗಿ ಹಬ್ಬಿದೆ. ಇದು ಸಮುದ್ರ ಮಟ್ಟದಿಂದ ಸುಮಾರು ೨೪೦೦ ಅಡಿ ಎತ್ತರಕ್ಕಿಂತಲೂ ಹೆಚ್ಚು ಎತ್ತರವಾದ ಬೆಟ್ಟಗಳನ್ನು ಹೊಂದಿದೆ.[೭]

ಈ ತಾಲೂಕಿನ ಪ್ರಮುಖ ಬೆಟ್ಟಗುಡ್ಡಗಳ ಶ್ರೇಣಿಗಳಿವೆ. ಅವುಗಳೆಂದರೆ ಕರಿವರದರಾಯನ ಬೆಟ್ಟ, ಮಲೆಯೂರು ಬೆಟ್ಟ, ಅಮಚವಾಡಿ ಬೆಟ್ಟ, ಅರಕಲವಾಡಿ ಬೆಟ್ಟ, ಶಂಕರದೇವರ ಬೆಟ್ಟ (ಮಂಗಲ), ಯಡಬೆಟ್ಟ, ಎಣ್ಣೆ ಹೊಳೆ ಮಾದಪ್ಪನಬೆಟ್ಟ, ಅಣ್ಣತಮ್ಮಂದಿರ ಬೆಟ್ಟ, ಬೆಳಗಿರಿರಂಗನ ಬೆಟ್ಟ ಹಾಗೂ ತಾಲೂಕಿನ ಗಡಿ ಪ್ರದೇಶಗಳಲ್ಲಿ ಹುಲುಗನ ಮುರಡಿ ಬೆಟ್ಟ, ಕೊಂಗಳಿ ಬೆಟ್ಟ, ಗೋಪಾಲ ಸ್ವಾಮಿ ಬೆಟ್ಟ ಕಂಡುಬರುತ್ತದೆ.

## ನದಿಗಳು

ತಾಲೂಕಿನ ಗಡಿ ಮತ್ತು ಒಳಭಾಗದಲ್ಲಿ ಸಾಧಾರಣ ಪ್ರಮಾಣದ ನದಿಗಳು ಮತ್ತು ಸಣ್ಣ ಝರಿಗಳು ಹರಿಯುತ್ತವೆ. ಅವುಗಳಲ್ಲಿ ಸುವರ್ಣಾವತಿ, ಚಿಕ್ಕಹೊಳೆ, ಎಣ್ಣೆಹೊಳೆ ನದಿಗಳೂ ಪ್ರಮುವಾದವುಗಳಾಗಿವೆ.

ಸುವರ್ಣಾವತಿ ನದಿ : ಚಾಮರಾಜನಗರ ತಾಲೂಕಿನ ಮುಖ್ಯ ನದಿ ಸುವರ್ಣಾವತಿ. ಇದನ್ನು 'ಹೊನ್ನುಹೊಳೆ' ಎಂದು ಕರೆಯುತ್ತಾರೆ. ''ನೀಲಗಿರಿಯಲ್ಲಿ ತಪಸ್ಸನ್ನ ಆಚರಿಸುತ್ತಿದ್ದ 'ಕಪಿಲ' ಎಂಬ ಋಷಿ ತನ್ನ ಕಮಂಡಲದಲ್ಲಿ ಇಟ್ಟುಕೊಂಡಿದ್ದ ಗಂಗೆಯ ನೀರನ್ನು ಉತ್ತರಾಭಿಮುಖವಾಗಿ ಹರಿಯಿಸುವುದರ ಮೂಲಕ ಸಕಲ ಜನರಿಗೆ ಮುಕ್ತಿಯನ್ನು ಕರುಣಿಸುವ ನದಿಯನ್ನಾಗಿ ಮಾಡಬೇಕೆಂದು ನಂದೀಶ್ವರ ಋಷಿಯನ್ನು ಪ್ರಾರ್ಥಿಸಿದ. ನಂದೀಶ್ವರನ ಪ್ರಾರ್ಥನೆಯನ್ನು ಋಷಿ ಈಡೇರಿಸಿದ ಫಲವಾಗಿ ಸುವರ್ಣಾವತಿ ನದಿ ಹುಟ್ಟಿತ್ತು" ಎಂದು ಇತಿಹಾಸವಿದೆ.[೯] ಚಾಮರಾಜನಗರ ತಾಲೂಕಿನ ಜೀವನದಿಯಾಗಿರುವ ಈ ಸುವರ್ಣಾವತಿ ನದಿ ಗುಜ್ಜಲ ಹಳ್ಳಿ ಕಣಿವೆಯಲ್ಲಿ ಹುಟ್ಟಿ ಉತ್ತರಾಭಿಮುಖವಾಗಿ ಹರಿದು, ನೀರು ದುರ್ಗಹಳ್ಳಿ ಮತ್ತು ಅರಕಾಡಿಹಳ್ಳಿ ಎನ್ನುವ ಎರಡು ತೊರೆಗಳು ಸೇರಿ ಸುವರ್ಣ ನದಿ ಆಗಿದೆ. ನೀರೆ ದುರ್ಗ ಹಳ್ಳಿ ಅತಿ ಖಾನೆ ಎಸ್ಟೇಟ್ ಪ್ರದೇಶದಲ್ಲಿ ಹುಟ್ಟಿ ಸುಮಾರು ೧೯ ಕಿ.ಮೀ. ದೂರ ಕ್ರಮಿಸುತ್ತದೆ. ಅರಕಾದಿಹಳ್ಳಿ "ದಿಂಬಂ" ಘಟ್ಟ ಪ್ರದೇಶದಲ್ಲಿ ಹುಟ್ಟಿ ಸುಮಾರು ೩೨ ಕಿ.ಮೀ. ಹರಿಯುತ್ತದೆ. ಇವೆರಡೂ ಬೂದಿ ಪಡಗ ಬಳಿ ಸಂಗಮವಾಗಿ ಸುವರ್ಣವತಿ ನದಿ ಆಗಿದೆ. ಸುವರ್ಣಾವತಿ ಸುಮಾರು ೧೧ ಕಿ.ಮೀ. ಹರಿದು 'ಚಿಕ್ಕ ಹೊಳೆ' ಎನ್ನುವ ಉಪನದಿ ಇದಕ್ಕೆ ಸೇರುತ್ತದೆ.[೧೦]

ಚಾಮರಾಜನಗರ ತಾಲೂಕಿನಲ್ಲಿ ಒಟ್ಟು ೧೦೫೮ ಹೆಕ್ಟೇರುಗಳಷ್ಟು ಭೂಮಿ ವಿವಿಧ ನೀರಾವರಿ ಸೌಲಭ್ಯಗಳನ್ನು ಒಳಪಟ್ಟಿದೆ. ಸುವರ್ಣಾವತಿ, ಚಿಕ್ಕ ಹೊಳೆ, ಎಣ್ಣೆಹೊಳೆಗಳು ವ್ಯವಸಾಯಕ್ಕೆ ಯೋಗ್ಯವಾಗಿದೆ. ಸುವರ್ಣವತಿ ನದಿ ನೀರನ್ನು ಚಾಮರಾಜನಗರ ಪಟ್ಟಣಕ್ಕೆ ಕುಡಿಯಲು ಸರಬರಾಜು ಮಾಡಲಾಗುತ್ತದೆ. ಇದಕ್ಕೆ ಅಟ್ಟುಗುಳಿಪುರದ ಬಳಿ ೧೯೬೭ರಲ್ಲಿ ಅಣೆಕಟ್ಟನ್ನು ಕಟ್ಟಲು ತಯಾರಿ ನಡೆಯಿತು. ೧೨೪೦ ಉದ್ದ ಹಾಗೂ ೨೮ ಮೀಟರ್ ಎತ್ತರವಿರುವ ಈ ಅಣೆಕಟ್ಟಿನ ನೀರಿನ ಶೇಖರಣಾ ಸಾಮರ್ಥ್ಯ ೩೫.೪ ಮೇಘ ಮೀ. ಇದನ್ನು ೯೫.೧೯ ಮೇಘ ಮೀ. ತನಕ ಪಡೆದುಕೊಳ್ಳಬಹುದು ಎನ್ನುವ ಅಂದಾಜು ಇದೆ. ಸುಮಾರು ೨೫೮೪ ಹೆಕ್ಟೇರ್ ಪ್ರದೇಶ ನೀರಾವರಿಗೆ ಒಳಪಟ್ಟಿರುವ ಈ ಅಣ್ಣೆಕಟ್ಟಿನ ನಿರ್ಮಾಣದಿಂದ ೫೦೮ ಹೆಕ್ಟೇರ್ ಪ್ರದೇಶ ನೀರಾವರಿಗೆ ಒಳಪಟ್ಟಿದೆ. ಈ ನಿರ್ಮಾಣದ ಅಂದಾಜು ವೆಚ್ಚ ೪೧೦ ಲಕ್ಷ ರೂಪಾಯಿಗಳು. ಈ ಅಣೆಕಟ್ಟಿನ ನಿರ್ಮಾಣದಿಂದ ೫೦೮ ಹೆಕ್ಟೇರ್ ಪ್ರದೇಶ ಮುಳುಗಡೆಯಾಗಿದೆ.

ಸುವರ್ಣಾವತಿಯ ಉಪನದಿಯಾದ ಚಿಕ್ಕಹೊಳೆಗೆ ಅಂಕನಶೆಟ್ಟಿಪುರದ ಹತ್ತಿರ ಈ ನದಿಗೆ ೭೪೫ ಮೀಟರ್ ಉದ್ದ ಹಾಗೂ ೨೪ ಮೀಟರ್ ಎತ್ತರದ ಅಣೆಕಟ್ಟನ್ನು ಕಟ್ಟಲಾಗಿದೆ. ಇದರಿಂದ ಸುಮಾರು ೧೬೩೦ ಹೆಕ್ಟೇರ್ ಪ್ರದೇಶ ನೀರಾವರಿಗೆ ಒಳಪಟ್ಟಿದೆ. ಸುಮಾರು ೯೩ ಲಕ್ಷ ರೂಪಾಯಿ ಅಂದಾಜು ವೆಚ್ಚದ ಈ ಅಣೆಕಟ್ಟು ೧೯೫೮ರಲ್ಲಿ ಪ್ರಾರಂಭವಾಗಿ ೧೯೬೯ರಲ್ಲಿ ಮುಕ್ತಾಯವಾಯಿತು. ೧೯೭೨ರ ಪ್ರವಾಹದಲ್ಲಿ ಅಣೆಕಟ್ಟು ಒಡೆದು ಹೋಗಿತ್ತು. ಅನಂತರ ೧೯೭೬ ಮತ್ತು ೧೯೮೪ರ ಅವಧಿಯಲ್ಲಿ ಇದನ್ನು ಪುನರ್ ನಿರ್ಮಾಣ ಮಾಡಲಾಯಿತು. ಈ ಜಲಾಶಯದಿಂದ ೧೬೦ ಹೆಕ್ಟೇರ್ ಪ್ರದೇಶ ಮುಳುಗಡೆಯಾಗಿದೆ. ಶೇಖರಣಾ ಸಾಮಾರ್ಥ್ಯ ೧೯.೯೫ ಮೆ.ಘ.ಮಿ.ಯಾಗಿದೆ.[೧೧]

ಸುವರ್ಣಾವತಿ, ಚಿಕ್ಕಹೊಳೆ ಇನ್ನಿತರ ಜಲಾಶಯಗಳು ಜೊತೆಗೆ ವ್ಯವಸಾಯ ಯೋಗ್ಯವಾದ ಹತ್ತಾರು ದೊಡ್ಡ ಕೆರೆಗಳನ್ನು ತಾಲೂಕಿನಾದ್ಯಂತ ಕಾಣಬಹುದು. ಅವುಗಳು ಹೊಂಗನೂರಿನ 'ಹಿರಿಕೆರೆ' (೬೪೦ ಎಕರೆ), ಇದು ಸುಮಾರು ೩೦೦೦ ಎಕರೆ ಜಮೀನಿಗೆ ನೀರುಣಿಸಿದರೆ, ರಾಮ ಸಮುದ್ರದ ದೊಡ್ಡಕೆರೆ ಮತ್ತು ಚಿಕ್ಕಕೆರೆ(೬೧೮ ಎಕರೆ), ೨೦೦೦ ಎಕರೆ ಭೂಪ್ರದೇಶಕ್ಕೆ ನೀರು ಪೂರೈಸುತ್ತವೆ. ಹೊಮ್ಮದ ಕೆರೆ(೫೩೦ ಎಕರೆ), ನಾಗವಳ್ಳಿ ಕೆರೆ, ಅರಕಲವಾಡಿ ಕೆರೆ, ಅಮಚವಾಡಿ ಹೊಸಕೆರೆ, ಕಾಳನಹುಂಡಿ, ಕಾಳಿಕೆರೆ, ಹೊಂಡರ ಬಾಳುಕೆರೆ, ಕಾಗಲವಾಡಿ ಕೆರೆ, ಇರಸವಾಡಿ ಕೆರೆ, ಯಡಿಯೂರು ಕೆರೆಗಳು ಆಯಾಯಾ ಭಾಗದ ಭೂಪ್ರದೇಶದ ಬೇಸಾಯಕ್ಕೆ ನೀರನ್ನು ಒದಗಿಸುತ್ತವೆ.

ಮಣ್ಣು : ಚಾಮರಾಜನಗರ ತಾಲೂಕಿನಲ್ಲಿ ವ್ಯವಸಾಯ ಪ್ರಧಾನವಾದ ಪ್ರದೇಶವಾಗಿದೆ. ಇದು ಕೃಷಿಗೆ ಯೋಗ್ಯವಾದ ಕೆಂಪು ಮಿಶ್ರಿತ ಕಪ್ಪು ಮತ್ತು ನುರುಜು ಮಿಶ್ರಿತ ಮಣ್ಣು ಮುಂತಾದ ವೈವಿಧ್ಯಮಯ ಮಣ್ಣನ್ನು ಹೊಂದಿದೆ.

## ಆಹಾರ ಬೆಳೆಗಳು

ಚಾಮರಾಜನಗರ ತಾಲೂಕಿನ ಭೂಪ್ರದೇಶವು ಕೃಷಿಗೆ ಒಳಪಟ್ಟಿದೆ. ಇದು ಸರಾಸರಿ ೩೬.೮೩ರಷ್ಟು ಕೃಷಿಗೆ ಒಳಪಟ್ಟಿದೆ. ಜೋಳ ಈ ತಾಲೂಕಿನ ಮುಖ್ಯ ಬೆಳೆ. ಸಾಗುವಳಿಗೆ ಲಭ್ಯವಿರುವ ನಿವ್ವಳ ಪ್ರದೇಶ ೭೧.೯೯೬ ಹೆಕ್ಟೇರುಗಳು ಅದರಲ್ಲಿ ೧೦,೭೭೮ ಹೆಕ್ಟೇರುಗಳಷ್ಟು ಭೂಪ್ರದೇಶ ಜೊತೆಗೆ ಬೆಳೆಗೆ, ಇತರೆ ಬೆಳೆಗಳೆಂದರೆ ಭತ್ತ, ರಾಗಿ, ಕಬ್ಬು, ಹುರುಳಿ, ತೊಗರಿ, ಕಡ್ಲೆಕಾಯಿ, ಅಲಸಂದೆ, ಎಳ್ಳು, ಉದ್ದು, ಉಚ್ಚೇಳ್ಳು, ನವಣೆ, ಹೆಸರು ಮತ್ತು ತರಕಾರಿಗಳು ಕೆಲವಡೆ ವರ್ಷಕ್ಕೆ ಎರಡು ಬೆಳೆ ಬೆಳೆಯುತ್ತಾರೆ. ನೀರಾವರಿ ಸೌಲಭ್ಯವಿರುವ ಕಡೆ ಭತ್ತ, ತೆಂಗು, ಕಬ್ಬು, ಅಡಿಕೆ, ಬಾಳೆ, ತಾಳೆ, ಅರಿಸಿನ ಇನ್ನಿತರ ವಾಣಿಜ್ಯ ಬೆಳೆ ಬೆಳೆಯುತ್ತಾರೆ.

ಹಿಪ್ಪುನೇರಳೆ ವ್ಯವಸಾಯವು ತಾಲೂಕಿನ ವಿಶೇಷ ಬೆಳೆಯಾಗಿದೆ. ರೇಷ್ಮೆ ಹುಳು ಸಾಕುವುದು, ನೂಲು ತೆಗೆಯುವುದು, ಅಡಿಕೆ ಶುದ್ಧಿಕರಣ, ತಾಲೂಕಿನ ಜನರ ಉಪಕಸುಬಾಗಿದೆ.[೧೨]

## ಪ್ರಾಣಿ-ಪಕ್ಷಿಗಳ ಸಂಪತ್ತು

ಚಾಮರಾಜನಗರ ತಾಲೂಕಿನ ಪೂರ್ವ ಮತ್ತು ಆಗ್ನೇಯ ಭಾಗಗಳಲ್ಲಿ ಕುರುಚಲು ಗಿಡಗಳ ಕಾಡುಗಳಿವೆ. ಕೆಲವೆಡೆ ರಾಜ್ಯ ಅರಣ್ಯ, ಜಿಲ್ಲಾ ಅರಣ್ಯ ಮತ್ತು ಸಾಮಾಜಿಕ ಅರಣ್ಯಗಳನ್ನು ನಿರ್ಮಾಣ ಮಾಡಿ ಅಲ್ಲಲ್ಲಿ ನೆಡು ತೋಪುಗಳನ್ನು ಬೆಳೆಸಲಾಗಿದೆ. ಹೀಗೆ ಅಪೂರ್ವ ಸಸ್ಯರಾಶಿಯನ್ನು ಪೋಷಿಸಿಕೊಂಡು ಬಂದಿರುವ ಇಲ್ಲಿನ ಬೆಟ್ಟಗುಡ್ಡ ಅರಣ್ಯ ಪ್ರದೇಶಗಳು ವಿಶೇಷವಾದ ಪ್ರಾಣಿ ಪಕ್ಷಿಗಳನ್ನು ಸದಾ ಪೋಷಿಸಿಕೊಂಡು ಬಂದಿವೆ. ಗ್ರೇಟ್ ವೈಯ್ಸ್, ಮಲಬಾರ್ ಹಾರನಬಲ್, ಬಿಳಿಗಿರಿರಂಗನ ಬೆಟ್ಟದ ಹೊನ್ನಮೇಟಿ ಮುಂತಾದ ಕಡೆ ಕಂಡುಬರುತ್ತದೆ. ಮಲಬಾರ ವಿಸಲಿಂಗ ಥ್ರುಶ್, ಕ್ರಸ್ಸೈಡ್, ಸರ್ಪೆಂಟ್ ಈಗಲ್ ಮುಂತಾದ ಸುಮಾರು

೨೬೦ ಜಾತಿಗಳ ಪಕ್ಷಿಗಳನ್ನು ಚಾಮರಾಜನಗರ ತಾಲೂಕಿನಾದ್ಯಾಂತ ಕಾಣಬಹುದು. ಬಿಳಿಗಿರಿರಂಗನ ಬೆಟ್ಟಕ್ಕೆ ಹೊಂದಿಕೊಂಡಂತೆ ಬೆಟ್ಟದ ಪಶ್ಚಿಮಕ್ಕೆ ಇರುವ "ಹಿರಿಕೆರೆ" ಅತ್ಯಂತ ರಮಣೀಯ ಪ್ರದೇಶ, ಈ ಬೃಹತ್ ಸರೋವರಕ್ಕೆ ನವೆಂಬರ್, ಡಿಸೆಂಬರ್ ತಿಂಗಳಿನಲ್ಲಿ ಅನೇಕ ನೀರ್ ಪಕ್ಷಿಗಳು ವಲಸೆ ಬರುತ್ತದೆ.

ಆನೆ, ಕಾಡೆಮ್ಮೆ, ಕಾಡುಕೋಣ, ಕರಡಿ, ಜಿಂಕೆ, ಮೊಲ, ಕಾಡು ಹಂದಿ, ಕಾಡುನಾಯಿ, ನರಿ, ಕಾಡು ಕುರಿ, ಕಿರುಬ, ವಿಷಪೂರಿತ ಜಂತುಗಳು ಸರ್ವೇ ಸಾಮಾನ್ಯವಾಗಿದೆ. ಅಪರೂಪಕ್ಕೊಮ್ಮೆ ಹುಲಿಯೂ ಕಾಣಸುವುದುಂಟು. ಇಕತಿಯೋಫಿಸೆ ಎಂಬ ಉಭಯಚರ ಪ್ರಾಣಿ, ದೊಡ್ಡ ಸಂಪಿಗೆ ಕಾಡಿನ ಮಣ್ಣಿನಲ್ಲಿ ಸಿಗುತ್ತದೆ.[೧೩]

**ಅರಣ್ಯ ಸಂಪತ್ತು**

ಚಾಮರಾಜನಗರ ತಾಲೂಕಿನ ಅರಣ್ಯಪ್ರದೇಶಗಳಾದ ಬೇಡಗುಳ್ಳಿ ಕಾಡಿಗೆರೆ, ಗೊರಹಳ್ಳಿಗಳಲ್ಲಿ, ಕಾಫಿ, ಏಲಕ್ಕಿ, ಮೆಣಸು ಮತ್ತು ಕಿತ್ತಳೆ ಎಂಬ ತೋಟದ ಬೆಳೆಗಳನ್ನು ಬೆಳೆಯುತ್ತಾರೆ. ಮಳೆ ಬೀಳುವ ಬೆಟ್ಟ ಗುಡ್ಡಗಾಡು ಪ್ರದೇಶಗಳಲ್ಲಿ ತೇಗ, ಹೊನ್ನೆ, ಬೀಟೆ, ಮತ್ತಿ, ಜಾಲಿ, ಬೆಜ್ಜಲು, ಶ್ರೀಗಂಧ, ಬಿದಿರು, ತವಸ, ಮುತ್ತುಗ, ನೇರಳೆ, ಹುಣಸೆ, ನೀಲಗಿರಿ ಮರಗಳು ಈ ಪ್ರದೇಶದಲ್ಲಿ ಕಂಡುಬರುತ್ತವೆ.

**ಖನಿಜ ಸಂಪತ್ತು**

ಚಾಮರಾಜನಗರ ತಾಲೂಕಿನ ಮೈಸೂರು ಜಿಲ್ಲೆಯ ದಕ್ಷಿಣ ಪ್ರಸ್ಥಭೂಮಿಯ ದಕ್ಷಿಣದ ತುದಿ ಇಲ್ಲಿನ ಶಿಲಾ ರಚನೆಯಲ್ಲಿ ಭಿನ್ನತೆ ಕಂಡುಬರುತ್ತದೆ. ಚಾಮರಾಜನಗರ ಪೂರ್ವ, ಆಗ್ನೇಯ ಮತ್ತು ದಕ್ಷಿಣ ಭಾಗದಲ್ಲಿ ಚಾರ್ನೋಕೈಟ್ ಶಿಲೆಗಳು ಕಂಡುಬರುತ್ತದೆ. ಉಳಿದ ಭಾಗಗಳಲ್ಲಿ ಬಹುಮಟ್ಟಿಗೆ ಕಣಶಿಲೆಯ ಪ್ರದೇಶಗಳನ್ನು ಕಾಣಬಹುದು. ಕ್ರೂಮೈಟ್, ಸುಣ್ಣಶಿಲೆ, ಬಳಪದ ಕಲ್ಲುಗಳು ಸಿಗುತ್ತವೆ.

ಇತ್ತೀಚಿನ ವರ್ಷಗಳಲ್ಲಿ ತಾಲೂಕಿನ ವ್ಯಾಪ್ತಿಯಲ್ಲಿ ಬರುವ ಹೊಂಗನೂರಿನ ಕರಡಿಗುಡ್ಡ, ಪೊದಕಿ ಗುಡ್ಡ, ಕೊಕ್ಕಿನಗುಡ್ಡ, ಕಿರಬನ ಗುಡ್ಡ, ಮುರಿನ ಗುಡ್ಡ(ಮಹದೇಶ್ವರ ಗುಡ್ಡ), ಜ್ಯೋತಿಗೌಡನಪುರ, ರೇಚಂಬಳ್ಳಿ, ಸಂತೇಮರಳ್ಳಿ, ಹರವೆ ಮುಂತಾದ ಕಡೆಗಳಲ್ಲಿ ಕರಕಲ್ಲಿನ ನಿಕ್ಷೇಪವಿದ್ದು, ಇಲ್ಲಿನ ಕರಿಕಲ್ಲನ್ನು ಮಂಗಳೂರು, ಮದ್ರಾಸ್ ಬಂದರುಗಳ ಮೂಲಕ ಜಪಾನ, ಚೀನಾ, ಅಮೇರಿಕಾ ದೇಶಗಳಿಗೆ ರಫ್ತು ಮಾಡಲಾಗುತ್ತದೆ. ಹೊಂಗನೂರಿನ ಕರಡಿಗುಡ್ಡ ಮತ್ತು ಜ್ಯೋತಿಗೌಡನ ಪುರದ ಗಣಿಯು ಶ್ರೇಷ್ಠ ದರ್ಜೆಯ ಕಲ್ಲಾಗಿದ್ದು ಒಂದು ಮೀಟರಗೆ ಐವತ್ತು ಸಾವಿರಕ್ಕೂ ಹೆಚ್ಚಿನ ಬೆಲೆಗೆ ಮಾರಾಟ ಮಾಡಲಾಗುತ್ತದೆ.[೧೪]

## ಪ್ರಾಗಿತಿಹಾಸ ಕಾಲ

ಮಾನವನ ಸಾಂಸ್ಕೃತಿಕ ವಿಕಸನದಲ್ಲಿ ಬರವಣಿಗೆಯ ಕಲೆಯ ಆವಿಷ್ಕಾರ ಒಂದು ಮುಖ್ಯ ಘಟ್ಟ. ಯಾವುದೇ ದೇಶದ ಇತಿಹಾಸದಲ್ಲಿ ಈ ಘಟ್ಟದ ಆರಂಭ ಐತಿಹಾಸಿಕ ಆಗು-ಹೋಗುಗಳನ್ನು ತಿಳಿಯಲು

ಲಿಖಿತ ದಾಖಲೆಗಳಾಗಿರುತ್ತವೆ. ಯಾವ ಕಾಲದಿಂದ ಈ ರೀತಿಯ ಲಿಖಿತ ದಾಖಲೆಗಳು ದೊರಕಲಾರಂಭಿಸುತ್ತವೆಯೋ ಅಂದಿನಿಂದ ಈಚೀನ ಕಾಲವನ್ನು ಐತಿಹಾಸಿಕ ಯುಗವೆಂದು, ಅದಕ್ಕೆ ಹಿಂದಿನ ಕಾಲವನ್ನು ಪ್ರಾಗೈತಿಹಾಸಿಕ ಯುಗವೆಂದೂ ವಿಂಗಡಿಸಿಕೊಳ್ಳುವುದು ರೂಢಿ. ಅಂದರೆ ಪ್ರಾಚೀನ ಮಾನವನ ಆಗು-ಹೋಗುಗಳ ಪುನರಚನೆಗೆ ಲಿಖಿತ ಆಧಾರಗಳು ದೊರಕದೆ, ಆ ಜನ ಉಪಯೋಗಿಸುತ್ತಿದ್ದ ವಸ್ತುಗಳ ಅವಶೇಷಗಳ ಆಧಾರವನ್ನು ಮಾತ್ರ ಅವಲಂಬಿಸಿ ಯಾವ ಕಾಲದ ವಸ್ತು ಸ್ಥಿತಿಗಳನ್ನು ತಿಳಿಯಬೇಕಾಗುತ್ತದೋ ಅದನ್ನು ಪ್ರಾಗೈತಿಹಾಸಿಕ ಯುಗವೆಂದು ಕರೆಯುವರು. ಈ ಯುಗದ ಅಧ್ಯಯನವೇ ಪ್ರಾಗೈತಿಹಾಸ.[೨೫]

ಮಾನವನ ಪ್ರಾಚೀನ ಇತಿಹಾಸವನ್ನು ಪ್ರಮುಖವಾಗಿ ಎರಡು ವಿಭಾಗಗಳನ್ನಾಗಿ ಮಾಡಬಹುದಾಗಿದೆ.

೧. ಅಕ್ಷರ ಜ್ಞಾನವಿಲ್ಲದ ಪ್ರಾಚೀನ ಇತಿಹಾಸ

೨. ಅಕ್ಷರ ಜ್ಞಾನವನ್ನು ಹೊಂದಿದ ರಾಜ ಮಹಾರಾಜರ ಕಾಲವೆಂದು ಹೇಳಬಹುದಾಗಿದೆ. ಆದ್ದರಿಂದಲೇ ವಿದ್ವಾಂಶರ ಅಭಿಪ್ರಾಯದ ಪ್ರಕಾರ ಈ ಪ್ರಾಗಿತಿಹಾಸದ ಕಾಲಮಾನ ಇಂದಿಗೂ ೫ ಲಕ್ಷ ವರ್ಷಗಳಿಂದ ಕ್ರಿ.ಶ.ದ ಆರಂಭದವರೆಗೂ ರೂಢಿಯಲ್ಲಿತ್ತೆಂಬುದು ತಿಳಿಯುತ್ತದೆ. ಈ ಕಾಲ ಮಾನವನನ್ನು ಆಗ ನಿತ್ಯ ಬಳಕೆಯಲ್ಲಿದ್ದ ವಸ್ತುವಿನ ಆಧಾರದಿಂದ ಶಿಲಾಯುಗ ಸಂಸ್ಕೃತಿ ಮತ್ತು ಲೋಹ ಯುಗ ಸಂಸ್ಕೃತಿ ಎಂದು ವಿಂಗಡಿಸಲಾಗಿದೆ.

ಶಿಲಾಯುಗ ಸಂಸ್ಕೃತಿಯ ಹಂತವನ್ನು ಅವಶೇಷಗಳ ಬೆಳವಣಿಗೆಯ ರಚನೆಯ ತಾಂತ್ರಿಕತೆಯನ್ನು ಮುರು ಭಾಗಗಳಾಗಿ ವಿಂಗಡಿಸಲಾಗಿದೆ.

೧. ಹಳೆ ಶಿಲಾಯುಗ

೨. ಸೂಕ್ಷ್ಮ ಶಿಲಾಯುಗ

೩. ನೂತನ ಶಿಲಾಯುಗ[೨೬]

ಎಂದು ವರ್ಗೀಕರಿಸಲಾಗಿದೆ. ಅಧ್ಯಯನದ ದೃಷ್ಟಿಯಿಂದ ಪ್ರತಿಯೊಂದು ಹಂತಗಳಲ್ಲಿನ ಬದಲಾವಣೆಗಳನ್ನು ಗುರುತಿಸಿ ಹಳೆ ಶಿಲಾಯುಗವನ್ನು ''ಜಾನ್ ಬರ್ಕಿಟ್ ರವರು ೧.ಆದಿಹಳೆ ಶಿಲಾಯುಗ, ೨. ಮಧ್ಯ ಹಳೆ ಶಿಲಾಯುಗ, ೩. ಅಂತ್ಯ ಹಳೆಶಿಲಾಯುಗ ಎಂದು ವಿಭಾಗ ಮಾಡಿದ್ದಾರೆ.[೨೭]

ಹಳೆ ಶಿಲಾಯುಗಕ್ಕೆ ಸಂಬಂಧಿಸಿದಂತೆ ಎಂ.ಶೇಷಾದ್ರಿಯವರು ೧೯೭೧ರಲ್ಲಿ ಮೈಸೂರು ಜಿಲ್ಲೆಯ ಕಾವೇರಿ ನದಿ ತೀರದಲ್ಲಿರುವ ಸ್ಥಳಗಳನ್ನು ಪತ್ತೆ ಮಾಡಿ ಉತ್ಖನನ ಮಾಡಿದ್ದಾರೆ. ಅವುಗಳೆಂದರೆ ಟಿ. ನರಸೀಪುರ ಉತ್ಖನನ ಮತ್ತು ಹೆಮ್ಮಿಗೆ ಉತ್ಖನನ. ೧೯೭೪ರಲ್ಲಿ ಹೆಚ್.ಹನುಮಂತರಾವ್ ಮತ್ತು ನಾಗರಾಜುರವರು ಶಿಲಾಯುಗ ಸಂಸ್ಕೃತಿಯ ಮತ್ತು ಇತಿಹಾಸ ಆರಂಭ ಕಾಲದ ವಿಷಯಗಳನ್ನು ನೀಡುತ್ತವೆ.

ಈ ವಿಚಾರವನ್ನು ಗಮನಿಸಿದರೆ ಈ ಸಂಸ್ಕೃತಿಯು ಚಾಮರಾಜನಗರ ತಾಲೂಕಿನ ಆಸು-ಪಾಸಿನಲ್ಲಿಯೆ ಇದ್ದಿರಬಹುದೆಂದು ಊಹಿಸಬಹುದಾಗಿದೆ.

೨. ಸೂಕ್ಷ್ಮ ಶಿಲಾಯುಗ ಸಂಸ್ಕೃತಿ

ಸೂಕ್ಷ್ಮ ಶಿಲಾಯುಗ ಸಂಸ್ಕೃತಿಯು ಹಳೆ ಶಿಲಾಯುಗ ಮತ್ತು ನವ ಶಿಲಾಯುಗ ಸಂಸ್ಕೃತಿಗಳ ನಡುವಿನ ಕಾಲಕ್ಕೆ ಸೇರಿದ ಸಾಂಸ್ಕೃತಿಕ ಹಂತವಾಗಿದೆ. ಕರ್ನಾಟಕದಲ್ಲಿ ಸೂಕ್ಷ್ಮ ಶಿಲಾಯುಗ ನಿವೇಶನಗಳು ೧೯೩೦ರ ವೇಳೆಗೆ ಬೆಳಕಿಗೆ ಬಂದಿದ್ದರೂ, ೧೯೪೭ರ ಬ್ರಹ್ಮಗಿರಿ ಉತ್ಖನನದ(ಮೀಲ್ಹರ್ ೧೯೪೮) ನಂತರವೇ ಹೆಚ್ಚಿನ ಮಹತ್ವ ಬಂದಿತೆಂಬುದನ್ನು ಪುರಾತತ್ವಶಾಸ್ತ್ರಜ್ಞರು ಅಭಿಪ್ರಾಯಪಡುತ್ತಾರೆ. ಈ ಸಂಸ್ಕೃತಿಯ ಕಾಲ ವ್ಯಾಪ್ತಿ ತುಂಬಾ ಕಡಿಮೆ. ಆದರೆ ಸಾಂಸ್ಕೃತಿಕ ಬೆಳವಣಿಗೆಯಲ್ಲಿ ಈ ಸಂಸ್ಕೃತಿಯ ಪಾತ್ರ ಬಹಳ ಹಿರಿದಾದುದು. ಸೂಕ್ಷ್ಮ ಶಿಲಾಯುಗ ಸಂಸ್ಕೃತಿಯಲ್ಲಿನ ಮಾನವರು ಬೇಟೆ ಮಾಡುವ, ಮೀನು ಹಿಡಿಯುವ, ಆಹಾರ ಸಂಗ್ರಹಣೆ ಇವೇ ಮುಂತಾದ ಜೀವನ ವ್ಯವಸ್ಥೆ ಕಂಡುಬಂದಿದೆ.

ಚಾಮರಾಜನಗರ ತಾಲೂಕಿನ ಸೂಕ್ಷ್ಮ ಶಿಲಾಯುಗ ಸಂಸ್ಕೃತಿಯ ನೆಲೆಗಳಾದ ಗುಮ್ಮಳ್ಳಿ, ಯರಗನಹಳ್ಳಿ, ಹೆಬ್ಬಸೂರು ಮುಂತಾದ ಸ್ಥಳಗಳಲ್ಲಿ ಕಂಡುಬಂದಿವೆ. ಈ ತಾಲೂಕಿನಲ್ಲಿ ಸೂಕ್ಷ್ಮ ಶಿಲಾಯುಗ ಸಂಸ್ಕೃತಿಯ ಜನರು ಬಿದಿರಿನಿಂದ ದಬ್ಬೆಗಳನ್ನು ಮತ್ತು ಓಟೆಗಳನ್ನು ಹೆಣೆದು ಚಾಪೆಗಳನ್ನು ನೇಯುವುದು ಕೈ ಕಸುಬಾಗಿತ್ತು. ಮರಗನಹಳ್ಳಿ ಗ್ರಾಮದ ನೆಲೆಯಲ್ಲಿ ಸೂಕ್ಷ್ಮ ಶಿಲಾಯುಗದ ಸಂಸ್ಕೃತಿಗೆ ಸೇರಿದ ನೀಳಚಕ್ಕೆ, ಹೆರೆಚಕ್ಕೆ, ಒಂದು ಬಾಣದ ಮೊನೆ ಮತ್ತು ಅರ್ಧ ಚಂದ್ರಾಕತಿ ಉಪಕರಣಗಳು ದೊರಕಿವೆ.

೩. ನವಶಿಲಾಯುಗ ಸಂಸ್ಕೃತಿ

ಕರ್ನಾಟಕದಲ್ಲಿ ಪ್ರಥಮ ಬಾರಿಗೆ ೧೯೭೨ರಲ್ಲಿ ಫ್ರೈಸರ್‌ರವರು ಬಳ್ಳಾರಿ ಜಿಲ್ಲೆಯ ಕುಪ್ಪಗಲು ಎಂಬ ಸ್ಥಳದಲ್ಲಿ ನವಶಿಲಾಯುಗ ಸಂಸ್ಕೃತಿಗೆ ಸಂಬಂಧಿಸಿದ್ದ ನೆಲೆಯನ್ನು ಗುರುತಿಸಿದ್ದಾರೆ. ರಾಬಟ್ ಬ್ರೂಸ್ ಫ್ಯೂಟ್ ೧೯೧೦ರಲ್ಲಿ ಕೋಲಾರ ಜಿಲ್ಲೆ, ಶ್ರೀನಿವಾಸಪಪುರ, ಬೀರಮಂಗಲ, ಟಿ.ನರಸೀಪುರ ಇನ್ನು ಮುಂತಾದ ನೆಲೆಗಳನ್ನು ಬೆಳಕಿಗೆ ತಂದರು. ಇದರಿಂದ ಪುರಾತತ್ವ ಶಾಸ್ತ್ರಜ್ಞರು, ಸಂಶೋಧಕರು, ಚರಿತ್ರೆಕಾರರು ಕರ್ನಾಟಕದ ಹಲವು ಭಾಗಗಳಲ್ಲಿ ಈ ನೂತನ ಶಿಲಾಯುಗ ಸಂಸ್ಕೃತಿಯ ನೆಲೆಗಳನ್ನು ಗುರುತಿಸಿದ್ದಾರೆ.

ಕರ್ನಾಟಕದಲ್ಲಿ ಈ ನವಶಿಲಾಯುಗ ಸಂಸ್ಕೃತಿಗೆ ಸೇರುವ ನೆಲೆಗಳನ್ನು ಉತ್ಖನನ ಮಾಡಿವೆ. ಅಂತಹ ನೆಲೆಗಳೆಂದರೆ ಬೆಳಗಲ್, ಬನದಳ್ಳಿ ಬ್ರಹ್ಮಗಿರಿ, ಬೂದಿತಿಟ್ಟು, ಹೆಮ್ಮಿಗೆ, ಮಸ್ಕಿ ಟಿ.ನರಸೀಪುರ, ಸನ್ನತಿ ಹಾಗೆಯೇ ಚಾಮರಾಜನಗರ ತಾಲೂಕಿನ ಪ್ರದೇಶಗಳಾದ ಬೂದಿತಿಟ್ಟು, ಹೊಸಹಳ್ಳಿ ಮುಂತಾದ ನೆಲೆಗಳಲ್ಲಿ ಕಂಡುಬಂದಿರುವ ಅತ್ಯಂತ ಪ್ರಾಚೀನ ಸಾಂಸ್ಕೃತಿಕ ಘಟ್ಟದ ಅವಶೇಷಗಳಾದ ದಪ್ಪವಾದ ನಸು ಬೂದು

ಹಾಗೂ ಕಂದು ವರ್ಣದ ಮಡಕೆ ಭಾಗಗಳು ಬೂದಿತಿಟ್ಟು ಪ್ರದೇಶದಲ್ಲಿ ದೊರಕಿವೆ. ಈ ಹಂತದ ಸಂಸ್ಕೃತಿಯ ಅಂತಿಮ ಘಟ್ಟದ ಕೆಲವೇ ಕೆಲವು ವರ್ಣರೇಖಾ ಚಿತ್ರವುಳ್ಳ ಮಡಕೆಗಳ ಚೂರುಗಳು ಮಾತ್ರ ಕಂಡುಬಂದಿದೆ.[೧೮]

**ಶಿಲಾತಾಮ್ರಯುಗ ಸಂಸ್ಕೃತಿ**

ಈ ಸಂಸ್ಕೃತಿಯು ಕರ್ನಾಟಕದಲ್ಲಿ ಕೃಷ್ಣ ಮತ್ತು ಭೀಮನಾ ನದಿ ಕಣಿವೆ ಬಯಲು ಪ್ರದೇಶದಲ್ಲಿ ಕಂಡುಬಂದಿದೆ. ನವಶಿಲಾಯುಗ ಸಂಸ್ಕೃತಿಯ ತರುವಾಯ ವಿಕಾಸವಾದ ಸಾಂಸ್ಕೃತಿಕ ಹಂತವೆಂದು ಪುರಾತತ್ವ ಶಾಸ್ತ್ರಜ್ಞರು ಅಭಿಪ್ರಾಯ ಪಟ್ಟಿದ್ದಾರೆ. ಶಿಲಾಯುಧಗಳ ಬದಲಾಗಿ ತಾಮ್ರದ ಅದುರಿನ ತಿಳುವಳಿಕೆ ಮತ್ತು ತಾಮ್ರವನ್ನು ಕರಗಿಸುವ ಕಲೆ, ಲೋಹವಾಗಿ ಪರಿವರ್ತನೆ ಮಾಡಿಕೊಂಡ ಲೋಹದ ಆಯುಧಗಳನ್ನು ಬಳಕೆಗೆ ತರಲಾಯಿತ್ತು. ಚಾಮರಾಜನಗರ ತಾಲೂಕಿನ ಪ್ರದೇಶದಲ್ಲಿ ತಾಮ್ರ ಶಿಲಾಯುಗದ ನೆಲೆಗಳು ಪತ್ತೆಯಾಗಿಲ್ಲ.

**ಬೃಹತ್ ಶಿಲಾಯುಗ ಸಂಸ್ಕೃತಿ**

ಕರ್ನಾಟಕದ ಹೆಚ್ಚಿನ ಎಲ್ಲ ಜಿಲ್ಲೆಗಳಲ್ಲಿ ಬೃಹತ್ ಶಿಲಾ ಸಂಸ್ಕೃತಿಯ ಬಗ್ಗೆ ಮಾಹಿತಿಗಳಿವೆ. ಈ ಸಂಸ್ಕೃತಿಯ ಉಗಮ, ವಿಕಾಸ, ಜನಾಂಗದ ಆರ್ಥಿಕ, ಸಾಂಸ್ಕೃತಿಕ, ಸಾಮಾಜಿಕ ಜೀವನ, ಕಲ್ಪನೆ, ಆಹಾರ ಪದ್ಧತಿ, ಸಾಂಸ್ಕೃತಿಕ ಸಾಮಾಜಿಕ ಜೀವನ ಕಟ್ಟಳೆ, ಆಹಾರ ಪದ್ಧತಿ, ಆಭರಣ, ವಸತಿ ವಿಶಿಷ್ಟವಾದ ಮೃತ್ ಪಾತ್ರೆ, ಲೋಹ ತಂತ್ರಜ್ಞಾನ ಮೊದಲಾದ ಬಗ್ಗೆ ನಡೆಸಲಾಗಿದೆ. ಈ ಸಂಸ್ಕೃತಿ ಶವ ಸಂಸ್ಕಾರದ ವ್ಯಕ್ತಿಯನ್ನು ಕರ್ನಾಟಕದಲ್ಲಿ ಬೃಹತ್ ಶಿಲಾಗೋರಿಗಳನ್ನು ವಿನ್ಯಾಸದ ಆಧಾರ ಮೇಲೆ ೧೦ ವಿಧಗಳಾಗಿ ಕಾಣಬಹುದಾಗಿದೆ.

೧. ಹಾದಿ ಕೋಣೆ ಗೋರಿಗಳು

೨. ಕಂಡಿಕೋಣೆ ಗೋರಿಗಳು

೩. ಆಯತ ಕೋಣೆ ಗೋರಿಗಳು

೪. ಕೊರೆದ ಕೋಣೆ ಗೋರಿಗಳು

೫. ತುಂಡು ಕಲ್ಲು ದಿಣ್ಣೆಗಳು

೬. ಕಲ್ಲು ವೃತ್ತಗಳು

೭. ಕಾಲುಳ್ಳ ಆಯತ ಅಸ್ಥಿ ಮೃತ ಪಾತ್ರೆಯುಳ್ಳ ಕಲ್ಲು ವೃತ್ತಗಳು

೮. ನಿಲಸುಗಲ್ಲುಗಳು

೯. ಗುಡಾಣ ಅಸ್ಥಿಮೃತ್ ಪಾತ್ರೆ ಕುಣಿಗಳು

೧೦. ಶವ ಕುಣಿಗಳು

ಚಾಮರಾಜನಗರ ತಾಲೂಕಿನ ಬೃಹತ್ ಶಿಲಾಯುಗದ ಸಂಸ್ಕೃತಿಯ ನೆಲೆಗಳು ಒಟ್ಟು ೮ ನೆಲೆಗಳನ್ನು ಗುರುತಿಸಲಾಗಿವೆ. ಈ ಸಂಸ್ಕೃತಿಯ ನೆಲೆಗಳೆಂದರೆ ಕಣಿಕರೆ, ಅರಕಲವಾಡಿ, ಕಲ್ಲಿದೊಡ್ಡಿ, ಗುಂಡಿಮಾಲ, ನರಸಮುಂಗಲ, ಬೆಟ್ಟದಪುರ, ಬೂದಿತಿಟ್ಟು, ಹೆಬ್ಬಸೂರು ಮುಂತಾದ ನೆಲೆಗಳನ್ನು ಪತ್ತೆ ಹಚ್ಚಲಾಗಿದೆ.[೧೯] ಬೆಟ್ಟದಪುರ ಗ್ರಾಮದಲ್ಲಿ ಒಂದು ಗೋರಿ ಪತ್ತೆಯಾಗಿದ್ದು, ಇದು ಕಿಂಡಿ ಕೋಣೆ ಗೋರಿಯಾಗಿದೆ. ಈ ಪ್ರದೇಶದಲ್ಲಿ ಜನವಾಸ್ತವ್ಯದ ಅವಶೇಷ ಹಾಗೂ ಬೃಹತ್ ಶಿಲಾ ಸಂಸ್ಕೃತಿಯ ಇತಿಹಾಸ ಕಾಲದ ಅವಶೇಷಗಳು ಕಂಡುಬಂದಿವೆ.[೨೦] ಬೂದಿತಿಟ್ಟು ಗ್ರಾಮದಲ್ಲಿ ಅಲ್ಪ ಪ್ರಮಾಣದಲ್ಲಿ ಕಪ್ಪು-ಕೆಂಪು ವರ್ಣದ ಬೃಹತ್ ಶಿಲಾಯುಗ ಸಂಸ್ಕೃತಿಯ ಮಡಕೆ ಭಾಗಗಳು ದೊರೆತಿವೆ. ಅಲೆಮಾರಿ ಜೀವನದಿಂದ ಮಾನವ ಹೇಗೆ ಒಂದೆಡೆ ನೆಲ ನಿಂತು ಕೃಷಿ ಚಟುವಟಿಕೆಗಳನ್ನು ಕೈಗೊಂಡು ಹೊಸ ಸಂಸ್ಕೃತಿ ಹಾಗೂ ನಾಗರಿಕತೆಯ ಪ್ರಾರಂಭ ಕಾರಣನಾದನೆಂಬುದನ್ನು ಇಲ್ಲಿ ದೊರಕಿರುವ ಆಕರಗಳು ಸ್ಪಷ್ಟಪಡಿಸುತ್ತದೆ.[೨೧]

ಈ ತಾಲೂಕಿನಲ್ಲಿ ಕಾಣಸಿಗುವ ಬೃಹತ್ ಶಿಲಾ ಸಮಾಧಿಯನ್ನು ಸ್ಥಳೀಯರು "ಪಾಂಡವರ ಮನೆ" ಎಂದು ಕರೆಯುತ್ತಾರೆ. ಈ ಬೃಹತ್ ಸಮಾಧಿಗಳನ್ನು ಹೆಚ್ಚಾಗಿ ಹಳ್ಳಕೊಳ್ಳ ಮತ್ತು ಕೆರೆಯ ಬಳಿಯ ಪ್ರದೇಶಗಳಲ್ಲಿ ಕಾಣಬಹುದು.

ಚಾಮರಾಜನಗರ ತಾಲೂಕಿನ ಭೂಪ್ರದೇಶ ಭೌಗೋಳಿಕವಾಗಿ ಮತ್ತು ಸಾಂಸ್ಕೃತಿಕವಾಗಿ ಮಾನವನ ಜೀವನ ನಿರ್ವಹಣೆಗೆ ಉತ್ತಮ ತಾಣವಾಗಿದ್ದು ಶಿಲಾಯುಗ ಮತ್ತು ಲೋಹಯುಗ ಸಂಸ್ಕೃತಿಗಳು ಹುಲುಸಾಗಿ ಬೆಳೆದಿರುವುದು ಉತ್ಖನನಗಳಿಂದ ತಿಳಿದುಬರುತ್ತದೆ. ಇಲ್ಲಿ ನವ ಶಿಲಾಯುಗದಿಂದ ಪೂರ್ವ ತಿಹಾಸ ಕಾಲದ ವರೆಗಿನ ಪ್ರಾಗೈತಿಹಾಸ, ಸಂಸ್ಕೃತಿ ಮತ್ತು ಕಲೆಗಳು ಕುತೂಹಲಕಾರಿಯಾಗಿವೆ. ಚಾಮರಾಜನಗರ ತಾಲ್ಲೂಕಿನ ಬೂದಿತಿಟ್ಟು, ಕಣಿಕೆರೆ, ಅರಕಲವಾಡಿ, ಬೆಟ್ಟದಪುರ, ಯಾನಗಹಳ್ಳಿ, ಹೆಬ್ಬಸೂರು, ಹೊಸಹಳ್ಳೀ ಮೊದಲಾದ ಪ್ರದೇಶಗಳಲ್ಲಿ ನವಶಿಲಾಯುಗದಿಂದ ಇತಿಹಾಸ ಪೂರ್ವಕಾಲದವರೆಗಿನ ಹಲವಾರು ನೆಲೆಗಳನ್ನು ಪತ್ತೆ ಮಾಡಲಾಗಿದೆ. ಹಾಗೆಯೇ ನೆರೆಹೊರೆಯ ಪ್ರದೇಶಗಳಾದ ತಲಕಾಡು, ಹೆಮ್ಮಿಗೆ ಮತ್ತು ಟಿ.ನರಸೀಪುರದಲ್ಲಿನ ಉತ್ಖನನಗಳು ಈ ಪ್ರದೇಶದ ಪ್ರಾಗೈತಿಹಾಸಿಕತೆಯನ್ನು ತಿಳಿಯಲು ಸಹಾಯಕವಾಗಿವೆ.

ಈ ತಾಲೂಕಿನಲ್ಲಿ ಸೂಕ್ಷ್ಮ ಶಿಲಾಯುಗದ ೩, ನೂತನ ಶಿಲಾಯುಗದ ೨, ಬೃಹತ್ ಶಿಲಾಯುಗದ ೮ ಮತ್ತು ಇತಿಹಾಸ ಆರಂಭಕಾಲದ ೨, ಒಟ್ಟು ೧೫ ನೆಲೆಗಳು ಮತ್ತು ಬೃಹತ್ ಶಿಲಾಗೋರಿಗಳು ದೊರಕಿದ್ದು ತಾಲೂಕಿನ ಇನ್ನೂ ಹಲವೆಡೆ ಉತ್ಖನನಗಳು ನಡೆಯಬೇಕಾಗಿವೆ.

ಬೂದಿತಿಟ್ಟು : ಇದು ಚಾಮರಾಜನಗರ ತಾಲೂಕಿನ ಒಂದು ಪುಟ್ಟ ಗ್ರಾಮ, ಈ ಸ್ಥಳವು ಪ್ರಾಚೀನ ಕಾಲದ ಶಿಲಾಯುಗ ಸಂಸ್ಕೃತಿಯ ಮಾನವನ ನೆಲೆಯಾಗಿದೆ. ಇದೇ ತಾಲೂಕಿನಲ್ಲಿ ಹರಿಯುವ ಸ್ವರ್ಣಮುಖಿ ನದಿಯ ದಡದ ದಕ್ಷಿಣಭಾಗದಲ್ಲಿದೆ. ಇದನ್ನು ಭಾರತೀಯ ಪುರಾತತ್ವ ಸರ್ವೇಕ್ಷಣ ಇಲಾಖೆಯ ಕೆ.ವಿ.ಸೌಂದರ್ ರಾಜನ್ ರವರು ಉತ್ಖನನ ಮಾಡಿದ್ದಾರೆ. ಇಲ್ಲಿ ದಪ್ಪವಾದ ಸುಟ್ಟಿರುವ ಬೂದುಬಣ್ಣದ ಮತ್ತು ಕಂದು ಬಣ್ಣದ ಮಡಕೆಗಳು ಜೊತೆಗೆ ಬೃಹತ್ ಶಿಲಾಯುಗದ ಕಪ್ಪು ಮತ್ತು ಕೆಂಪು ಮಡಕೆಗಳೊಂದಿಗೆ ಸ್ಥಳೀಯ ನವಶಿಲಾಯುಗದ ಸಂಸ್ಕೃತಿಯನ್ನು ಮೀರಿ ಮುನ್ನಡೆದಿದೆ. ಈ ರೀತಿಯಾಗಿ ಸುಟ್ಟುಮಾಡಲಾದ ಮಣ್ಣಿನ ಮಡಿಕೆಗಳು ಟಿ.ನರಸೀಪುರದ ನೆಲೆಯಲ್ಲಿಯೂ ಸಹ ಕಂಡುಬಂದಿದ್ದು ಈ ಎರಡು ಸ್ಥಳಗಳಲ್ಲಿ ದೊರೆತಿರುವ ಮಡಕೆಗಳು ಒಂದೇ ರೀತಿಯಾಗಿದ್ದು ಇದನ್ನು ಕೆ.ವಿ.ಸೌಂದರ್ ರಾಜನ್ ರವರು ನವಶಿಲಾಯುಗದ ಉಗಮದ ಹಂತವಾಗಿತ್ತು ಎಂದಿದ್ದಾರೆ.

ಈ ಊರು ಮತ್ತು ನೆರೆಯ ಊರುಗಳಾದ ಟಿ.ನರಸೀಪುರ ಮತ್ತು ತಲಕಾಡುಗಳ ಉತ್ಖನನದಲ್ಲಿ ದೊರೆತಿರುವ ಪ್ರಾಚ್ಯಾವಶೇಷಗಳಲ್ಲಿ ಸಾಮ್ಯತೆ ಇದ್ದು[೨] ಇವುಗಳ ಉತ್ಖನನ ನೆಲೆಯ ನವಶಿಲಾಯುಗ ಸಂಸ್ಕೃತಿಗೆ ಸೇರಿದ್ದರೂ ಕೂಡ ನಾಲ್ಕು ಸಂಸ್ಕೃತಿಯ ಪ್ರಾಚ್ಯಾವಶೇಷಗಳು ಇಲ್ಲಿ ದೊರೆತಿರುವುದು ವಿಶೇಷವಾಗಿದೆ. ನವಶಿಲಾಯುಗ, ತಾಮ್ರಶಿಲಾಯುಗ, ಬೃಹತ್ ಶಿಲಾಯುಗ ಮತ್ತು ಇತಿಹಾಸ ಆರಂಭ ಕಾಲದ ಸಂಸ್ಕೃತಿಗಳಿಗೆ ಸೇರಿದ ಶಿಲಾಯುಧಗಳು ಮಡಕೆಗಳು, ತಲೆ ಊರೆಗಳು, ತಲೆಯಾನಿಕೆ, ಇದ್ದಿಲು, ಕಂಬದ ಕುಣಿಕೆಗಳು, ಮರದ ದಿಮ್ಮಿ, ತಾಮ್ರದ ಮಣಿ, ಸುಟ್ಟ ಮಣ್ಣಿನ ಬೊಂಬೆಗಳು ಅಪರೂಪದ ಚಿನ್ನದ ಮಣಿಗಳು ದೊರೆತಿದ್ದು ಈ ಪ್ರದೇಶದ ಬಹು ಪ್ರಾಚೀನ ಸಂಸ್ಕೃತಿಯನ್ನು ಪರಿಚಯಿಸುತ್ತವೆ ಹಾಗೂ ವೈವಿಧ್ಯತೆಯಲ್ಲಿ ಏಕತೆ ಎಂಬಂತೆ ನವಶಿಲಾಯುಗದ ಸಂಸ್ಕೃತಿಯ ಕಾಲವನ್ನು ನಿರ್ಧರಿಸಲು ಮಹತ್ತರವಾದ ಅವಶೇಷಗಳು ಇಲ್ಲಿ ದೊರೆತಿವೆ.

ಈ ಮೇಲಿನ ಉತ್ಖನನ ಸ್ಥಳಗಳಲ್ಲಿ ದೊರೆತಿರುವ ಶಿಲಾಯುಧಗಳು, ಮಡಿಕೆ-ಕುಡಿಕೆಗಳು, ಕಬ್ಬಿಣದ ಆಯುಧಗಳು, ಸಮಾಧಿಗಳು, ಶವ ಸಂಪುಟಗಳ ಆಧಾರದ ಮೇಲೆ ಚಾಮರಾಜನಗರದ ಪ್ರಾಗೈತಿಹಾಸ ನಡೆದು ಬಂದ ದಾರಿಯನ್ನು ನವಶಿಲಾಯುಗದಿಂದ ಮೊದಲುಗೊಂಡು ಬೃಹತ್ ಶಿಲಾಯುಗದವರೆಗೆ ವಿಸ್ತರಿಸಬಹುದು.

ಈ ಉತ್ಖನನ ಪ್ರದೇಶಗಳಲ್ಲಿನ ಮತ್ತೊಂದ ಪ್ರಾತಿನಿಧಿಕ ಅವಶೇಷ ಮಣ್ಣಿನ ಮಡಕೆಗಳು, ಆರಂಭದ ಹಂತದಲ್ಲಿ ಕೈನಲ್ಲಿ ರೂಪಿಸಲಾಗುತ್ತಿದ್ದು ನಂತರದಲ್ಲಿ ತಿರುಗಿಸಲ್ಪಡುವ ಚಕ್ರಗಳಲ್ಲಿ ತಯಾರಿಸಲಾದ ಹೆಚ್ಚು ತೆಳ್ಳನೆಯ ಮೃತ್ ಪಾತ್ರೆಗಳು ಕಂಡುಬಂದಿವೆ. ಇವುಗಳಲ್ಲಿ ಪ್ರಾದೇಶಿಕ ಭಿನ್ನತೆಯೂ ಇದೆ. ಇಂತಹ ಮಡಿಕೆಗಳು ವಿವಿಧ ಆಕಾರ ಮತ್ತು ಗಾತ್ರದಲ್ಲಿದ್ದ ಬಟ್ಟಲುಗಳು ಒಳಲೆಯಾಕಾರದ ಬೋಗುಣಿಗಳು, ಹಿಡಿಯುಳ್ಳ ಮುಚ್ಚಳ, ಸಣ್ಣ ಹಾಗೂ ಮಧ್ಯಮ ಗಾತ್ರದ ಕೂಡಗಳು, ಕಮಂಡಲಾಕಾರದ ಹೂಜಿಗಳು

ತಳದಲ್ಲಿ ರಂಧ್ರವುಳ್ಳ ಪಾತ್ರೆಗಳು ಮತ್ತು ಭೋಗುಣಿಗಳು ದೊರಕಿವೆ. ಇವುಗಳ ಜೊತೆಗೆ ಅಂದಿನ ಜನರು ವಾಸ್ತವ್ಯದ ನೆಲೆಗಳನ್ನು ನಿರ್ಮಿಸಿಕೊಂಡಿದ್ದ ಪ್ರಾಣಿಸಾಗಾಣಿಕೆ ಅಲಂಕಾರ ಸಾಧನಗಳನ್ನು ಬಳಸಿದ್ದು, ಕಲೆಯ ಪ್ರದರ್ಶನ, ಧಾರ್ಮಿಕ ನಂಬಿಕೆ, ಶವಸಂಸ್ಕಾರ ಪದ್ಧತಿ ಮೊದಲಾದ ವಿವಿಧ ಪದ್ಧತಿಯನ್ನು ರೂಢಿಸಿಕೊಂಡು ಸುಸಂಸ್ಕೃತ ಜೀವನ ನಡೆಸಿದ್ದಾರೆಂಬುದಕ್ಕೆ ನಿದರ್ಶನಗಳಿವೆ.

ಕರ್ನಾಟಕ ಪುರಾತತ್ವ ಇಲಾಖೆ ಮತ್ತು ಬಿಳಿಗಿರಿರಂಗನ ಬೆಟ್ಟದಲ್ಲಿರುವ ವಿವೇಕಾನಂದ ಗಿರಿಜನ ಕಲ್ಯಾಣ ಕೇಂದ್ರದ ಸಂಯುಕ್ತ ಆಶ್ರಯದಲ್ಲಿ ದಿನಾಂಕ ೭-೩-೨೦೦೧ ರಿಂದ ೧೪-೬-೨೦೦೧ರವರೆಗೆ ನಡೆದ ಭೂ ಸಂಶೋಧನೆಯಿಂದಾಗಿ ಬಿಳಿಗಿರಿ ರಂಗನ ಬೆಟ್ಟ ಮತ್ತು ನೆರೆಹೊರೆಯ ಊರುಗಳ ಇತಿಹಾಸ ಪ್ರಾಗೈತಿಹಾಸಿಕ ಕಾಲಕ್ಕೆ ಸೇರಿಕೊಳ್ಳುವಂತಾಗಿದೆ.[೨೩] ಬಿಳಿಗಿರಿ ರಂಗನ ಬೆಟ್ಟ ಶ್ರೇಣಿಯಲ್ಲಿರುವ ಕನ್ನೇರಿ ಕಾಲೋನಿ, ಮುತ್ತುಗದ ಗದ್ದೆ, ಪುರಾಣಿ ಪೋಡು ಮತ್ತು ಅರೆ ಕೆಳಗಿರುವ ಸ್ಥಳಗಳಲ್ಲಿ ನಡೆಸಲಾದ ಭೂ ಸಂಶೋಧನೆಯಿಂದಾಗಿ ಈ ಬೆಟ್ಟಶ್ರೇಣಿಯೂ ಬೃಹತ್ ಶಿಲಾಯುಗದ ಪರಂಪರೆಯನ್ನು ಹೊಂದಿರುವ ಸಂಗತಿ ಬೆಳಕಿಗೆ ಬಂದಿದೆ.ಸಾಮಾನ್ಯವಾಗಿ ಬೃಹತ್ ಶಿಲಾಯುಗಕ್ಕೆ ಸೇರಿದ ಸಮಾಧಿಗಳನ್ನು ನಾವು ಹೆಚ್ಚಾಗಿ ಕಾಣುವುದು ಹಳ್ಳ. ಕೊಳ್ಳ ಮತ್ತ ಕೆರೆಯಿಂದ ಆವೃತ್ತವಾಗಿರುವ ಸ್ಥಳಗಳಲ್ಲಿ ಕಾಣುತ್ತೇವೆ. ಇದರಿಂದಾಗಿ ತಿಳಿದುಬರುವ ಸಂಗತಿಯೆಂದರೆ ಈ ಯುಗದ ಜನರು ಕೃಷಿ ಅರ್ಥವ್ಯವಸ್ಥೆಯನ್ನು ಬಲ್ಲವರಾಗಿದ್ದರು. ಜೊತೆಗೆ ಬೇಟೆ ಮತ್ತು ಮಿನುಗಾರಿಕೆಯನ್ನು ಉಪವೃತ್ತಿಯಾಗಿ ನಡೆಸುತ್ತಿದ್ದರು. ಬಿಳಿಗಿರಿರಂಗನ ಬೆಟ್ಟದಲ್ಲಿರುವ ಎಲ್ಲಾ ಬೃಹತ್ ಶಿಲಾ ಸಮಾಧಿ ಸ್ಥಳಗಳು ಹಳ್ಳ, ಕೆರೆ, ಭೂಪ್ರದೇಶಗಳಿಂದ ಆವೃತ್ತವಾಗಿವೆ. ಇಲ್ಲಿ ಸಂಶೋಧಿಸ ಲಾಗಿರುವ ಬೃಹತ್ ಶಿಲಾ ಸಮಾಧಿಯಲ್ಲಿ ಕೆಂಪು ಮತ್ತು ಕಪ್ಪು ಮಿಶ್ರಿತ ಮಣ್ಣಿನ ಮಡಿಕೆಗಳು ಕಂಡುಬಂದಿವೆ. ಜೊತೆಗೆ ಕಬ್ಬಿಣದ ಕತ್ತಿಯಾಕಾರದ ಒಂದು ಕಬ್ಬಿಣದ ಆಯುಧವನ್ನು ಶೋಧಿಸಲಾಗಿದೆ. ಕೆಲವು ಶವಕುಳಿಯಲ್ಲಿ ದಪ್ಪಗಿರುವ ಮಣ್ಣಿನ ಪಾತ್ರೆಗಳನ್ನು ಮತ್ತು ಕೆಲವು ಶವಕುಳಿಯಲ್ಲಿ ಅತ್ಯಂತ ತೆಳುವಾದ ನುಣುಪಾದ ಮಣ್ಣಿನ ಪಾತ್ರೆಗಳನ್ನು ಇರಿಸಲಾಗಿದೆ.

ಈ ಯುಗದ ಜನ ಸಮುದಾಯವು ''ಮರಣಕ್ಕೆ ಸಂಬಂಧಿಸಿದಂತೆ ಒಂದು ರೀತಿಯ ಮೂಢನಂಬಿಕೆ ಯನ್ನು ಹೊಂದಿದ್ದರು. ಇಲ್ಲಿ ಸಂಶೋಧಿಸಲಾಗಿರುವ ಎಲ್ಲಾ ಬೃಹತ್ ಶಿಲಾ ಸಮಾಧಿಗಳು 'ಸೆಕಂಡರಿ ಬರಿಯಲ್ಸ್' ಅಂದರೆ ಮರಣ ಹೊಂದಿದ ವ್ಯಕ್ತಿಯ ಶವವನ್ನು ನಿಸರ್ಗದಲ್ಲಿ ಬಿಟ್ಟು ಕೆಲದಿನಗಳ ನಂತರ ಅಸ್ಥಿಯನ್ನು ಮಡಿಕೆಯಲ್ಲಿ ಸಂಗ್ರಹಿಸಿ ಅದನ್ನು ನಿರ್ಮಿಸಲಾದ ಶಿಲಾ ಸಮಾಧಿ ಒಳಗಿಟ್ಟು ಅದನ್ನು ಮೇಲಿನಿಂದ ಮುಚ್ಚುವ ಕ್ರಮ. ಈ ಜನರು ಮರಣಾನಂತರ ಜೀವನದಲ್ಲಿ ನಂಬಿಕೆಯುಳ್ಳವರಾಗಿದ್ದರು ಎಂಬುದು ಇವುಗಳಿಂದ ವ್ಯಕ್ತವಾಗುತ್ತದೆ.

ಈ ಮೇಲಿನ ಪ್ರದೇಶಗಳ ಉತ್ಖನನದ ಹಿನ್ನೆಲೆಯಲ್ಲಿ ಚಾಮರಾಜನಗರಕ್ಕೊಂದು ಪ್ರಾಗೈತಿಹಾಸಿಕ ಪ್ರತಿಷ್ಠಾನವಿದೆ ಎಂಬುದು ಒಪ್ಪಬೇಕಾಗುತ್ತದೆ. ಆ ಪ್ರತಿಷ್ಠಾನದ ಮೇಲೆ ಅನಂತರದ ಸಂಸ್ಕೃತಿ ಬೆಳೆದು

ಬಂದಿತ್ತೆಂಬುದು ವಾಸ್ತವ. ಪ್ರಾಚೀನ ಕಾಲದಲ್ಲೇ ಬೃಹತ್ ನಗರೀಕರಣ ಪ್ರಕ್ರಿಯೆಗೆ ಚಾಮರಾಜನಗರ ಒಳಗಾಗಿತ್ತು ಎಂಬುದಕ್ಕೆ ಪ್ರಾಚೀನ ಸ್ಥಳ ನಾಮಗಳಾದ ಹರಳುಕೋಟೆ ಅಥವಾ ಮಣಿಪುರ ಮತ್ತು ಹರದನಹಳ್ಳಿ ಅಥವಾ ವಾಣಿಜ್ಯಪುರ ಸ್ಥಳ ಐತಿಹ್ಯಗಳು ಆಧಾರವಾಗುತ್ತವೆ.[೨೪]

ಒಟ್ಟಿನಲ್ಲಿ ಚಾಮರಾಜನಗರಕ್ಕೆ ಸ್ವಾರಸ್ಯಕರವೂ, ವೈವಿಧ್ಯಮಯವೂ ಆದ ಏರಿಳಿತಗಳಿಂದ ಕೂಡಿದ ಪ್ರಾಗೈತಿಹಾಸವಿದೆ. ಇದನ್ನು ತಿಳಿಯಲು ಪ್ರಮುಖ ಆಧಾರ ಸಾಮಾಗ್ರಿಗಳೆಂದರೆ ಶಿಲಾಯುಗದ ಜನವಸತಿಯ ಅವಶೇಷಗಳು ಮತ್ತು ಇತಿಹಾಸಕಾಲದ ಅಪಾರ ಸಂಖ್ಯೆಯ ಶಾಸನಗಳು ಹಾಗೂ ಪ್ರಾಚೀನ ದೇವಾಲಯಗಳೂ ಇವೆಲ್ಲ ಈ ತಾಲೂಕಿನಲ್ಲಿ ಸೂಕ್ಷ್ಮ ಶಿಲಾಯುಗ ಕಾಲದಿಂದಲೂ ಜನವಸತಿ ಇದ್ದುದನ್ನು ದೃಢಪಡಿಸುತ್ತವೆ.[೨೫] ಈ ಆಕರಗಳ ಹಿನ್ನೆಲೆಯಲ್ಲಿ ಈ ತಾಲೂಕಿನ ಜನಪದ ಸಂಸ್ಕೃತಿಗೆ ಸಾವಿರಾರು ವರ್ಷಗಳ ಇತಿಹಾಸವಿರುವುದನ್ನು ಮನಗಾಣಬಹುದು.

**ಇತಿಹಾಸ ಕಾಲ**

ಚಾರಿತ್ರಿಕ ಅಧ್ಯಯನವೆಂದರೆ ಕೇವಲ ದೊಡ್ಡ ದೊಡ್ಡ ರಾಜಮನೆತನಗಳ ಸಾಧನೆಯ ದಾಖಲೆಯಲ್ಲ. ಅಂತಹ ರಾಜವಂಶಗಳು ಮೇಲಿನ ಹಂತದಲ್ಲಿ ಸಮಗ್ರ ನೀತಿಯನ್ನು ನಿರೂಪಿಸುತ್ತಿದ್ದವು ಎಂಬುದರಲ್ಲಿ ಸಂಶಯವಿಲ್ಲ. ಆದರೆ ಸಾಮ್ರಾಜ್ಯಗಳ ಇತಿಹಾಸವನ್ನು ಅಭ್ಯಾಸ ಮಾಡುವಾಗ ಸ್ಥಳೀಯ ಜನರ ಪಾತ್ರವನ್ನು ಇತಿಹಾಸ ಪುಟಗಳಲ್ಲಿ ಚಿತ್ರಿಸಬೇಕಾದದ್ದು ಅನಿವಾರ್ಯವೂ, ಅವಶ್ಯಕತೆಯೂ ಹೌದು. ಉದಾಹರಣೆಗೆ ತಲಕಾಡು, ಟಿ.ನರಸೀಪುರ, ಶ್ರೀರಂಗಪಟ್ಟಣ, ಬೇಲೂರು, ಮೇಲುಕೋಟೆಗಳಂತಹ ಸ್ಥಳಗಳು ತಮ್ಮದೇ ಆದ ಕಾಣಿಕೆಗಳನ್ನು ನೀಡಿವೆ. ಇದಲ್ಲದೆ ಒಂದು ಸಾಮ್ರಾಜ್ಯದ ಭಾಗವಾಗಿ ತನ್ನದೇ ಆದ ರೀತಿಯಲ್ಲಿ ಐತಿಹಾಸಿಕ ಪ್ರಕ್ರಿಯಲ್ಲಿ ತೊಡಗಿಸಿಕೊಂಡಿರುತ್ತವೆ.

ಕರ್ನಾಟಕದ ಐತಿಹಾಸಿಕ ದೃಷ್ಟಿಯಿಂದ ಚಾಮರಾಜನಗರ ತಾಲೂಕು ಮಹತ್ವಪೂರ್ಣವಾದುದಾಗಿದೆ. ತಮಿಳುನಾಡಿನ ಗಡಿಗಳಿಗೆ ಅಂಟಿಕೊಂಡಿರುವ ಈ ತಾಲೂಕು ತಮಿಳುನಾಡಿನ ಹೆದ್ದಾರಿಯೂ ಹೌದು, ಹಾಗಾಗಿ ಈ ಪ್ರದೇಶ ಐತಿಹಾಸಿಕವಾಗಿ ಮತ್ತು ಸಾಂಸ್ಕೃತಿಕವಾಗಿಯೂ ವಿವಿಧ ಭಾಷೆ ಮತ್ತು ಸಂಸ್ಕೃತಿಗಳ ಸಂಗಮವಾಗಿದೆ. ಇಲ್ಲಿ ಅಪಾರವಾಗಿ ದೊರೆಯುವ ಶಾಸನಗಳು, ಸಾಹಿತ್ಯ ಕೃತಿಗಳು ಮತ್ತು ಇತರೆ ಆಕರಗಳಿಂದ ಈ ಪ್ರದೇಶವನ್ನಾಳಿದ ಸಾಮ್ರಾಜ್ಯಶಾಹಿಗಳು ಇಲ್ಲಿನ ರಾಜಕೀಯ ಮತ್ತು ಸಂಸ್ಕೃತಿಯನ್ನು ಹೇಗೆ ಅಭಿವೃದ್ಧಿಪಡಿಸಿದರು ಎಂಬುದನ್ನು ಇಲ್ಲಿ ಅಧ್ಯಯನ ಮಾಡಲಾಗುವುದು.

ರಾಜರ ಇತಿಹಾಸ ಅವರು ನಡೆಸಿದ ಘೋರವಾದ ಯುದ್ಧಗಳನ್ನು, ಆ ಕಾಲದ ಒಳಾಡಳಿತ, ವ್ಯಾಪಾರ, ಸಾಮಾಜಿಕ ವ್ಯವಸ್ಥೆ, ಧಾರ್ಮಿಕ ನೀತಿ, ಸಾಂಸ್ಕೃತಿಕ ಸ್ಥಿತಿಗತಿ, ಸ್ಥಳನಾಮ ಇನ್ನು ಮುಂತಾದ ವಿಷಯಗಳ ಬಗ್ಗೆ ಶಾಸನಗಳು ಅಪಾರವಾದ ಮಾಹಿತಿಯನ್ನು ಒದಗಿಸುತ್ತವೆ. ಅಲ್ಲದೆ ರಾಜರ ರಾಜಾಜ್ಞೆಗಳು,

ದಾನ-ದತ್ತಿ, ಕಾನೂನು, ಬಿರುದು ಹಾಗೂ ವೀರ ಮರಣಗಳನ್ನು ತಿಳಿಸುತ್ತವೆ. ಇವುಗಳನ್ನು ಕಲ್ಲಿನ ಮೇಲೆ, ಲೋಹಗಳ ಮೇಲೆ, ದೇವಾಲಯದ ಗೋಡೆಗಳ ಮೇಲೆ, ವಿಗ್ರಹಗಳ ಪೀಠದ ಮೇಲೆ, ಪಾತ್ರೆಗಳ ಮೇಲೆ ಬರೆಸುತ್ತಿದ್ದರು. ಒಟ್ಟಿನಲ್ಲಿ ಇವು ದೇಶವಾಸಿಗಳ ಜೀವನ ಮತ್ತು ಆಲೋಚನೆಗಳ ಬೇರೆ ಬೇರೆ ಕೋನಗಳ ಮೇಲೆ ಸಾಕಷ್ಟು ಬೆಳಕನ್ನು ಬೀರುತ್ತವೆ ಹಾಗೂ ಶಾಸನಗಳು ನಮ್ಮ ಸಂಸ್ಕೃತಿಯ ಐಕ್ಯತೆಯನ್ನು ಕಾಪಾಡುವಲ್ಲಿ ಪ್ರಧಾನ ಪಾತ್ರವನ್ನು ವಹಿಸುತ್ತವೆ. ಈ ಹಿನ್ನೆಲೆಯಲ್ಲಿ ಚಾಮರಾಜನಗರ ತಾಲೂಕಿನ ಪ್ರಾಚೀನತೆಯನ್ನು ಮತ್ತು ಐತಿಹಾಸಿಕ ಮಹತ್ವವನ್ನು ತಿಳಿಯಲು ಈ ತಾಲೂಕನ್ನು ಹಂತ ಹಂತವಾಗಿ ಆಳ್ವಿಕೆ ಮಾಡಿದವರಲ್ಲಿ ಸುಪ್ರಸಿದ್ಧ ರಾಜಮನೆತನಗಳಾದ ಕದಂಬರು, ಗಂಗರು, ರಾಷ್ಟ್ರಕೂಟರು, ಹೊಯ್ಸಳ, ವಿಜಯನಗರ, ವಿಜಯನಗರ ಪಾಳೇಗಾರ, ಪುನ್ನಾಟ, ಪದಿನಾಲ್ಕುನಾಡರಸರು ಸೇರಿದ್ದಾರೆ. ಈ ಎಲ್ಲ ರಾಜಮನೆತನಗಳು ಚಾಮರಾಜನಗರ ತಾಲೂಕನ್ನು ಪ್ರತ್ಯಕ್ಷವಾಗಿ ಅಥವಾ ಪರೋಕ್ಷವಾಗಿ ಆಳಿದ್ದಾರೆ. ಪ್ರಖ್ಯಾತ ರಾಜವಂಶಗಳು ಆಳ್ವಿಕೆ ನಡೆಸುವಾಗ ಅವರ ಸಾಮಂತರು ಅಥವಾ ಪಾಳೇಗಾರರು ಈ ಪ್ರದೇಶವನ್ನು ನೋಡಿಕೊಳ್ಳುತ್ತಿದ್ದರು.

ಕದಂಬರು

ಪಿರಿಯಾಪಟ್ಟಣ ತಾಲೂಕಿನ ಹಿಟ್ಟ ಹೆಬ್ಬಾಗಿಲಿನಲ್ಲಿ ಸಿಕ್ಕಿರುವ ಏಕೈಕ ಶಾಸನವೊಂದನ್ನು ಬಿಟ್ಟರೆ ಮೈಸೂರು ಮತ್ತು ಚಾಮರಾಜನಗರ ಪ್ರಾಂತ್ಯಗಳು ಕದಂಬರ ಆಳ್ವಿಕೆಗೆ ಒಳಪಟ್ಟ ಯಾವ ಕುರುಹುಗಳು ಲಭ್ಯವಿಲ್ಲ.[೨೧] ಲಭ್ಯವಾಗಿರುವ ಶಾಸನದಲ್ಲೂ ಸಹ ಸಮರ್ಪಕವಾದ ಆಧಾರಗಳಿಲ್ಲ, ಅದು ಊಹೆಯಾಗಿಯೇ ಇದೆ.

ಪುನ್ನಾಟ

ಕ್ರಿ.ಶ.೪ ಅಥವಾ ೫ನೆಯ ಶತಮಾನದಲ್ಲಿ ಮೈಸೂರು ಜಿಲ್ಲೆಯ ಹೆಗ್ಗಡದೇವನಕೋಟೆ ತಾಲೂಕಿನ ಕಿತ್ತೂರು ಹಿಂದೆ ಕೀರ್ತಿಪುರವಾಗಿತ್ತು. ಅದನ್ನು ರಾಜಧಾನಿಯನ್ನಾಗಿಸಿಕೊಂಡು ರಾಜವಂಶವೊಂದು ಆಳುತಿತ್ತು. ಈ ಸಣ್ಣ ರಾಜ್ಯವೇ ಪುನ್ನಾಟ ರಾಜ್ಯ. ಮೊದಲು ಸ್ವತಂತ್ರರಾಗಿದ್ದ ಇವರು ಕ್ರಮೇಣ ಗಂಗರು ಬಲಿಷ್ಠರಾದಂತೆ ಅವರ ಸಾಮ್ರಾಜ್ಯದಲ್ಲಿ ಸಮಾವೇಶಗೊಂಡು ಗಂಗರ ಅಧೀನರಾದರು.

ಪುನ್ನಾಟದ ಅರಸರ ಕಾಲದ ಒಂದು ಶಾಸನ ಯಳಂದೂರು ತಾಲೂಕಿನ ಮಾಂಬಳ್ಳಿಯಲ್ಲಿ ದೊರೆತಿದೆ.[೨೨] ಅದರಲ್ಲಿ ಪುನ್ನಾಟ ವಂಶಾವಳಿಯನ್ನು ಚಿತ್ರಿಸಿದೆ. ತಾಮ್ರಕಶ್ಯಪ ಈ ವಂಶದ ಮೊದಲ ದೊರೆ. ಇವನ ನಂತರ ಮಗ ರಾಜಾದಿತ್ಯ ಆಳಿದ. ಅನಂತರ ವಿಷ್ಣುರಾಸನೆಂಬ ದೊರೆಯ ಹೆಸರು ಸಿಗುತ್ತದೆ. ಇವನ ಮಗ ರಾಷ್ಟ್ರವರ್ಮ ಬನವಾಸಿಯ ಕದಂಬ ರಾಜಪುತ್ರಿ ಪ್ರಭಾವತಿಯನ್ನು ಮದುವೆಯಾಗಿದ್ದ. ಇವನ ಮೂವರು ಮಕ್ಕಳು ಕ್ರಮವಾಗಿ ರಾಜ್ಯವಾಳಿದರು. ರವಿದತ್ತ ಈ ವಂಶದ ದೊರೆಗಳಲ್ಲಿ ಕೊನೆಯವನು. ಗಂಗರಸರ ದುರ್ವಿನೀತನು ಈ ರಾಜ್ಯವನ್ನು ತನ್ನ ಸಾಮಂತ ರಾಜ್ಯವನ್ನಾಗಿಸಿಕೊಂಡನು. ಅಲ್ಲದೆ ಈ ಶಾಸನವು ಪುನ್ನಾಟ

ರಾಷ್ಟ್ರವು ಕುದುರೆಗಳು, ಬಂಗಾರ, ಸಮೃದ್ಧ ಹೊಲಗಳಿಂದಲೂ ಮುತ್ತು ರತ್ನಗಳಿಂದಲೂ ಶೋಭಿಸುತ್ತಿತ್ತೆಂದು, ವಿದ್ವಾಂಸರು ಇಲ್ಲಿ ವಾಸಿಸುತ್ತಿದ್ದರೆಂದು ಬಣ್ಣಿಸುತ್ತದೆ. ಇದರಿಂದ ಇದೊಂದು ಸಮೃದ್ಧವಾದ ರಾಜ್ಯವಾಗಿತ್ತೆಂದು ಭಾವಿಸಬಹುದು. ಆದರೆ ಈ ಶಾಸನದ ದಾನಿಯ ಬಗೆಯಾಗಲೀ, ದಾನದ ವಿವರಗಳ ಬಗೆಯಾಗಲೀ ಯಾವುದೇ ಮಾಹಿತಿಯಿಲ್ಲ. ಆದರೆ ಕಾವೇರಿ ಮತ್ತು ಕಪಿನೀ ನದಿಗಳಿಂದ ಶೋಭಿಸಿದ ಪುನ್ನಾಟ ರಾಷ್ಟ್ರದ ವರ್ಣನೆಯೂ ವಿಶೇಷ ಕುತೂಹಲವಾದುದಾಗಿದೆ. ಆದರೆ ಧಾರ್ಮಿಕ, ಸಾಮಾಜಿಕವಾದ ಯಾವುದೇ ಸುಳಿವುಗಳಿಲ್ಲದೆ ಕೇವಲ ರಾಜವಂಶಾವಳಿ ಮತ್ತು ಭೂ ವಿವರಗಳಿರುವ ಈ ಶಾಸನದಿಂದ ಚಾಮರಾಜನಗರ ತಾಲೂಕು ಪುನ್ನಾಟ ಆಳ್ವಿಕೆಗೆ ಒಳಪಟ್ಟಿತು ಎಂದು ನಿರ್ಧರಿಸಲು ಸಾಧ್ಯವಿಲ್ಲ. ಈ ಬಗ್ಗೆ ನಂಬಲರ್ಹ ಆಧಾರಗಳು ದೊರೆತಾಗ ಮಾತ್ರ ಖಚಿತವಾಗಿ ಹೇಳಬಹುದು.

ಗಂಗರು

ಪ್ರಾಚೀನ ಕರ್ನಾಟಕದಲ್ಲಿ ಆಡಳಿತ ನಡೆಸಿದ ರಾಜಮನೆತನಗಳಲ್ಲಿ 'ಗಂಗವಂಶ'ದವರು ಪ್ರಮುಖರು. ಕ್ರಿ.ಶ.೪ನೇ ಶತಮಾನದ ಆದಿಯಿಂದ ೧೧ನೇ ಶತಮಾನದ ಪ್ರಾರಂಭದವರೆಗೆ ಅವರು ರಾಜಕೀಯವಾಗಿ ಅಸ್ತಿತ್ವದಲ್ಲಿದ್ದರು. ಈ ವಂಶದವರಲ್ಲಿ ಹಲವು ಶಾಖೆಗಳಿದ್ದು, 'ತಲಕಾಡಿನ ಗಂಗ' ಶಾಖೆ ಅತ್ಯಂತ ಪ್ರಮುಖವಾದದ್ದು. ಇವರು ಕನ್ನಡ ನಾಡಿನ ಇತಿಹಾಸದಲ್ಲೇ ಅತೀ ದೀರ್ಘಕಾಲ ಆಡಳಿತ ನಡೆಸಿದ ಮನೆತನದವರು. ಇವರ ರಾಜ್ಯವನ್ನು ಗಂಗವಾಡಿ ೯೬,೦೦೦ ಎಂದು ಕರೆಯಲಾಗಿದೆ.

ಗಂಗರು ಅಧಿಕಾರಕ್ಕೆ ಬರುವ ವೇಳೆಗೆ ದಕ್ಷಿಣ ಕರ್ನಾಟಕದಲ್ಲಿ ವೈದಿಕ, ಶೈವ ಮತ್ತು ಜೈನ ಸಂಸ್ಕೃತಿಗಳು ಬೇರೂರಿದ್ದವು. ಅಲ್ಲದೆ, ಇವುಗಳೆರಡಕ್ಕೂ ಭಿನ್ನವಾದ ಜಾನಪದ ಸಂಪ್ರದಾಯಗಳು ಆಚರಣೆಯಲ್ಲಿದ್ದವು. ಅಂದರೆ ಗಂಗರು ಇತಿಹಾಸ ರಂಗಕ್ಕೆ ಬರುವ ವೇಳೆಗೆ ದಕ್ಷಿಣ ಕರ್ನಾಟಕದ ಕಾವೇರಿ ಜಲಾನಯನ ಪ್ರದೇಶದಲ್ಲಿ ಸಂಕೀರ್ಣವಾದ ಜೀವನ ದೃಷ್ಟಿ ಮೌಲ್ಯಗಳು, ಸಂಪ್ರದಾಯಗಳು, ನಿಯಮಗಳು, ಕಟ್ಟಳೆಗಳು ರೂಪುಗೊಂಡು ಸಮಾಜವನ್ನು ನಿಯಂತ್ರಿಸುವ ಶಕ್ತಿಗಳಾಗಿದ್ದವು. ಗಂಗರಸರು ಇಂತಹ ಪರಿಸರದಲ್ಲಿ ಸಂಕೀರ್ಣ ಪರಂಪರೆಯೊಡನೆ ಹೊಂದಾಣಿಕೆ ಮಾಡಿಕೊಂಡು ಅಂದು ಅಸ್ತಿತ್ವದಲ್ಲಿದ್ದ ಹಾಗೂ ಒಪ್ಪಿಕೊಂಡಿದ್ದ ಸಾಂಸ್ಕೃತಿಕ ಪರಂಪರೆಯನ್ನು ಹೇಗೆ ಬೆಳೆಸಿ ಪೋಷಿಸಿದರು, ಆ ಮೂಲಕ ತಮ್ಮ ರಾಜಕೀಯ ಹಿತಾಸಕ್ತಿಯನ್ನು, ಸಾಮಾಜಿಕ ಸುಭದ್ರತೆಯನ್ನು ಹೇಗೆ ಕಾಪಾಡಿಕೊಂಡಿದ್ದರೆಂಬುದು ಕುತೂಹಲಕಾರಿಯಾದ ಸಂಗತಿ.

ಮಹಾವೀರ ಬುದ್ಧರ ವ್ಯಕ್ತಿತ್ವದ ಪ್ರಭಾವ ಅಂದಿನ ಸಮಾಜದ ಮೇಲೆ ಗಾಢವಾಗಿ ಪರಿಣಮಿಸಿ ಕ್ರಾಂತಿಕಾರವಾದ ಬದಲಾವಣೆಗೆ ಕಾರಣವಾಯಿತು. ಜೈನಧರ್ಮವಂತೂ ಕರ್ನಾಟಕದ ಸಾಂಸ್ಕೃತಿಕ ಜೀವನವನ್ನು ರೂಪಿಸುವ ಬಹುದೊಡ್ಡ ಶಕ್ತಿಯಾಗಿ ಪರಿಣಮಿಸಿತು. ಅಂತೆಯೇ ಅಶೋಕ ಚಕ್ರವರ್ತಿಯ ಮೂಲಕ ಬೌದ್ಧಧರ್ಮವೂ ಕರ್ನಾಟಕಕ್ಕೆ ಕಾಲಿಟ್ಟಿತು. ಹೀಗೆ ಗಂಗರ ಪೂರ್ವ ಸಾಂಸ್ಕೃತಿಕ ಪರಂಪರೆಯ ಸಮೀಕ್ಷೆಯಿಂದ

ನಾವು ಗಮನಿಸಬೇಕಾದ ಮುಖ್ಯವಾದ ಅಂಶವೆಂದರೆ ಗಂಗರು ರಾಜಕೀಯವಾಗಿ ದಕ್ಷಿಣ ಕರ್ನಾಟಕದಲ್ಲಿ ಪ್ರಬಲರಾಗುವ ಹೊತ್ತಿಗೆ ಅವರಿಗೆ ಒಂದು ವಿಶಿಷ್ಟವಾದ, ಸಂಕೀರ್ಣವಾದ ಸಾಂಸ್ಕೃತಿಕ ಪರಂಪರೆ ಸಿದ್ಧವಾಗಿತ್ತು ಎಂಬುದು. ಅಂತಹ ಪರಂಪರೆಗೆ ಉತ್ತರಾಧಿಕಾರಿಗಳಾಗಿ ಬಂದ ಗಂಗರು ಕರ್ನಾಟಕದ ಸಂಸ್ಕೃತಿಯನ್ನು ಪೋಷಿಸಿ, ಬೆಳೆಸಿ ತಮ್ಮ ಅಧಿಕಾರ ಸುಭದ್ರತೆಗೆ ಬಳಸಿಕೊಂಡರು.

'ದಕ್ಷಿಣ ರಾಜ್ಯ ಸಂರಕ್ಷಣಾ ಸಮರ್ಥ', 'ಕೊಂಗುಣಿ ವರ್ಮ', 'ಧರ್ಮ ಮಹಾರಾಜಾಧಿರಾಜ', 'ಶ್ರೀ ವಲಭ ಪೆರ್ಮಾನಡಿ' ಎಂಬ ಬಿರುದುಗಳನ್ನು ಗಂಗರು ಹೊಂದಿದ್ದರು. ತಲಕಾಡು ಇವರ ರಾಜಧಾನಿಯಾಗಿತ್ತು. ತಲಕಾಡಿಗೆ ಪೂರ್ವದಲ್ಲಿ 'ತಲವನಪುರ' ಎಂಬ ಹೆಸರು ಸಹ ಇದ್ದಿತು. ಕುವಳಾಲ(ಕೋಲಾರ), ನಂದಗಿರಿ(ನಂದಿಬೆಟ್ಟ) ಸಹ ಇವರ ಮೊದಲ ರಾಜಧಾನಿಗಳಾಗಿದ್ದವು. ಗಂಗ ವಂಶಸ್ಥರ ರಾಜಲಾಂಛನ ಆನೆಯಾಗಿದ್ದಿತು. ಇವರು ಉತ್ತರ ಭಾರತದ ಇಕ್ಷ್ವಾಕು ಸಂತತಿಗೆ ಸೇರಿದವರೆಂದು, ಅಯೋಧ್ಯೆಯಿಂದ ಬಂದು ಇಲ್ಲಿ ರಾಜ್ಯ ಸ್ಥಾಪಿಸಿದರೆಂದೂ ಗಂಗ ಮನೆತನದ ರಾಜರ ಹಲವು ಶಾಸನಗಳಲ್ಲಿ ವರ್ಣಿತವಾಗಿದೆ. ಈ ಮನೆತನದ ೨೫ ಮಂದಿ ರಾಜರು ಆಳ್ವಿಕೆ ನಡೆಸಿದ್ದಾರೆ. ಅವರಲ್ಲಿ ಕೊಂಗುಣಿವರ್ಮ (ಸು.೩.೨೫-೫೦) ಈ ಸಂತತಿಯ ಆಳ್ವಿಕೆಯ ಸ್ಥಾಪಕ.

ಸುಮಾರು ಏಳುನುರು ವರ್ಷಗಳಷ್ಟು ಕಾಲ ಆಳಿದ ಗಂಗವಂಶದ ರಾಜ ಶಾಸನಗಳ ಸಂಖ್ಯೆ ಈ ತಾಲೂಕಿನಲ್ಲಿ ಕಡಿಮೆಯೆಂದೆ ಹೇಳಬೇಕು. ಚಾಮರಾಜನಗರ ತಾಲೂಕಿನಲ್ಲಿ ಗಂಗ ಕಾಲದ ೧೩ ಶಾಸನಗಳು ಲಭ್ಯವಾಗಿದೆ. ಅವುಗಳಲ್ಲಿ ಕುಲಗಾಣದ ೩೪೭ನೇ ತಾಮ್ರಶಾಸನವೇ ಪ್ರಾಚೀನವಾದುದು.[೨೮] ಇದರಲ್ಲಿ ಗಂಗರಾಜರ ವಂಶಾವಳಿಗೆ ಸಂಬಂಧಪಟ್ಟಂತೆ ಒಂದನೇ ಮಾಧವನಿಂದ ಶಿವಮಾರನವರೆಗಿನ ವಿವರಗಳಿವೆ. ತಾಲೂಕಿನ ಬಸವಟ್ಟಿಯ ಶಾಸನ, ಹೊಮ್ಮದ ಶಾಸನ, ಹೊಂಗನೂರಿನ ಶಾಸನ, ಇಮ್ಮಡಿ ರಾಚಮಲ್ಲನ ಗಟ್ಟವಾಡಿ ಶಾಸನ, ಮಂಗಲದ ಶಾಸನ, ಕೆರಹಳ್ಳಿಯ ತಾಮ್ರ ಶಾಸನ ಮುಂತಾದವು ಚಾಮರಾಜನಗರ ತಾಲೂಕು ನಗರ ಆಳ್ವಿಕೆಗೆ ಒಳಪಟ್ಟಿತ್ತು ಎಂಬುದಕ್ಕೆ ಪ್ರಬಲವಾದ ಆಧಾರಗಳು.[೨೯]

ಗಂಗರಾಜ ಮನೆತನದ ಈ ಮೇಲಿನ ಸಾಮಾನ್ಯ ಸಂಗತಿಗಳ ನಂತರ, ಚಾಮರಾಜನಗರ ತಾಲೂಕಿನಲ್ಲಿ ಇವರ ಕಾಲದಲ್ಲಿ ಹಾಕಿಸಿದ ಶಾಸನಗಳಲ್ಲಿಯ ರಾಜಕೀಯ ಸಂಗತಿಗಳನ್ನು ಹಾಗೂ ದಾನದತ್ತಿ ವಿಚಾರಗಳನ್ನು ಈ ಮುಂದಿನಂತೆ ಪ್ರಸ್ತಾಪಿಸಬಹುದಾಗಿದೆ.

ಈ ತಾಲೂಕಿನಲ್ಲಿ ಗಂಗರ ಪ್ರಮುಖ ದೊರೆ ಶ್ರೀಪುರುಷನ ಕಾಲದ ಮೂರು ಶಾಸನಗಳಿದ್ದು ಅವುಗಳಲ್ಲಿ ಚಾಮರಾಜನಗರ ೧೨೬ ಬಸವಟ್ಟಿಯ ಶಾಸನ ಪ್ರಮುಖವಾದದ್ದು. ಈ ಶಾಸನದಿಂದ ಶ್ರೀಪುರುಷರು ಗಂಗ ರಾಜಧಾನಿಯಾದ ತಳವನಪುರ (ತಲಕಾಡು)ದಿಂದ ರಾಜ್ಯವಾಳುತ್ತಿದ್ದನೆಂದು ತಿಳಿದುಬರುತ್ತದೆ. ಅಲ್ಲದೆ "ಕುರುಂಬದೆ" ಎಂಬ ಒಂದು ಬಗೆಯ ತೆರಿಗೆ ವಿಚಾರವು ತಿಳಿದುಬರುತ್ತದೆ.

ಹೊಮ್ಮದ ಶಾಸನವೊಂದರಲ್ಲಿ ಶ್ರೀಪುರುಷನನ್ನು ಕೊಙ್ಙುಣಿ ಮುತ್ತರಸನೆಂದು ಕರೆದಿದೆ. ಅಮಚವಾಡಿಯ ಶಾಸನವು ಸುಮಾರು ೮-೯ನೆಯ ಶತಮಾನದ ಲಿಪಿಯಲ್ಲಿರುವುದರಿಂದ, ಅದು ಹೆಸರಿಸುವ ನೀತಿಮಾರ್ಗ ಪೆರ್ಮಾನಡಿಯು ರಾಚಮಲ್ಲನ ಮಗನಾದ ನೀತಿಮಾರ್ಗ ಎರೆಗಂಗನೆಂದು ನಿರ್ಧರಿಸಬಹುದು. ಹಾಗೆಯೇ ಲಿಪಿ ಮತ್ತು ಆಧಾರಗಳನ್ನು ಗಮನಿಸಿ ಹೊಂಗನೂರಿನ ಶಾಸನದಲ್ಲಿ ಹೆಸರಿಸಿರುವ ಗಂಗರಸ ಇಮ್ಮಡಿ ರಾಚಮಲ್ಲನೆಂದು ಭಾವಿಸಬಹುದು.

ಬಸವಾಪುರ ಶಾಸನದಿಂದ ಕುದಿರೂರು ಎಂಬಲ್ಲಿ ನಡೆದ ಕದನದಲ್ಲಿ ಸತ್ಯವಾಕ್ಯ ಪೆರ್ಮಾನಡಿಯ ತಮ್ಮನಾದ ಬೂತರಸ ಮರಣ ಹೊಂದಿದ ವಿಷಯ ತಿಳಿದು ಬರುತ್ತದೆ. ಈತ ಒಂದನೆಯ ಬೂತುಗನಿರ ಬಹುದು.

ಮಂಗಲದ ಶಾಸನ ಇಮ್ಮಡಿ ಮಾರಸಿಂಹನದು. ಈತ ರಾಜಾಧಿತ್ಯನ ಮೇಲೆ ಹೋರಾಟ ನಡೆಸಿದ ವಿಷಯವನ್ನು ತಿಳಿಸುತ್ತದೆ. ಅಲ್ಲದೆ ಈ ಶಾಸನದಲ್ಲಿ 'ಗಂಗಚಕ್ರಾಯುಧ'- ಎಂಬ ಬಿರುದು ಹಾಗೂ 'ಕಳ್ಪಪ್ಪುವಿನ' (ಶ್ರವಣಬೆಳಗೊಳ) ಉಲ್ಲೇಖವಿದೆ.

ಕಲ್ಯಾಣ ಚಾಲುಕ್ಯರು

ಈ ತಾಲೂಕಿನಲ್ಲಿ ಚಾಲುಕ್ಯರ ಕಾಲಕ್ಕೆ ಸಂಬಂಧಿಸಿದಂತೆ ಚಾಮರಾಜನಗರದಲ್ಲಿ ಒಂದು ಶಾಸನ ಮಾತ್ರ ದೊರೆತಿದೆ. ಇದರ ಕಾಲ ಶಕವರ್ಷ ೯೧೬. ಅಮ್ಮಡಿಗಾವುಂಡ ಎಂಬ ವ್ಯಕ್ತಿ ಕೆರೆಯೊಂದನ್ನು ಕಟ್ಟಿಸಿದ ವಿಷಯವನ್ನು ಈ ಶಾಸನ ನಿರೂಪಿಸುತ್ತದೆ. ಈ ಶಾಸನದಲ್ಲಿಯ ಕಿರುವಸೂರು ಈಗಿನ ಸೋಮಸಂದ್ರ. ಇಂದು ಕೆರೆಯನ್ನು ಕಾಳಿಕರೆ ಎಂದು ಕರೆಯುತ್ತಾರೆ. ಕೆರೆಯನ್ನು ಕಟ್ಟಿಸಲು ಅಮ್ಮಡಿ ಗಾವುಂಡನು ನೊಳಂಬೆ ಗಾವುಂಡನಿಗೆ ಸೇರಿದ ಭೂಮಿಯ ಒಂದು ಭಾಗವನ್ನು ಕೊಂಡನೆಂದು ಈ ಶಾಸನವು ತಿಳಿಸುತ್ತದೆ.[೩೦] ಈ ಏಕೈಕ ಮಾಹಿತಿಯನ್ನು ಹೊರತುಪಡಿಸಿದರೆ ಕಲ್ಯಾಣ ಚಾಲುಕ್ಯರ ಆಳ್ವಿಕೆಯ ಕುರುಹುಗಳು ಈ ತಾಲೂಕಿನಲ್ಲಿ ಲಭ್ಯವಿಲ್ಲ. ಆದ ಕಾರಣ ಈ ಪ್ರಾಂತ್ಯ ಕಲ್ಯಾಣ ಚಾಲುಕ್ಯರ ಆಳ್ವಿಕೆಗೆ ಒಳಪಟ್ಟಿತ್ತೆಂದು ಖಚಿತವಾಗಿ ನಿರ್ಧರಿಸಲಾಗದು.

ಚೋಳರು

ಚಾಮರಾಜನಗರ ತಾಲೂಕನ್ನು ಗಂಗರ ತರುವಾಯ ಆಳಿದವರು ಚೋಳರು. ಗಂಗರ ಅಸಮರ್ಥತೆ ಯನ್ನು ಅರಿತ ಚೋಳರು ಗಂಗವಾಡಿಯ ಬಹುಭಾಗವನ್ನು ತಮ್ಮ ವಶಕ್ಕೆ ತೆಗದುಕೊಂಡು, ಕರ್ನಾಟಕದ ದಕ್ಷಿಣದ ಜಿಲ್ಲೆಗಳಲ್ಲಿ ೧೨ನೆಯ ಶತಮಾನದವರೆಗೂ ಪ್ರಭುತ್ವ ಹೊಂದಿದ್ದರು. ಕ್ರಿ.ಶ. ೯೮೫ರಲ್ಲಿ ಪಟ್ಟಕ್ಕೆ ಬಂದ ರಾಜರಾಜ ಚೋಳ ಕೊಡಗು ನಾಡಿನ ಮೇಲೆ ದಂಡೆತ್ತಿ ಹೋಗಿ ಉಡುಗ್ಯೆ ಕೋಟೆಯನ್ನು ಆಕ್ರಮಿಸಿದ. ಈ ದಂಡಯಾತ್ರೆಯ ನೇತೃತ್ವ ವಹಿಸಿದ್ದ ರಾಜೇಂದ್ರ, ಕೊಡಗಿನ ಮಾಲಾಬಿಯ ಸುತ್ತಲಿನ ಏಳುಸಾವಿರ

ಸೀಮೆಗೆ ಕೊಂಗಾಳ್ವರನ್ನು ನೇಮಿಸಿದ. ಈ ಕಾರಣದಿಂದಲೋ ಏನೋ ಕೊಂಗಾಲ್ವರು ಚೋಳ ಅರಸರ ಹೆಸರುಗಳನ್ನು ಸ್ವೀಕರಿಸಿದರು. ನಂತರ ಮಂಡ್ಯ, ಮಳವಳ್ಳಿ, ಶ್ರೀರಂಗಪಟ್ಟಣ ಮತ್ತು ಕೃಷ್ಣರಾಜಪೇಟೆ ತಾಲೂಕುಗಳ ಮೇಲೆ ಚೋಳರ ಆಕ್ರಮಣ ನಡೆಯಿತು. ಈ ವೇಳೆಗಾಗಲೇ ಗಂಗರ ಪ್ರಾಬಲ್ಯವು ಕಡಿಮೆಯಾಗಿ, ಗಂಗವಾಡಿ ಸಹ ಚೋಳರ ವಶವಾಯಿತು. ಹೀಗೆ ಬೆಂಗಳೂರು, ಮಂಡ್ಯ ಮತ್ತು ಮೈಸೂರು ಪ್ರಾಂತ್ಯಗಳಲ್ಲಿ ಪ್ರಬಲರಾಗಿ ಆಳ್ವಿಕೆ ನಡೆಸುತ್ತಿದ್ದ ಹೊರನಾಡಿನ ಚೋಳರನ್ನು ೧೨ನೇ ಶತಮಾನದ ಕೊನೆಯ ಭಾಗದಲ್ಲಿ ಹೊಯ್ಸಳರು ಹೊರಗಟ್ಟಿದರು.

ಚೋಳರ ಕಾಲದಲ್ಲಿ ಕೆಲವು ಊರುಗಳು ಹೊಸ ಹೆಸರನ್ನು ಪಡೆದವು. ಕುಣಿಗಲ್ಲಿಗೆ 'ರಾಜೇಂದ್ರಪುರ' ಎಂಬ ಹೆಸರು ಬಂತು. ಮತ್ತೆ ಕೆಲವು ಗ್ರಾಮಗಳು ಚತುರ್ವೇದಿ ಮಂಗಲ ಎಂಬ ಹೆಸರಿನೊಡನೆ ಅಗ್ರಹಾರಗಳಾಗಿ ಪರಿವರ್ತಿತವಾದವು.[೧] ಅವುಗಳಲ್ಲಿ ಪ್ರಮುಖವಾದವು.

೧. ಕೇರಳಾಂತಕ ಚತುರ್ವೇದಿ ಮಂಗಲ (ಹರಳಕೋಟೆ ಶಾಸನ)

೨. ಚೋಳೇಂದ್ರ ಸಿಂಹ ಚತುರ್ವೇದಿ ಮಂಗಲ (ಯಳಂ ಶಾಸನ)

೩. ನರಸಮಂಗಲ(ಚಾಮರಾಜನಗರ)

೪. ಕಣ್ಣಮಂಗಲ(ಕಣ್ಣೇಗಾಲ) ಚಾಮರಾಜನಗರ

೫. ಶಂಕರೇಶ್ವರ ಗುಡ್ಡದ ಮಂಗಲ, ಚಾಮರಾಜನಗರ

ಊರುಗಳನ್ನು ಎರೆವೀರಪಟ್ಟಣಗಳಾಗಿ ಪರಿವರ್ತಿಸುವ ಪದ್ಧತಿ ತಮಿಳುನಾಡಿನಲ್ಲಿತ್ತು. ಅದು ಈ ಪ್ರದೇಶಲ್ಲಿಯೂ ಇತ್ತು ಎಂಬುದಕ್ಕೆ ಕೆಂಪನಪುರದ ಶಾಸನವು ನಿದರ್ಶನ. ಸುಮಾರು ೧೦೦ ವರ್ಷಗಳ ಕಾಲ ದಕ್ಷಿಣ ಕರ್ನಾಟಕದಲ್ಲಿ ಆಡಳಿತ ನಡೆಸಿದ ಚೋಳರು ತಮ್ಮ ಆಡಳಿತ ವ್ಯಾಪ್ತಿ ಪ್ರದೇಶಗಳಲ್ಲಿ ತಮಿಳು ಸಂಸ್ಕೃತಿಯನ್ನು ಹರಡಿದರು ಹಾಗೂ ಈ ತಾಲೂಕಿನಲ್ಲಿ ತಮಿಳು ಆಡಳಿತ ಭಾಷೆಯಾಗಿ ನೆಲೆಗೊಂಡಿತು. ಇದಕ್ಕೆ ಆಧಾರವಾಗಿ ಕೋಮಗನ್, ವಿರಸಲಾಮೇಗನ್, ಕನ್ನಕುಚ್ಚಿಯಿಲುವಲ್, ಕವಿಲ್, ಪಾಣ್ಡಿಯನ್, ತಿಶೈಯ್ ಪಾವಾಡೈ, ಅಣ್ಣಾನುಮ್ ವೀರಶೆಟ್ಟಿಯಮ್, ಇಕ್ಕಲಮೇಲ್ ಮುಂತಾದ ತಮಿಳು ಶಬ್ದಗಳು ಅಂದಿನ ಶಾಸನಗಳಲ್ಲಿ ಯಥೇಚ್ಛವಾಗಿ ಬಳಕೆಯಲ್ಲಿವೆ.[೨]

ಚೋಳರ ಕಾಲದ ಸುಮಾರು ೮ ಶಾಸನಗಳು ಈ ತಾಲೂಕಿನಲ್ಲಿ ದೊರೆತಿವೆ. ಇವುಗಳಲ್ಲಿ ಪ್ರಾಚೀನತಮ ಶಾಸನ ಒಂದನೇ ರಾಜರಾಜನ ಆಳ್ವಿಕೆ ಕಾಲದ್ದು. ಅಂದರೆ ಕ್ರಿ.ಶ.೯೯೧. ನೊಳಂಬ ಮತ್ತು ಗಂಗರ ಮೇಲೆ ಅವನು ಕೈಗೊಂಡ ದಿಗ್ವಿಜಗಳನ್ನು ಈ ಶಾಸನ ಉಲ್ಲೇಖಿಸುತ್ತದೆ. ಅಲ್ಲದೆ ಶಾಸನದಲ್ಲಿ ಚೋಳರಾಜನನ್ನು 'ಚೋಳನಾರಾಯಣ' ಎಂದು ಕರೆದಿದೆ. ಕಾಲ ನಿರೂಪಣೆ ಮತ್ತು ಕನ್ನಡ ಭಾಷೆ ಹಾಗೂ ಹೊಂಗನೂರಿನ

ತಮಿಳು-ಕನ್ನಡ ಮಿಶ್ರಿತ ಶಾಸನಗಳ ಆಧಾರದಿಂದ ಚೋಳರು ಈ ಭಾಗಗಳಲ್ಲಿ ತಮ್ಮ ರಾಜ್ಯದ ಆಡಳಿತ ವ್ಯವಸ್ಥೆಯನ್ನು ಆಗ ತಾನೆ ಜಾರಿಗೆ ತಂದಿದ್ದರೂ ಎಂಬುದನ್ನು ಸೂಚಿಸುತ್ತದೆ.

ರಾಜೇಂದ್ರ ಚೋಳಸೆಟ್ಟಿ ಎಂಬುವವನು ಕಾಳಗವೊಂದರಲ್ಲಿ ಸತ್ತುದ್ದನ್ನು, ಆತನ ಸಾವಿಗೆ ಪ್ರತೀಕಾರವಾಗಿ ಅದಕ್ಕೆ ಕಾರಣನಾದವನನ್ನು ಕೊಂದ ವಿಷಯ ಈ ಶಾಸನ ಸೂಚಿಸುತ್ತದೆ. ಮಂಗಲದ ಶಾಸನಗಳು ರಾಜಾಧಿರಾಜನಿಗೆ ಇದ್ದ ಬಿರುದು ಪ್ರಶಸ್ತಿಯ ವಿವರಗಳನ್ನು ಒಳಗೊಂಡಿವೆ.

ಕ್ರಿ.ಶ.೧೦೫೮-೫೯ರ ಹಳೆ ಆಲೂರಿನ ಶಾಸನವು ಇಮ್ಮಡಿ ರಾಜೇಂದ್ರ ಚೋಳನಿಗೆ 'ರಾಜಕೇಸರಿ' ಎಂಬ ಬಿರುದಿತ್ತೆಂದು ತಿಳಿಸುತ್ತದೆ. ಕೊಳ್ಳೇಗಾಲದ ಶಾಗ್ಯಂ ಶಾಸನ ಕೊಳ್ಳೇಗಾಲ ಮತ್ತು ಯಳಂದೂರಿನ ಶಾಸನಗಳು ಈ ತಾಲೂಕಿನಲ್ಲಿ ಚೋಳರ ಆಳ್ವಿಕೆಗೆ ಸಂಬಂಧಿಸಿದಂತೆ ಮಾಹಿತಿಯನ್ನು ಒದಗಿಸುತ್ತವೆ.

## ಹೊಯ್ಸಳರು

ಕ್ರಿ.ಶ.೧೪ನೆಯ ಶತಮಾನದ ಆದಿಭಾಗದಿಂದ, ೧೪ನೆಯ ಶತಮಾನದ ಮಧ್ಯಭಾಗದವರೆಗೆ ರಾಜ್ಯದಲ್ಲಿ ಆಡಳಿತ ನಡೆಸಿದ ಪ್ರಸಿದ್ಧ ರಾಜವಂಶ ಹೊಯ್ಸಳರು. ಚೋಳರನ್ನು ಸೋಲಿಸಿ ಅಧಿಕಾರಕ್ಕೆ ಬಂದ ಹೊಯ್ಸಳರ ಆಡಳಿತ ವ್ಯಾಪ್ತಿಗೆ ದಕ್ಷಿಣ ಕರ್ನಾಟಕ ಮತ್ತು ಸುತ್ತಲಿನ ಭಾಗಗಳು ವಿಶೇಷವಾಗಿ ಅಧೀನಕ್ಕೆ ಒಳಪಟ್ಟಿದ್ದವು. ಮೊದಲು ಇವರ ರಾಜಧಾನಿ ಶಶಕಪುರ ಅಥವಾ ಸೊಸೆವೂರು (ಚಿಕ್ಕಮಂಗಳೂರು ಜಿಲ್ಲೆ) ಆಗಿತ್ತು. ನಂತರ ಹಾಸನ ಜಿಲ್ಲೆಯ ಬೇಲೂರು ಮತ್ತು ದೋರಸಮುದ್ರಗಳು ಇವರ ರಾಜಧಾನಿಗಳಾದವು. ಪ್ರಾರಂಭದಲ್ಲಿ ಚಿಕ್ಕಪಾಳೆಯಪಟ್ಟನ್ನು ಹೊಂದಿದ್ದ ಇವರು, ತಮ್ಮ ಶೌರ್ಯ, ಸ್ವಸಾಮರ್ಥ್ಯದಿಂದ ರಾಜ್ಯವನ್ನು ವಿಸ್ತಾರಮಾಡಿ, ತಮ್ಮ ಅಧಿಪತ್ಯವನ್ನು ತಮಿಳುನಾಡಿನವರೆಗೂ ವಿಸ್ತರಿಸಿದರು. ಅಲ್ಲದೆ ನಾಡಿನ ಆರ್ಥಿಕ ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ಉನ್ನತ ಸಾಧನೆಗಳಿಗೆ ಪ್ರೋತ್ಸಾಹ ನೀಡಿ, ವೈಭವಯುತವಾಗಿ ಆಡಳಿತ ನಡೆಸಿದರು.

ಹೊಯ್ಸಳರು ಈ ತಾಲೂಕಿನಲ್ಲಿ ಸುಮಾರು ೨ ಶತಮಾನಗಳವರೆಗೆ ಆಡಳಿತ ನಡೆಸಿದ ಬಗ್ಗೆ ಶಾಸನಗಳಿಂದ ತಿಳಿದುಬರುತ್ತದೆ. ಇವರ ಆಳ್ವಿಕೆಯ ಕಾಲ ಶಾಸನಗಳ ರಚನೆ ದೃಷ್ಟಿಯಿಂದ ಸಮೃದ್ಧಿಯ ಕಾಲ. ಇವರಿಗೆ ಸಂಬಂಧಿಸಿದ ೫೫ ಶಾಸನಗಳು ಚಾಮರಾಜನಗರ ತಾಲೂಕಿನಲ್ಲಿ ಕಂಡುಬರುತ್ತವೆ.[೩೩] ಶಾಸನಗಳ ರಚನೆಯ ಕಲೆ, ಲಿಪಿ, ಸೌಂದರ್ಯ, ಭಾಷೆ ಮತ್ತು ಸಾಹಿತ್ಯ ಸಮೃದ್ಧಿಯಲ್ಲಿ ಇವರ ಶಾಸನಗಳು ಅಪರೂಪದ್ದಾಗಿವೆ. ಅಲ್ಲದೆ ಐತಿಹಾಸಿಕವಾಗಿಯೂ ಮಹತ್ವವನ್ನು ಪಡೆದುಕೊಂಡಿವೆ. ಈ ಅರಸರ ಹೆಚ್ಚು ಶಾಸನಗಳು ತಮಿಳಿನಲ್ಲಿದ್ದು, ತಮಿಳು ಭಾಷೆಯಲ್ಲಿ ಶಾಸನಗಳನ್ನು ಹಾಕಿಸುತ್ತಿದ್ದ ಚೋಳರ ಪರಿಪಾಠ ಇವರಲ್ಲಿ ಮುಂದುವರಿದ ರೂಪವಾಗಿ ಕಾಣುತ್ತದೆ.

ಈ ವಂಶದ ಮೊದಲ ರಾಜನ ಹೆಸರು ನೃಪಕಾಮ. ವಿದ್ವಾಂಸರ ಪ್ರಕಾರ ಸಳ ಮತ್ತು ನೃಪಕಾಮ ಎಂಬವು ಒಂದೇ ವ್ಯಕ್ತಿಯ ಎರಡು ಹೆಸರುಗಳು.[೩೪] ಚಾಮರಾಜನಗರ ತಾಲೂಕಿನಲ್ಲಿ ಆಳ್ವಿಕೆ ನಡೆಸಿದ

ಹೊಯ್ಸಳ ರಾಜರುಗಳಲ್ಲಿ ಒಂದನೆಯ ನರಸಿಂಹ(ಸು.೧೧೪೨-೧೧೭೩), ಇಮ್ಮಡಿ ಬಲ್ಲಾಳ (ಸು.೧೧೭೩-೧೨೨೦), ಸೋಮೇಶ್ವರ(ಸು.೧೨೩೫-೧೨೫೪), ಮೂರನೇ ನರಸಿಂಹ (ಸು.೧೨೫೪-೧೨೯೨) ಮತ್ತು ಮುಮ್ಮಡಿ ಬಲ್ಲಾಳ ಇವರ ಆಳ್ವಿಕೆಯಲ್ಲಿ ಹಾಕಿಸಿದ ಶಾಸನಗಳು ತಾಲೂಕಿನಲ್ಲಿ ಲಭ್ಯವಾಗಿವೆ.

ಕ್ರಿ.ಶ.೧೧೬೯ರಲ್ಲಿ ಚಾಮರಾಜನಗರದಲ್ಲಿ ದೊರೆತಿರುವ ಶಾಸನವು ವಿಷ್ಣುವರ್ಧನ ಮತ್ತು ಆತನ ಮಗ ಒಂದನೇ ನರಸಿಂಹನ ಬಿರುದಾವಳಿಗಳನ್ನು ವಿವರಿಸುತ್ತದೆ. ವಿಶೇಷವಾಗಿ ಒಂದನೆ ನರಸಿಂಹನನ್ನು "ಭುಜಬಲ ವೀರಗಂಗ ಜಗದೇಕಮಲ್ಲ ಶ್ರೀ ನಾರಸಿಂಹ ಹೊಯ್ಸಳದೇವ" ಎಂದು ನಿರ್ದೇಶಿಸಿದೆ. ಹೊಯ್ಸಳರ ಈ ಬಿರುದಿನ ಬಗ್ಗೆ ಚರ್ಚೆಯಿದ್ದು, ಕಾರ್ಯದ ಶಾಸನದಲ್ಲಿ ಅದಕ್ಕೆ ಸ್ಪಷ್ಟತೆಯಿದೆ.[೩೫] ಈ ಶಾಸನದ ಪ್ರಕಾರ ಆರನೇ ವಿಕ್ರಮಾದಿತ್ಯನ ಮೊಮ್ಮಗನಾದ ಇಮ್ಮಡಿ ಚಾಲುಕ್ಯ ಜಗದೇಕ ಮಲ್ಲನು ವಿಷ್ಣುವರ್ಧನನನ್ನು ಪರಾಜಯಗೊಳಿಸುವಲ್ಲಿ ಪಾಲ್ಗೊಂಡಿರಬೇಕು. ಆದ್ದರಿಂದಲೇ ಹೊಯ್ಸಳರಿಗೆ 'ಜಗದೇಕಮಲ್ಲ' ಎಂಬ ಬಿರುದು ಬಂದಿತ್ತೆಂದು ಹೇಳಿದೆ.

ಚಾಮರಾಜನಗರ ತಾಲೂಕಿನಲ್ಲಿ ಇಮ್ಮಡಿ ಬಲ್ಲಾಳನ ಆಳ್ವಿಕೆಯ ಕಾಲದ ೧೫ ಶಾಸನಗಳು ದೊರಕಿದ್ದು ಅವುಗಳಲ್ಲಿ ಮೂರು ಮಾತ್ರ ಕನ್ನಡದಲ್ಲಿದ್ದು, ಉಳಿದವು ತಮಿಳಿನಲ್ಲಿವೆ.

ಈ ತಾಲೂಕಿನಲ್ಲಿ ಸೋಮೇಶ್ವರನ ಕಾಲದ ಕೆಲವು ಶಾಸನಗಳು ದೊರೆತ್ತಿದ್ದು, ಅವು ತಮಿಳು ಮತ್ತು ಕನ್ನಡ ಭಾಷೆ ಮಿಶ್ರಿತವಾಗಿವೆ. ಅವುಗಳಲ್ಲಿ ಕ್ರಿ.ಶ.೧೨೪೭ರ ಶಾಸನವು ಮಹಾಪ್ರಧಾನ ಪೆರುಮಾಳ ದಣ್ಣಾಯಕನನ್ನು ಉಲ್ಲೇಖಿಸುತ್ತದೆ. ಈತ ಸೋಮೇಶ್ವರನ ತರುವಾಯ ಮುಮ್ಮಡಿ ಬಲ್ಲಾಳನ ಕಾಲದಲ್ಲಿಯೂ ಅಧಿಕಾರಿಯಾಗಿದ್ದನೆಂದು ತಿಳಿದುಬರುತ್ತದೆ. ಆದ್ದರಿಂದ ಈತ ಚಿಕ್ಕ ವಯಸ್ಸಿನಲ್ಲಿಯೇ ಅಧಿಕಾರಿಯಾಗಿದ್ದನೆಂದು ಊಹಿಸಬಹುದು.

ಮುಮ್ಮಡಿ ನರಸಿಂಹನ ಕಾಲದ ಕ್ರಿ.ಶ.೧೨೭೩ ಕಟ್ನವಾಡಿ ಶಾಸನ ಮತ್ತು ಕ್ರಿ.ಶ.೧೨೯೪ರ ಮುಮ್ಮಡಿ ವೀರಬಲ್ಲಾಳನ ಹೊಮ್ಮ ಶಾಸನ ಅಮಚವಾಡಿಯ ಶಾಸನಗಳು ಹದಿನಾಡು ಪ್ರಾಂತ್ಯದ ಉಪನಾಡುಗಳಾದ ಕುಮಾರನಾಡು, ಹಿರಿಯನಾಡು ಮತ್ತು ತೊರೆನಾಡುಗಳನ್ನು ಹೆಸರಿಸುತ್ತವೆ.[೩೬]

ಆಲದೂರಿನಲ್ಲಿ ದೊರೆತ್ತಿರುವ ಚಾಮರಾಜನಗರ ೧೦೮ ಶಾಸನವು ಮುಮ್ಮಡಿ ನರಸಿಂಹನ ಆಳ್ವಿಕೆಯನ್ನು ತಿಳಿಸುತ್ತದೆ ಹಾಗೂ ಮಹಾಪ್ರಧಾನ ಪೆರುಮಾಳದಣ್ಣಾಯಕನ ಮಗ ಲಕ್ಷ್ಮೀನಾರಾಯಣನನ್ನು ಉಲ್ಲೇಖಿಸುತ್ತದೆ. ಆರು ತಮಿಳು ಶಾಸನಗಳು ಸೇರಿದಂತೆ ಒಟ್ಟು ೨೪ ಶಾಸನಗಳಲ್ಲಿ ಮುಮ್ಮಡಿ ಬಲ್ಲಾಳನು ಉಕ್ತನಾಗಿದ್ದಾನೆ. ಲಿಪಿಯ ಆಧಾರದ ಮೇಲೆ ಈ ಶಾಸನಗಳು ಮುಮ್ಮಡಿ ಬಲ್ಲಾಳನ ಕಾಲದ್ದೆಂದು ನಿಶ್ಚಯಿಸಬಹುದು.

ಚಾಮರಾಜನಗರ ಶಾಸನಗಳಿಂದ ಕಾಟುದಂಡನಾಯಕ, ವೀರಣ್ಣ, ಬಿಲಚೊಕ್ಕಯ್ಯ ಮತ್ತು ಭೋಗಯ್ಯ ಮುಂತಾದ ಬಲ್ಲಾಳನ ಕೆಲವು ಅಧಿಕಾರಿಗಳ ಹೆಸರು ತಿಳಿದುಬರುತ್ತದೆ. ಅವರಲ್ಲಿ ವೀರಣ್ಣನು ಮುಕ್ಕೊಡಿ ಹಳ್ಳಿ ಮತ್ತು ಮೇಲು ಭಾಗಿಯ ಪ್ರಜೆಗವುಡುಗಳಿಂದ ದತ್ತಿಯನ್ನು ಪಡೆಯುತ್ತಿದ್ದನೆಂದು, ಬಿಲಚೊಕ್ಕಯ್ಯ ಮತ್ತು ಭೋಗಯ್ಯ ಇವರಿಬ್ಬರೂ ದಾನಿಗಳಾಗಿದ್ದರೆಂದು ವಿವರವಿದೆ.[೬]

ವಿಜಯನಗರ

ವಿದ್ಯಾರಣ್ಯರ ಪ್ರೇರಣೆ ಮತ್ತು ಹರಿಹರ ಹಾಗೂ ಬುಕ್ಕರ ಶೌರ್ಯ ಸಾಹಸಗಳಿಂದ ಹುಟ್ಟಿದ ಈ ಸಾಮ್ರಾಜ್ಯವು ಭಾರತೀಯ ಪರಂಪರೆ ಮತ್ತು ಸಂಸ್ಕೃತಿಯ ಪುನರುತ್ಥಾನಕ್ಕೆ ಕಾರಣವಾಯಿತು. ವಿಜಯನಗರದ ಅರಸರು ೧೪ ರಿಂದ ೧೭ನೇ ಶತಮಾನದವರೆಗೆ ಆಡಳಿತ ನಡೆಸಿದ್ದಾರೆ. ಈ ಸಾಮ್ರಾಜ್ಯವನ್ನು ಸಂಗಮ, ಸಾಳುವ, ತುಳು ಮತ್ತು ಅರವೀಡು ವಂಶಗಳೆಂದು ೪ ವಂಶಗಳು ಆಳ್ವಿಕೆ ನಡೆಸಿವೆ. ಇವರ ಆಳ್ವಿಕೆ ಕಾಲದಲ್ಲಿ ರಾಜ್ಯವು ಸರ್ವ ಸಂಪತ್ತಿನಿಂದ ಕೂಡಿ, ಅತ್ಯಂತ ವಿಜೃಂಭಣೆಯಿಂದ ವೈಭವಯುತವಾಗಿ ನಡೆಯಿತ್ತೆಂದು ಇತಿಹಾಸಕಾರರು ಪ್ರಶಂಶಿಸಿದ್ದಾರೆ. ಈ ಸಾಮ್ರಾಜ್ಯದ ಆಡಳಿತ, ಅದರ ವೈಭವವನ್ನು ಕುರಿತು ವಿದೇಶಿ ಪ್ರವಾಸಿಗರಾದ ಇಟಲಿಯ ನಿಕೊಲೊ ಡಿ ಕೋಟೆ ಮತ್ತು ಪರ್ಶಿಯಾದ ಅಬ್ದುಲ್ ರಜಾಕ್ ಮುಂತಾದವರು ತಮ್ಮ ಪ್ರವಾಸ ಕಥನಗಳಲ್ಲಿ ಬರೆದಿರುವುದನ್ನು ಸ್ಮರಿಸಬಹುದು.

ವಿಜಯನಗರದ ಅರಸರು ಕಲೆ ಸಾಹಿತ್ಯ ಸಂಸ್ಕೃತಿಗೆ ಹೆಚ್ಚು ಪ್ರೋತ್ಸಾಹ ನೀಡುತ್ತಿದ್ದರು. ಇವರ ಕಾಲದಲ್ಲಿ ಅನೇಕ ದೇವಾಲಯಗಳ ನಿರ್ಮಾಣ, ಜೀರ್ಣೋದ್ಧಾರ, ವಾಸ್ತುಶಿಲ್ಪ, ಸಂಗೀತ ಮತ್ತು ಚಿತ್ರಕಲೆಗಳಿಗೆ ಹೆಚ್ಚು ಪ್ರೋತ್ಸಾಹ ದೊರೆತು ಸಂಸ್ಕೃತಿಯ ಉಚ್ಛ್ರಾಯ ಸ್ಥಿತಿಯಲ್ಲಿತ್ತು ಹಾಗೂ ಸಾಹಿತ್ಯ ಕ್ಷೇತ್ರಕ್ಕೂ ಸಾಕಷ್ಟು ಉತ್ತೇಜನ ದೊರೆಯಿತು.

ವೈಭವಯುತವಾಗಿ ಆಡಳಿತ ನಡೆಸಿದ ವಿಜಯನಗರ ಸಾಮ್ರಾಜ್ಯದ ಅರಸರು ಚಾಮರಾಜನಗರ ತಾಲೂಕಿನಲ್ಲಿ ಕ್ರಿ.ಶ.೧೩೩೩ ರಿಂದ ೧೬೦೫ರವರೆಗೆ ಆಳ್ವಿಕೆ ನಡೆಸಿದರು. ಈ ಅರಸರ ಕಾಲದ ಶಾಸನಗಳು ಚಾಮರಾಜನಗರ ತಾಲೂಕಿನಲ್ಲಿ ಲಭ್ಯವಿದ್ದು ಸಂಖ್ಯಾ ದೃಷ್ಟಿಯಿಂದ ಅಗ್ರಸ್ಥಾನದಲ್ಲಿವೆ.

ಕ್ರಿ.ಶ.೧೩೩೩ರ ಒಂದನೆಯ ಬುಕ್ಕನ ಆಳ್ವಿಕೆಯನ್ನು ಉಲ್ಲೇಖಿಸುವ ಮಲದೇವನ ಹಳ್ಳಿಯ ಶಾಸನವು ತ್ರುಟಿತವಾಗಿದ್ದು ವಿವರಗಳೆಲ್ಲ ನಷ್ಟವಾಗಿದೆ. ಅದರಲ್ಲಿ ಕೊಟ್ಟಿರುವ ತೇದಿ ವಿವರಗಳೂ ಸರಿಯಾಗಿಲ್ಲ.

ಹರಳುಕೋಟೆಯ ಚಾಮರಾಜನಗರ ಶಾಸನವು ಚಿಕ್ಕ ಕಂಪಣ್ಣವೊಡೆಯನ ಆಳ್ವಿಕೆಯನ್ನು ಉಲ್ಲೇಖಿಸುತ್ತದೆ. ಇದರ ಕಾಲ ೧೪ನೆಯ ಶತಮಾನವೆಂದೂ ಭಾವಿಸಬಹುದು. ಕ್ರಿ.ಶ. ೧೩೬೩ ಮತ್ತು ೧೩೬೮ರ ಹರದನಹಳ್ಳಿಯ ಚಾಮರಾಜನಗರದ ಎರಡು ಶಾಸನಗಳು ಬುಕ್ಕನ ಕಾಲದವಾಗಿದ್ದು ಮಹಾಪ್ರಧಾನ ಬಸವಯ್ಯ ದಣ್ಣಾಯಕನ ಆಡಳಿತದ ಬಗ್ಗೆ ವಿವರಿಸುತ್ತವೆ.

ಹೊಮ್ಮದ ಶಾಸನದಲ್ಲಿ ಇಮ್ಮಡಿ ಹರಿಹರನ ಆಳ್ವಿಕೆಯ ಪ್ರಸ್ತಾಪವಿದೆ. ಇದರ ಕಾಲ ಕ್ರಿ.ಶ. ೧೩೮೦ ಅರಸನು ಸಂಗಮ ಮತ್ತು ಕಾಮಾಯಿಯ ಬೊಮ್ಮಗನೆಂದು ತಿಳಿಸುತ್ತದೆ. ಈ ಕಾಲದಲ್ಲಿ ಬಲ್ಲಪ್ಪ ಹದಿನಾಡನ್ನು ಆಳುತ್ತಿದ್ದ ಬಗ್ಗೆ ಮಾಹಿತಿಯಿದೆ. ದೊರೆತ ಶಾಸನಗಳನ್ನು ಆಧಾರವಾಗಿಟ್ಟುಕೊಂಡು ನೋಡಿದಾಗ ಕ್ರಿ.ಶ. ೧೪೦೪ರವರೆಗೆ ಇಮ್ಮಡಿ ಹರಿಹರನ ಆಳ್ವಿಕೆಗೆ ಚಾಮರಾಜನಗರ ಒಳಪಟ್ಟಿತ್ತೆಂದು, ಇವನ ಮಗನಾದ ಇಮ್ಮಡಿ ಬುಕ್ಕ ದಕ್ಷಿಣಾ ಕರ್ನಾಟಕದ ಪೂರ್ವ ಪ್ರದೇಶದ ಹಾಗೂ ಅದಕ್ಕೆ ಸೇರಿದ ಚೆಂಗಲ ಪೇಟೆ ಮತ್ತು ಅರ್ಕಾಟ್ ಜಿಲ್ಲೆಗಳನೊಳಗೊಂಡ ಪ್ರದೇಶದ ರಾಜ್ಯಪಾಲನಾಗಿದ್ದನೆಂದು ತಿಳಿದುಬರುತ್ತದೆ.[೩೮]

ಕ್ರಿ.ಶ. ೧೫ನೆಯ ಶತಮಾನದ ಲಿಪಿಯಲ್ಲಿರುವ ಹರದನಹಳ್ಳಿಯ ಚಾಮರಾಜನಗರ ಶಾಸನ ಮತ್ತು ಪುಣಜನೂರಿನ ಶಾಸನಗಳು ಇಮ್ಮಡಿ ದೇವರಾಯನ ಆಳ್ವಿಕೆಯ ವಿಚಾರವನ್ನು ಪ್ರಸ್ತಾಪಿಸುತ್ತವೆ. ಭಂಡಿಗೆರೆಯ ಕ್ರಿ.ಶ. ೧೫೧೩ರ ಶಾಸನವೂ ಕೃಷ್ಣರಾಯನ ಶಾಸನಗಳಲ್ಲಿ ಪ್ರಾಚೀನವಾದುದು. ಈ ಶಾಸನದಲ್ಲಿ ಕೃಷ್ಣರಾಯನ ಆಡಳಿತದ ವಿವರವಿದೆ ಹಾಗೂ ಅರಸನನ್ನು 'ಶ್ರೀಮನ್ಮಹಾಕೃಷ್ಣರಾಯ' ಎಂದು ಉಲ್ಲೇಖಿಸುತ್ತದೆ. ಮತ್ತು ಚಾಮರಾಜನಗರದ ಶಾಸನದಲ್ಲಿ ಕೃಷ್ಣದೇವರಾಯನ ಪ್ರಸಿದ್ಧ ಮಂತ್ರಿಯಾದ ಸಾಳುವ ಗೋವಿಂದ ರಾಜಯ್ಯನ ಉಲ್ಲೇಖವಿದೆ. ಈತನಿಗೆ ಉಮ್ಮತ್ತೂರು ನಾಯಕತನ ಪ್ರಾಪ್ತವಾಗಿತ್ತೆಂದು ಅದೇ ಶಾಸನದಿಂದ ತಿಳಿದುಬರುತ್ತದೆ.

ಕ್ರಿ.ಶ. ೧೫೪೪ರ ಶಾಸನಗಳಲ್ಲಿ ವಿಜಯನಗರ ಸಾಮ್ರಾಜ್ಯದ ಈ ಭಾಗದ ಸದಾಶಿವರಾಯನ ಅತಿಪ್ರಮುಖ ಮಾಂಡಲಿಕನಾದ ಮಹಾ ಮಂಡಲೇಶ್ವರ ರಾಮರಾಜ ತಿರುಮಲ ರಾಜಯ್ಯದೇವನ ಉಲ್ಲೇಖವಿದೆ. ಈತನ ಮಗ ರಾಜರಾಜಯ್ಯ, ಈ ತಂದೆ ಮಕ್ಕಳು ಕ್ರಿ.ಶ. ೧೫೭೦ರ ಕಾಗಲವಾಡಿ ಚಾಮರಾಜನಗರ ಶಾಸನದಲ್ಲಿ ಕ್ರಮವಾಗಿ ದಾನಿ ಮತ್ತು ಪ್ರತಿಗ್ರಹಿಗಳಾಗಿ ಕಂಡುಬರುವುದು ಸ್ವಾರಸ್ಯಕರ ಸಂಗತಿ; ಅಷ್ಟೇ ಅಲ್ಲದೆ ತಂದೆಗೆ ಮಗನೆ ಕಾರ್ಯಕರ್ತನಾಗಿದ್ದನೆಂದು ತಿಳಿದುಬರುತ್ತದೆ.[೩೯]

## ಉಮ್ಮತ್ತೂರು ಒಡೆಯರು

ವಿಜಯನಗರದರಸರ ಸಾಮಂತರಾಗಿದ್ದ ಉಮ್ಮತ್ತೂರು ಒಡೆಯರು-ಪಾಳೆಯಗಾರರು ಕ್ರಿ.ಶ. ಸುಮಾರು ೧೫ನೆಯ ಶತಮಾನದ ಕೊನೆ ಮತ್ತು ೧೬ನೆಯ ಶತಮಾನದ ಪ್ರಾರಂಭದಲ್ಲಿ ಮೈಸೂರು ಜಿಲ್ಲೆಯ ದಕ್ಷಿಣ ಭಾಗ ಮತ್ತು ತಮಿಳು ನಾಡಿನ ಕೊಯಮತ್ತೂರು ಜಿಲ್ಲೆಯ ಕೆಲವು ಗ್ರಾಮಗಳಲ್ಲಿ ಆಡಳಿತ ನಡೆಸುತ್ತಿದ್ದರು.

ಮಲ್ಲರಾಜನೆಂದು ಹೆಸರು ಪಡೆದುಕೊಂಡಿದ್ದ ಈ ಚಿಕ್ಕರಾಜನು ತನ್ನ ರಾಜ್ಯವನ್ನು ಪನಗೊಂಡವರೆಗೆ ವಿಸ್ತರಿಸಿದಲ್ಲದೆ, ಶಿವನಸಮುದ್ರದ ಕೋಟೆಯನ್ನು ಸಹ ಬಲಪಡಿಸಿ ಜನರಿಂದ ಹೆಚ್ಚು ಆದಾಯವನ್ನು ಪಡೆದು, "ಪೈಸಾಳಿ ಹನುಮ", "ಮೂರು ರಾಯರಗಂಡ', "ಪೆನಗೊಂಡ", "ಚಕ್ರೇಶ್ವರ" ಎಂಬ ಬಿರುದುಗಳನ್ನು ಹೊಂದಿ ರಾಜ್ಯಾಡಳಿತವನ್ನು ನಡೆಸುತ್ತಿದ್ದನು.

ಮಲ್ಲರಾಜನ ನಂತರ ಅವನ ಚಿಕ್ಕಪ್ಪ ದೇವಣ್ಣ ಒಡೆಯನ ತಮ್ಮ ನಂಜರಾಜನನ್ನು ಮಲ್ಲರಾಜ ಉಮ್ಮತ್ತೂರಿನ ಆಳ್ವಿಕೆಯನ್ನು ನೋಡಿಕೊಳ್ಳುವಂತೆ ನೇಮಿಸಿದನು. ಮಲ್ಲರಾಜನು ತೆರಕಣಾಂಬಿಯಲ್ಲಿದ್ದು ಕೊಂಡು ಕೊಯಮತ್ತೂರು ಜಿಲ್ಲೆ ಅವಿನಾಶಿ ತಾಲೂಕಿನ ಕೆಲಭಾಗಗಳನ್ನು ಒಳಕೊಂಡಂತೆ ಆಳ್ವಿಕೆಯನ್ನು ನಡೆಸುತ್ತಿದ್ದನು. ಇವನ ಆಳ್ವಿಕೆಯಲ್ಲಿ ಉಮ್ಮತ್ತೂರು ಸಾಮ್ರಾಜ್ಯ ತಮಿಳುನಾಡಿನವರೆಗೆ ಹಬ್ಬಿತ್ತು.

ಉಮ್ಮತ್ತೂರಿನ ಗೋವಿಂದರಾಜನ ನಂತರ ದೇವರಸಯ್ಯನು ಉಮ್ಮತ್ತೂರು ಸೀಮೆಯ ನಾಯಕತ್ವ ವನ್ನು ವಹಿಸಿ ಆಡಳಿತವನ್ನು ನಡೆಸಿಕೊಂಡು ಆದಾಯ ತೆರಿಗೆಗಳನ್ನು ಸಲ್ಲಿಸಬೇಕೆಂದು ಶ್ರೀಕೃಷ್ಣದೇವರಾಯನು ದಯಪಾಲಿಸಿದನೆಂದು ಹೆಗ್ಗೊಠಾರದ ಶಾಸನ ತಿಳಿಸುತ್ತದೆ.[೪೦]

ಅತ್ತ ವಿಜಯನಗರದಲ್ಲಿ ಆಡಳಿತ ಸರಿ ಇಲ್ಲದೇ ಶ್ರೀ ಕೃಷ್ಣದೇವರಾಯನ ವಿಶ್ರಾಂತಿ ದಿನಗಳಾಗಿದ್ದು, ಅವನ ಬಲ ತಮ್ಮ ಅಚ್ಯುತರಾಯ ತಾನೇ ರಾಜನಾಗಬೇಕೆಂದು ಹವಣಿಸುತ್ತಿದ್ದನು. ಅಲ್ಲದೆ ಮಳೆ, ಬೆಳೆ ಕಾಲ ಕಾಲಕ್ಕೆ ಸರಿಯಾಗಿ ಆಗದೆ ಆದಾಯ ಕಡಿಮೆಯಾಗಲು ಪ್ರಾರಂಭವಾಗಿತ್ತು. ಈ ಸಮಯದಲ್ಲಿ ದಕ್ಷಿಣದ ಪಾಳೆಯಪಟ್ಟುಗಳಿಂದ ಆದಾಯ ಹೆಚ್ಚಿಸಲು ಇಲ್ಲಿ ಇವರ ಆಡಳಿತಾಧಿಕಾರಿಗಳನ್ನು ತೆಗೆದು ಬೇರೆಯವರನ್ನು ನೇಮಿಸಲು ಶ್ರೀಕೃಷ್ಣದೇವರಾಯನು ಆನೆಗೊಂದಿ ಸಂಸ್ಥಾನದ ದೇವರಾಯನ ಮಕ್ಕಳಾದ ಭುಜಂಗರಾಯ, ಹರಿಹರರಾಯ ಮತ್ತು ಪ್ರಭುರಾಯ ಎಂಬುವವರನ್ನು ಉಮ್ಮತ್ತೂರು ಸೀಮೆಯ ಆಡಳಿತವನ್ನು ನೋಡಿಕೊಳ್ಳುವಂತೆ ನೇಮಿಸಿದನು. ಇವರಲ್ಲಿ ಉಮ್ಮತ್ತೂರಿನ ಆಡಳಿತವನ್ನು ಭುಜಂಗ ರಾಯನು, ತಗಡೂರಿನ ಆಡಳಿತವನ್ನು ಪ್ರಭುರಾಯನು, ತೆರಕಣಾಂಬಿಯ ಆಡಳಿತವನ್ನು ಹರಿಹರ ರಾಯರು ವಹಿಸಿಕೊಂಡು ಆಡಳಿತವನ್ನು ನಡೆಸುತ್ತಿದ್ದರು. ನಂತರ ಭುಜಂಗರಾಯನ ಮಗ ಕುಮಾರ ದೇವರಾಯ ಮತ್ತು ಎರಡನೇ ಮಗ ಲಿಂಗರಾಯನು ಉಮ್ಮತ್ತೂರನ್ನಾಳಿದರು.

ಕ್ರಿ.ಶ. ೧೬೧೩ರಲ್ಲಿ ಮೈಸೂರಿನ ರಾಜ ಒಡೆಯರು ಉಮ್ಮತ್ತೂರಿನ ಮೇಲೆ ದಂಡೆತ್ತಿ ಹೋಗಿ ಪಾಳೆಯಗಾರರನ್ನು ಸೋಲಿಸಿ ಮೈಸೂರು ರಾಜ್ಯಕ್ಕೆ ಸೇರಿಸಿಕೊಂಡರು. ಅಲ್ಲಿಂದ ಉಮ್ಮತ್ತೂರು ಪಾಳೆಪಟ್ಟು ಮೈಸೂರು ಸಂಸ್ಥಾನದಲ್ಲಿ ವಿಲೀನವಾಯಿತು.

## ಮೈಸೂರು ಒಡೆಯರು

ಮೈಸೂರು ಅರಸರು ಯದುವಂಶಕ್ಕೆ ಸೇರಿದವರು. ಇವರಲ್ಲಿ ಮೊದಲನೆಯವರು ಯದುರಾಯರು. ಕೊನೆಯವರು ಜಯಚಾಮರಾಜೇಂದ್ರ ಒಡೆಯರ್. ಇವರಲ್ಲಿ ೨೫ ಮಂದಿ ರಾಜರು ಮಧ್ಯ ಆಗಿ ಹೋಗಿದ್ದಾರೆ. ಇವರ ಕಾಲಾವಧಿಯನ್ನು ಕ್ರಿ.ಶ. ೧೩೯೯ ರಿಂದ ೧೯೭೪ರವರೆಗೆ ಎಂದು ಚರಿತ್ರೆಕಾರರು ಗುರುತಿಸಿದ್ದಾರೆ.

ಒಡೆಯರ ವಂಶದ ಮೂಲದ ಬಗ್ಗೆ ಒಂದು ಐತಿಹ್ಯ ಪ್ರಕಾರ ಕ್ರಿ.ಶ. ೧೩೯೯ರ ಸಮಯದಲ್ಲಿ ಉತ್ತರ ಭಾರತದ ಕಡೆಯಿಂದ ಯದುರಾಯ ಮತ್ತು ಕೃಷ್ಣರಾಯ ಎಂಬ ಸಹೋದರರು, ದಕ್ಷಿಣ ಭಾರತದ

ಕಡೆಗೆ ಬಂದು, ಇಲ್ಲಿ ಆಳ್ವಿಕೆ ನಡೆಸುತ್ತಿದ್ದ ಪಾಳೆಯಗಾರ ಮಾರನಾಯಕನನ್ನು ಕೊಂದರು. ಯದುರಾಯರು ಪಾಳೆಯಗಾರ ಚಾಮರಾಜನ ಮಗಳನ್ನು ಮದುವೆಯಾಗಿ ಮೈಸೂರಿನಲ್ಲಿ ಯದುವಂಶದ ಆದ್ಯ ಪುರುಷರಾದರು ಎನ್ನಲಾಗಿದೆ. ಈ ಸಂದರ್ಭದಲ್ಲಿ ಜಂಗಮರೊಬ್ಬರು ಸಹಾಯ ಮಾಡಿದ್ದರಿಂದ ಯದುರಾಯರು ರಾಜರಾದಾಗ ಈ ಗುರುಗಳ ಸ್ಮರಣಾರ್ಥವಾಗಿ ತಮ್ಮ ಹೆಸರಿನ ಜೊತೆ 'ಒಡೆಯರು' ಎಂಬ ಅಂಕಿತವನ್ನು ಸೇರಿಸಿ ಕೊಂಡದ್ದಾಗಿಯೂ ಅದರಿಂದಾಗಿ ಈ ವಂಶದ ಪರಂಪರೆಯಲ್ಲಿ ಈ ಅಂಕಿತ ಉಳಿದುಕೊಂಡು ಬಂದಿದೆ ಎಂದು ಪ್ರತೀತಿಯಿದೆ.

ಯದುರಾಯರಿಂದ ಬೆಟ್ಟದ ಚಾಮರಾಜ ಒಡೆಯರ್ ಸೇರಿದಂತೆ ಈ ವಂಶ ಮೊದಲ ೮ ದೊರೆಗಳ ಬಗ್ಗೆ ಹೆಚ್ಚು ವಿವರಗಳು ತಿಳಿದಿಲ್ಲ. ೧೫೭೮ ರಿಂದ ರಾಜ ಒಡೆಯರ ಆಳ್ವಿಕೆ ಆರಂಭವಾಯಿತು. ಈ ರಾಜ್ಯ ಸುಸ್ಥಾಪಿತವಾದುದು ಇವರ ಕಾಲದಲ್ಲೇ. ಇವರ ಕಾಲದಿಂದ ಒಟ್ಟು ೧೭ ದೊರೆಗಳು ರಾಜ್ಯವಾಳಿದರು. ಅವರ ಹೆಸರು ಮತ್ತು ಆಳ್ವಿಕೆ ಅವಧಿ ಇಂತಿವೆ.

ಒಂದನೇ ರಾಜ ಒಡೆಯರ್(೧೫೭೮-೧೬೧೭), ನಾಲ್ಕನೇ ಚಾಮರಾಜ ಒಡೆಯರ್(೧೬೧೭-೧೬೩೭), ರಣಧೀರ ಕಂಠೀರವ ನರಸರಾಜ ಒಡೆಯರ್ (೧೬೩೮-೧೬೫೯), ದೊಡ್ಡದೇವರಾಜ ಒಡೆಯರ್ )೧೬೫೯-೧೬೭೩), ಚಿಕ್ಕದೇವರಾಜ ಒಡೆಯರ್ (೧೬೭೩-೧೭೦೪), ದೊಡ್ಡ ಕೃಷ್ಣರಾಜ ಒಡೆಯರ್ (೧೭೧೪-೧೭೩೨), ಕೃಷ್ಣರಾಜ ಒಡೆಯರ್-೨(೧೭೩೪-೧೭೬೬), ಬೆಟ್ಟದ ಚಾಮರಾಜ ಒಡೆಯರ್ (೧೭೭೦-೧೭೭೬), ಮುಮ್ಮಡಿ ಕೃಷ್ಣರಾಜ ಒಡೆಯರ್ (೧೭೯೯-೧೮೬೮), ಚಾಮರಾಜೇಂದ್ರ ಒಡೆಯರ್(೧೮೬೮-೧೮೯೪), ನಾಲ್ವಡಿ ಕೃಷ್ಣರಾಜ ಒಡೆಯರ್ (೧೮೯೬-೧೯೪೦), ಜಯಚಾಮರಾಜೇಂದ್ರ ಒಡೆಯರ್(೧೯೪೦-೧೯೭೪).

ಉಳಿದ ರಾಜರಲ್ಲಿ ಇಮ್ಮಡಿ ರಾಜ ಒಡೆಯರ್(೧೬೩೭-೧೬೩೮), ಚಾಮರಾಜ ಒಡೆಯರ್ (೧೭೩೨-೧೭೩೪), ನಂಜರಾಜ ಒಡೆಯರ್(೧೭೬೬-೧೭೭೦) ಇಂತಹ ಕೆಲವರ ಆಳ್ವಿಕೆಯ ಕಾಲ ಕೇವಲ· ೨-೩ ವರ್ಷಗಳಷ್ಟು ಕಡಿಮೆ ಅವಧಿಯಾಗಿದ್ದವು. ಆದರೆ ಖಾಸ ಚಾಮರಾಜ ಒಡೆಯರು ಮಾತ್ರ ೨೦ ವರ್ಷಗಳಷ್ಟು ಸುದೀರ್ಘಕಾಲ ಆಳ್ವಿಕೆ ನಡೆಸಿದರು. ಇವರ ಅಧಿಕಾರ ಅವಧಿಯಲ್ಲೇ ಹೈದರ್ ಮತ್ತು ಟಿಪ್ಪು ಸುಲ್ತಾನರ ಆಳ್ವಿಕೆ ಪ್ರಬಲವಾಗಿತ್ತು.

ಮೈಸೂರು ಮತ್ತು ಶ್ರೀರಂಗಪಟ್ಟಣ ಅನುಕ್ರಮವಾಗಿ ಇವರ ರಾಜಧಾನಿಯಾಗಿದ್ದವು. ರಾಜಾಧಿರಾಜ, ರಾಜ ಪರಮೇಶ್ವರ, ಅಪ್ರತಿಮ ವೀರ,ಬಿರುದೆಂತೆಂಬರ ಗಂಡ, ಕರ್ಣಾಟಕ ಸಿಂಹಾಸನಾಧೀಶ್ವರ ಮುಂತಾದ ಬಿರುದುಗಳನ್ನು ಮೈಸೂರು ಒಡೆಯರು ಹೊಂದಿದ್ದರೆಂಬುದಕ್ಕೆ ಶಾಸನಗಳಲ್ಲಿ ಉಲ್ಲೇಖವಿದೆ. ಈ ವಂಶದ ಇತಿಹಾಸವನ್ನು ಗುರುತಿಸುವುದಕ್ಕೆ ಶಿಲಾ ಮತ್ತು ತಾಮ್ರ ಶಾಸನಗಳು, ಮೈಸೂರು ಅರಮನೆ, ಮೈಸೂರು ಸರ್ಕಾರ, ದೆಹಲಿಯ ಪತ್ರಗಾರ ಇಲಾಖೆ, ಲಂಡನ್ನಿನ ಇಂಡಿಯಾ ಹೌಸ್ ಮುಂತಾದೆಡೆ ಸಿಗುವ ರಾಜಕೀಯ

ದಾಖಲೆಗಳು ಹಾಗೂ ಮೈಸೂರು ದೊರೆಗಳ ವಂಶಾವಳಿ, ಇವರ ಪೂರ್ವಾನ್ವಯದ ವಿವರ, ಮೈಸೂರು ರಾಜರ ಚರಿತ್ರೆ, ಕಳಲೆ ಅರಸರ ವಂಶಾವಳಿ, ಸಾಹಿತ್ಯ ಕೃತಿಗಳಾದ ಕಂಠೀರವನರಸರಾಜ ವಿಜಯ, ಚಿಕ್ಕದೇವರಾಯ ವಂಶಾವಳಿ, ಚಿಕ್ಕದೇವರಾಯ ವಿಜಯ, ಅಪ್ರತಿಮ ವೀರಚರಿತ್ರೆ, ಮುಂತಾದವುಗಳು ಸಹಕಾರಿಯಾಗಿವೆ.[೪೧] ಇವರ ಲಾಂಛನ ವರಾಹ ಮತ್ತು ಗಂಡುಬೇರುಂಡಗಳಾಗಿದ್ದವು.

ಮೈಸೂರು ಒಡೆಯರ ಕಾಲದ ಸುಮಾರು ೨೫ ಶಾಸನಗಳು ಚಾಮರಾಜನಗರ ತಾಲೂಕಿನಲ್ಲಿ ಲಭ್ಯವಾಗಿದೆ. ಇವುಗಳಲ್ಲಿ ಕಂಠೀರವನರಸರಾಜ ಕಾಲದ ಹೊಂಗನೂರಿನ ಶಾಸನ ಪ್ರಾಚೀನವಾದುದು. ಇದೇ ಅರಸನ ಇನ್ನೆರಡು ಶಾಸನಗಳು ಈ ಗ್ರಾಮದಲ್ಲಿವೆ. ಮೊದಲ ಶಾಸನ ಅಲ್ಲಲ್ಲಿ ಸವೆದು ಹೋಗಿದ್ದು, ಅಗ್ರಹಾರವೊಂದರ ಸ್ಥಾಪನೆಗೆ ಸಂಬಂಧಿಸಿದುದೆಂದು ತೋರುತ್ತದೆ. ಎರಡನೆಯ ಶಾಸನವು ಕಾಶಿಯ ವಿಶ್ವೇಶ್ವರ ಮತ್ತು ಇತರ ದೇವರಿಗೆ ಗ್ರಾಮಗಳನ್ನು ದತ್ತಿಬಿಟ್ಟ ವಿಷಯವನ್ನು ತಿಳಿಸುತ್ತದೆ.

ಕ್ರಿ.ಶ. ೧೬೬೮ರ ಕೇತಹಳ್ಳಿಯ ಶಾಸನವು ದೇವರಾಜ ವೊಡೆಯನ ಕಾಲದ್ದು. ಈ ಶಾಸನವೂ ದೇವರಾಜವೊಡೆಯರಯ್ಯನಿಗೆ ಮೈಸೂರು ದೇವರಾಜ ಒಡೆಯನೆಂಬ ಮಗನಿದ್ದನೆಂದು ಈತ ೧೬೬೮ರಲ್ಲಿ ಆಳ್ವಿಕೆ ನಡೆಸುತ್ತಿದ್ದನೆಂದು ಸ್ಪಷ್ಟವಾಗಿ ಸಾರುತ್ತದೆ. ಅಲ್ಲದೆ ಈ ಶಾಸನವೂ ಅಮೃತಮ್ಮನನ್ನು ರಾಜಮಾತೆ ಎಂದು ಉಲ್ಲೇಖಿಸುತ್ತದೆ.[೪೨]

ಚಾಮರಾಜನಗರದ ಚಾಮರಾಜನಗರ೧೧ ಶಾಸನವು ಮೂರು ಹಲಗೆಗಳಿಂದ ಕೂಡಿದ ತಾಮ್ರ ಶಾಸನ. ನಾಗರಿಲಿಪಿಯಲ್ಲಿರುವ ಇದರ ಭಾಷೆ ಸಂಸ್ಕೃತ ಮತ್ತು ಕನ್ನಡ. ಕ್ರಿ.ಶ. ೧೬೭೫ರ ಈ ಶಾಸನ ಚಿಕ್ಕದೇವರಾಯನ ಕಾಲದ್ದು.

ಕ್ರಿ.ಶ. ೧೭೪೪ರ ಹರದನಹಳ್ಳಿಯ ತಾಮ್ರಶಾಸನವು ಇಮ್ಮಡಿ ಕೃಷ್ಣರಾಜನ ಆಳ್ವಿಕೆಗೆ ಸೇರಿದುದು. ಈ ಶಾಸನ ಮತ್ತು ಚಾಮರಾಜನಗರ ಶಾಸನಗಳಲ್ಲಿ ಮೈಸೂರು ರಾಜಮನೆತನದ ವಂಶಾವಳಿಯ ವಿವರಗಳಿವೆ. ಇದೇ ಹರದನಹಳ್ಳಿಯ ಶಾಸನ ಇಲ್ಲಿಂದ ಮುಂದೆ ಕಳಲೆ ವಂಶಸ್ಥರಾದ ನಂಜರಾಜ ಮತ್ತು ದೇವರಾಜ ಎಂಬ ಕೃಷ್ಣರಾಜನ ಮಂತ್ರಿಗಳ ವೃತ್ತಾಂತವನ್ನು ವಿವರವಾಗಿ ನೀಡುತ್ತದೆ.[೪೩]

ಕ್ರಿ.ಶ. ೧೭೯೯ ರಿಂದ ೧೮೬೮ರವರೆಗೆ ಎಪ್ಪತ್ತು ವರ್ಷಗಳಷ್ಟು ದೀರ್ಘಕಾಲ ರಾಜ್ಯವಾಳಿದ ಮುಮ್ಮಡಿ ಕೃಷ್ಣರಾಜವೊಡೆಯರ ಸುಮಾರು ಹನ್ನೆರಡು ಶಾಸನಗಳು ದೊರಕಿವೆ. ಇವೆಲ್ಲವೂ ಆತನ ದಾನಶೀಲತೆಯನ್ನು ಕುರಿತು ಹೇಳುತ್ತವೆ. ಈತನ ತಂದೆ ಚಾಮರಾಜನ ಜನ್ಮಸ್ಥಳವಾದ ಅರೆಕೊಠಾರಕ್ಕೆ ಆತನ ಹೆಸರಿನಲ್ಲಿ ಚಾಮರಾಜನಗರವೆಂದು ಹೆಸರಿಟ್ಟು, ಅಲ್ಲಿ ಚಾಮರಾಜೇಶ್ವರ ದೇವಾಲಯವನ್ನು ಕಟ್ಟಿಸಲಾಯಿತು ಎಂಬುದು ಚಾಮರಾಜನಗರ೫ ಶಾಸನದಿಂದ ತಿಳಿದುಬರುತ್ತದೆ. ಹಾಗೆಯೇ ಅಮಚವಾಡಿಯ ವೀರಭದ್ರದೇವಾಲಯವನ್ನು ಜೀರ್ಣೋದ್ಧಾರಗೊಳಿಸಲಾಯಿತು ಎಂಬುದು ಚಾಮರಾಜನಗರ೨೪೪ ಶಾಸನದಿಂದ ತಿಳಿದುಬರುತ್ತದೆ.

## ಉಮ್ಮತ್ತೂರು ಪಾಳೆಗಾರರು

೧೫ನೇ ಶತಮಾನದ ಅಂತ್ಯ ಹಾಗೂ ೧೬ನೇ ಶತಮಾನದ ಆದಿ ಭಾಗದಲ್ಲಿ ಮೈಸೂರು ಜಿಲ್ಲೆಯ ದಕ್ಷಿಣ ಭಾಗ ಮತ್ತು ಕೊಯಮತ್ತೂರು ಜಿಲ್ಲೆಯ ಕೆಲವು ಭಾಗಗಳನ್ನು ಆಳುತ್ತಿದ್ದ ಪಾಳೆಗಾರರನ್ನು ಉಮ್ಮತ್ತೂರಿನ ಪ್ರಭುಗಳೆಂದು ಕರೆಯುವುದುಂಟು. ಇವರು ವಿಜಯನಗರದ ಅರಸರ ಕಾಲದಲ್ಲಿ ಪಾಳೆಗಾರರಾಗಿ ಉಮ್ಮತ್ತೂರಿನಿಂದ ಆಳುತ್ತಿದ್ದರು. ಚಾಮರಾಜನಗರ ತಾಲೂಕಿನಲ್ಲಿ ನಂಜನಗೂಡು ಯಳಂದೂರು ರಸ್ತೆಯಲ್ಲಿ ಈಗ ಒಂದು ಗ್ರಾಮವಾಗಿರುವ ಉಮ್ಮತ್ತೂರು ರಾಜಧಾನಿಯಾಗಿತ್ತು. ಇವರ ವಂಶಾವಳಿಯ ಬಗ್ಗೆ ಖಚಿತವಾಗಿ ತಿಳಿದುಬರುವುದಿಲ್ಲ.

ಇವರಿಗೆ ಸಂಬಂಧಿಸಿದ ಆಕರಗಳು ಬಹು ವಿರಳವಾಗಿರುವುದರಿಂದ ರಾಜಕೀಯ ಇತಿಹಾಸ ಸ್ಪಷ್ಟವಾಗಿ ತಿಳಿಯದು. ಹನುಮಪ್ಪ ಒಡೆಯನನ್ನು ಈ ವಂಶದ ಮೂಲ ಪುರುಷನೆಂದು ಗುರುತಿಸಲಾಗಿದೆ. ಇವನ ಮಗ ಇಮ್ಮಡಿ ರಾಯ ಒಡೆಯ, ಈತನಿಗೆ ಸೋಮರಾಯ(ಸೋಮಯ್ಯ) ಎಂಬ ಪರ್ಯಾಯ ಹೆಸರು ಇದ್ದಂತಿದೆ. ಈತ ನಂಜನಗೂಡಿನ ನಂಜುಂಡೇಶ್ವರಿಗೆ ದತ್ತಿ ಬಿಟ್ಟ ವಿಚಾರ ಮುಳ್ಳೂರಿನ ಶಾಸನ ತಿಳಿಸುತ್ತದೆ. ಸೋಮರಾಯನ ಹಿರಿಯ ಮಗ ದೇವಣ್ಣ(ಬೇಪಣ್ಣ) ಒಡೆಯ, ಇವನ ಮಗ ಗೋವಣ್ಣ, ಒಡೆಯನು ತಂದೆಯ ಬಿರುದಾವಳಿಗಳನ್ನು ಧರಿಸಿದ್ದ. ದೇವಣ್ಣನ ಇನ್ನೊಬ್ಬ ಮಗ ಚಿಕ್ಕರಾಯ ಈತನನ್ನು ಮಲ್ಲರಾಜನೆಂದು ಗುರುತಿಸುವುದುಂಟು. ಇವರ ರಾಜ್ಯ ಕೊಯಮತ್ತೂರು ಜಿಲ್ಲೆಯ ಅವಿನಾಶ ತಾಲೂಕಿನ ಭಾಗಗಳನ್ನು ಒಳಗೊಂಡಿತ್ತು. ಈ ವೇಳೆಯಲ್ಲಿ ಇವನ ಚಿಕ್ಕಪ್ಪ ಅಂದರೆ ದೇವಣ್ಣ ಒಡೆಯ ತಮ್ಮ ನಂಜರಾಜ ಉಮ್ಮತ್ತೂರಿನಲ್ಲಿ ಆಳುತ್ತಿದ್ದ. ಈ ನಂಜರಾಜನಿಗೆ ಘೇಣಾಂಕ ಚಕ್ರೇಶ್ವರ, ಪೆಸಾಳಿ ಹನುಮ ಬಿರುದುಗಳಿದ್ದವು. ಇವರ ರಾಜ್ಯ ಮೈಸೂರು ಜಿಲ್ಲೆಯ ದಕ್ಷಿಣ ಭಾಗವಲ್ಲದೆ ಕೊಯಮತ್ತೂರು ಜಿಲ್ಲೆಯ ಕೆಲವು ಭಾಗಗಳಿಗೂ ಹಬ್ಬಿತ್ತು. ಈ ನಂಜರಾಯನನ್ನು ಶಾಸನವೊಂದರಲ್ಲಿ ವೀರನಂಜರಾಜನೆಂದು ಕರೆದಿದೆ. ಈ ವೀರನಂಜರಾಯನ ಮಗ ಇಮ್ಮಡಿ ಚಿಕ್ಕರಾಜ. ಈತ ಸಾಲೂರು ವೀರಶೈವ ಮಠಕ್ಕೆ ಹಾಗೂ ಉಮ್ಮತ್ತೂರಿನ ನಿರಾಸಿ ಮಠಕ್ಕೆ ಭೂಮಿ ದಾನ ಮಾಡಿದ್ದಾನೆ. ಇಮ್ಮಡಿ ಚಿಕ್ಕರಾಯನ ನಂತರ ಕೆಲವು ಕಾಲ ಈ ಪಾಳೆಗಾರರಿಗೆ ಸಂಬಂಧಿಸಿದ ಶಾಸನಗಳು ಲಭ್ಯವಿಲ್ಲ. ಮುಂದೆ ಕ್ರಿ.ಶ. ೫೩೦ ನಂಜನಗೂಡು ಬಸವಟ್ಟಿಗೆ ಒಂದು ಶಾಸನದಲ್ಲಿ ಶ್ರೀ ಮನ್ಮಹಾಮಂಡಲೇಶ್ವರ, ಕಠಾರಿ ತ್ರಿಣೇತ್ರ, ಪೇಸಾಳಿ ಹನುಮ, ಅರಸಂಕ ಸೊರೆಗಾಲಿ, ಜವಾಜಿ ಕೋಳಾಹಳ, ಗಜಬೇಂಟೆಕಾರ, ಶ್ರೀ ವೀರಮಲ್ಲರಾಜನರ ಉಲ್ಲೇಖವಿದೆ. ಈ ಬಿರುದುಗಳ ಆಧಾರದಿಂದ ಈತ ಉಮ್ಮತ್ತೂರಿನ ಪಾಳೆಗಾರರ ವಂಶದವರೆನ್ನುವುದರಲ್ಲಿ ಸಂದೇಹವಿಲ್ಲ. ಈತ ತಗಡೂರ ಸ್ಥಳದ ಕಲ್ಲುಕುಡ ಗ್ರಾಮವನ್ನೂ ನಂಜುಂಡೇಶ್ವರ ದೇವರ ಅಮೃತಪಡಿಗಾಗಿ ದಾನಕೊಟ್ಟಿದ್ದಾನೆ. ಈ ಲಭ್ಯವಿರುವ ಮಾಹಿತಿಯಂತೆ ಕ್ರಿ.ಶ. ೧೫೧೨ರ ನಂತರ ಕ್ರಿ.ಶ. ೧೫೩೦ರವರೆಗೆ ಈ ಪಾಳೆಯಾರರ ಉಲ್ಲೇಖ ಶಾಸನಗಳಲ್ಲಿ ಕಂಡುಬಂದಿಲ್ಲ. ಕ್ರಿ.ಶ. ೧೫೧೧ರ ಯಳಂದೂರು, ಶ್ರೀ ವೀರ ಘೇಣಾಂಕ ಚಕ್ರೇಶ್ವರ, ಜವಾದಿಕೊಳಾಹಳ ಬಿರುದುಗಳಿರುವ

ಶ್ರೀ ಮನ್ಮಹಾಮಂಡಳೇಶ್ವರನೊಬ್ಬನ ಆಳ್ವಿಕೆಯನ್ನು ಸೂಚಿಸಿದೆ. ಆದರೆ ದುರದೃಷ್ಟವಶಾತ್ ಇದರಲ್ಲಿ ಪಾಳೆಯಗಾರನ ಹೆಸರು ನಷ್ಟವಾಗಿದೆ. ಕ್ರಿ.ಶ. ೧೫೧೨ರಲ್ಲಿ ಚಿಕ್ಕರಾಯ ತೆರಕಣಾಂಬಿಯಿಂದ ಆಳುತ್ತಿದ್ದನೆಂದು ಕೊಳ್ಳೇಗಾಲ ತಿಳಿಸುತ್ತದೆ. ಆ ಮೇಲೆ ನಮಗೆ ದೊರೆಯುವ ಶಾಸನ ಕ್ರಿ.ಶ. ೧೫೩೦ ಮಲ್ಲರಾಜವಡೆಯನದು. ಹಾಗಾಗಿ ಕ್ರಿ.ಶ. ೧೫೧೨ರ ನಂತರ ೧೫೩೦ರವರೆಗೆ ಈ ಪಾಳೆಯಗಾರರು ಏನಾಗಿದ್ದರು, ಎಲ್ಲಿದ್ದರು ಎಂಬ ಸಂದೇಹ ಮೂಡುತ್ತದೆ. ಇಲ್ಲಿ ಒಂದು ಊಹೆಯನ್ನು ಮಾಡಬಹುದೆನಿಸುತ್ತದೆ. ವಿಜಯನಗರದ ಕೃಷ್ಣದೇವರಾಯ ತನ್ನ ಆಳ್ವಿಕೆಯ ಕಾಲದಲ್ಲಿ (ಕ್ರಿ.ಶ. ೧೫೦೯-೨೯) ಉಮ್ಮತ್ತೂರಿನ ಪಾಳೆಯಗಾರರನ್ನು ಸೋಲಿಸಿದ ವಿಷಯ ಶಾಸಗಳಲ್ಲಿದೆ. ಆದ್ದರಿಂದ ಈ ಮಧ್ಯದ ಅವಧಿಯಲ್ಲಿ ಈ ಪಾಳೆಯಗಾರರು ತಮ್ಮ ಅಧಿಕಾರವನ್ನು ಕಳೆದುಕೊಂಡಿದ್ದು ಅನಂತರ ಪುನಃ ಅಧಿಕಾರವನ್ನು ಪಡೆದಿರಬೇಕು. ಕೃಷ್ಣದೇವರಾಯ ಪಟ್ಟಕ್ಕೆ ಬಂದ ತರುಣದಲ್ಲಿಯೆ ಉಮ್ಮತ್ತೂರು ಪಾಳೆಗಾರರನ್ನು ನಿಗ್ರಹಿಸಿದ ವಿಷಯವನ್ನು ಸಾಹಿತ್ಯ ಕೃತಿಯೂ ದಾಖಲಿಸಿದೆ.[೪೪]

ಉಮ್ಮತ್ತೂರಿನ ಪಾಳೆಯಗಾರರಿಗೂ ಕಳಲೆಯ ದಳವಾಯಿಗಳಿಗೂ ಹಗೆತನವಿತ್ತು. ಉಮ್ಮತ್ತೂರಿನ ಪಾಳೆಯಗಾರರ ನಂಜರಾಜನು ಕಳಲೆಯ ಮನೆತನದ ಎಲ್ಲರನ್ನೂ ವಂಚನೆಯಿಂದ ಕಗ್ಗೊಲೆ ಮಾಡಿಸಿದ. ಆದರೆ ಕಳಲೆ ವಂಶದ ಒಬ್ಬ ಬಾಲಕ ಮಾತ್ರ ಬದುಕುಳಿದು ಬೇರೆಯ ಕಡೆ ಬೆಳೆದು ದೊಡ್ಡವನಾದ. ಆತನೇ ಪುನಃ ಸ್ಥಾಪಿಸಿದ ಕರಿಕಾಲ ಮಲ್ಲರಾಜ. ನಂತರ ಕಳಲೆ ವಂಶದ ರಾಜ ಒಡೆಯ ಕ್ರಿ.ಶ. ೧೬೧೩ರಲ್ಲಿ ಉಮ್ಮತ್ತೂರಿನ ಮೇಲೆ ದಂಡೆತ್ತಿ ಹೋಗಿ ಅಲ್ಲಿನ ಪಾಳೆಯಗಾರರನ್ನು ಸೋಲಿಸಿ ಅವರ ರಾಜ್ಯವನ್ನು ಮೈಸೂರು ರಾಜ್ಯಕ್ಕೆ ಸೇರಿಸಿಕೊಂಡ. ಅನಂತರ ಉಮ್ಮತ್ತೂರಿನ ಪಾಳೆಯಗಾರರ ವಿಷಯ ತಿಳಿದು ಬರುವುದಿಲ್ಲ. ಬಹುಶಃ ಮೈಸೂರು ಅರಸರ ಅಧಿಕಾರಿಗಳಾಗಿ ಕೆಲವು ಕಾಲ ಮುಂದುವರಿದಿರಬಹುದು. ಶಾಸನಾಧಾರಗಳಿಂದ ದೊರೆಯುವ ಉಮ್ಮತ್ತೂರು ಪಾಳೆಯಗಾರರ ವಂಶಾವಳಿಯನ್ನು ಸ್ಥೂಲವಾಗಿ ಹೀಗೆ ಗುರುತಿಸಬಹುದು.

ವೀರ ಹನುಮಪ್ಪವೊಡೆಯ

ಇಮ್ಮಡಿರಾಯವೊಡೆಯ

ಸೋಮರಾಯ

ದೇವಣ್ಣ (ವೀರ)ನಂಜರಾಯ

ಚಿಕ್ಕರಾಯ ನಂಜರಾಯ ಗೋವಣ್ಣ ಚೆನ್ನನಂಜರಾಜ ಇಮ್ಮಡಿ ಚಿಕ್ಕರಾಯ

ಚಿಕ್ಕರಾಯನ ಸುಮಾರು ೧೮ ವರ್ಷಗಳ ನಂತರ ಮಲ್ಲರಾಜನ ಉಲ್ಲೇಖ ದೊರೆಯುತ್ತದೆ. ಈ ಮೇಲೆ ಸೂಚಿಸಿದ ವಂಶಾವಳಿಗೂ ಮಧುರೈ ಕಾಮರಾಜ ವಿಶ್ವವಿದ್ಯಾಲಯದ ಪ್ರಾಧ್ಯಾಪಕರಾದ ಡಾ.ಎಂ.ಆರೋಗ್ಯಸ್ವಾಮಿಯವರು ಕೊಡುವ ವಂಶಾವಳಿಗೂ ವ್ಯತ್ಯಾಸವಿದೆ ಎಂಬುದನ್ನು ಗಮನಿಸಬಹುದು.

ಸೋಮರಾಯ

ದೇವಣ್ಣ

ವೀರನಂಜರಾಯ (೧೪೮೨-೯೯)

ಇಮ್ಮಡಿ ದೇಪಣ್ಣ ಚಿಕ್ಕರಾಯ(೧೫೦೪-೧೨)

ವೀರನಂಜರಾಯ

ಸಾಹಿತ್ಯ ಕೃತಿಯಲ್ಲಿ ಉಮ್ಮತ್ತೂರಿನ ಗಂಗರಾಜನೆಂಬ ಪಾಳೆಯಗಾರನ ಉಲ್ಲೇಖ ಬರುತ್ತದೆ. ಆದರೆ ಆ ಹೆಸರಿನ ವ್ಯಕ್ತಿಯ ಶಾಸನಗಳಾವುವೂ ಸದ್ಯಕ್ಕೆ ದೊರಕಿಲ್ಲ.

ಸಾಹಿತ್ಯ ಕೃತಿಗಳಲ್ಲಿ ಉಮ್ಮತ್ತೂರಿನ ನಂಜರಾಜನಿಗೆ ಸಂಬಂಧಿಸಿದ ಕೆಲವು ಮಾಹಿತಿಗಳು ದೊರೆಯುತ್ತವೆ. ಮರುಳಸಿದ್ಧನ ಗುರುಲಿಂಗ ಜಂಗಮ ಚಾರಿತ್ರ್ಯದ ಪ್ರಕಾರ ಉಮ್ಮತ್ತೂರಿನ ಪ್ರಭುಗಳು ಸೌರಾಷ್ಟ್ರಪುರದಿಂದ ಬಂದವರು. ಸೌರಾಷ್ಟ್ರದ ಚಾಮರಾಜನ ಮಗನಿಗೆ ಈಶ್ವರನ ಸೂಚನೆಯಂತೆ ಶಿತಿಕಂಠನ ಭಕ್ತ ನಂಜರಾಯ" ಎಂದು ನಾಮಕರಣ ಮಾಡಿದರು. ಭುಜಂಗೇಶ್ವರನು ಅವನ ಕನಸಿನಲ್ಲಿ ಬಂದು ಕನಕಪುರ (ಉಮ್ಮತ್ತೂರಿನ)ದಲ್ಲಿ ನೆಲಸಿರುವ ನನ್ನ ಸೇವೆಯನ್ನು ಮಾಡು ಎಂದನಂತೆ. ಭುಜಂಗೇಶ್ವರನ ಆದೇಶದಂತೆ ದೇವಣ್ಣೊಡೆಯ ನಂಜರಾಯ ಹಾಗೂ ಸೋಮರಾರು ಸೌರಾಷ್ಟ್ರಪುರದಿಂದ ಹೊರಟು ಸುತ್ತೂರಿಗೆ ಬಂದರು. ಅಲ್ಲಿ ಸೋಮೇಶ್ವರನನ್ನು ಅರ್ಚಿಸಿ, ಉಮ್ಮತ್ತೂರು ರಾಜಧಾನಿಯನ್ನು ನಿರ್ಮಿಸಿದರು. ಆ ನಂತರ ಅಲ್ಲಿಂದ ಆಳತೊಡಗಿದರು ಎನ್ನಲಾಗಿದೆ."[೪೫]

ನಂಜನಗೂಡಿನ ನಂಜುಂಡೇಶ್ವರನಿಗೆ ಗುಡಿ ಮಂಟಪ ಉಪ್ಪರಿಗೆ ಪ್ರಾಕಾರಗಳನ್ನು ನಿರ್ಮಿಸಿದ. ಉಮ್ಮತ್ತೂರಿನಲ್ಲಿ ರಂಗನಾಥದೇವಾಲಯ, ಭುಜಂಗೇಶ್ವರ ದೇವಾಲಯಗಳನ್ನು ಕಟ್ಟಿಸಿದ್ದಾನೆ. ನಂಜನಗೂಡಿನ ಶ್ರೀ ಕಂಠೇಶ್ವರನ ನೈವೇದ್ಯ ಅಲಂಕಾರಗಳಿಗಾಗಿ ಗ್ರಾಮದಾನ ನೀಡಿದ ವಿಷಯ ಶಾಸನದಲ್ಲಿದೆ. ಡಾ. ಕೃಷ್ಣವೇಣಿಯವರು ಉಮ್ಮತ್ತೂರು ಮತ್ತು ಅಲ್ಲಿನ ಪಾಳೆಗಾರರ ಬಗ್ಗೆ ಕೆಲವು ವಿಷಯಗಳನ್ನು ತಿಳಿಸಿದ್ದಾರೆ.

**ಪದಿನಾಲ್ಕುನಾಡರಸರು**

ಸುಮಾರು ೧೩ ಮತ್ತು ೧೪ನೇ ಶತಮಾನದ ಕಾಲಾವಧಿಯಲ್ಲಿ ಅಂದರೆ ಹೊಯ್ಸಳರ ಕಾಲದಲ್ಲಿ 'ನಾಡರಸ' ರಾಗಿ ಆಳ್ವಿಕೆ ನಡೆಸಿದವರು ಪದಿನಾಲ್ಕುನಾಡರಸರು. ಇವರ ಆಳ್ವಿಕೆಯ ವಿಚಾರವನ್ನು ಬೆಟ್ಟದ ಕೋಟೆ ಕೈಫೀಯತ್ತು ಮತ್ತಿತರ ಆಧಾರಗಳಿಂದ ಊಹಿಸಬಹುದು. ಅವುಗಳೆಂದರೆ ಕುಡುಗುನಾಡು, ಕಾರೆನಾಡು, ಹೊಕುನಾಡು, ಅರಿಣೆನಾಡು, ಹಿರಿಯನಾಡು, ಎಡತಲೆನಾಡು, ಕುಮಾರನ ನಾಡು, (ತೊರೆನಾಡು) ಹುಲ್ಲನಹಳ್ಳಿಯ ನಾಡು, ಹುರನಾಡು, ಎಡೆಯಾಲನಾಡು, ಕಣಲನಾಡು, ನುಗುನಾಡು, ನವಿಲೆನಾಡು ಮತ್ತು ಬಯಲ್ನಾಡು - ಈ ಹದಿನಾಲ್ಕು ನಾಡುಗಳನ್ನು ಒಳಗೊಂಡು ಮೈಸೂರು ಸೀಮೆಯ ಆಗ್ನೇಯ, ದಕ್ಷಿಣ

ಮತ್ತು ನೈರುತ್ಯ ಭಾಗಗಳಲ್ಲಿ ಹರಡಿಕೊಂಡು 'ಪದಿನಾಲ್ಕುನಾಡು' - ಎಂದು ಹೆಸರಾದ ಈ ನಾಡಿನ ಉಲ್ಲೇಖ ಕ್ರಿ.ಶ. ೧೨೧೦ರ ನಂತರ ವಿಶೇಷವಾಗಿ ಕಾಣ ದೊರೆಯುತ್ತದೆ.

ಈ ಹದಿನಾಲ್ಕು ನಾಡುಗಳಲ್ಲಿ ಪ್ರತಿಯೊಂದು ನಾಡೂ ಪ್ರತ್ಯೇಕ ಆಡಳಿತ ಕೇಂದ್ರವಾಗಿದ್ದು, ಆಯಾ ನಾಡುಗಳಿಗೇ ಪ್ರಭುಗಳು ಇರುತ್ತಿದ್ದರು, ಆದರೆ ಒಟ್ಟಾರೆ ರಾಜ್ಯನಿರ್ವಹಣೆಗೆ, ಶಾಸನಗಳಿಗೆ ಧರ್ಮಕಾರ್ಯಗಳಿಗೆ ಈ ಹದಿನಾಲ್ಕು ನಾಡುಗಳ ಸಮಸ್ತ ಪ್ರಭುಗಾವುಂಡರು ಒಪ್ಪಬೇಕಾಗಿತ್ತು. ಬಿ.ಎಲ್.ರೈಸ್ ಅವರು Mysore and Coorg Inscriptions ನಲ್ಲಿ ಪದಿನಾಲ್ಕು ನಾಡಿನ ಅರಸರ ಬಗ್ಗೆ ಚರ್ಚಿಸುತ್ತಾ 'ಹೊಯ್ಸಳ ಬಲ ತನ್ನ ಅವನತಿಯ ಅಂಚನ್ನು ಮುಟ್ಟುತ್ತಿದ್ದಾಗ, ಮೂರನೇ ಬಲ್ಲಾಳನ ಆಳ್ವಿಕೆಯಲ್ಲಿದ್ದ ಗಣ್ಯಮಂತ್ರಿ ಮಾಲಂಗಿಯಲ್ಲಿ ಬಾಲಶಾಲೆ ಸ್ಥಾಪಿಸಿದ ಪೆರುಮಾಳೆ ದಣ್ಣಾಯಕ, ಅವನ ಮಗ ಪದಿನಾಲ್ಕು ನಾಡನ್ನು ಆಳುತ್ತಿದ್ದ ಮಾಧವ ದಣ್ಣಾಯಕ ಎಂದು ವಿವರಿಸುತ್ತಾರೆ.[೪೬]

ಕರ್ನಾಟಕ 'ಇತಿಹಾಸ ದರ್ಶನ'ದಲ್ಲಿ ಇಮ್ಮಡಿ ಬಲ್ಲಾಳನ ಮಂತ್ರಿ ಪೆರುಮಾಳ ದಣ್ಣಾಯಕನು ಈ 'ಪದಿನಾಲ್ಕು ನಾಡು' ಎಂಬ ಪುಟ್ಟರಾಜ್ಯದ ಮೂಲ ಪುರುಷ ಎಂದು ಉಕ್ತವಾಗಿದೆ. 'ಕರ್ನಾಟಕ ಪರಂಪರೆಯೂ' ಈ ರಾಜ್ಯವನ್ನು ಮುಮ್ಮಡಿ ಬಲ್ಲಾಳನ ಮಂತ್ರಿಯಾಗಿದ್ದ ಪೆರುಮಾಳೆ ದಣ್ಣಾಯಕನು ಸ್ಥಾಪಿಸಿದನು ಎಂದು ಹೇಳುತ್ತದೆ. ಮೈಸೂರು ಜಿಲ್ಲಾ ಗೆಜೆಟೀಯರ್‌ನಲ್ಲಿ ಹೊಯ್ಸಳ ಸಾಮ್ರಾಜ್ಯದ ವಿವರದೊಂದಿಗೆ ಪದಿನಾಲ್ಕು ನಾಡಿಗೆ ಸಂಬಂಧಿಸಿದ ಹಲವು ವಿಷಯಗಳು ಲಭ್ಯವಾಗುತ್ತವಾದರೂ ಇಲ್ಲಿ 'ಪದಿನಾಲ್ಕು ನಾಡು' ಎಂಬ ಸ್ವಯಂ ರಾಜ್ಯದ ಬಗೆಗೆ ಉಲ್ಲೇಖವಿಲ್ಲ.

ಚಾಮರಾಜನಗರ ತಾಲೂಕಿನಲ್ಲಿ ಪದಿನಾಲ್ಕು ನಾಡರಸರ ಸುಮಾರು ೧೦ ಶಾಸನಗಳು ದೊರಕಿವೆ. ಅವುಗಳಲ್ಲಿ ತಾಲೂಕಿನ ಎಡೂರು ಗ್ರಾಮದ ಚಾಮರಾಜನಗರ ಶಾಸನದಿಂದ, ಪದಿನಾಟ್ ನಾಟ್ಟು ಸಮಸ್ತ ಪ್ರಭುಗೌಡಗಳು ಮೂಗೂರು ಪ್ರದೇಶದ ನಾಯ್ಕ ದೇವರಿಗೆ ದತ್ತಿ ಬಿಟ್ಟಿರುವ ವಿಚಾರ ತಿಳಿದುಬರುತ್ತದೆ. ಕ್ರಿ.ಶ. ೧೨೯೪ರ ಹೊಮ್ಮದ ಚಾಮರಾಜನಗರ ಶಾಸನವು ಹದಿನಾಲ್ಕುನಾಡ ಸಮಸ್ತ ಪ್ರಭುಗೌಡಗಳು ನೀಡಿದ ದತ್ತಿಯನ್ನು ವಿವರಿಸುತ್ತದೆ.

ಕೊತ್ತಲವಾಡಿಯ ಶಾಸನವು ಪೆರುಮಾಳೆ ದಂಡನಾಯ್ಕನ ತಂದೆ ಭೀಮೆಯ ದಣ್ಣಾಯ್ಕನ ಬಗ್ಗೆ ತಿಳಿಸುತ್ತದೆ ಹಾಗೂ ಆತನ ಮಗ ಪೆರುಮಾಳೆ ದಂಡನಾಥನ ಸುಪುತ್ರರಾದ ಮಾಧವ ದಣ್ಣಾಯ್ಕ ಮತ್ತು ಕೇತೆಯ ದಣ್ಣಾಯ್ಕ ಎಂದು ಸ್ಪಷ್ಟವಾಗಿ ಹೇಳಿ ಇವರು ತೆರಕಣಾಂಬಿಯಲ್ಲಿ ವರದರಾಜನನ್ನು ಪ್ರತಿಷ್ಠಾಪನೆ ಮಾಡಿದ ವಿವರವನ್ನು ಉಲ್ಲೇಖಿಸುತ್ತದೆ.

ಹರದನಹಳ್ಳಿ ಅಥವಾ ಮರ್ಗ್ಗೆಯೇ ಮಾಧವದಣ್ಣಾಯ್ಕನ ಜನ್ಮಸ್ಥಳ ಎಂಬುದನ್ನು ಕ್ರಿ.ಶ. ೧೩೪೦ರ ಹರದನಹಳ್ಳಿಯ ನಾಲ್ಕು ಶಾಸನಗಳು ಸ್ಪಷ್ಟವಾಗಿ ತಿಳಿಸುತ್ತವೆ. ಕ್ರಿ.ಶ. ೧೩೩೯ರ ಜ್ಯೋತಿಗೌಡನಪುರದ

ಶಾಸನವು ಕೇರೆಯದಣ್ಣಾಯ್ಯನ ಮನೆಯ ಪರಮ ವಿಶ್ವಾಸಿ ಮಂತ್ರಿ ಬ್ರಹ್ಮಣ್ಣ ನಿರ್ಮಿಸಿದ ಆಲಯದ ಬಗೆಗೆ ಹೇಳುತ್ತದೆ. ನರಸಮಂಗಲದ ಶಾಸನವು ಬಿಲ್ಲಚೊಕ್ಕಯ ದಣ್ಣಾಯ್ಯನ ಬಗೆಗೆ ವಿವರಿಸುತ್ತದೆ. ಈತ ಪದಿನಾಲ್ಕು ನಾಡರಸರ ದಾಯಾದಿಯಿರಬಹುದು.

ಕಿಲಗೆರೆಯ ಶಾಸನವು ಅಲ್ಲಪ್ಪ ದಣ್ಣಾಯ್ಯರ ಅರಸಿ ಚಾಮವ್ವೆ ದಣ್ಣಾಯ್ಕತಿಯು ತೆರಕಣಾಂಬಿಯಲ್ಲಿ ನಿರ್ಮಿಸಿದ ಗೋಪಿನಾಥ ದೇವರಿಗೆ ಬಲ್ಲಾಳ ದೇವರನ್ನು ತನಗೆ 'ಸಕಾರುಣ್ಯದಿಂದ ಕರುಣಿಸಿದ್ದ' ಕೆಲ್ಲಿಗೇರಿಯನ್ನು ನೀಡಿರುವ ಬಗ್ಗೆ ಉಲ್ಲೇಖಿಸುತ್ತದೆ. ಇದರ ಕಾಲ ಕ್ರಿ.ಶ. ೧೩೧೮. ಚಾಮವ್ವೆ ಅಲ್ಲಪ್ಪದಣ್ಣಾಯಕನ ಪತ್ನಿ. ತನ್ನ ಪತಿಯು ಸತ್ತ ನಂತರ ಆಕೆ ಸೇನೆಯ ದಂಡನಾಯಕಿಯಾದುದಾಗಿ ಮಾಧವ ದಣ್ಣಾಯ್ಯನ ಶಾಸನವೊಂದರಲ್ಲಿ ತಿಳಿದುಬರುತ್ತದೆ.[೬]

ಪಾಂಡವಪುರ, ಹೆಗ್ಗಡದೇವನಕೋಟೆ, ನಂಜನಗೂಡು, ಚಾಮರಾಜನಗರ, ಕೊಳ್ಳೇಗಾಲ, ಮೈಸೂರು ಶಾಸನಗಳು ಕೂಡ ಪದಿನಾಲ್ಕು ನಾಡರಸರ ಆಡಳಿತದ ಬಗ್ಗೆ ಬೆಳಕು ಚೆಲ್ಲುತ್ತದೆ.

**ಅಡಿಟಿಪ್ಪಣಿಗಳು**

೧. ಗೋಪಾಲರಾವ್, ಎಸ್.ಎಸ್., ಇತಿಹಾಸ ಅಧ್ಯಯನ, ಅಂದು-ಇಂದು, ನವಕರ್ನಾಟಕ ಪ್ರಕಾಶನ, ಬೆಂಗಳೂರು, ೧೯೮೭, ಪು.೧೬

೨. ರಾಮಕೃಷ್ಣ ಆರ್., ಚಾಮರಾಜನಗರ ತಾಲೂಕು ದರ್ಶನ, ಐ.ಬಿ.ಎಸ್. ಪ್ರಕಾಶನ, ಬೆಂಗಳೂರು, ೧೯೮೭, ಪು.೪

೩. ಮಲ್ಲಪ್ಪ ಪಿ., ಚಾಮರಾಜನಗರ ಜಿಲ್ಲೆಯ ಭೌಗೋಳಿಕ ಪರಿಸರ, ದರ್ಶನ ಪ್ರಕಾಶನ, ಚಾಮರಾಜನಗರ, ೨೦೦೦, ಪು.೬-೧೦

೪. ಮಠ ಎಸ್.ಎನ್., ಜಿಲ್ಲೆಯ ಅಂಕಿ-ಅಂಶಗಳ ನೋಟ ೨೦೦೯-೧೦, ಜಿಲ್ಲಾ ಪಂಚಾಯತ್ ಚಾಮರಾಜನಗರ, ಪು.೧೪

೫. ಮಲ್ಲಪ್ಪ ಪಿ., ಕರ್ನಾಟಕ ಭೂಗೋಳಶಾಸ್ತ್ರ, ಚೇತನ ಬುಕ್‌ಹೌಸ್, ಮೈಸೂರು, ೨೦೧೧, ಪು.೧೨-೧೪

೬. ಅದೇ, ಪು.೧೬-೧೮

೭. ಅದೇ, ಪು.೧೯

೮. ಮಲೆಯೂರು ಗುರುಸ್ವಾಮಿ(ಸಂ), ಹೊನ್ನುಹೊಳೆ, ಕನ್ನಡ ಜಿಲ್ಲಾ ಸಾಹಿತ್ಯ ಸಮ್ಮೇಳನ, ಚಾಮರಾಜ ನಗರ, ೨೦೦೭, ಪು.೮-೬

೯. ರಾಮಕೃಷ್ಣ ಆರ್., ಪೂರ್ವೋಕ್ತ, ೧೯೮೭, ಪು.೮

೧೦. ಮಲೆಯೂರು ಗುರುಸ್ವಾಮಿ(ಸಂ), ಬಯಲು, ಜೆ.ಎಸ್.ಎಸ್.೧೦೩೭ನೇ ಜಯಂತಿ ಮಹೋತ್ಸವ ಸಂಚಿಕೆ, ೧೯೯೫, ಪು.೧೩೯

೧೧. ದಿನಾಂಕ ೨೫.೦೯.೨೦೧೧ರಂದು ಅಮಚವಾಡಿ ಸಿದ್ದರಾಜು ಅರಸರು ಒದಗಿಸಿಕೊಟ್ಟ ದಾಖಲೆ

೧೨. ಮಲ್ಲಪ್ಪ ಪಿ., ಕರ್ನಾಟಕ ಭೂಗೋಳಶಾಸ್ತ್ರ, ಚೇತನ ಬುಕ್‌ಹೌಸ್, ಮೈಸೂರು, ೨೦೧೧, ಪು.೧೪-೨೨

೧೩. ಸಂಪತ್ತಕುಮಾರ್(ಸಂ), ಪ್ರಾಣಿ ಜಗತ್ತು, ಚಾಮರಾಜನಗರ, ಸಂಚಿಕೆ ೪, ಅಕ್ಟೋಬರ್ ಡಿಸೆಂಬರ್ ೨೦೧೦

೧೪. ಮಲ್ಲಪ್ಪ ಪಿ., ಕರ್ನಾಟಕ ಭೂಗೋಳಶಾಸ್ತ್ರ, ಚೇತನ ಬುಕ್‌ಹೌಸ್, ಮೈಸೂರು, ೨೦೧೧, ಪು.೧೮-೨೧

೧೫. ಕನ್ನಡ ವಿಷಯ ವಿಶ್ವಕೋಶ, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ಪು.೧೫-೨೪

೧೬. ಕರೋವ್ವಿನ ಎಫ್., ಪುರಾತನ ಜಗತ್ತಿನ ಇತಿಹಾಸ, ನವಕರ್ನಾಟಕ ಪ್ರಕಾಶನ, ೧೯೯೦, ಪು.೧೩-೧೮

೧೭. ಜಾನ ಬರ್ಕೆಟ್, ಪೆಬೆಲ್ ಟೂಲ್ ಟೆಕ್ನಿಕ್ಸ್, ವಿಲ್ಲಾ ಎಸ್ಸನ್ ಲಿಮಿಟೆಡ್, ೧೯೯೦, ಪು.೧೮-೨೨

೧೮. ಶಿವತಾರಕ ಕೆ.ಬಿ., ಕರ್ನಾಟಕ ಪುರಾತತ್ವ ನೆಲೆಗಳು, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧, ಪು.೨೪೪

೧೯. ಅದೇ, ಪು.೨೩೦-೨೩೭

೨೦. ಅದೇ, ಪು.೨೪೪-೨೪೫

೨೧. ಸುಂದರ ಅ., ಕರ್ನಾಟಕ ಬೃಹತ್ ಶಿಲಾ ಸಂಸ್ಕೃತಿ ಅಧ್ಯಯನ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೩, ಪು.೧೧೩-೧೧೬

೨೨. ಗುರುರಾಜರಾವ್ ಬಿ.ಕೆ., ಮೆಗಾಲಿಥಿಕ್ ಕಲ್ಚರ್ ಇನ್ ಸೌತ್ ಇಂಡಿಯಾ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ಪು.೩೩-೩೬

೨೩. ಶಿವತಾರಕ ಕೆ.ಬಿ.(ಸಂ), ಕರ್ನಾಟಕ ಪುರಾತತ್ವ ನೆಲೆಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು.೨೪೦

೨೪. ಶೇಷಾದ್ರಿ ಎಂ.(ಸಂ), ಟಿ.ನರಸೀಪುರ ಉತ್ಖನನದ ವರದಿ, ಪ್ರಾಚ್ಯ ಮತ್ತು ಪುರಾತತ್ವ ಇಲಾಖೆ,

ಮೈಸೂರು, ಪು.೭೩-೭೫

೨೫. ಬಿಳಿಗಿರಿ ವಾರಪತ್ರಿಕೆ ೨೦೦೧-೦೨, ವಿವೇಕಾನಂದ ಗಿರಿಜನ ಕಲ್ಯಾಣ ಕೇಂದ್ರ, ಬಿಳಗಿರಂಗನಬೆಟ್ಟ

೨೬. ಎ.ಕ.೫ ಮೈಸೂರು, ಪಿರಿಯಪಟ್ಟಣ ೪೯, ಮೈಸೂರು ವಿಶ್ವವಿದ್ಯಾಲಯ, ಮೈಸೂರು, ಪು.೮೨

೨೭. ಎ.ಕ.೪ ಯಳಂದೂರು ೧೬೭ ಮಾಂಬಳ್ಳಿ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ಪು.೨೩೨

೨೮. ಎ.ಕ.೪ ಚಾಮರಾಜನಗರ ೩೪೭, ಕುಲಗಾಣ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ಪು.೩೫೦

೨೯. ಎ.ಕ.೪ ಎ.ಕ.೪, ಚಾಮರಾಜನಗರ ೨೬೬ ಬಸವಟ್ಟಿ ೧೪೭ ಹೊಮ್ಮ ೧೬೫ ಹೊಂಗನೂರು, ೧೩೮ ಮಂಗಲ ಶಾಸನಗಳು, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ಪು.೩೮೦-೩೯೮

೩೦. ಮಲೆಯೂರು ಗುರುಸ್ವಾಮಿ(ಸಂ), ಹೊನ್ನುಹೊಳೆ ಚಾಮರಾಜನಗರ ಜಿಲ್ಲಾ ಪ್ರಥಮ ಕನ್ನಡ ಸಾಹಿತ್ಯ ಸಮ್ಮೇಳನ, ಸ್ಮರಣ ಸಂಪುಟ, ಪು.೧೮

೩೧. ಅಶ್ವತ್ಥನಾರಾಯಣ(ಸಂ), ಅರಳಿದ ಅರಿಕುಠಾರ, ಶೇಷಾದ್ರಿ ಪ್ರಕಾಶನ, ಚಾಮರಾಜನಗರ, ಪು.೨೩

೩೨. ಎ.ಕ.೪ ಚಾಮರಾಜನಗರ ೧೩೨, ೧೩೫, ೧೪೬, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ಪು.೨೪೦-೨೪೩

೩೩. ಎ.ಕ.೪ ಚಾಮರಾಜನಗರ ೧೩೬, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ಪು.೨೪೬

೩೪. ತಿಪ್ಪೇರುದ್ರಸ್ವಾಮಿ ಹೆಚ್.(ಸಂ), ಕರ್ನಾಟಕ ಸಂಸ್ಕೃತಿ ಸಮೀಕ್ಷೆ, ಐ.ಹೆಚ್.ಬಿ. ಪ್ರಕಾಶನ, ೨೦೦೦, ಪು.೧೨೭

೩೫. ಎ.ಕ.೪ ಚಾಮರಾಜನಗರ ೨೬೩, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ಪು.೧೬೨

೩೬. ಎ.ಕ.೪ ಚಾಮರಾಜನಗರ ೨೭೫ ರಿಂದ ೨೭೮, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ಪು.೧೭೦ ರಿಂದ ೧೭೨

೩೭. ಎ.ಕ.೪ ಚಾಮರಾಜನಗರ ೨೧೬, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ಪು.೧೩೧

೩೮. ಎ.ಕ.೪ ಚಾಮರಾಜನಗರ ೩೮೭, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ಪು.೨೫೫

೩೯. ಮಲೆಯೂರು ಗುರುಸ್ವಾಮಿ(ಸಂ), ಬಯಲು ಆದಿ ಜಗದ್ಗುರು ಶ್ರೀ ಶಿವರಾತ್ರೀಶ್ವರ ಭಗವತ್ಪಾದರ ೧೦೩೬ನೇ ಜಯಂತಿ ಮಹೋತ್ಸವ, ಸಂಚಿಕೆ, ಪು.೭೧

೪೦. ಎ.ಕ.೪ ಕೊಳ್ಳೇಗಾಲ ೯೨, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ಪು.೪೫೫

೪೧. ಎ.ಕ.೪ ಚಾಮರಾಜನಗರ ೨೨೪, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ಪು.೧೩೭

೪೨. ಕನ್ನಡ ವಿಷಯ ವಿಶ್ವಕೋಶ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ಪು.೧೯೭

೪೩. ಎ.ಕ.೪ ಚಾಮರಾಜನಗರ ೩೭೯, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ಪು.೨೫೦

೪೪. ಎ.ಕ.೪ ಚಾಮರಾಜನಗರ ೧೧, ೨೯೧, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ಪು.೧೩, ೧೭೬

೪೫. ಎ.ಕ.೪ ಚಾಮರಾಜನಗರ ೧೧, ೧೯೭೧, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ಪು.೧೨೨

೪೬. ಎ.ಕ.೪ ಚಾಮರಾಜನಗರ ೩೦೯, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ಪು.೨೦೨

೪೭. ಮಲೆಯೂರು ಗುರುಸ್ವಾಮಿ(ಸಂ), ಬಯಲು ಆದಿ ಜಗದ್ಗುರು ಶ್ರೀ ಶಿವರಾತ್ರೀಶ್ವರ ಭಗವತ್ಪಾದರ ೧೦೩೬ನೇ ಜಯಂತಿ ಮಹೋತ್ಸವ, ಸಂಚಿಕೆ, ಪು.೧೧೩

ಮಾನವನ ಅಲೆಮಾರಿ ಜೀವನವನ್ನು ಕೈ ಬಿಟ್ಟು ಪ್ರಕೃತಿಯನ್ನು ಪಳಗಿಸಿ ತನ್ನ ಜೀವನಕ್ಕೆ ಒಗ್ಗಿಸಿಕೊಳ್ಳುವುದು ಸಾಧ್ಯ ಎಂಬುದನ್ನು ಯಾವಾಗ ಮನಗಂಡನೋ ಆಗ ಊರು ಹಳ್ಳಿಗಳ ಉಗಮವಾಯಿತು ಎನ್ನಬಹುದು. ತಾನೂ ನೆಲೆಗೊಂಡ ಸ್ಥಳದ ಜೊತೆಗೆ ತನ್ನನ್ನು ತೊಡಗಿಸಿಕೊಂಡ ಸಂಕೇತವಾಗಿ ಆ ಸ್ಥಳಕ್ಕೆ ಆತ ಹೆಸರಿತ್ತ. ಆ ಸ್ಥಳ ಅವನ ಜೀವನದಲ್ಲಿ ಹಾದು ಹೋದ ಕುರುಹು ಆಗಿ ಒಂದು ಹೆಸರು ತಳೆಯಿತು. ಕ್ರಮೇಣ ಅಲ್ಲಿ ಜನವಸತಿ ಇರಲಿ ಇಲ್ಲದಿರಲಿ ಒಂದು ಜನಾಂಗ ಸ್ಮೃತಿಯ ಕುರುಹಾಗಿ ಆ ಗುರುತು ಶಾಶ್ವತವಾಗಿ ಬಳಕೆಯಾಗುತ್ತಿತ್ತು. ಹಾಗೆಯೇ ಹಲವು ಜನಾಂಗಗಳ ಸ್ಮೃತಿ ಮತ್ತು ಅಭಿಮಾನಗಳನ್ನು ಶಾಶ್ವತವಾಗಿ ಬೆಸೆಯುವ ಸಂಸ್ಕೃತಿಯ ಒಂದು ಕೊಂಡಿ ಎನಿಸಿತ್ತು. ಈ ಕೊಂಡಿಯೇ ಸ್ಥಳನಾಮ.[೧]

ಒಂದು ಪ್ರದೇಶದ ಸಾಂಸ್ಕೃತಿಕ ಇತಿಹಾಸದ ಅಧ್ಯಯನದಲ್ಲಿ ಅವಶ್ಯಕವಾಗಿ ಗಮನಿಸಬೇಕಾದ ಅಂಶಗಳಲ್ಲಿ ಸ್ಥಳನಾಮವೂ ಒಂದು. ಬದಲಾದ ಭೌಗೋಳಿಕ ಸ್ವರೂಪದ ಚರಿತ್ರೆಗೆ ಇದು ಸುಳುಹನ್ನೂ ಕೊಡಬಲ್ಲದು. ಅಲ್ಲದೆ ಐತಿಹಾಸಿಕ ಘಟನೆಗೆ ಪುಷ್ಟಿಯನ್ನು ನೀಡಬಲ್ಲದು.[೨] ಹೀಗೆ ಒಂದು ಪ್ರದೇಶದ ಇತಿಹಾಸ ರಚನೆಯಲ್ಲಿ ಅಲ್ಲಿನ ಸ್ಥಳನಾಮವು ಅತ್ಯಂತ ಮಹತ್ವವಾಗಿದ್ದು, ಆ ಪ್ರದೇಶದ ಐತಿಹಾಸಿಕ ಹಿನ್ನೆಲೆಯನ್ನು ಕುರಿತು ಹೇಳುತ್ತದೆ.

ಪ್ರಪಂಚದಾದ್ಯಂತ ಸ್ಥಳನಾಮಗಳ ಬದಲಾವಣೆ ಅಥವಾ ಪುನರ್ನಾಮಕರಣದ ಪ್ರಕ್ರಿಯೆ ಒಂದಲ್ಲ ಒಂದು ಕಾರಣದಿಂದ ನಡೆದುಕೊಂಡು ಬಂದಿದೆ ಎಂಬ ವಿಚಾರವನ್ನು ಇತಿಹಾಸದಿಂದ ತಿಳಿಯಬಹುದು. ಒಂದು ಸ್ಥಳಕ್ಕೆ ಒಂದು ಹೆಸರಿಡಬೇಕಾದರೆ, ಆ ಹೆಸರು ಅಲ್ಲಿಯ ಭೌಗೋಳಿಕ ಮತ್ತು ಸಾಂಸ್ಕೃತಿಕಾಂಶಗಳ ಒಡಲಿನಿಂದ ಮೂಡಿಬಂದಿರುತ್ತದೆ. ಇಂಥ ಸ್ಥಳನಾಮಗಳು ಸ್ಥಳೀಯ ಸಾಂಸ್ಕೃತಿಕ ಪಳೆಯುಳಿಕೆಗಳು ಆಯಾ ಭಾಷೆಯ ವಿಶಿಷ್ಟ ಪಾರಂಪರಿಕ ಲಕ್ಷಣಗಳೂ. ಹೀಗೆ ಒಂದೊಂದು ಹೆಸರಿನ ವೈಶಿಷ್ಟ್ಯ ಅದರ ರೂಪ. ಅರ್ಥವಂತಿಕೆ ಮತ್ತು ವಿಸ್ತರಗಳೆಲ್ಲವೂ ಆ ಊರಿನ ಕುರುಹುಗಳು. ಒಮ್ಮೆ ಅಸ್ತಿತ್ವಕ್ಕೆ ಬಂದ ಸ್ಥಳನಾಮ ಪ್ರಾಕೃತಿಕ ಹಾಗೂ ಸಾಮಾಜಿಕ ಬದಲಾವಣೆಗಳಿಂದ ಹೊಸ ಹೆಸರುಗಳನ್ನು ಕಾಲಾನುಸಾರವಾಗಿ ಪಡೆದುಕೊಳ್ಳಬಹುದು. ಸ್ಥಳನಾಮಗಳೂ ಸಮಕಾಲೀನ ಅರ್ಥ ವಿಜ್ಞಾನದ ಹಿನ್ನೆಲೆಯಿಂದ ಅದು ಅರ್ಥಹೀನ ವೆಂದೋ, ಅಶ್ಲೀಲ ಅಥವಾ ಅಸುಂದರವೆನಿಸಿದಾಗ ಅವುಗಳನ್ನು ಬದಲಿಸುವ ಪ್ರವೃತ್ತಿ ಕಾಣಿಸುತ್ತದೆ. ಅಲ್ಲದೆ ಹೊಸ, ಹೊಸ ಸಂಶೋಧನೆ ಅವಿಷ್ಕಾರಗಳು ನಡೆದಂತೆ, ಶೈಕ್ಷಣಿಕ ಮತ್ತು ಬೌದ್ಧಿಕಮಟ್ಟ ವಿಕಾಸವಾದಂತೆ, ವೈಜ್ಞಾನಿಕ ಪ್ರಗತಿ ಕಂಡುಕೊಂಡಂತೆ, ಕೈಗಾರಿಕೆ ಮತ್ತು ವಾಣಿಜ್ಯ ಕೇಂದ್ರಗಳ ಬೆಳವಣಿಗೆಗೆ ಮುಂದುವರೆದಂತೆ ರಾಜಕೀಯ ಮತ್ತು ಸಾಂಸ್ಕೃತಿಕ ವಲಯಗಳು ವಿಕಾಸವಾದಂತೆ ಸ್ಥಳನಾಮಗಳಲ್ಲಿ ಸಹಜವಾಗಿ

ಬದಲಾವಣೆಯಾಗುತ್ತದೆ. ಹಳೆಯ ಹೆಸರಿನ ಜಾಗದಲ್ಲಿ ಹೊಸದೊಂದು ಅಂಕಿತ ಬೀಳುತ್ತದೆ. ಅಂತಹ ಬದಲಾವಣೆಗೆ ಸಾಮಾನ್ಯವಾಗಿ ಸಾಮಾಜಿಕ, ಧಾರ್ಮಿಕ, ಭಾಷಿಕ, ರಾಜಕೀಯ, ಐತಿಹಾಸಿಕ ಮತ್ತು ಸಾಂಸ್ಕೃತೀಕರಣದ ಅಂಶಗಳೂ ಕಾರಣವಾಗುತ್ತವೆ. ಇಂಥ ಬದಲಾವಣೆ ಗ್ರಾಮ ಮಟ್ಟದಿಂದ ಹಿಡಿದು ಜಾಗತೀಕ ಮಟ್ಟದವರೆಗೂ ಏರ್ಪಟ್ಟಿದೆ.

## ಸ್ಥಳನಾಮ ಅಧ್ಯಯನದ ಪ್ರಯೋಜನಗಳು

ಮಾನವನ ಸೃಷ್ಟಿಯೊಂದಿಗೆ ಸ್ಥಳನಾಮಗಳ ಅಸ್ತಿತ್ವ ಸ್ಥಾಪಿತವಾಗಿದ್ದರೂ ನೈಸರ್ಗಿಕ ಕ್ರಿಯೆಯ ಜೊತೆಗಿನ ಅವನ ಒಡನಾಟ ಸ್ಥಳನಾಮ ಬೆಳವಣಿಗೆಯ ಪ್ರಕ್ರಿಯೆಗೆ ನಾಂದಿಯಾಗಿರಬೇಕು. ಅವನ ಸುತ್ತಲೂ ಬೆಸೆದುಕೊಂಡಿರುವ ಪ್ರಾಕೃತಿಕ ಮತ್ತು ಸಾಂಸ್ಕೃತಿಕ ಪರಿಸರದ ಹೊರವಲಯಗಳನ್ನು ಸೂಕ್ಷ್ಮವಾಗಿ ಪರಿಶೀಲಿಸಿದಾಗ ಅವು ಅವನ ವಾಸ್ತವ್ಯ ಸೂಚಿಗಳಿಗೆ ಪ್ರೇರಣೆಯಾಗಿದೆ. ಇಂಥ ಪ್ರಾಗೈತಿಹಾಸಿಕ ಮಾನವನ ಮೂಲನೆಲೆಗಳನ್ನು ಸಂಶೋಧಿಸಲು ಹೊರಟಾಗ ಅನೇಕ ವೈವಿಧ್ಯಮಯ ಕೆರೆಕಟ್ಟೆ, ನದಿ, ಹೊಳೆಕಡಲುಗಳ ವಿವರಗಳು, ದೇವಾಲಯದ ಪೂಜೆ ಪುರಸ್ಕಾರ, ಜಾತ್ರೆ, ಉತ್ಸವ, ಮಡೆಕೊಂಡದ ಮಾಹಿತಿಗಳು, ಕಲೆ, ಚಿತ್ರಕಲೆ, ನೃತ್ಯ, ಸಂಗೀತ, ವಿದ್ಯಾಕೇಂದ್ರಗಳ ಕುರುಹುಗಳು, ಪ್ರಾಚೀನ ಪಳೆಯುಳಿಕೆಗಳ ಉಲ್ಲೇಖಗಳು, ಜನಾಂಗ ಭಾಷೆ, ಪ್ರದೇಶ, ಸಂಸ್ಕೃತಿಗಳ ಪ್ರಭೇದಗಳು ಹಾಗೂ ಪ್ರಾಕೃತಿಕ ಅರ್ಥವಿವರಣೆಯ ಸತ್ಯಾಂಶಗಳು ತಿಳಿದುಬರುತ್ತದೆ.

''ಪ್ರಾಚೀನ ಸ್ಥಳನಾಮಗಳಲ್ಲಿ ಬಹುಪಾಲು ಸ್ವಗರ್ಭಿತವಾದವು. ಒಂದು ಪ್ರದೇಶದ ನದಿ, ಬೆಟ್ಟ, ಕಲ್ಲು, ಮಣ್ಣು, ಮರ, ಗಿಡ, ಕೋಟೆ, ದೇವಾಲಯ ಮುಂತಾದವು ಆ ಪ್ರದೇಶದ ಚರಿತ್ರೆಯನ್ನು ಹೇಳಲು ಹೇಗೆ ಸಹಾಯಕವಾಗುತ್ತವೆಯೋ ಹಾಗೆಯೇ ಅಲ್ಲಿನ ಸ್ಥಳನಾಮ ಚರಿತ್ರೆಗೆ ಪೂರಕವಾಗುವ ಅನೇಕ ಮಾಹಿತಿಗಳನ್ನು ಒದಗಿಸುತ್ತದೆ. ಅದುದರಿಂದ ಸ್ಥಳನಾಮಗಳಿಗೆ ಸಾಮಾನ್ಯನಾಮಗಳಿಗೆ ಕೊಡಬೇಕಾದ ಪ್ರಾಧಾನ್ಯಕ್ಕಿಂತ ಹೆಚ್ಚು ಪ್ರಾಧಾನ್ಯ ಕೊಡಬೇಕಾಗಿದೆ. ನಮ್ಮ ಪೂರ್ವ ವಿದ್ಯಾಸಂಪನ್ನತೆ, ಸೌಂದರ್ಯಪ್ರಜ್ಞೆ, ಧಾರ್ಮಿಕ ದೃಷ್ಟಿ, ಮೂಢನಂಬಿಕೆ, ಅಳರಸರ ಅಥವಾ ಮೂಲನಿವಾಸಿಗಳ ಬಗೆಗೆ ಮಹತ್ತರವಾದ ವಿಚಾರಗಳು ಅಂದಿನ ಜನರ ವೃತ್ತಿ, ನೈಸರ್ಗಿಕ ಸಂಪತ್ತು, ಭಾಷಾಚರಿತ್ರೆ, ಮಾನವಶಾಸ್ತ್ರ ಮುಂತಾದ ಅನೇಕ ವಿಷಯಗಳನ್ನು ಗರ್ಭದಲ್ಲಿ ಅಡಗಿಸಿಕೊಂಡಿರುವ ಅನುಲ್ಲೇಖಿತ ಗ್ರಂಥಗಳಾಗಿವೆ ಈ ಸ್ಥಳನಾಮಗಳು. ಅದುದರಿಂದ ಭಾಷಾಶಾಸ್ತ್ರ ದೃಷ್ಟಿಯಿಂದ ಮಾತ್ರವಲ್ಲದೆ ಎಲ್ಲ ದೃಷ್ಟಿಯಿಂದಲೂ ಇಂತಹ ಅಧ್ಯಯನದ ಅವಶ್ಯಕತೆಯಿದೆ.''[೩]

ಶಾಸ್ತ್ರೀಯವಾಗಿ ನಡೆಯಬೇಕಾದ ಅಧ್ಯಯನಗಳಲ್ಲಿ ಒಂದಾದ ಸ್ಥಳನಾಮಾಧ್ಯಯನ ಹಲವು ಕ್ಷೇತ್ರಗಳಿಗೆ ಪೂರಕ ಸಾಮಾಗ್ರಿಯನ್ನು ಒದಗಿಸುತ್ತದೆ. ಅಲ್ಲದೆ ಅಂತಹ ಶಿಸ್ತುಗಳಿಂದ ತನ್ನ ಅಧ್ಯಯನಕ್ಕೆ ಬೇಕಾದ ಮೂಲ ಸಾಮಾಗ್ರಿಯನ್ನು ಪಡೆದುಕೊಂಡು ತನ್ನ ಅಧ್ಯಯನದ ಮಹತ್ವವನ್ನು ಹೆಚ್ಚಿಸಿಕೊಳ್ಳುತ್ತದೆ. ಹಾಗಾಗಿ

ಅದು ಮನುಕುಲದ ಪೂರ್ವಪರಂಪರೆಯ ವಿವಿಧ ಹಂತಗಳನ್ನು ಹುಡುಕಿ, ತಡಕಿ, ಶೋಧಿಸಿ ವಿಶ್ಲೇಷಿಸುವುದಕ್ಕೆ ಸಹಕಾರಿಯಾಗಿದೆ. ಅಂದರೆ ಮಾನವನು ಬಾಳಿ ಬದುಕಿದ, ಉಂಡಾಡಿ, ತಿರುಗಾಡಿದ ಪುರಾತನ ನೆಲೆಗಳ ಕುರುಹುಗೋಳನ್ನು ಸ್ಪಷ್ಟಪಡಿಸುತ್ತದೆ.

ಸ್ಥಳನಾಮಗಳನ್ನು ಚರಿತ್ರೆಯ ಅವಶೇಷಗಳೆಂದು ರಾಷ್ಟ್ರದ ಸಾಂಸ್ಕೃತಿಕ ಕುರುಹುಗಳೆಂದು ಕರೆಯುವುದರಲ್ಲಿ ಔಚಿತ್ಯವಿದೆ. ಏಕೆಂದರೆ ಅವು ಜನಾಂಗಗಳ ಉನ್ನತಿ ಅವನತಿಗಳ ಸಂಕೇತಗಳಾಗಿವೆ. ತನ್ನ ಮಡಲಿನಲ್ಲಿ ಸದಾ ಸ್ಫೂರ್ತಿಯ ಚೆಲುಮೆಯಾಗಿ ಬದುಕುತ್ತಿರುವ ಜನರ ಮನೋಧರ್ಮಗಳ ಮೇಲೆ, ಭಾಷಿಕ ಪ್ರಭೇದಗಳ ಮೇಲೆ ದಾನ-ದತ್ತಿ ಯುದ್ಧ-ನೀತಿಗಳ ಮೇಲೆ ನಂಬಿಕೆ-ನಡವಳಿಕೆ ಸಂಪ್ರದಾಯಗಳ ಮೇಲೆ ಸದಾ ಬೆಳಕಿನ ಹೊಂಗಿರಣವನ್ನು ಹರಿಸುತ್ತದೆ. ಹೀಗೆ ಸ್ಥಳ ಅಧ್ಯಯನ ಕೇವಲ ಒಂದು ಊರಿನ ಅರ್ಥ ವಿವರಣೆ ಮಾತ್ರವಾಗಿರದೆ, ಅದು ಒಂದು ನಾಡಿನ ಹಾಗೂ ಪ್ರದೇಶದ ಭೌಗೋಳಿಕ, ಸಾಮಾಜಿಕ, ಧಾರ್ಮಿಕ, ರಾಜಕೀಯ ಮತ್ತು ಐತಿಹಾಸಿಕ ಚರಿತ್ರೆಯ ಪುನರ್ ಸ್ಥಾಪನೆಯ ಕೊಂಡಿಯಾಗಿದೆ. ಹಾಗಾಗಿ ಇದು ವಿವಿಧ ಜ್ಞಾನಶಾಖೆಗಳನ್ನು ಕುರಿತು ಅಧ್ಯಯನ ಮಾಡುವಂಥ ಸಂಶೋಧಕರಿಗೆ ಹೆಚ್ಚಿನ ಮಾಹಿತಿಯನ್ನು ಒದಗಿಸುತ್ತದೆ.

ಸ್ಥಳನಾಮಗಳ ಪ್ರಯೋಜನವನ್ನು ಇಂತಿಷ್ಟೆ ಎಂದು ಅಳತೆ ಮಾಡಿ ಹೇಳಲಾಗುವುದಿಲ್ಲ. ಆದರೆ ಅದೊಂದು ಜೀವಂತ ಪಳೆಯುಳಿಕೆ. ಸಾಂಸ್ಕೃತಿಕ ನಾಗರಿಕತೆಗಳ ಒಟ್ಟೊಟ್ಟಿಗೆ ಸಾಗುತ್ತದೆ. ಹಾಗೂ ಕಾಲಕ್ಕನುಗುಣವಾಗಿ ತನ್ನ ವೈವಿಧ್ಯಮಯ ರೂಪವನ್ನು ಬದಲಾಯಿಸಿಕೊಳ್ಳುತ್ತಾ ಹೋಗುತ್ತದೆ. ವಾಸ್ತವ ಜಗತ್ತಿನ ವೈಜ್ಞಾನಿಕ ಧೋರಣೆಯಿಂದ ಪಾರಂಪರಿಕ ಸೊಗಡಿನ ನೆಲೆಯನ್ನು ಹುಡುಕುವುದೇ ಇದರ ಅಂತಿಮ ಗುರಿಯಾಗಿದೆ.

ಸ್ಥಳನಾಮಗಳ ಅಧ್ಯಯನದಿಂದ ಪುರಾಣ, ಇತಿಹಾಸ ಮತ್ತು ಐತಿಹ್ಯ ಸೋದರತ್ವದ ಬಾಂಧವ್ಯಗಳನ್ನು ಗುರುತಿಸಬಹುದು. ಅಂದರೆ ಸ್ಥಳನಾಮಗಳನ್ನು ಬಿಡಿಸಿ ವಿಶ್ಲೇಷಿಸುತ್ತಾ ಹೋದಂತೆಲ್ಲಾ ಅವುಗಳ ಸಾಂಸ್ಕೃತಿಕ ಮತ್ತು ಭಾಷಿಕ ಒಳಪದರುಗಳು ತೆರೆದುಕೊಳ್ಳುತ್ತವೆ. ಈಚೆಗೆ ಈ ಅಧ್ಯಯನ ವೈಜ್ಞಾನಿಕತೆ, ನಿರ್ದಿಷ್ಟತೆ ಮತ್ತು ಪ್ರಚುರತೆಗೆ ಹೆಸರಾಗಿದೆ. ಹೀಗೆ ಸ್ಥಳನಾಮ ಅಧ್ಯಯನ ಪ್ರಯೋಜನ ಬಹುಮುಖ್ಯವಾದುದು.

೧. ಸ್ಥಳನಾಮಗಳ ಅಧ್ಯಯನದಿಂದ ವಾಸ್ತವ ಜಗತ್ತಿನ ಆಶೋತ್ತರಗಳನ್ನು ವೈವಿಧ್ಯಮಯ ಬದಲಾವಣೆಗಳನ್ನು ಮನಗಾಣಬಹುದು.

೨. ಸ್ಥಳನಾಮಗಳ ಸಂಶೋಧನೆಯಿಂದ ಮನುಕುಲದ ಹುಟ್ಟು ಬೆಳವಣಿಗೆ, ಸಂಸ್ಕೃತಿ ನಾಗರಿಕತೆ, ಲೋಕಜ್ಞಾನ ಮತ್ತು ಮೌಲ್ಯಾಧಾರಿತ ಬದುಕು ಮುಂತಾದ ಅನೇಕ ವಿಷಯಗಳನ್ನು ತಿಳಿಯಬಹುದಾಗಿದೆ.

೩. ಸ್ಥಳನಾಮ ಅಧ್ಯಯನದಿಂದ ಮಾನವ ಜಗತ್ತಿನ ವಸ್ತುನಿಷ್ಠ ಸತ್ಯದ ತಿರುಳು ದೊರೆಯುತ್ತದೆ. ಅಲ್ಲದೆ ಐತಿಹಾಸಿಕ ಘಟನಾವಳಿಗಳ ವಿವರಗಳು. ಯುದ್ಧ ಹೋರಾಟಗಳು ರಾಮಮಹಾರಾಜರ ಪಾಳೇಗಾರರ,

ಸಾಮಂತರ ಆಡಳಿತ ಕ್ರಮಗಳು, ಸಾಮ್ರಾಜ್ಯ ಜನಜೀವನದ ಏರಿಳಿತಗಳು ಮತ್ತು ಅವನತಿಯ ಕಾರಣಗಳನ್ನು ತಿಳಿಯಬಹುದು.

೪. ಸ್ಥಳನಾಮ ಅಧ್ಯಯನದ ಹಿನ್ನಲೆಯಲ್ಲಿ ಇನ್ನೀತರ ಅಧ್ಯಯನ ಶಿಸ್ತುಗಳ ಜ್ಞಾನ ದೊರೆಯುತ್ತದೆ.

೫. ಪ್ರಾಕೃತಿಕ ಪರಿಸರದ ಸುತ್ತಲೂ ಕಂಡುಬರುವ ಬೆಟ್ಟ, ಗುಡ್ಡ, ನದಿ, ಹೊಳೆ, ಸಾಗರ ಸಮುದ್ರ, ಕಲ್ಲು, ಮಣ್ಣು, ಮರಗಿಡ ಮತ್ತು ಬಳ್ಳಿಗಳಿಂದ ಸ್ಥಳನಾಮಗಳು ಹೇಗೆ ತಮ್ಮ ಅಸ್ತಿತ್ವವನ್ನು ಪಡೆದುಕೊಂಡವು ಎಂಬುದನ್ನು ಪರಿಶೀಲಿಸಬಹುದು.

೬. ಸಾಂಸ್ಕೃತಿಕಾಂಶಗಳು ಸ್ಥಳನಾಮಗಳ ಹುಟ್ಟು ಮತ್ತು ಅದರ ಬದಲಾವಣೆಗೆ ಹೇಗೆ ಕಾರಣವಾಗಿವೆ ಎಂಬ ವಿವರಣೆಗಳು ಈ ಅಧ್ಯಯನದಿಂದ ತಿಳಿದುಬರುತ್ತದೆ.

೭. ಮನುಕುಲದ ಇತಿಹಾಸದಲ್ಲಿ ಜಗತ್ತಿನ ಸೃಷ್ಟಿ, ಶಿಷ್ಟ ಮತ್ತು ದುಷ್ಟ ದೇವತೆಗಳ ಆರಾಧನೆ ಕ್ರಮಗಳು, ಜಾತಿ, ಜನಾಂಗ, ಧರ್ಮ ಕಸುಬಿನ ಪೂರ್ವ ಹಿನ್ನಲೆಯನ್ನು ಸ್ಥಳನಾಮ ಅಧ್ಯಯನದಿಂದ ತಿಳಿಯಬಹುದು.

೮. ಮಾನವನು ಆದಿಮಾನವ ಜಗತ್ತಿನಿಂದ ನಾಗರಿಕ ಜಗತ್ತಿಗೆ ಬಂಧ ವಿವಿಧ ವಿಕಾಸದ ಹಂತಗಳನ್ನು ಸೂಕ್ಷ್ಮ ತಿಳುವಳಿಕೆಯನ್ನು ಸ್ಥಳನಾಮಾಧ್ಯಯನದಿಂದ ಗೊತ್ತಾಗುತ್ತದೆ.

೯. ಸ್ಥಳನಾಮಗಳ ಅಧ್ಯಯನದಿಂದ ವಸಾಹತುಶಾಹಿಯ ಮನೋಧರ್ಮವನ್ನು ಅವರ ಪಟ್ಟಭದ್ರ ಹಿತಾಸಕ್ತಿಗಳನ್ನು ಹಾಗೂ ಸ್ವದೇಶಿ ಹೋರಾಟದ ಒಳದನಿಯ ತೀವ್ರತೆಗಳನ್ನು ಮನಗಾಣಬಹುದು.

೧೦. ಈ ಅಧ್ಯಯನ ಸ್ಥಳೀಯ ಸಾಂಸ್ಕೃತಿಕ ಪರಂಪರೆಯನ್ನು ಪುನರ್ ಪ್ರತಿಷ್ಠಾಪಿಸುವ ಧೋರಣೆಯನ್ನು ಸ್ಪಷ್ಟಪಡಿಸುತ್ತದೆ.



೧೧. ಸ್ಥಳನಾಮಗಳ ಸಂಶೋಧನೆಯಿಂದ ಸಾಮಾಜಿಕ ಜೀವನದಲ್ಲಾದ ಬದಲಾವಣೆಗಳನ್ನು ನೋಡಬಹುದು. ಈ ಹಿನ್ನಲೆಯಲ್ಲಿ ಸ್ವಾತಂತ್ರ್ಯ ಸೇನಾನಿಗಳ, ರಾಷ್ಟ್ರನಾಯಕರ, ಕವಿ, ಕಲೆಗಾರರ ಹಾಗೂ ಆದರ್ಶ ಬುದ್ಧಿ ಜೀವಿಗಳ ಹುತಾತ್ಮರ ಹೆಸರುಗಳು ಹೇಗೆ ಊರು, ಕೇರಿ, ಬೀದಿ, ವೃತ್ತ, ಚೌಕ, ಬಡಾವಣೆ, ಮೊಹಲ್ಲಾ, ನಗರ ಮತ್ತು ಪಟ್ಟಣ ಇತ್ಯಾದಿಗಳಿಗೆ ನಾಮಾಂಕಿತಗೊಂಡವು ಎಂಬುದನ್ನು ವಿವೇಚಿಸಬಹುದು.

೧೨. ರಾಷ್ಟ್ರೀಯ ಭಾವೈಕ್ಯದ ದೃಷ್ಟಿಯಿಂದಲೂ ಸ್ಥಳನಾಮ ಅಧ್ಯಯನ ಪ್ರಯೋಜನಕಾರಿಯಾಗಿದೆ.

೧೩. ಸ್ಥಳನಾಮಗಳ ಸಂಶೋಧನೆಯಿಂದ ನಮ್ಮನ್ನು ನಾವು ಗುರುತಿಸಿಕೊಳ್ಳಲು ನೆನಪಿಸಿಕೊಳ್ಳಲು ಸಾಂಸ್ಕೃತಿಕ ಧನ್ಯತೆಯನ್ನು ಕಂಡುಕೊಳ್ಳಲು ಹಾಗೂ ನಮ್ಮ ಅನನ್ಯತೆಯನ್ನು ಉಳಿಸಿಕೊಳ್ಳಲು ಸಾಧ್ಯವಾಗುತ್ತದೆ.

ಒಟ್ಟಿನಲ್ಲಿ ಸ್ಥಳನಾಮಗಳು ಸರ್ವಕಾಲಿಕ ಧ್ವನಿಗಳಾಗಿವೆ. ಗತಕಾಲದ ಸಂಸ್ಕೃತಿಯ ಹೆಜ್ಜೆ ಗುರುತುಗಳಾಗಿವೆ. ಮನುಕುಲದ ಇತಿಹಾಸದ ನಿಶ್ಚಿತ ದಾಖಲೆಗಳಾಗಿವೆ. ಹಾಗೂ ಮನುಷ್ಯನ ಬದುಕಿನ ವೃತ್ತಾಂತಗಳನ್ನು ಅನಾವರಣಗೊಳಿಸುವ ಮಾಧ್ಯಮಗಳಾಗಿವೆ.

## ಚಾಮರಾಜನಗರ ತಾಲೂಕಿನ ಸ್ಥಳನಾಮಗಳ ಸ್ವರೂಪ ಮತ್ತು ವರ್ಗೀಕರಣ

ಚಾಮರಾಜನಗರ ತಾಲೂಕು ಮಲೆನಾಡು, ಬಯಲುನಾಡು ಮತ್ತು ಗಡಿನಾಡುಗಳಿಂದ ಸಮ್ಮಿಲನಗೊಡಿದೆ. ಈ ತಾಲೂಕು ಭೌಗೋಳಿಕವಾಗಿ ತನ್ನದೇ ಆದ ಸ್ವರೂಪವನ್ನು ಹೊಂದಿದೆ. ಇಲ್ಲಿನ ಸ್ಥಳನಾಮಗಳು ಹೆಚ್ಚಾಗಿ ಪ್ರಾಕೃತಿಕ ಅಂಶಗಳಿಂದಲೇ ನಿರ್ಮಿತಗೊಂಡಿವೆ. ಆದರೆ ಎಷ್ಟೊ ಸ್ಥಳನಾಮಗಳು ಐತಿಹಾಸಿಕ ಘಟನೆಗಳನ್ನು ಆಧರಿಸಿವೆ. ಹಬ್ಬ, ಹರಿದಿನ, ಜಾತ್ರೆ, ಉತ್ಸವ ನಂಬಿಕೆಗಳಿಗೆ ಸಂಬಂಧಪಟ್ಟ ಜನಪದ ನಿರುಕ್ತಿಗಳು ಮತ್ತು ಪುರಾಣ ಐತಿಹಾಸಿಕಗಳಿಂದ ಕೂಡಿದ ಸ್ಥಳನಾಮಗಳ ನಿವೃತ್ತಿಯನ್ನು ಕ್ಷೇತ್ರ ಕಾರ್ಯದಿಂದ ಗುರುತಿಸಲಾಗಿದೆ.

ಇಡೀ ದೇಶದ ಒಂದೊಂದು ರಾಜ್ಯದ, ಜಿಲ್ಲೆಯ ಹಾಗೂ ತಾಲೂಕಿನ ಸ್ಥಳನಾಮಗಳ ತಲಸ್ಪರ್ಶಿ ಅಧ್ಯಯನದ ಫಲದಿಂದಾಗಿ ಅನೇಕ ಹೊಸ ವಿಷಯಗಳು ಬೆಳಕಿಗೆ ಬರುತ್ತವೆ. ಸ್ಥಳನಾಮಶಾಸ್ತ್ರಜ್ಞರು ಸ್ಥಳನಾಮಗಳ ವರ್ಗೀಕರಣವನ್ನು ತಮ್ಮ ತಮ್ಮ ಭೌಗೋಳಿಕ ಪರಿಸರಗಳಿಗೆ ಅನುಗುಣವಾಗಿ ವಿಂಗಡಿಸಿ ವಿಶ್ಲೇಷಿಸಿದ್ದಾರೆ. ಈ ನಿಟ್ಟಿನಲ್ಲಿಯೇ ಚಾಮರಾಜನಗರ ತಾಲೂಕಿಗೆ ಸಂಬಂಧಪಟ್ಟ ಸ್ಥಳನಾಮಗಳನ್ನು ವಿಂಗಡಿಸಿ ವಿಶ್ಲೇಷಿಸುವ ಪ್ರಯತ್ನ ಮಾಡಲಾಗಿದೆ.

ಕರ್ನಾಟಕದ ಸ್ಥಳನಾಮಗಳಲ್ಲಿ ಎರಡು ಘಟಕಗಳಿರುವಂತೆ ತೋರುತ್ತದೆ. ಅವುಗಳನ್ನು ಆಕೃತಿಮಾ ಎಂದು ಕರೆಯಬಹುದು. ಅವುಗಳ ಪೂರ್ವಭಾಗವನ್ನು ನಿದೀರ್ಷ ಎಂದು ಉತ್ತರ ಭಾಗವನ್ನು ವಾರ್ಗಿಕ ಎಂದು ಕರೆಯಬಹುದು.[೪]

ಕರ್ನಾಟಕದ ಗ್ರಾಮಸೂಚಿಯಲ್ಲಿ ಚಾಮರಾಜನಗರ ತಾಲೂಕಿನ ೧೯೧ ಗ್ರಾಮಗಳಿವೆ.[೫] ಈ ತಾಲೂಕಿನ ಸ್ಥಳನಾಮಗಳಲ್ಲಿ ಒಂದು ಘಟಕದಿಂದ ಮೊದಲ್ಗೊಂಡು ಐದು ಘಟಕಗಳವರೆಗೆ ಇರುವ ಪ್ರತ್ಯಯಗಳನ್ನು ಪದಗಳನ್ನು ಗುರುತಿಸಬಹುದು.

ಒಂದೇ ಘಟಕವುಳ್ಳ ಹೆಸರುಗಳಾಗಿ ಕಂಡುಬಂದಿದೆ. ಕೆಂಗಾಕಿ, ಬಾಗಳಿ, ಮಂಗಲ, ಮುತ್ತಿಗೆ, ಸಾಗಡೆ, ಹರವೆ, ಹೊಮ್ಮ.

### ಎರಡು ಘಟಗಳ ಸ್ಥಳನಾಮಗಳು

ಎರಡು ಘಟಕಗಳುಳ್ಳ ಸ್ಥಳನಾಮಗಳು ಈ ತಾಲೂಕಿನಲ್ಲಿ ಹೆಚ್ಚಾಗಿ ಕಂಡುಬರುತ್ತವೆ.

ಅಮಚ + ವಾಡಿ = ಅಮಚವಾಡಿ

ಅಚ್ಚಟ್ಟಿ + ಪುರ = ಅಚ್ಚಟ್ಟಿಪುರ

ಆಲ + ಊರು = ಆಲೂರು

ಉಡಿ + ಗಾಲ = ಉಡಿಗಾಲ

ಕರಡಿ + ಹಳ್ಳಿ = ಕರಡಿಹಳ್ಳಿ

ಕಳ್ಳಿ + ಪುರ = ಕಳ್ಳೇಪುರ

ಕಾಡ + ಹಳ್ಳಿ = ಕಾಡಹಳ್ಳಿ

ಕಾಗಲ + ವಾಡಿ = ಕಾಗಲವಾಡಿ

ಕಿಲ + ಕೆರೆ = ಕಿಲಗೆರೆ

ಕೋಡಿ + ಉಗನೆ = ಕೊಡಿಉಗನೆ

ಗಾಳಿ + ಪುರ = ಗಾಳಿಪುರ

ದೇಮ + ಹಳ್ಳಿ = ದೇಮಹಳ್ಳಿ

ದೇಶ + ಹಳ್ಳಿ = ದೇಶವಳ್ಳಿ

ನರಸ + ಮಂಗಲ = ನರಸಮಂಗಲ

ನಲ್ + ಊರು = ನಲ್ಲೂರು

ಬದನ + ಕುಪ್ಪೆ = ಬದನಗುಪ್ಪೆ

ಬಸವ + ಹಟ್ಟಿ = ಬಸವಟ್ಟಿ

ಬಂಡಿ + ಕೆರೆ = ಬಂಡಿಗೆರೆ

ಮಲೆ + ಊರು = ಮಲೆಯೂರು

ಶಿವ + ಪುರ = ಶಿವಪುರ

ಹೊಂಗನ + ಊರು = ಹೊಂಗನೂರು

ಹೊಂಡರ + ಬಾಳು = ಹೊಂಡರಬಾಳು

ಹೊಸ + ಊರು = ಹೊಸೂರು

ಮೂರು ಘಟಕಗಳ ಸ್ಥಳನಾಮಗಳು

ಅಟ್ಟು + ಗುಳಿ + ಪುರ = ಅಟ್ಟುಗುಳಿಪುರ

ಅರ + ಕಲ + ವಾಡಿ = ಅರಕಲವಾಡಿ

ಕಾಗಲ + ವಾಡಿ + ಮೋಳೆ = ಕಾಗಲವಾಡಿ ಮೋಳೆ

ಚನ್ನ + ಅಪ್ಪನ + ಪುರ = ಚನ್ನಪ್ಪನಪುರ

ಚಾಮ + ರಾಜ + ನಗರ = ಚಾಮರಾಜನಗರ

ದೇವ + ರಾಜ + ಪುರ = ದೇವರಾಜಪುರ

ಬಂದಿ + ಗೌಡನ + ಹಳ್ಳಿ = ಬಂದಿಗೌಡನಹಳ್ಳಿ

ಮೂಡಲ + ಹೊಸ + ಹಳ್ಳಿ = ಮೂಡಲಹೊಸಹಳ್ಳಿ

ವೆಂಕಟ + ಅಯ್ಯನ + ಛತ್ರ = ವೆಂಕಟಯ್ಯನ ಛತ್ರ

ಸಂತೇ + ಮಾರನ + ಹಳ್ಳಿ = ಸಂತೇಮಾರನಹಳ್ಳಿ

ಸೋಮ + ವಾರ + ಪೇಟೆ = ಸೋಮವಾರಪೇಟೆ

ಹಂಚಿ + ತಾಳ + ಪುರ = ಹಂಚಿತಾಳಪುರ

ಹೆಗ್ಗ + ವಾಡಿ + ಪುರ = ಹೆಗ್ಗವಾಡಿಪುರ

ಹೆತ್ತೇ + ಗೌಡನ + ದೊಡ್ಡಿ = ಹೆತ್ತೇಗೌಡನದೊಡ್ಡಿ

ಹೊಂಡರ + ಬಾಳು + ಕಾಲೋನಿ = ಹೊಂಡರ ಬಾಳು ಕಾಲೋನಿ

ನಾಲ್ಕು ಘಟಕಗಳ ಸ್ಥಳನಾಮಗಳು

ಜ್ಯೋತಿ + ಗೌಡನ + ಪುರದ + ಮೋಳೆ = ಜ್ಯೋತಿಗೌಡನಪುರದ ಮೋಳೆ

ಪಾಡನ + ಕೋಡು + ಹೊಸ + ಹಳ್ಳಿ = ಪಾಡನ ಕೋಡು ಹೊಸಹಳ್ಳಿ

ಬೇಡ + ಗುಳಿ + ರಾಜ್ಯ + ಅರಣ್ಯ = ಬೇಡಗುಳಿರಾಜ್ಯ ಅರಣ್ಯ

ಬಂದಿ + ಗೌಡನ + ಹಳ್ಳಿ + ಕಾಲೋನಿ = ಬಂದಿಗೌಡನ ಹಳ್ಳಿ ಕಾಲೋನಿ

ಹರದನ + ಹಳ್ಳಿ + ಜಿಲ್ಲಾ + ಅರಣ್ಯ = ಹರದನಹಳ್ಳಿ ಜಿಲ್ಲಾ ಅರಣ್ಯ

**ಐದು ಘಟಕಗಳ ಸ್ಥಳನಾಮಗಳು**

ವೆಂಕಟ + ಅಯ್ಯನ + ಛತ್ರದ + ಹೊಸ + ಊರು = ವೆಂಕಟಯ್ಯನ ಛತ್ರದ ಹೊಸೂರು.

ಚಾಮರಾಜನಗರ ತಾಲೂಕಿನ ಸ್ಥಳನಾಮಗಳನ್ನು ಪ್ರಮುಖವಾಗಿ ಎರಡು ಹಂತಗಳಲ್ಲಿ ವರ್ಗೀಕರಿಸಬಹುದು. ಹಾಗಾಗಿ ಈ ತಾಲೂಕಿನ ಸ್ಥಳನಾಮಗಳು ಪ್ರಾಕೃತಿಕ ಮತ್ತು ಸಾಂಸ್ಕೃತಿಕ ಅಂಶಗಳನ್ನು ಒಳಗೊಂಡಿವೆ. ಅವನ್ನು ಈ ಕೆಳಗಿನಂತೆ ವರ್ಗೀಕರಿಸಬಹುದು.

**ಸಾಂಸ್ಕೃತಿಕ ಸ್ಥಳನಾಮಗಳು**

ಪ್ರಾಕೃತಿಕ ಮತ್ತು ಭೌಗೋಳಿಕ ಪರಿಸರವುಳ್ಳ ಸ್ಥಳನಾಮಗಳು ಚಾಮರಾಜನಗರ ತಾಲೂಕಿನಲ್ಲಿ ವಿಶೇಷವಾಗಿ ಕಂಡುಬರುತ್ತವೆ. ಪ್ರಕೃತಿದತ್ತವಾಗಿ ನಿರ್ಮಿತವಾದ ಗುಡ್ಡ, ಬೆಟ್ಟ, ಮಲೆ, ಕೋಡು, ಕಲ್ಲು, ತಿಟ್ಟು, ಕಾಡು, ದಿಣ್ಣೆ, ಹಳ್ಳ, ಕಂದರ, ನದಿ, ಕಾಲುವೆ, ಗುಂಡು ಕೊಳ, ಕೆರೆ, ಮರ, ಗಿಡ, ಬಳ್ಳಿ, ಪೊದೆಗಳ ಪ್ರತ್ಯಯಗಳು ಸೇರಿ ಸ್ಥಳನಾಮಗಳಾಗಿರುತ್ತವೆ. ಇವುಗಳನ್ನು ಪ್ರಾಕೃತಿಕ ಸ್ಥಳನಾಮಗಳೆಂದು ಕರೆಯಬಹುದು.

ಈ ಪ್ರಾಕೃತಿಕ ಸ್ಥಳನಾಮಗಳನ್ನು ಮತ್ತೇ ನಾಲ್ಕು ಭಾಗಗಳಾಗಿ ವರ್ಗೀಕರಿಸಬಹುದು.

೧. ಜಲವಾಚಕಗಳು

೨. ಭೂವಾಚಕಗಳು

೩. ಸಸ್ಯವಾಚಕಗಳು

೪. ಪ್ರಾಣಿವಾಚಕಗಳು

ಜಲವಾಚಕಗಳನ್ನು ಮತ್ತೆ ಎರಡು ಭಾಗಗಳಾಗಿ ವಿಭಾಗಿಸಬಹುದು.

೧. ಸಹಜ ಜಲವಾಚಕಗಳು

೨. ಮಾನವನಿಂದ ನಿರ್ಮಿತಗೊಂಡ ಜಲಾಶಯಗಳಿಗೆ ಸಂಬಂಧಿಸಿದ ಜಲವಾಚಕಗಳು.

**ಸಹಜ ಜಲವಾಚಕಗಳು**

ಸ್ವಾಭಾವಿಕವಾಗಿ ಮನುಷ್ಯನ ಸ್ಪರ್ಶವಿಲ್ಲದೆ ತನಗೆತಾನೆ, ಪ್ರಾಕೃತಿದತ್ತವಾದ ನೀರಿನ ಪ್ರದೇಶಗಳನ್ನು ಸೂಚಿಸುವ ಪದಗಳೇ ಸಹಜ ಜಲವಾಚಕಗಳಾಗಿವೆ. ಅವು ಅತ್ತಿ, ಅರೆ, ಅಲೆ, ಅಲ, ಇರೆ, ಕಡು, ಕುದಿ,

ಕೂಡು, ಗುಂಡಿ, ಬಸೆ, ಮಡವು, ಮೋಳೆ, ಸಮುದ್ರ, ಹೊಳೆ ಮುಂತಾದವು. ಈ ಸಹಜ ಜಲವಾಚಕಗಳು ಸಾಮಾನ್ಯವಾಗಿ ಸ್ಥಳನಾಮಗಳ ಪೂರ್ವ, ಮಧ್ಯ ಮತ್ತು ಅಂತ್ಯಪ್ರತ್ಯಯವಾಗಿ, ಘಟಕವಾಗಿ ಕಂಡುಬರುತ್ತವೆ.

೧. ಅಲೆ : ಆಲೂರು

೨. ಇರೆ : ಇರಸವಾಡಿ

೩. ಕಡು : ಕಡುವಿನಕಟ್ಟೆ, ಹುಂಡಿ

೪. ಕುದಿ : ಕುದೇರು

೫. ಗೊರೆ : ಗೊರಹಟ್ಟಿ

೬. ಕೂಡು : ಕೂಡಲೂರು

೭. ಬಸೆ : ಬಸವಾಪುರ

೮. ಮಡುವು : ಮಡುವಿನಬೀಡು, ಗೋಡೆಮಡುವಿನ ದೊಡ್ಡಿ

೯. ಮೋಳೆ : ಚೆನ್ನಿಪುರದ ಮೋಳೆ, ಚಂದುಕಟ್ಟೆ ಮೋಳೆ, ಹೊಸಮೋಳೆ, ನಡುಕಲಮೋಳೆ, ಕಾಗಲವಾಡಿ ಮೋಳೆ

೧೦. ಸಮುದ್ರ : ರಾಮಸಮುದ್ರ, ಸೋಮಸಮುದ್ರ

೧೧. ಹೊಳೆ : ಚಿಕ್ಕಹೊಳೆ

## ಮಾನವನಿಂದ ನಿರ್ಮಿತಗೊಂಡ ಜಲಾಶಗಳಿಗೆ ಸಂಬಂಧಿಸಿದ ಜಲವಾಚಕಗಳು

ಮಾನವನು ಬುದ್ಧಿವಂತನಾಗಿ ತಾನು ನೆಲೆನಿಂತ ಸ್ಥಳಗಳಲ್ಲಿ ತನ್ನ ದೈನಂದಿನ ಜೀವನಕ್ಕೆ, ಬೇಸಾಯಕ್ಕೆ ಪ್ರಕೃತಿ ಸಹಜವಾದ ಕೆಲವು ನದಿ, ಕಾಲುವೆ, ಬಾವಿ, ಹಳ್ಳ, ಝುರಿ, ಗುಂಡಿ, ಕೊಳ, ಇಲ್ಲದಿದ್ದ ಸಂದರ್ಭದಲ್ಲಿ ಕೆರೆ, ಕಟ್ಟೆ, ಕಾಲುವೆ, ತಟಾಕ, ಪುಷ್ಕರಣಿ, ಹೊಂಡ ಕಟ್ಟೆಗಳಿಗೆ ಕಟ್ಟಲಾದ ಕೋಡಿಗಳು : ಹರಿಯುವ ನದಿ, ಕಾಲುವೆ, ಅಡ್ಡಹಳ್ಳಗಳಿಗೆ ಕಟ್ಟಲಾದ ಸೇತುವೆಗಳು, ಒಡ್ಡು, ಏರಿ, ಅಣೆಕಟ್ಟು ಇತ್ಯಾದಿ ಪೂರ್ವ ಅಥವಾ ಅಂತ್ಯ ಘಟಕಗಳಾಗಿ ಕಂಡುಬರುತ್ತವೆ.

೧. ಕಟ್ಟೆ : ಅರಳೀಕಟ್ಟೆ, ಕರಿಯನ ಕಟ್ಟೆ, ಕಟ್ಟೇಪುರ

೨. ಕೆರೆ/ಗೆರೆ : ಕಿಲಗೆರೆ, ಕಾಣೆಗೆರೆ, ಬಂಡಿಗೆರೆ, ಕೆರೆಹಳ್ಳಿ, ಬಿಸಲಗೆರೆ ಪೋಡು, ಯೆಲಚಗೆರೆ

೩. ಕೋಡಿ : ಕೋಡಿ ಮೋಳೆ, ಕೋಡಿ ಉಗನೆ

೪. ಗುಂಡಿ : ಕುಂಬಾರಗುಂಡಿ, ಮಂಚಗುಂಡೀಪುರ

### ಭೂವಾಚಕಗಳು

ಇಲ್ಲಿ ನಿರ್ದಿಷ್ಟ ಭೂಸ್ವರೂಪಗಳ ವಿವರಗಳನ್ನು ತಿಳಿಸುವಂಥ ಸ್ಥಳನಾಮಗಳ ಘಟಕಗಳನ್ನು ಕಾಣಬಹುದು. ಅವು ಕಲ್ಲು, ಕೋಟೆ ಕೋಡು, ಗುಡ್ಡ, ಗುಪ್ಪೆ, ದಡ, ದೊಲ್ಲೆ, ನಗ, ತಿಟ್ಟು ಬೆಟ್ಟ, ಮಲೆ, ಮುರಟಿ, ಯಡ ಮೊದಲಾದವು.

### ಉನ್ನತ ನಿಮ್ನ ಭೂವಾಚಕಗಳು

ಕಲ್ಲು : ಕೆಲ್ಲಂಬಳ್ಳಿ, ಕಲ್ಪುರ, ಕಲ್ಲಹಳ್ಳಿ, ವಡ್ಡಗಲ್ಲೆ ಪುರ, ವಡ್ಡಗಲ್ಲೆಪುರದ ಹುಂಡಿ

ಕೋಟೆ : ಕೊಟ್ಟಗನಹಳ್ಳಿ, ಕೋಟಂಬಳ್ಳೀ, ಹರಳುಕೋಟೆ

ಕೋಡು : ಮೂಡನಕೋಡು ಹೊಸಳ್ಳಿ

ಗುಡ್ಡ : ಗುಡ್ಡದ ಮಠ ಹಿತ್ತಲಗುಡ್ಡ

ಗುಪ್ಪೆ : ಬದನಗುಪ್ಪೆ

ದಡ : ದಡದಹಳ್ಳಿ

ದೊಕ್ಕೆ : ದೊಕ್ಕೆಪುರ

ನಗ (ಬೆಟ್ಟ) : ನಾಗವಳ್ಳಿ

ತಿಟ್ಟು : ಬೂದಿತಿಟ್ಟು

ಬೆಟ್ಟ : ಬೆಟ್ಟದಪುರ, ಬೆಟ್ಟಹಳ್ಳಿ

ಮಲೆ : ಮಲೆಯೂರು

ಮುರಟಿ : ಮುರಟಿ ಪಾಳ್ಯ

ಯಡ (ಬೆಟ್ಟ) : ಯಡಪುರ, ಯೆಡಿಯೂರು, ಯಡಹಳ್ಳಿ ಇತ್ಯಾದಿಗಳು

ನಿರ್ದಿಷ್ಟ ಸ್ಥಳಗಳ ಆಕಾರ, ವಿಸ್ತಾರ, ಗಾತ್ರ, ವಿಸ್ತೀರ್ಣಕ್ಕೆ ಅನುಗುಣವಾಗಿ ಊರ ಹೆಸರುಗಳು ಕಂಡುಬಂದಿವೆ. ಗುಣವಾಚಕ, ವಿಶೇಷಗಳ ಜೊತೆಗೆ ಆಯಾಯಾ ಊರುಗಳ ಭೌಗೋಳಿಕ ವಿವರಣೆಗಳು ತಿಳಿದುಬರುತ್ತದೆ. ಅದನ್ನು ಈ ಕೆಳಗಿನ ಉದಾಹರಣೆಗಳಿಂದ ತಿಳಿಯಬಹುದು.

ಚಿಕ್ಕ : ಚಿಕ್ಕ ಬೇಗೂರು, ಚಿಕ್ಕಮೊಳೆ, ಚಿಕ್ಕಮೂಡಳ್ಳಿ

ದೊಡ್ಡ : ದೊಡ್ಡಮೋಳೆ, ದೊಡ್ಡಮೂಡಳ್ಳಿ, ದೊಡ್ಡರಾಯಪೇಟೆ

ಮುಕ್ಕಡಿ : ಮುಕ್ಕಡಹಳ್ಳಿ

ಹಿರಿದು (ದೊಡ್ಡ) : ಹೀರೆ ಬೇಗೂರು

ಕಿರಿದು (ಚಿಕ್ಕ) : ಕಿರಗಸೂರು ಕಿರುಗೊಕಾರ

ಹೆಗ್ಗ (ದೊಡ್ಡ) : ಹೆಗ್ಗವಾಡಿ, ಹೆಗ್ಗವಾಡಿಪುರ

ಹೆಬ್ಬ (ದೊಡ್ಡ) : ಹೆಬ್ಬಸೂರು

ಹಳೆ (ಪ್ರಾಚೀನ) : ಹಳೇ ಆಲೂರು, ಹಳೇಪುರ, ಹಳೇಸರಗೂರು

ಹೊಸ (ನವೀನ) : ಹೊಸಪುರ, ಹೊಸೂರು, ಹೊಸಹಳ್ಳಿ, ಹೊಸವೋಡು

## ದ್ವಿಗ್ವಾಚಕಗಳು

ದ್ವಿಗ್ವಾಚಕಗಳಾಗಿ ಬಳಕೆಗೊಂಡಿರುವ ಸ್ಥಳನಾಮಗಳು.

ಕೆಳಗೆ : ಕುಳ್ಳೂರು

ಪಡುವಣ : ಪಡನಾಕೋಡು, ಪಡನಾಕೋಡು, ಹೊಸಳ್ಳಿ, ಪಡುಗಲಮೋಳೆ

ಬಡಗಲು : ಬಡಗಲಪುರ, ಬಡಗಲಪುರದ ಮೋಳೆ

ಮೂಡಣ : ಮೂಡನಕೋಡು, ಮೂಡಲಪುರ, ಮೂಡಲ ಅಗ್ರಹಾರ, ಮೂಡಲಹೊಸಳ್ಳಿ, ಮೂಡಲಹೊಳೆ

ಮೇಲೆ : ಮೇಗಲಹುಂಡಿ, ಮೇಲೂರು, ಮೇಲಾಜಿಪುರ

ಎಡೆ + ಊರು = ಎಡೆಯೂರು ಯಡಿಯೂರು (ಎ ಯ)

## ಸ್ಥಳವಾಚಕಗಳಾಗಿ ಬಳಕೆಗೊಂಡಿರುವ ಗ್ರಹಗಳು

ಕೇತು : ಕೇತಹಳ್ಳಿ

ಚಂದ್ರ : ಸೋಮನಪುರ

ಮಂಗಳ : ಮಂಗಲ

ಶನಿ : ಶನಿವಾರ ಮುಂಟಿ

ಕ್ಷೇತ್ರವಾಚಕ

ವ್ಯವಸಾಯಕ್ಕೆ ಯೋಗ್ಯವಾದ ಅಥವಾ ಯೋಗ್ಯವಲ್ಲದ ಮಣ್ಣಿನ ಬಗೆಗಳನ್ನು ಸೂಚಿಸುವಂತಹ ಘಟಕಗಳು.

ಕೆಬ್ಬೇ : ಕೆಬ್ಬೇಪುರ, ಕೆಬ್ಬೆಪಾಳ್ಯ

ಬೂದಿ : ಬೂದಂಬಳ್ಳಿ, ಬೂದಿತಿಟ್ಟು, ಬೂದಿಪಡಗ, ಬೂದಂಬಳ್ಳಿ ಮೋಳೆ

ಮಾಳ : ಒಂದುಕಾಸಿನ ಮಾಳ, ಮೇಲ್ಮಾಳ

ವಗರೆ : ವಾಗರಪುರ

ಬಾಳು : ಹೊಂಡಬಾಳು, ಹೊಂಡರಬಾಳು ಕಾಲೋನಿ

ಕೊಡಾರ : ಹೆಗ್ಗೊಠಾರ

ಕರಲೆ : ಕರಲೆಮೋಳೆ

ಶಿಲಾವಾಚಕ

ಅರೆ : ಅರಕಲವಾಡಿ

ಕಂಚು : ಕಾಂಚನಹಳ್ಳಿ

ಕಲ್ಲೆ : ಕಲ್ಲೆಪುರ, ಕಲ್ಲಹಳ್ಳಿ

ಎರಕ (ಖನಿಜ) : ಎರಗನಹಳ್ಳಿ

ಸುವರ್ಣ : ಸುವರ್ಣನಗರ

ಹರಳು : ಹರಳುಕೋಟೆ

ಹೊನ್ನು(ಚಿನ್ನ) : ಹೊಮ್ಮ, ಹೊನ್ನಹಳ್ಳಿ

ಅರಣ್ಯಕ್ಕೆ ಸಂಬಂಧಿಸಿದ ಸ್ಥಳನಾಮಗಳು

ಅಡವಿ : ಬೆಡಗುಳಿ ರಾಜ್ಯ ಅರಣ್ಯ, ಹರದನಹಳ್ಳಿ ಜಿಲ್ಲಾ ಅರಣ್ಯ

ಕಾಡು : ಕಾಡಹಳ್ಳಿ

ಬನ : ಬಸಹಳ್ಳಿ

ಸಸ್ಯವಾಚಕಗಳು

ಯಾವ ಸ್ಥಳಗಳಲ್ಲಿ ನಿರ್ದಿಷ್ಟ ಜಾತಿಯ ಮರ, ಗಿಡ, ಬಳ್ಳಿ, ಮೆಳೆ, ಬೆಳೆ, ಹುಲ್ಲು, ಸೊಪ್ಪು, ಹೂವು, ಹಣ್ಣು ಇತ್ಯಾದಿಗಳು ಹೆಚ್ಚಾಗಿ ಬೆಳೆಯುತ್ತವೆಯೋ ಅವಕ್ಕೆ ಅನುಗುಣವಾಗಿ ಸ್ಥಳನಾಮಗಳು ಹುಟ್ಟಿಕೊಂಡಿರುವುದನ್ನು ನೋಡಬಹುದು.

ಅರಳಿ : ಅರಳೀಕಟ್ಟೆ

ಆಲ : ಆಲದೂರು, ಆಲೂರು, ಮರಿಯಾಲ, ಮರಿಯಾಲದ ಹುಂಡಿ

ಉಗನೆ : ಉಗನೇದಹುಂಡಿ, ಕೋಡಿ ಉಗನೆ

ಉಮ್ಮತ್ತಿ : ಉಮ್ಮತ್ತೂರು

ಎಲೆ : ಎಲಕ್ಕೂರು

ಕಗ್ಗಲಿ : ಕಗ್ಗಲೀಪುರ

ಕಳ್ಳೀ : ಕಳ್ಳೀಪುರ

ಕಾರೆ : ಕಾರೇಪುರ

ಜಾಲ : ಜಾಲಹಳ್ಳಿ, ಹುಂಡಿ

ನೆಲ್ಲು (ಬತ್ತ) : ನಲ್ಲೂರು, ನೆಲ್ಲೂರು

ತಾವರೆ : ತಾವರೆಕಟ್ಟೆ ಮೋಳೆ

ಬದನೆ : ಬದನೆಗುಪ್ಪೆ

ಬಳ್ಳಿ : ಬಳ್ಳಿಪುರ

ಬಾಗೆ : ಬೇಗೂರು

ಬೇವು : ಬೇವಿನತಾಳಪುರ

ಬಿಲ್ವಪತ್ರೆ : ಬೆಲವತ್ತ

ಬೆಜ್ಜಲು : ಬೆಜ್ಜಲಪಾಳ್ಯ

ಮಾದಲ : ಮಾದಲವಾಡಿ

ಮುತ್ತುಗ : ಮುತ್ತಿಗೆ

ಯಲಜಿ(ಎಲಚಿ) : ಯಲಜಿಗೆರೆ

ಹುಂಗ್ರೇ : ಹುಂಗ್ರೇಪುರ

ಹುಂಚಿ : ಹುಂಚಿತಾಳಪುರ

ಹಾಗಲ : ಹಾಗಲಬೆಲೆ

ಹುರಳಿ : ಹುರಳಿನಂಜಪುರ, ಹುಳ್ಳಿಕಟ್ಟೆಮೋಳೆ

ಹೊಂಗೆ : ಹೊಂಗನೂರು, ಹೊಗೆಕೆರೆ ಮೋಳೆ, ಹೊಂಗಲವಾಡಿ

ಪ್ರಾಣಿವಾಚಕಗಳು

ಪ್ರಾಣಿ ಮತ್ತು ಪಕ್ಷಿಗಳಿಂದಲೂ ಊರುಗಳಿಗೆ ಹೆಸರು ಬಂದಿರುವುದನ್ನು ಕಾಣಬಹುದು. ಅವು ಸಾಕುಪ್ರಾಣಿಗಳಾಗಿರಬಹುದು ಅಥವಾ ಕಾಡಿನ ಪ್ರಾಣಿಪಕ್ಷಿಗಳಾಗಿರಬಹುದು.

ಕರಡಿ : ಕರಡಿಮೋಳೆ, ಕರಡಿಹಳ್ಳಿ

ಕೋಳಿ : ಕೋಳಿಪಾಳ್ಯ, ಕೊಕ್ಕನಹಳ್ಳಿ

ಗೂಳಿ : ಗೂಳಿಪುರ

ನವಿಲು : ನವಿಲೂರು

ಬಸವ (ಎತ್ತು) : ಬಸವಟ್ಟಿ

ಭುಜಗ (ಸರ್ಪ) : ಭುಜಗನಪುರ, ಭೋಗಪುರ

ಮಂಗ (ಕೋತಿ) : ಮಂಗನಹಳ್ಳಿ

ಸಿಂಗ (ಸಿಂಹ) : ಸಿಂಗನಪುರ

ಹುಲ್ಲೆ : ಹುಲ್ಲೇಪುರ

ಸಾಂಸ್ಕೃತಿಕ ಸ್ಥಳನಾಮಗಳು

ಸಾಮಾನ್ಯವಾಗಿ ಸ್ಥಳನಾಮಗಳ ವರ್ಗೀಕರಣದಲ್ಲಿ ಪ್ರಾಕೃತಿಕ ಅಂಶಗಳನ್ನೊಳಗೊಂಡ ಘಟಕಗಳು ಮೂಲಭೂತವಾಗಿರುತ್ತದೆ. ಆದರೆ ಸಾಂಸ್ಕೃತಿಕ ವಿಭಾಗದಲ್ಲಿ ಐತಿಹಾಸಿಕ ವೀರರು ರಾಜರು, ಸಾಮಾನ್ಯ ವ್ಯಕ್ತಿಗಳು ತಮ್ಮ ಹೆಸರಿನಲ್ಲಿ ಕೆಲವು ಊರುಗಳನ್ನು ದಾನ, ದತ್ತಿ ಬಳುವಳಿಯಾಗಿ ಕೊಟ್ಟಿರುತ್ತಾರೆ ಹಾಗೂ

ವಿವಿಧ ಧರ್ಮ, ಜಾತಿ ಕುಲಕಸುಬಿನ ಜನರು ಹೆಚ್ಚಾಗಿ ವಾಸವಾಗಿದ್ದು, ಸಾಂಸ್ಕೃತಿಕವಾದ ಕೊಡುಗೆಗಳನ್ನು ನೀಡಿದ್ದರೆ ಆ ಕಾರಣಗಳಿಂದಲೂ ಸ್ಥಳಗಳಿಗೆ ಹೆಸರು ಬಂದಿರುವ ಸಾಧ್ಯತೆ ಇರುತ್ತದೆ.

ಈ ತಾಲೂಕನ್ನು ಆಳಿದ ಐತಿಹಾಸಿಕ ಪರಂಪರೆಯನ್ನು ಮೆರೆಸಿರುವ ರಾಜಮಹಾರಾಜರು ಪ್ರಾಂತ್ಯಾಧಿಕಾರಿಗಳು, ದಂಡನಾಯಕರು, ಪಾಳೆಯಗಾರರು, ಗೌಡರು ಮೊದಲಾದವರಿಗೆ ಸಂಬಂಧಿಸಿದಂತೆ ಸ್ಥಳನಾಮಗಳು ಹುಟ್ಟಿಕೊಂಡಿವೆ.

**ಐತಿಹಾಸಿಕ ಸಾಮಾನ್ಯ ಸ್ಥಳನಾಮಗಳು**

ಅಮಚ : ಅಮಚವಾಡಿ

ವೀರ : ವೀರನಪುರ

ಕೇತ(ಕ್ಯಾತ) : ಕೇತನಹಳ್ಳಿ

**ಇತಿಹಾಸಪೂರ್ವ ಪ್ರಾಚೀನ ನೆಲೆಗಳ ಸ್ಥಳನಾಮಗಳು**

ಬೂದು : ಬೂದಂಬಳ್ಳಿ, ಬೂದಂಬಳ್ಳಿ ಮೊಳೆ, ಬೂದಿತಿಟ್ಟು, ಬೂದುಪಡಗ

**ಆಡಳಿತಕ್ಕೆ ಸಂಬಂಧಪಟ್ಟ ಸ್ಥಳನಾಮಗಳು**

ಕೋಟೆ : ಹರಳುಕೋಟೆ

ಗೌಡ : ದೇಶೇಗೌಡನಪುರ, ಪುಟ್ಟೇಗೌಡನಹುಂಡಿ, ಬಂದಿಗೌಡನಹಳ್ಳಿ, ಹೊನ್ನೇಗೌಡನ ಹಳ್ಳಿ

ಪಾಳೆಯ : ತಿಮ್ಮೇಗೌಡನ ಪಾಳ್ಯ, ಬಸಪ್ಪನಪಾಳ್ಯ, ಮೂಕನಪಾಳ್ಯ

ಛತ್ರ : ವೆಂಕಟಯ್ಯನ ಛತ್ರ

**ವ್ಯಾಪಾರಕೇಂದ್ರಗಳನ್ನು ಸೂಚಿಸುವ ಸ್ಥಳನಾಮಗಳು**

ನಗರ : ಚಾಮರಾಜನಗರ, ನಗರಪುರ

ಪೇಟೆ : ದೊಡ್ಡರಾಯಪೇಟೆ, ಸೋಮವಾರಪೇಟೆ

ವಾಣಿಜ್ಯ : ವಾಣಿಜ್ಯಪುರ, ಹರದನಹಳ್ಳಿ

ಸಂತೇ : ಸಂತೇಮಾರನಹಳ್ಳಿ

**ಐತಿಹಾಸಿಕ ವ್ಯಕ್ತಿಗಳ ಹೆಸರಿನಲ್ಲಿರುವ ಸ್ಥಳನಾಮಗಳು**

ಗಂಗರಸ : ಗಂಗವಾಡಿ

ಚಾಮರಾಜ : ಚಾಮರಾಜನಗರ

ದೇವರಾಜ : ದೇವರಾಜಪುರ

ದೊಡ್ಡರಾಯ : ದೊಡ್ಡರಾಯಪೇಟೆ

ನಂಜರಾಜ : ನಂಜರಾಜನಪುರ

ನರಸ : ನರಸಮಂಗಲ

**ವ್ಯಕ್ತಿನಾಮಗಳು**

ಸಾಮಾನ್ಯವಾಗಿ ಕೆಲವು ಊರುಗಳಿಗೆ ಹೆಸರುಗಳು ವ್ಯಕ್ತಿಯ ಹೆಸರುಗಳಿಂದ ಬಂದಿರುತ್ತವೆ. ಇವನು ಊರಿನ ಮುಖಂಡ, ಯಜಮಾನ, ಚೇರ್ಮನ್ , ಪಟೇಲ್ , ಶಾನುಭೋಗನಾಗಿರುತ್ತಾನೆ. ಅಲ್ಲಿನ ಸರ್ವತೋಮುಖ ಬೆಳವಣಿಗೆಗೆ ಕಾರಣನಾಗಿದ್ದು, ಕಾಲಕ್ರಮೇಣ ಆ ವ್ಯಕ್ತಿಯ ಹೆಸರೇ ಊರ ಹೆಸರುಗಳಾಗಿರುವುದನ್ನು ಕಾಣಬಹುದು. ಇವುಗಳನ್ನು ಎರಡು ಭಾಗಗಳಾಗಿ ವಿಂಗಡಿಸಬಹುದು.

**ಪುರುಷ ಸೂಚಕ ಸ್ಥಳನಾಮಗಳು**

ಕೆಂಚ : ಕೆಂಚನಹಳ್ಳಿ

ಕರಿನಂಜ : ಕರಿನಂಜಪುರ

ಕರಿಯ : ಕರಿಯನಕಟ್ಟೆ

ಕಾಳ : ಕಾಳನಹುಂಡಿ

ಕೆಂಪ : ಕೆಂಪನಪುರ

ಚೆನ್ನಪ್ಪ : ಚೆನ್ನಪ್ಪಪುರ

ನಂಜ : ನಂಜಹಳ್ಳಿ

ನಿಜಲಿಂಗ : ನಿಜಲಿಂಗನಪುರ

ಬಸವ : ಬಸವನಪುರ

ಬೊಮ್ಮ : ಬೊಮ್ಮನಹಳ್ಳಿ

ಭೋಗ : ಭೋಗಾಪುರ

ಮಲ್ಲ : ಮಲ್ಲಯ್ಯನಪುರ

ರಾಚ : ರಾಚಯ್ಯ ಕಾಲೋನಿ

ರಾಮ : ರಾಮಯ್ಯನ ಪೋಡು

ಲಿಂಗ : ಲಿಂಗನಾಪುರ

ಶ್ರೀನಿವಾಸ : ಶ್ರೀನಿವಾಸಪುರದ ಕಾಲೋನಿ

ಸಪ್ಪ : ಸಪ್ಪಯ್ಯನಪುರ

ಸಿದ್ದ : ಸಿದ್ದಯ್ಯನಪುರ

ಸೊತ್ತ : ಸೊತ್ತನಹುಂಡಿ

ಸೋಮ : ಸೋಮನಪುರ

ಸ್ತ್ರೀ ಸೂಚಕ ಸ್ಥಳನಾಮಗಳು

ಅಮ್ಮ : ಅಮ್ಮನಪುರ

ಕುಂಟಿ : ಕುಂಟಿಗುಡಿ ಕಾಲೋನಿ

ಕಾಡಿ : ಕಾಡಿಗೆರೆ

ಚೆನ್ನಿ : ಚೆನ್ನಿಪುರದ ಮೋಳೆ

ದೇವಿ : ದೇವಲಾಪುರ

ಲಕ್ಷ್ಮೀ : ಲಕ್ಷ್ಮೀಪುರ

ಜಾತಿ ಮತ್ತು ಕಸುಬು ಆಧಾರಿತ ಸ್ಥಳನಾಮಗಳು

ಈಡಿಗ : ಈಡಿಗರ ಹುಂಡಿ

ಕುರುಬ : ಕುರುಬರ ಹುಂಡಿ

ಕುಂಬಾರ : ಕುಂಬಾರಗುಂಡಿ

ಜೋಗಿ : ಜೋಗಿ ಕಾಲೋನಿ

ಗಾಣಿಗ : ಗಾಣಿಗನೂರು, ಗನಿಗನೂರುಪುರ

ಬೇಡ : ಬೇಡಗುಳಿ, ಬೇಡರಪುರ

ಮಾದಿಗ : ಸಂತೇಮಾರನಹಳ್ಳಿ, ಮಾರನಹಳ್ಳಿ, ಮಾದನಹಳ್ಳಿ, ಮಾದರಹಳ್ಳಿ, ಮಾದಿಗಹಳ್ಳಿ, ಮಾದಾಪುರ

ವಡ್ಡರು : ವಡ್ಡರಹಳ್ಳಿ

ಹರದರು(ವರ್ತಕರು) : ಹರದನಹಳ್ಳಿ

ಹಾರುವರು : ಹಾರಗನಪುರ

**ದೈವವಾಚಕಗಳು(ದೈವ, ಧರ್ಮ)**

ವಿವಿಧ ಬಗೆಯ ಧರ್ಮಗಳು ಮತ್ತು ಆ ಧರ್ಮದ ಹೆಸರಿನ ಆರಾಧ್ಯ ದೈವಗಳು ನೆಲೆಗೊಂಡಿರುವ ಸ್ಥಳಗಳಿಗೆ ಸಂಬಂಧಿಸಿದ ಸ್ಥಳನಾಮಗಳು ಕಂಡುಬರುತ್ತವೆ.

**ವೈಷ್ಣವ ಧರ್ಮ**

ಗೋವಿಂದ : ಗೋವಿಂದವಾಡಿ

ದಾಸ : ದಾಸನಪುರ

ರಂಗ : ಶ್ರೀರಂಗಪುರ

ರಾಮ : ರಾಮಸಮುದ್ರ

ಹನುಮ : ಹನುಮನಪುರ

ಲಕ್ಷ್ಮೀ : ಲಕ್ಷ್ಮೀಪುರ

**ಶೈವಧರ್ಮ**

ಈಶ್ವರ : ಮುನೇಶ್ವರ ಕಾಲೋನಿ, ಕುಂಬೇಶ್ವರ ಕಾಲೋನಿ

ನಂಜ : ನಂಜಹಳ್ಳಿ, ನಂಜೇದೇವನಪುರ

ಬಸವ : ಬಸವಟ್ಟಿಗೆ, ಬಸವಾಪುರ

ಮಲ್ಲ : ಮಲ್ಲದೇವನಪುರ, ಮಲ್ಲುಪುರ

ಮಾದೇವ : ಮಾದಾಪುರ, ಮಹದೇಶ್ವರ ಕಾಲೋನಿ

ಶಿವ : ಶಿವಪುರ

ಶಂಭು : ಶಂಭುಪುರ, ಶಂಕರಪುರ

ಸೋಮ : ಸೋಮನಪುರ

ಶೈವಧರ್ಮದ ಉಪಜಾತಿಗೆ ಸೇರಿದ ಸ್ಥಳನಾಮಗಳು

ಅಯ್ಯ(ಜಂಗಮ) : ಅಯ್ಯನಪುರ, ಐಯ್ಯಂಬಳ್ಳಿ, ಉಯ್ಯಂಬಳ್ಳಿ

ತಮ್ಮಡಿ : ತಮ್ಮಡಹಳ್ಳಿ

ಸಪ್ಪಯ್ಯ : ಸಪ್ಪಯ್ಯನಪುರ

ಜೈನಧರ್ಮ

ಬಸದಿ : ಬಸ್ತೀಪುರ

ಜನಪದ ದೇವತೆಗಳ ಸ್ಥಳನಾಮಗಳು

ಪ್ರತಿಯೊಂದು ಊರಿನ ಸ್ಥಳಗಳಿಗೂ ಅಲ್ಲಿನ ಗ್ರಾಮ ದೇವತೆಗಳ ನಾಮಾಂಕಿತಗಳಿಂದಲೂ ಹೆಸರುಗಳು ಬಂದಿರುವುದನ್ನು ಗುರುತಿಸಬಹುದು.

ಅಮ್ಮ : ಅಮ್ಮನಪುರ

ಕಾಳಿ : ಕಾಳಿಕಾಂಬ ಕಾಲೋನಿ

ಕ್ಯಾತಯ್ಯ : ಕ್ಯಾತೇದೇವರಗುಡಿ (ಕೆ.ಗುಡಿ)

ಚೌಡಿ : ಚೌಡಹಳ್ಳಿ

ಚಂದಕ : ಚಂದಕವಾಡಿ

ಮಸಣ : (ದುರ್ಗಿ) ಮಸಣಾಪುರ

ಮಾರಿ : ಮಾರಿಗುಡಿ, ಪೋಡು

ಕುಂಟಿ : ಕುಂಟಿಗುಡಿ ಕಾಲೋನಿ

ವಾಸ್ತವ್ಯ ಸೂಚಕ ಸ್ಥಳನಾಮಗಳು

ಅಗ್ರಹಾರ : ಮೂಡಲ ಅಗ್ರಹಾರ, ಪಡುವಲ ಅಗ್ರಹಾರ

ಊರು : ಆಲೂರು, ಅಲದೂರು, ಉಮ್ಮತ್ತೂರು, ಕಸ್ತೂರು, ಕಿರಗಸೂರು, ಕುಳ್ಳೂರು, ಕೂಡ್ಲೂರು, ಗಣಗನೂರು, ಚಿಕ್ಕಬೇಗೂರು, ಜನ್ನೂರು, ಮುಳೂರು, ತೊಣ್ಣೂರು, ನಲ್ಲೂರು, ನೆಲ್ಲೂರು, ಪುಣಜನೂರು, ಮಲೆಯೂರು, ಮುಳೂರು, ಮೇಲೂರು, ಯಲಕ್ಕೂರು, ಯಡಿಯೂರು, ಸರಗೂರು, ಸುತ್ತೂರು, ಹಳೇಸರಗೂರು, ಹಳೇ ಆಲೂರು, ಹಿರೆ ಬೇಗೂರು, ಹೆಬ್ಬಸೂರು, ಹೊಂಗನೂರು.

ಉಗನೆ : ಕೋಡಿ ಉಗನೆ

ಕಟ್ಟೆ : ಅರಳೀಕಟ್ಟೆ, ಕರಿಯನಕಟ್ಟೆ, ತಾವರೆಕಟ್ಟೆ

ಕಾಲೋನಿ : ಕಾಳಿಕಾಂಬ ಕಾಲೋನಿ, ಕುಂಟಿಗುಡಿ ಕಾಲೋನಿ, ಕುಂಬೇಶ್ವರ ಕಾಲೋನಿ, ಜಿ.ರಾಚಯ್ಯ ಕಾಲೋನಿ, ಜೋಗಿಕಾಲೋನಿ, ಬಂದೀಗೌಡನಹಳ್ಳಿ ಕಾಲೋನಿ, ಬೇಡಗುಳಿ ಕಾಲೋನಿ, ಮಹದೇಶ್ವರ ಕಾಲೋನಿ, ಮನೇಶ್ವರ ಕಾಲೋನಿ, ಶ್ರೀನಿವಾಸಪುರದ ಕಾಲೋನಿ, ಹೊಂಗಲವಾಡಿ ಕಾಲೋನಿ, ಹೊಂಡರಬಾಳು ಕಾಲೋನಿ.

ಕೆರೆಗೆರೆ : ಕಣಕೆರೆ, ಕಾಡಿಗೆರೆ, ಕಿಲಗೆರೆ, ಬಂಡಿಗೆರೆ, ಯಲಚಗೆರೆ

ಕೊಠಾರ : ಅರಿಕುಠಾರ, ಕಿರುಕೊಠಾರ, ಹೆಗ್ಗೋಠಾರ

ಕೊಟೆ : ಹರಳು ಕೊಟೆ

ಕೋಡು : ಮುಡನಾಕೋಡು, ಪಡನಾಕೋಡು

ಗಾಣ : ಕುಲಗಾಣ

ಗುಡಿ : ಕ್ಯಾತ್ದೇವರಗುಡಿ

ಗುಡ್ಡ : ಹಿತ್ತಲಗುಡ್ಡ

ಗುಪ್ಪೆ : ಬದನಗುಪ್ಪೆ

ಗುಳಿ : ಬೇಡಗುಳಿ

ಗುಂಡಿ : ಕುಂಬಾರಗುಂಡಿ

ಗುಂಬ : ಯೆನಗುಂಬ

ಛತ್ರ : ವೆಂಕಟಯ್ಯನಛತ್ರ

ತಿಟ್ಟು : ಬೂದುತಿಟ್ಟು

ದೊಡ್ಡಿ : ಗೋಡೆಮಡುವಿನದೊಡ್ಡಿ, ಹೆತ್ತೇಗೌಡನದೊಡ್ಡಿ

ನಗರ : ಚಾಮರಾಜನಗರ, ಸುವರ್ಣನಗರ

ಪಾಳೆಯ(ಪಾಳ್ಯ): ಕೋಳಿಪಾಳ್ಯ, ತಿಮ್ಮೇಗೌಡನ ಪಾಳ್ಯ, ಬಸಪ್ಪನ ಪಾಳ್ಯ, ಬೆಜ್ಜಲ ಪಾಳ್ಯ, ಮುರಟಿಪಾಳ್ಯ, ಮೂಕನಪಾಳ್ಯ.

ಪುರ : ಅಂಕನಶೆಟ್ಟಿಪುರ, ಅಚ್ಚಟ್ಟಿಪುರ, ಅಟ್ಟುಗುಳಿಪುರ, ಅಮ್ಮನಪುರ, ಅಯ್ಯನಪುರ, ಅಯ್ಯನಪುರ ಅರ, ಅರಳೀಪುರ, ಕಗ್ಗಲೇಪುರ, ಕಟ್ಟೆಪುರ, ಕನ್ನಯ್ಯನಪುರ, ಕರಿನಂಜನಪುರ, ಕಲ್ಪುರ, ಕಲ್ಲೀಪುರ, ಕಾರೇಪುರ, ಕಿಂಡಯ್ಯನಪುರ, ಕಿಲಲೀಪುರ, ಕೂತನಪುರ, ಕೆಬ್ಬೇಪುರ, ಕೆಂಪನಪುರ, ಕೇತನಪುರ, ಕೊಳಗನಪುರ, ಗಣಿಗನೂರುಪುರ, ಗಾಳಿಪುರ, ಗೂಳಿಪುರ, ಚನ್ನಪ್ಪನಪುರ, ಚಾಟೀಪುರ, ಚುಂಗಡಿಪುರ, ಜ್ಯೋತಿಗೌಡನಪುರ, ಡೊಳ್ಳೀಪುರ, ದಾಸನಪುರ, ದೇಶೇಗೌಡನಪುರ, ದೇವರಾಜಪುರ, ದೇವಲಪುರ, ದೊಕ್ಕೆಪುರ, ನಂಜರಾಜನಪುರ, ನಂಜೇದೇವನಪುರ, ನಿಜಲಿಂಗಪುರ, ಪಟ್ಟನಾಪುರ, ಪಣಜನೂರು, ಬಡಗಲಪುರ, ಬಸವನಪುರ, ಬಸವಾಪುರ, ಬಸ್ತೀಪುರ, ಬಳ್ಳಿಪುರ, ಬೆಟ್ಟದಪುರ, ಬೊಕ್ಕೆಪುರ, ಮಲ್ಲಯ್ಯನಪುರ, ಮಲ್ಲಯ್ಯನಪುರ ಬಿ, ಮಲ್ಲುಪುರ, ಮಸಗಾಪುರ, ಮಸಣಾಪುರ, ಮಹಂತಾಳಪುರ, ಮಂಚಗುಂಡಿಪುರ, ಮಾದಾಪುರ, ಯಡಪುರ, ಲಕ್ಷ್ಮೀಪುರ, ಲಿಂಗನಪುರ, ಲಿಂಗರಾಜಪುರ, ವಡ್ಡಗಲ್ಲೆಪುರ, ವಗರೆಪುರ, ವೀರನಪುರ, ವೀರಯ್ಯನಪುರ, ಶಿವಪುರ, ಶ್ರೀರಂಗಪುರ, ಶಂಭುಪುರ, ಸಪ್ಪಯ್ಯನಪುರ, ಸಿದ್ದಯ್ಯನಪುರ, ಸಿದ್ದಲಿಂಗನಪುರ, ಸಿಂಗನಪುರು, ಸೋಮನಪುರ, ಹನುಮನಪುರ, ಹಂಗ್ರೇಪುರ, ಹಂಚಿತಾಳಪುರ, ಹಳೇಪುರ, ಹಾರಗನಪುರ, ಹುಲ್ಲೇಪುರ, ಹುರುಳಿನಂಜನಪುರ, ಹೆಗ್ಗವಾಡಿಪುರ, ಹೊಸಪುರ.

ಪೋಡು : ಕಾರನಜಡೆಯಪೋಡು, ಬಿಸಗೆರೆಪೋಡು, ಮಾರಿಗುಡಿಪೋಡು, ರಾಮೇಗೌಡನಪೋಡು, ಹೊಸಪೋಡು.

ಬಸದಿ : ಬಸ್ತೀಪುರ

ಬಾಳು : ಹೊಂಡರಬಾಳು

ಬೀಡು : ಮಡುವಿನಬೀಡು

ಮಠ : ಗುಡ್ಡದ ಮಠ

ಮಂಗಲ : ನರಸಮಂಗಲ, ಮಂಗಲ

ಮೋಳೆ : ಕರಡಿಮೋಳೆ, ಕಾಗವಾಡಿ ಮೋಳೆ, ಕೋಡಿಮೋಳೆ, ಚನ್ನುಪುರದ ಮೋಳೆ, ಚಂದುಕಟ್ಟೆ ಮೋಳೆ, ನಾಗವಳ್ಳಿ ಮೋಳೆ, ಪಡುಗಲ ಮೋಳೆ, ಬೂದಂಬಳ್ಳಿ ಮೋಳೆ, ಮೂಡಲಮೋಳೆ, ಸರಗೂರು ಮೋಳೆ, ಹಂಡ್ರಕಳ್ಳಿ ಮೋಳೆ, ಹುಳ್ಳಿಕೆಬ್ಬೆ ಮೋಳೆ.

ವಾಡಿ : ಅಮಚವಾಡಿ, ಇರಸವಾಡಿ, ಕಟ್ನವಾಡಿ, ಕಾಗಲವಾಡಿ, ಕಮರವಾಡಿ, ಕಾವುದವಾಡಿ, ಕೊತ್ತಲವಾಡಿ, ಗಂಗವಾಡಿ, ಗೋವಿಂದ ವಾಡಿ, ಚಂದಕವಾಡಿ, ಬಿಸಲವಾಡಿ, ಬಾನಗವಾಡಿ, ಬೆಂಡರವಾಡಿ, ಮೊದಲವಾಡಿ, ಹೆಗ್ಗವಾಡಿ, ಹೊಂಗಲವಾಡಿ.

ಸಮುದ್ರ : ರಾಮಸಮುದ್ರ, ಸೋಮಸಮುದ್ರ

ಹಟ್ಟಿ : ಗೋರಹಟ್ಟಿ, ಬಸವಟ್ಟಿ

ಹಳ್ಳ : ಕರಡಿಹಳ್ಳ

ಹಳ್ಳಿ :ಉತ್ತವಳ್ಳಿ, ಕಲ್ಲಹಳ್ಳಿ, ಕಾಡಹಳ್ಳಿ, ಕಾಂಚನಹಳ್ಳಿ, ಕುಮಚಹಳ್ಳಿ, ಕೆರೆಹಳ್ಳಿ, ಕೇತಹಳ್ಳಿ, ಕೊಕ್ಕನಹಳ್ಳಿ, ಕೊತ್ತಗಾರನಹಳ್ಳಿ, ಕೋಟಂಬಳ್ಳಿ, ಚಿಕ್ಕಮೂಡಹಳ್ಳಿ, ಚೌಡಹಳ್ಳಿ, ದೇಮಹಳ್ಳಿ, ದೇಶವಳ್ಳಿ, ದೊಡ್ಡಮೂಡಹಳ್ಳಿ, ನಂಜಹಳ್ಳಿ, ನಾಗವಳ್ಳಿ, ಪಡುವಣಕೋಡು ಹೊಸಹಳ್ಳಿ, ಬನಹಳ್ಳಿ, ಬಂದಿಗೌಡನಹಳ್ಳಿ, ಬೂದಂಬಳ್ಳಿ, ಬೆಟ್ಟದಹಳ್ಳಿ, ಬೆಟ್ಟಹಳ್ಳಿ, ಬೊಮ್ಮನಹಳ್ಳಿ, ಮಲ್ಲೇದೇವನಹಳ್ಳಿ, ಮಂಗನಹಳ್ಳಿ, ಮಾದಕಹಳ್ಳಿ, ಮುಕ್ಕಡಹಳ್ಳಿ, ಮೂಡಲಹೊಸಹಳ್ಳಿ, ಯಾನಗಳ್ಳಿ, ಯರಗನಹಳ್ಳಿ, ರೇಚಂಬಳ್ಳಿ, ವಡ್ಡರಹಳ್ಳಿ, ಸಂತೇಮಾರನಹಳ್ಳಿ, ಹರದನಹಳ್ಳಿ, ಹಂಡ್ರಕಳ್ಳಿ, ಹಸುರಳ್ಳಿ, ಹಾನಹಳ್ಳಿ, ಹೋನ್ನೇಗೌಡನಹಳ್ಳಿ, ಹೊನ್ನಹಳ್ಳಿ, ಹೊಸಹಳ್ಳಿ.

ಹುಂಡಿ : ಈಡಿಗರಹುಂಡಿ, ಉಗನೆದಹುಂಡಿ, ಕಡುವಿನಕಟ್ಟೆ ಹುಂಡಿ, ಕುರುಬರಹುಂಡಿ, ಕಾಳನಹುಂಟಿ, ಕೋಚೇಗೌಡನಹಂಡಿ, ಕೆಂಪಿಸಿದ್ದನಹುಂಡಿ, ಗೊದಲೆಹುಂಡಿ, ಜಾಲಹಳ್ಳಿ ಹುಂಡಿ, ಪುಟ್ಟೇಗೌಡನ ಹುಂಡಿ, ಮರಿಯಾಲದ ಹುಂಡಿ, ಮೇಗಲಹುಂಡಿ, ವಡ್ಡಗಲ್ಲೆಪುರದ ಹುಂಡಿ, ಹಳ್ಳಿಕೆರೆಹುಂಡಿ, ಹೊನ್ನೆಗೌಡನಹುಂಡಿ.

## ಚಾಮರಾಜನಗರ ತಾಲೂಕಿನ ಪ್ರಮುಖ ಸ್ಥಳನಾಮಗಳ ಐತಿಹಾಸಿಕ ಹಿನ್ನೆಲೆ

### ಅರಿಕುಠಾರ-ಚಾಮರಾಜನಗರ

ಇದು ಕನ್ನನಾಡಿನ ದಕ್ಷಿಣಭಾಗದ ಗಡಿಪ್ರದೇಶವಾಗಿದ್ದು, ಕೇರಳ ತಮಿಳುನಾಡುಗಳಿಂದಲೂ, ಬಿಳಿಗಿರಿ ರಂಗನಬೆಟ್ಟಗಾಡು, ಪುಣಜನೂರು ಕಾಡು, ಮಂಗಲದ ಗುಡ್ಡ ಮುಂತಾದವುಗಳಿಂದಲೂ ಸುತ್ತುವರಿಯಲ್ಪಟ್ಟ ಈ ಭೂಭಾಗವನ್ನು ಪ್ರಾಚೀನಕಾಲದಲ್ಲಿ ಎನ್ನೆನಾಡು, ಬಾಣನಾಡು, ಚತುರ್ವೇದಿ ಮಂಗಲ, ಅರಿಕುಠಾರ ಇವೆ ಮೊದಲಾದ ಹೆಸರುಗಳಿಂದ ಕರೆಯುತ್ತಿದ್ದರು. ಅವುಗಳಲ್ಲಿ ಅರಿಕುಠಾರವೆಂಬ ಹೆಸರು ಕುತೂಹಲಕಾರಿ ಯಾದದ್ದು, ಶಿಲಾಶಾಸನಗಳಲ್ಲೂ, ಕೆಲವು ಗ್ರಂಥಗಳಲ್ಲೂ ಅರಿಕುಠಾರಕ್ಕೆ ಬದಲಾಗಿ ಅರೆಕೊಠಾರ, ಅರೆಕುಠಾರ, ಅರೆಕೊಟ್ಟರಾ, ಅರುಕಠಾರ ಎಂಬ ಹೆಸರಿತ್ತೆಂದು ತಿಳಿದುಬರುತ್ತದೆ. ಗ್ರಂಥಗಳಲ್ಲಿ ಅರಿಮರ್ದನ

ಪುರ ಸಾಮ್ರಾಜ್ಯವೆಂಬ ಉಲ್ಲೇಖ ಬಂದಿರುವುದರಿಂದ ಅರಿಮರ್ಧನ ಎಂದರೆ ಅರಿಕುಠಾರ ಎಂಬುದಕ್ಕೆ ಸಮಾನಾರ್ಥವಾದ್ದರಿಂದ ಅರಿಕುಠಾರವೇ ಸೂಕ್ತ ಮತ್ತು ಕೆಲವೆಡೆ ಕಂಡುಬಂದಿರುವ ಅರಕೊಟಾರ, ಅರಕೊಟ್ಟಾರ ಮೊದಲಾದವು ಅಗಿರಲಾರವು ಎಂಬುದು ಸ್ಥಳೀಯ ಕೆಲವು ವಿದ್ವಾಂಸರ ಅಭಿಪ್ರಾಯ.[೬]

ಚಾಮರಾಜನಗರ ಪಾರ್ಶ್ವನಾಥ ಬಸದಿಯ ಶಿಲಾಶಾಸನವು ಈ ದೇವಾಲಯವನ್ನು ಕಟ್ಟಿಸಿದ ಪುಣಿಸಮಯ್ಯನು ಅರಿಗಳನ್ನು ಸದೆಬಡಿದನೆಂಬ ಅರ್ಥಬರುವಂತೆ ವರ್ಣಿಸುತ್ತದೆ.[೭] ಪಾರ್ಶ್ವನಾಥ ಬಸದಿಯ ನಿರ್ಮಾಣ ಕಾಲ ಕ್ರಿ.ಶ. ೧೧೧೬. ಹೀಗಾಗಿ ಅಂದಿನ ಪುಣಿಸಮಯ್ಯನ ಕಾರಣದಿಂದಲೂ ಅರಿಕಠಾರವೆಂಬ ಹೆಸರು ಬಂದಿರಬಹುದು. ಹಾಗೆಯೇ ಚಾಮರಾಜನಗರದ ಸಮೀಪವಿರುವ ಹರಳುಕೋಟೆಯಲ್ಲಿನ ಶಿಲಾಶಾಸನದಲ್ಲಿ (ಜನಾರ್ಧನಸ್ವಾಮಿ ದೇವಾಲಯದ ದಕ್ಷಿಣ ಪಾರ್ಶ್ವದಲ್ಲಿ) ಕೇರಳಾಂತಕ ಚತುರ್ವೇದಿ ಮಂಗಲವೆಂದು ಮತ್ತು ಇದೆ ಊರಿನ ಲಕ್ಷ್ಮೀಕಾಂತಸ್ವಾಮಿ ದೇವಾಲಯದ ಅಡಿಪಾಯದಲ್ಲಿ ಕೇರಳಾಂತಕ ಚತುರ್ವೇದಿಮಂಗಲ ಎಂದಿರುವುದರಿಂದಲೂ, ಆತಂಕ ನಾಶ ಮಾಡುವವನು ಮತ್ತು ಕೇರಳರು ಎಂದರೆ ಯಾವುದೇ ರೀತಿ ಉಪಟಳ ಕೊಡುತ್ತಿದ್ದ ಶತ್ರುಗಳು ಎಂದು ಅರ್ಥೈಸಿ ಆ ಕಾರಣದಿಂದ ಈ ಊರಿಗೆ ಅರಿಕುಠಾರವೆಂಬ ಹೆಸರು ಬಂದಿರಬಹುದೆಂದು ಅಭಿಪ್ರಾಯಿಸಬಹುದು.

ಈ ತಾಲೂಕಿನ ಜನ ಸುಸಂಸ್ಕೃತರು, ದಾನಶೀಲರು, ಧೈರ್ಯಶಾಲಿಗಳು ಇವರು ಆಗಾಗ್ಗೆ ತಮ್ಮ ಮೇಲೇರಿ ಬಂದ ಶತ್ರುಗಳನ್ನು ಹಿಮ್ಮೆಟ್ಟಿಸಿದ್ದಾರೆ ಹಾಗೂ ಸದೆಬಡಿದಿದ್ದಾರೆ. ಈ ಕಾರಣದಿಂದಲೋ ಏನೋ ಈ ತಾಲೂಕಿಗೆ 'ಅರಿಕುಠಾರ' (ಶತ್ರುಗಳಿಗೆ ಕೊಡಲಿಯಂತೆ) ಎಂಬ ಹೆಸರು ಬಂದಿದೆ. ಆದರೆ ಚಾಮರಾಜನಗರವೊಂದರಲ್ಲೇ ಸುಮಾರು ೬೩ ಶಾಸನಗಳು ದೊರೆತಿದ್ದು ಈ ಯಾವ ಶಾಸನಗಳಿಂದಲೂ ಚಾಮರಾಜನಗರಕ್ಕೆ ಹಿಂದಿನ ಹೆಸರು ಅರಿಕುಠಾರ ಎಂದು ಉಲ್ಲೇಖಿಸಿಲ್ಲ. ಸಾಮಾನ್ಯವಾಗಿ ಪ್ರತಿಯೊಂದರಲ್ಲೂ ಅರಕೊಠಾರ, ಅರೆಕುಠಾರ, ಅರೆಕುಟ್ಟಾರ ಎಂಬ ಹೆಸರುಗಳು ವ್ಯಕ್ತವಾಗಿವೆ. ''ಧರ್ಮಾರ್ಥ ನಾದ ಸಾಮಾಗ್ರಿ ಸಂಗ್ರಹ, ಶಾಲೆ ಕಣಜ'' (ಅರಧರ್ಮ, ಕೊಠಾರ, ಕೊಷ್ಠಾಗಾರ) ಎಂಬುದು ಇದರ ನಿಜವಾದ ಅರ್ಥ). ಈಚಿನವರು ಅದನ್ನು ಅರಿಕುಠಾರ ಎಂದರೆ ಶತ್ರುಗಳಿಗೆ ಕೊಡಲಿ ಎಂದು ತಿದ್ದಿ ಬಿಟ್ಟರು.[೮]

ಪ್ರಾಚೀನಕಾಲದಲ್ಲಿ ಚಾಮರಾಜನಗರಕ್ಕೆ ಅರಿಕುಠಾರದ ಜೊತೆಗೆ ಚತುರ್ವೇದಿ ಮಂಗಲ ಎಂಬ ಹೆಸರು ಬಳಕೆಯಲಿತ್ತು. ಅಷ್ಟೇ ಅಲ್ಲದೆ ಜಿಲ್ಲೆಯಾದ್ಯಂತ ದೊರಕಿರುವ ಹಲವು ಶಾಸನಗಳಲ್ಲೂ ಇದೆ ಹೆಸರಿದೆ. ವಾಸ್ತುಶಾಸ್ತ್ರದ ಪ್ರಕಾರ ಮಂಗಲವೆಂದರೆ ಸೈನಿಕರುಗಳಿಗೆ ಬೇಕಾದ ಅಸ್ತ್ರಶಸ್ತ್ರಗಳ ಉಪಕರಣಗಳ ರಕ್ಷಣೆಗಾಗಿ ಉಗ್ರಾಣದಂತೆ ಏರ್ಪಡಿಸಲಾಗಿದ್ದ ಸ್ಥಳವೆಂದು, ಚಾಮರಾಜನಗರದ ಸುತ್ತಮುತ್ತಲೂ ಇಲ್ಲಿ ಆಡಳಿತ ನಡೆಸಿದ ಗಂಗರಸರು ಮತ್ತು ಚೋಳರ ಸೈನ್ಯಗಳಿದ್ದವೆಂದು, ಆದ್ದರಿಂದ ಈ ಸ್ಥಳಗಳಿಗೆ 'ಮಂಗಲ'ವೆಂಬ ಹೆಸರು ಬಂದಿದೆಯೆಂದು, ಕೆಲವು ಶಾಸನಗಳಲ್ಲಿನ ಮಂಗಲದ ಹೆಸರನ್ನು ಉಲ್ಲೇಖಿಸಿ ಚಾಮರಾಜನಗರದ ಎನ್.ಅಶ್ವತ್ಥನಾರಾಯಣರವರು ಅಭಿಪ್ರಾಯಿಸುತ್ತಾರೆ.[೯]

ಹಿಂದೆ ತಿಳಿಸಿದಂತೆ ಹರಳುಕೋಟೆಯ ಶಾಸನದಲ್ಲಿ ಕೇರಳಾಂತಕ ಚತುರ್ವೇದಿ ಮಂಗಲವೆಂದು ಉಲ್ಲೇಖಿತಗೊಂಡಿರುವುದರ ಜೊತೆಗೆ ಈ ತಾಲೂಕಿನ ಸುತ್ತಮುತ್ತಲೂ ಹಲವಾರು 'ಮಂಗಲ' ಎಂಬ ಹೆಸರಿನ ಊರುಗಳಿವೆ. ಅವುಗಳಲ್ಲಿ ನರಸಮಂಗಲ, ಕಣ್ಣಮಂಗಲ(ಕಣ್ಣೇಗಾಲ) ಶಂಕರೇಶ್ವರಗುಡ್ಡದ ಮಂಗಲ ಮತ್ತು ಕೊಳ್ಳೇಗಾಲದ ಸಮೀಪದಲ್ಲೂ ಮಂಗಲವೆಂಬ ಒಂದು ಊರಿದೆ. ಗಂಗರಸರ ಕಾಲದಿಂದಲೂ ಅರಿಕುಠಾರದ ಜೊತೆ ಜೊತೆಗೆ ಚತುರ್ವೇದಿ ಮಂಗಲದ ಹೆಸರು ಸಮಾನಾಂತರವಾಗಿ ಬಂದಿರಬಹುದು. ಚತುರ್ವೇದಿಯೆಂದರೆ ನಾಲ್ಕು ವೇದಗಳನ್ನು ಓದಿ ಪಾರಂಗತರಾದವರೂ ಅಥವಾ ಚತುಸ್ಸಮಯಿಗಳು. ಇಂಥ ಪ್ರಬುದ್ಧ ಜನರಿಂದ ಕೂಡಿದ ಹರಳು ಕೋಟೆ ಪ್ರದೇಶವು ಕೇರಳಾಂತಕ ಚತುರ್ವೇದಿ ಮಂಗಲ ವೆಂದಾಗಿತ್ತು. ಅಲ್ಲದೆ ಇಷ್ಟೊಂದು ಮಂಗಲವಿದ್ದವೆಂದ ಮೇಲೆ ಶತ್ರುಗಳ (ಅಂಗಳ) ಬಲವನ್ನು ಬಡಿಯಲು, ಕುಗ್ಗಿಸಲು ಕುಠಾರ ಪ್ರಾಯವಾದ (ಕೊಡಲಿಯಂತೆ) ವ್ಯವಸ್ಥೆ ಇಲ್ಲಿದ್ದುದರಿಂದ ಅರಿಕುಠಾರವೆಂದು ಹೆಸರಾಗಿರುವುದಕ್ಕೊ ಮಂಗಲದ ಪುಷ್ಟೀಕರಣ ದೊರೆಯುತ್ತದೆ.

ಮೈಸೂರು ಅರಸರಾದ ಮುಮ್ಮಡಿ ಕೃಷ್ಣರಾಜ ಒಡೆಯರು (೧೭೯೪-೧೮೬೮) ಅವರ ತಂದೆ ಚಾಮ ರಾಜೇಂದ್ರ ಒಡೆಯರು ಕ್ರಿ.ಶ. ೧೭೭೪ರಲ್ಲಿ ಚಾಮರಾಜನಗರದಲ್ಲಿ ಜನಿಸಿದರು. ಕೃಷ್ಣರಾಜ ಒಡೆಯರು ತಮ್ಮ ತಂದೆಯ ನೆನಪಿಗಾಗಿ ಕ್ರಿ.ಶ. ೧೮೧೮ರಲ್ಲಿ ಈ ಊರಿಗೆ 'ಚಾಮರಾಜನಗರ' ಎಂಬುದಾಗಿ ನಾಮಕರಣ ಮಾಡಿದರು ರಾಜವಂಶಸ್ಥರು ಮತ್ತು ಅರಮನೆಯ ಅಧಿಕಾರಿಗಳೇನೋ ಅರಿಕುಠಾರವನ್ನು ಚಾಮರಾಜನಗರ ಎಂದು ಕರೆಯುವ ತೀರ್ಮಾನ ಮಾಡಿದರು. ಆದರೆ ಎಷ್ಟು ದಿನ ಕಳೆದರೂ ಅರಿಕುಠಾರದ ಸುತ್ತಮುತ್ತಣ ಹಳ್ಳಿಯ ಜನರು ಅರಿಕುಠಾರ ಎಂದೇ ಕರೆಯುತ್ತಿದ್ದರೆ ವಿನಃ ಚಾಮರಾಜನಗರ ಎಂದೂ ಕರೆಯುವುದನ್ನು ರೂಢಿಗತ ಮಾಡಿಕೊಳ್ಳಲೇ ಇಲ್ಲ.

ಆಗ ಅರಮನೆಯವರು ಒಂದು ಉಪಾಯ ಹೂಡಿದರು. ಅರಿಕುಠಾರದ ನಾಲ್ಕು ಕಡೆ ನಾಲ್ಕು ಸುಂಕದ ಕಟ್ಟೆಗಳಿದ್ದವಷ್ಟೇ, ಅಲ್ಲಿನ ಕಾವಲುಗಾರರು ಕೈಗಳನ್ನು ಹಿಂದಕ್ಕೆ ಕಟ್ಟಿಕೊಂಡು ನಿಂತಿರುತ್ತಿದ್ದರು. ಅವರ ಕೈಗಳಲ್ಲಿ ಏನಿರುತ್ತಿತ್ತು ಎಂಬುದು ಹೊರಗಿನವರಿಗೆ ಕಾಣುತ್ತಿರಲಿಲ್ಲ. ಅವರು ಅರಿಕುಠಾರಕ್ಕೆ ಬರುತ್ತಿದ್ದವರನ್ನು ಅಂದರೆ ಪರಸ್ಥಳದಿಂದ ಬರುತ್ತಿದ್ದ ಗ್ರಾಮಸ್ಥರನ್ನು ಕೇಳುತ್ತಿದ್ದರು. ''ಏನಪ್ಪ ಎತ್ತ ಹೊಂಟೆ''? ಹಳ್ಳಿಗರು ಉತ್ತರ ಹೇಳುತ್ತಿದ್ದರು. ''ಐ ಅರಿಕುಠಾರಕ್ಕೆ ಯೇಳಿ'' ತಕ್ಷಣ ಅವರ ಬೆನ್ನ ಮೇಲೆ ಛಳೀರ್ ಎಂದು ಛಡಿ ಏಟು ಬೀಳುತ್ತಿತ್ತು. ಕಾವಲಿನವರು ಬೆನ್ನ ಹಿಂದೆ ಮರೆಸಿ ಇಟ್ಟುಕೊಂಡಿದ್ದ ಛಡಿಯಯಿಂದ ಹಳ್ಳಿಗರಿಗೆ ಏಟುಕೊಟ್ಟು 'ಅರಿಕುಠಾರಕ್ಕೆ ಎನ್ನಬೇಡ, ಚಾಮರಾಜನಗರಕ್ಕೆ ಅನ್ನು'. ಹೀಗೆ ತಿಂಗಳು ಗಟ್ಟಳೆ, ನೂರಾರು ಜನರ ಬೆನ್ನ ಮೇಲೆ ಛಡಿ ಏಟು ಬಿದ್ದು ಅರಿಕುಠಾರವು ಚಾಮರಾಜನಗರವಾಗಿ ಬದಲಾವಣೆ ಪಡೆಯಿತು.[೧೦]

ಒಂದು ಸ್ಥಳದೊಂದಿಗೆ ಹಲವಾರು ವರ್ಷಗಳ ಒಡನಾಟದಿಂದ ಈ ಸ್ಥಳ ಕುರಿತಂತೆ ಭಾವನೆಗಳ ಭಾವಕೋಶವೊಂದು ಈ ಜನರಲ್ಲಿ ಬೆಳೆದಿರುತ್ತದೆ. ಈ ಭಾವನೆಗಳ ಮುಂದೆ ಲಾಭ-ನಷ್ಟದ ಪ್ರಶ್ನೆ ಇಲ್ಲ. ಹೀಗಿರುವಾಗ ಗ್ರಾಮನಾಮಗಳ ಬದಲಾವಣೆ ಆ ಪ್ರದೇಶದ ಜನತೆಯ ಮನಸ್ಸಿನ ಮೇಲೆ ನಕಾರಾತ್ಮಕವಾದ ಪ್ರಭಾವವನ್ನು ಬೀರುವುದು ಸಹಜ. ಚಾಮರಾಜನಗರದ ಮೊದಲ ಹೆಸರು ಅರಿಕುಠಾರ. ಇದರ ಅರ್ಥ ಶತ್ರುಗಳ ಸಂಹಾರ ಮಾಡುವ ಸ್ಥಳ. ಈ ಅರಿಕುಠಾರ ಪವಾಡ ಪುರುಷರಾದ ಮಂಟೇಸ್ವಾಮಿ, ಮಹದೇಶ್ವರರಂತವರು ಸಂಚರಿಸಿದ ಪ್ರದೇಶ. ಈ ಪ್ರದೇಶದ ಜನರಿಗೆ ದ್ರೋಹ ಮಾಡುವಂತ (ಅರಿ) ಶತ್ರುಗಳು ಬದುಕಲು (ಏಳಿಗೆ ಹೊಂದಲು) ಸಾಧ್ಯವಿಲ್ಲ. ನಿಷ್ಠಾವಂತರಿಗೆ ಏಳ್ಗೆ ಇದ್ದೆ ಇದೆ. ಈ ಪ್ರದೇಸದ ಜನರ ನಂಬಿಕೆ ಅಷ್ಟು ಪ್ರಬಲವಾದುದು. ಹೆಸರೇ ನಮ್ಮನ್ನು ಕಾಪಾಡುತ್ತದೆ ಎಂಬುದು ಅಲ್ಲಿಯ ಜನಪದರ ನಂಬಿಕೆ. ಆದರೆ ಕೃಷ್ಣರಾಜ ಒಡೆಯರು ತಮ್ಮ ತಂದೆ ಹುಟ್ಟಿದ ನೆನಪಿಗಾಗಿ ಅರಿಕುಠಾರ ಎಂಬ ಹೆಸರನ್ನು ಚಾಮರಾಜನಗರ ಎಂದು ಬದಲಾಯಿಸಿದರು. ಈ ಕ್ರಿಯೆ ಅಲ್ಲಿನ ಮಣ್ಣಿನ ಜನತೆಯ ನಂಬಿಕೆ ಭಾವನೆಗಳಿಗೆ ಪೆಟ್ಟನ್ನು ಕೊಟ್ಟಿತು. ಈ ಕಾರಣದಿಂದಾಗಿ ಚಾಮರಾಜನಗರ ಎಂಬ ಹೆಸರು ತಕ್ಷಣ ಜಾರಿಗೆ ಬರಲಿಲ್ಲ. ಅದಕ್ಕೆ ದೈಹಿಕ ಮತ್ತು ಮಾನಸಿಕವಾದ ಹಿಂಸೆ ನೀಡಬೇಕಾಯಿತು. ಹೀಗೆ ದೈಹಿಕ ಹಿಂಸೆಯ ಮೂಲಕ ಅರಿಕುಠಾರ ಮರೆವಿಗೆ ಸಂದು ಚಾಮರಾಜನಗರ ಅರಿವಿಗೆ ಬಂತು. ಈ ರೀತಿ ಗ್ರಾಮನಾಮಗಳ ಬದಲಾವಣೆ ಸ್ಥಳ ಸಂಸ್ಕೃತಿಯನ್ನು ತಿರುಚುವ, ಆ ಪ್ರದೇಶದ ಜನತೆಗೆ ಎಸಗುವ ದ್ರೋಹಕೂಡ ಹೌದು, ಇತಿಹಾಸವನ್ನು ಮರೆಮಾಚುವ ಕೆಲಸವೂ ಹೌದು ಎಂದು ಹೇಳಬಹುದು.

**ಹರದನಹಳ್ಳಿ**

ಚಾಮರಾಜನಗರಕ್ಕೆ ಸುಮಾರು ಐದು ಕಿ.ಮೀ. ದೂರದಲ್ಲಿ ಸತ್ಯಮಂಗಲ ರಸ್ತೆಯ ಬದಿಯಲ್ಲಿ ಹರದನಹಳ್ಳಿ ಎಂಬ ಹೋಬಳಿ ಕೇಂದ್ರವಿದೆ. ಈ ಊರಿಗೆ ಮೊದಲು ಮಗೆಯ ಅಥವಾ ಮರ್ಗೆ ಎಂಬ ಹೆಸರಿದ್ದು, ಇದು ಎಣ್ಣೆನಾಡಿಗೆ ಸೇರಿತ್ತು ಎಂಬ ವಿಷಯ ಕೂಡ ಇಲ್ಲಿಯ ಒಂದು ಶಾಸನದಿಂದ ತಿಳಿದು ಬರುತ್ತದೆ.[೧೧] ಇಲ್ಲಿ ದಿವ್ಯಲಿಂಗೇಶ್ವರ ಎಂಬ ದೇವಾಲಯವಿದ್ದು, ಅದು ಅನಿಲೇಶ್ವರ ಅಣಿಲೇಶ್ವರ, ಅಮೃತೇಶ್ವರ, ಅಳಲೇಶ್ವರ, ಸೈಕತೇಶ್ವರ ಎಂಬ ಹೆಸರುಗಳಿಂದ ಪ್ರಖ್ಯಾತವಾಗಿದೆ. ಹಾಗೆಯೇ ವಾಣಿಜ್ಯಪುರಿ ಎಂಬ ಉಲ್ಲೇಖವೂ ಇದೆ. ಹೀಗಾಗಿ ಹಿಂದೆ ಇದೊಂದು ಪ್ರಸಿದ್ಧ ವ್ಯಾಪಾರ ಕೇಂದ್ರವಾಗಿ ಬೆಳೆದು ಹರದನಹಳ್ಳಿ ಎಂಬ ಹೆಸರು ರೂಢಿಗೆ ಬಂದಿರಬಹುದು. ಹರದನಹಳ್ಳಿಯ ಸಂಸ್ಕೃತ ರೂಪ 'ವಾಣಿಜ್ಯಪುರಿ', ಪರದ - ಹರದ ಎಂದರೆ ವ್ಯಾಪಾರಿ ಎಂದರ್ಥ. ವ್ಯಾಪಾರದ ವಿಷಯವೇ ವಾಣಿಜ್ಯ. ಹರದನಹಳ್ಳಿ ಎಂಬ ಹೆಸರು ಬರಲು ಈ ಅಂಶವೇ ಕಾರಣವಾಗಿದೆ.

ಜನಪದರ ಈ ಊರನ್ನು 'ಕೋಟೆ ಹರದನಹಳ್ಳಿ' ಎಂದೂ ಕರೆಯುತ್ತಿದ್ದರೆಂದು ತಿಳಿದುಬರುತ್ತದೆ. ಈ ಊರಿನ ಕೋಟೆಯನ್ನು ಕಾಯಲು ನಾಲ್ಕು ದಿಕ್ಕಿನಲ್ಲಿ ಬಾಗಿಲುಗಳಿದ್ದು ಕಾವಲು ಕಾಯುತ್ತಿದ್ದರೆಂದೂ

ಇದರ ಉಸ್ತುವಾರಿಯನ್ನು ಒಬ್ಬ ಪಾಳೆಯಗಾರನಿಗೆ ವಹಿಸಲಾಗಿತ್ತೆಂದೂ ತಿಳಿದುಬರುತ್ತದೆ. ಊರಿನ ಸುತ್ತ ಕೋಟೆ ಇದ್ದುದಕ್ಕೆ ಕೆಲವು ಪುರಾವೆಗಳಿವೆ. ಈ ಊರಿನ ಮುಂಭಾಗದ ಮೂಲೆಯೊಂದರಲ್ಲಿ ಈಗಲೂ ಕಾಣಸಿಗುವ ಕೋಟೆಯ ಮಣ್ಣಿನ ಗುಡ್ಡವು ಇಂಥ ಅಭಿಪ್ರಾಯಕ್ಕೆ ಬರಲು ಆಧಾರವನ್ನೊದಗಿಸುತ್ತದೆ.

ಇಲ್ಲಿನ ದಿವ್ಯಲಿಂಗೇಶ್ವರ ದೇವಾಲಯವನ್ನು ಕಾಯಲು ಮೈಸೂರು ಸಂಸ್ಥಾನದಿಂದ ನೇಮಕಗೊಂಡ 'ಹರಪ್ಪನಾಯಕ' ಎಂಬ ಪಾಳೆಯಗಾರ ಹರದನಹಳ್ಳಿಯ ಉಸ್ತುವಾರಿಯನ್ನು ನೋಡಿಕೊಳ್ಳುತ್ತಿದ್ದಾಗ ಊರಿನ ದಕ್ಷಿಣ ದಿಕ್ಕಿನ ಕೋಟೆಯಿಂದ ದಾಳಿಕೋರರು ಊರಿಗೆ ಪ್ರವೇಶಿಸಿ ಸುಲಿಗೆ ಮಾಡಲು ಯತ್ನಿಸಿದಾಗ 'ಹರಪ್ಪ'ನು ಸೈನ್ಯ ಸಮೇತ ಅವರನ್ನು ಕೊಂದು ಕೋಟೆಯ ನಾಲ್ಕು ಬಾಗಿಲಿಗೂ ನೇತು ಹಾಕಿದನಂತೆ. ಅಂದಿನಿಂದ 'ವಾಣಿಜ್ಯಪುರಿ' ಎಂದು ಕರೆಯುತ್ತಿದ್ದ ಊರು ಹರಪ್ಪನಿಂದ ರಕ್ಷಿಸಲ್ಪಟ್ಟು ಹರಪ್ಪನಹಳ್ಳಿ ಎಂದಾಗಿ ಅನಂತರ ಜನರ ಬಾಯಲ್ಲಿ 'ಹರದಹಳ್ಳಿ' ಎಂದಾಗಿದೆ ಎನ್ನುವ ಐತಿಹ್ಯವೂ ಇದೆ.[೭೨] ಜೊತೆಗೆ ವಾಣಿಜ್ಯಪುರವು ಕಾಲ ಕ್ರಮೇಣ ಶೈವ ಸಂಸ್ಕೃತಿಯ ಪ್ರಭಾವಕ್ಕೆ ಸಿಕ್ಕಿ 'ಹರನಿಗೆ ಹಾಲು ಕೊಟ್ಟ ಊರು' ಹರದನಹಳ್ಳಿಯಾಗಿರಬೇಕೆಂಬ ಇಲ್ಲಿನ ಜನಪದರ ನಂಬಿಕೆಗಳು ಮೂಲವಾಗಿವೆ.[೭೩]

**ದೊಡ್ಡರಾಯಪೇಟೆ**

ದೊಡ್ಡರಾಯಪೇಟೆ ಗ್ರಾಮಕ್ಕೆ ತನ್ನದೆ ಅದ ಇತಿಹಾಸವಿದೆ. ಈ ಗ್ರಾಮ ಮೈಸೂರಿನ ಯದುವಂಶದ ಅರಸರ ಆಳ್ವಿಕೆಗೆ ಒಳಪಟ್ಟಿತ್ತು. ಹಿಂದೆ ಈ ಗ್ರಾಮಕ್ಕೆ ಹಂದಿಗನಹಳ್ಳಿ ಎಂಬ ಹೆಸರಿತ್ತು. ಇದರ ಪಕ್ಕದಲ್ಲಿಯೇ ಈಗಿನ ಗ್ರಾಮಕ್ಕೆ ಕೇವಲ ಒಂದು ಕಿ.ಮೀ. ದೂರದಲ್ಲಿ ಪೂರ್ವದಿಕ್ಕಿನಲ್ಲಿರುವ ಸುರಗಿಗುಡ್ಡ ಮತ್ತು ಅದರ ತಪ್ಪಲಲ್ಲೇ ಇದ್ದ ಸುರಗಿ ಪೇಟೆ ಗ್ರಾಮಗಳು ಅವಳಿ ಗ್ರಾಮಗಳಾಗಿದ್ದವು. ಇವು ಹಂದಿನಹಳ್ಳಿ ಕೆರೆಯ ಅಂಚಿನಲ್ಲಿದ್ದು ಅಲ್ಲಿನ ಜನರು ಪರಸ್ಪರ ಸಂಪರ್ಕದಿಂದ ಸಹ ಜೀವನ ನಡೆಸುತ್ತಿದ್ದರು. ಒಮ್ಮೆ ಈ ಕೆರೆ ಮಳೆಯ ಪ್ರವಾಹಕ್ಕೆ ಕೊಚ್ಚಿ ಹೋದುದರಿಂದ ಈ ಗ್ರಾಮಗಳ ಸಂಪರ್ಕ ಕಡಿದು ಜೀವನ ದುಸ್ತರವೆನಿಸಿ ಬೇಸಾಯ ಹಾಗೂ ಇತರೆ ಚಟುವಟಿಕೆಗಳಿಗೆ ಅಡ್ಡಿ ಉಂಟಾಯಿತು. ಆಗ ಕೆರೆಯ ಪುನರ್ ನಿರ್ಮಾಣ ಮಾಡುವ ಸಲುವಾಗಿ ಮತ್ತು ತೀರ ಹಳೆಯದಾಗಿದ್ದ ಸುರಗಿಪೇಟೆಯಿಂದ ಜನರು ಹಂದಿಗನಹಳ್ಳಿಯತ್ತ ತಮ್ಮ ಬದುಕು ಮನೆಮಠಗಳನ್ನು ಬದಲಾಯಿಸಿಕೊಂಡರು. ಇದೇ ಸಂದರ್ಭದಲ್ಲಿ ಕೆರೆಯ ಪುನರ್ ನಿರ್ಮಾಣ ಕಾರ್ಯವನ್ನು ಅಂದಿನ ಮೈಸೂರು ಸಂಸ್ಥಾನದ ದೊಡ್ಡ ದೇವರಾಜ ಒಡೆಯರು ಮಾಡಿಸಿದರು. ಆಗ ಒಮ್ಮೆ ಈ ಗ್ರಾಮದ ಮಾರ್ಗವಾಗಿ ಸಂಚರಿಸುತ್ತಿದ್ದ ದೊಡ್ಡ ದೇವರಾಜ ಒಡೆಯರು ಈ ಗ್ರಾಮದ ಜನತೆಯ ಅಹವಾಲನ್ನು ಸ್ವೀಕರಿಸುವ ಸಲುವಾಗಿ ಈ ಗ್ರಾಮಕ್ಕೆ ಭೇಟಿ ನೀಡಿದ್ದರು.

ಸುರಗಿಪೇಟೆ ಮತ್ತು ಹಂದಿಗನಹಳ್ಳಿಯ ಗ್ರಾಮದ ಜನತೆ ಮಹಾರಾಜರ ಆಗಮನದಿಂದ ಪುಳಕಿತಗೊಂಡು ಸನ್ಮಾನಾದಾರಗಳನ್ನು ರಾಜರಿಗೆ ನೀಡಿ ಅವರ ಭೇಟಿಯ ಸ್ಮರಣಾರ್ಥವಾಗಿ ಒಂದು

ಶಾಶ್ವತ ನಿರ್ಣಯ ಕೈಗೊಂಡರು. ಅಂದಿನ ರಾಜರ ಅನಿರೀಕ್ಷಿತ ಭೇಟಿ ಅಂದಿನ ಈ ಎರಡು ಪುಟ್ಟ ಹಳ್ಳಿಗಳ ಇತಿಹಾಸವನ್ನೇ ಬದಲಿಸಿದವು. ರಾಜನ ಹೆಸರನ್ನು ಶಾಶ್ವತಗೊಳಿಸುವ ಸಲುವಾಗಿ ಈ ಗ್ರಾಮಗಳನ್ನು ಭೌಗೋಳಿಕವಾಗಿ ವಿಲೀನಗೊಳಿಸಿ ಅದಕ್ಕೆ ಮಹಾರಾಜನ ಹೆಸರನ್ನೆ ಇಡಲು ನಿರ್ಣಯಕೈಗೊಂಡರೂ(ಸ್ವತಃ ರಾಜನೇ ತನ್ನ ಹೆಸರಿಡಲು ಸೂಚಿಸಿದನೆಂದು ಕೆಲವು ಹಿರಿಯ ತಲೆಮಾರಿನ ಜನ ಹೇಳುತ್ತಾರೆ.) ಕಾಲಾನಂತರ ಜನರ ಆಡು ನುಡಿಗೆ ಸಿಲುಕಿದ ದೊಡ್ಡರಾಜಪೇಟೆ ಕ್ರಮೇಣ ದೊಡ್ಡರಾಯ ಪೇಟೆಯಾಗಿ ಪರಿವರ್ತನೆಗೊಂಡಿವೆ. ಅಂದರೆ ಹಿಂದಿನ ಸುರಗಿಪೇಟೆ ಮತ್ತು ಹಂದಿಗನ ಹಳ್ಳಿಗಳು ಸೇರಿ ಹುಟ್ಟಿಕೊಂಡದ್ದೆ ದೊಡ್ಡರಾಜರಪೇಟೆ.[೧೪]

ಉಮ್ಮತ್ತೂರು

ಉಮ್ಮತ್ತೂರು ಪಾಳೆಯಗಾರರು ೧೫ನೇ ಶತಮಾನದ ಕೊನೆಯ ಮತ್ತು ೧೬ನೆಯ ಶತಮಾನದ ಆದಿಭಾಗದಲ್ಲಿ ಮೈಸೂರು ಜಿಲ್ಲೆಯ ದಕ್ಷಿಣ ಭಾಗ ಮತ್ತು ಕೊಯಮತ್ತೂರು ಜಿಲ್ಲೆಯ ಕೆಲವು ಭಾಗಗಳನ್ನು ಆಳುತ್ತಿದ್ದರು. ಉಮ್ಮತ್ತೂರು ಇವರ ರಾಜಧಾನಿಯಾಗಿತ್ತು. ಈ ಊರಿನ ಹಿಂದಿನ ಹೆಸರು 'ಸ್ವರ್ಣಪುರಿ' ೧೧ನೇ ಶತಮಾನದಲ್ಲಿಯೇ ಈ ಊರು ಪ್ರಚಾರದಲ್ಲಿದ್ದುದಕ್ಕೆ ಇಲ್ಲಿನ ಶಾಸನಗಳು ಆಧಾರವನ್ನು ಒದಗಿಸುತ್ತವೆ. ಸ್ವರ್ಣಪುರಿ ಉಮ್ಮತ್ತೂರಾಗಿ ಯಾವಾಗ ಬದಲಾವಣೆಯಾಯಿತು ಎಂಬುದರ ಬಗ್ಗೆ ನಿಖರ ಮಾಹಿತಿಗಳು ಲಭ್ಯವಿಲ್ಲ. ಕ್ರಿ.ಶ. ೧೪೧೩ರ ಚಾಮರಾಜನಗರದ ಶಾಸನದಲ್ಲಿ ಉಮ್ಮತ್ತೂರನ್ನು ಧತ್ತೂರಾಖ್ಯಪುರ ಎಂದು ಉಲ್ಲೇಖಿಸಲಾಗಿದೆ.[೧೫] ಬಹುಶಃ ಪಾಳೆಯಗಾರರ ಆಳ್ವಿಕೆಗೂ ಮೊದಲೇ ಇದರ ಸ್ಥಳನಾಮ ಬದಲಾವಣೆಯಾಗಿರಬೇಕು. ಈ ಊರಿನ ಕೊನೆಯ ತೀರ್ಥಂಕರ ಮಹಾವೀರನ ಬಸದಿ' ೧೩ನೇ ಶತಮಾನಕ್ಕೆ ಸೇರಿದ ಸರಳವಾದ ದ್ರಾವಿಡ ಶೈಲಿಯ ಸುಂದರವಾದ ಕಟ್ಟಡವಾಗಿದೆ. ಈ ದೇವಾಲಯವಲ್ಲದೇ ಮತ್ತೊಂದು ಶ್ರೀ ಆದಿನಾಥ ಬಸದಿಯೂ ಇದೆ. ಇದೂ ಸಹ ೮೦೦ ವರ್ಷಗಳಷ್ಟು ಹಿಂದಿನ ದೇವಾಲಯ. ಅಲ್ಲದೆ ಈ ಊರಿನಲ್ಲಿ ಒಂದೇ ಒಂದು ಜೈನ ಶ್ರಾವಕರ ಮನೆ ಈಗಲೂ ಇದೆ.

ಚಂದಕವಾಡಿ

ಚಂದಕವಾಡಿ ಒಂದು ಐತಿಹಾಸಿಕ ಕೇಂದ್ರ. ಹೆಸರೇ ಸೂಚಿಸುವಂತೆ ಇದು ಚಂದ್ರಗುಪ್ತ ಮೌರ್ಯರ ಆಳ್ವಿಕೆಗೆ ಒಳಪಟ್ಟಿದ್ದರಿಂದ ಈ ಗ್ರಾಮಕ್ಕೆ ಚಂದಕವಾಡಿ ಎಂಬ ಹೆಸರು ಬಂದಿದೆ. ಈ ನಾಡನ್ನು ಆಳಿದ ಚಂದ್ರಗುಪ್ತಮೌರ್ಯ ರಾಜರುಗಳು ಧರ್ಮಸಹಿಷ್ಣುಗಳಾಗಿದ್ದು ಅಲ್ಲಲ್ಲಿ ಸುಂದರವಾದ ದೇಗುಲಗಳನ್ನು ನಿರ್ಮಿಸಿ ಆ ಮೂಲಕ ಜನಸಾಮಾನ್ಯರಲ್ಲಿ ಧಾರ್ಮಿಕ ಪ್ರಜ್ಞೆ ಸದಾ ಜಾಗೃತವಾಗಿರಲಿ ಕಾರಣಕರ್ತರಾಗಿದ್ದಾರೆ. ಅಂತೆಯೇ ಶಿಲ್ಪ-ವಾಸ್ತುಶಿಲ್ಪಗಳ ದೃಷ್ಟಿಯಿಂದ ಕೂಡ ಗಮನಾರ್ಹ ಕೆಲಸ ಮಾಡಿದ್ದಾರೆ. ರಾಜನ ಹೆಸರೆ ಈ ಊರಿನ ಸ್ಥಳನಾಮವಾಗಿರುವುದು ವಿಶೇಷ.

### ಬೇಡ ಮೂಡಲು

ಪ್ರತಿಹಳ್ಳಿಗೂ ತನ್ನದೇ ಆದ ಒಂದು ಇತಿಹಾಸವಿರುತ್ತದೆ. ಹಾಗೆಯೇ ಬೇಡ ಮೂಡಲು ಗ್ರಾಮಕ್ಕೂ ಒಂದು ಇತಿಹಾಸವಿದೆ. ಬೇಡ ಮೂಡಲು ಎಂಬುದು ಒಂದು ಜನಾಂಗ ಸೂಚಕ ಪದವಾಗಿದ್ದು, ಅದರಿಂದಲೇ ಈ ಗ್ರಾಮಕ್ಕೆ ಈ ಹೆಸರು ಬಂದಿದೆ. ಪ್ರತಿಯೊಂದು ಜನಾಂಗದವರು ಒಂದೊಂದು ವೃತ್ತಿಯನ್ನು ಅವಲಂಬಿಸಿರುವುದು ಸಾಮಾನ್ಯ. ಈ ಊರಿನ ಕೆಲವು ಜನ ಹಿಂದೆ ಮಹಾರಾಜರ ಕಾಲದಲ್ಲಿ ಅವರ ಅನುಮತಿಯ ಮೇರೆಗೆ ಕಾಡುಪ್ರಾಣಿಗಳಾದ ಹಂದಿ, ಜಿಂಕೆ, ಮೊಲ ಇತ್ಯಾದಿಗಳನ್ನು ಬೇಟೆಯಾಡುತ್ತಿದ್ದರು. ಇಲ್ಲಿ ಕೆಲವು ಜನ ಆನೆ ಖೆಡ್ಡಾ ಕಾಯಲು ಹೋಗುತ್ತಿದ್ದರು. ಇದಕ್ಕೆ ಪ್ರತಿಯಾಗಿ ಅವರಿಗೆ ಮಹಾರಾಜರು ಇನಾಮು ಕೊಡುತ್ತಿದ್ದರು. ಇದಕ್ಕೆ ಸಾಕ್ಷಿಯಾಗಿ ಇಂದಿಗೂ ಕೆಲವರ ಮನೆಗಳಲ್ಲಿ ಭರ್ಜಿ, ಈಟಿ, ಬಲೆ ಇನ್ನಿತರ ಸಾಮಾನುಗಳನ್ನು ನಾವು ಈಗಲೂ ಕಾಣಬಹುದು. ಅಲ್ಲದೆ ಇಲ್ಲಿನ ಕೆಲವರಿಗೆ 'ಶಿಕಾರಿ'ಗಳೆಂದು ಸಹ ಕರೆಯುತ್ತಾರೆ. ಇದರಿಂದಲೇ ಬೇಟೆ>ಬೇಡ>ಬೇಟೆಮೂಡ್ಲು>ಬೇಡಮೂಡ್ಲು ಎಂಬ ಶಬ್ದ ನಿಷ್ಪತ್ತಿಯಾಗಿದೆ.[೧೬]

### ಕಿಲಗೆರೆ

ಕಿಲಗೆರೆ ಗ್ರಾಮವು ಚಾಮರಾಜನಗರ ತಾಲೂಕು ಹರದನಹಳ್ಳಿ ಹೋಬಳಿಗೆ ಸೇರಿದೆ. ಚಾಮ ರಾಜನಗರದಿಂದ ಸುಮಾರು ೨೫ ಕಿ.ಮೀ. ದೂರದಲ್ಲಿದೆ. ಈ ಗ್ರಾಮವು ತಾಲೂಕಿನ ಪ್ರಮುಖ ಊರುಗಳಲ್ಲಿ ಒಂದಾಗಿದ್ದು, ತೆರಕಣಾಂಬಿ ಮಾರ್ಗವಾಗಿ ಯಾನಗಹಳ್ಳಿಗೆ ಹೋಗುವ ಮಾರ್ಗ ಮಧ್ಯದಲ್ಲಿದೆ. ಈ ಊರಿಗೆ ಪ್ರಾರಂಭದಲ್ಲಿ ಸಂಪಿಗೆಪುರ ಎಂಬ ಹೆಸರಿತ್ತು. ಅನಂತರ ಕಿಲಗೆರೆ ಎಂದು ಬದಲಾಯಿತು. ಈ ಊರಿಗೆ ಸಂಬಂಧಪಟ್ಟಂತೆ ಅನೇಕ ಐತಿಹ್ಯಗಳು, ಶಾಸನಗಳು ಇವೆ. ಕಿಲಗೆರೆ ಎಂಬ ಈ ಹೆಸರು ಬರಲು ಕಾರಣವೆಂದರೆ ಊರು ಸುತ್ತಮುತ್ತಲೂ ಕಲ್ಲು ಬಂಡೆಗಳಿಂದಲೇ ಆವೃತ್ತವಾಗಿದೆ. ಹಾಗೆಯೇ ಇಲ್ಲಿ ನೆಲೆಸಿರುವ ಹುಲುಗನ ಮುರುಡಿ ಬೆಟ್ಟವು ಬರೀ ಕಲ್ಲು ಬಂಡೆಗಳಿಂದಲೇ ಆವೃತ್ತವಾಗಿದೆ. ಜೊತೆಗೆ ಇಲ್ಲಿನ ಸುತ್ತಲೂ ಹಸಿರು ಆವರಿಸಿ ವರ್ಷದ ಎಲ್ಲಾ ತಿಂಗಳಲ್ಲೂ, ಇಲ್ಲಿನ ಜನರ ಸಂಭ್ರಮದಿಂದ, ಸಂತೋಷದಿಂದ ಕಲಿಯಾಗಿ ಇರುತ್ತಿದ್ದರು ಎಂದು ಹೇಳಲಾಗಿದೆ. ಹಾಗೆಯೇ ಮತ್ತೊಂದು ಐತಿಹ್ಯವೆಂದರೆ ಊರಿನ ಅಕ್ಕ ಪಕ್ಕ ಸುತ್ತಲೂ ನೀರು ಹರಿಯುತ್ತಿತ್ತು. ಬೆಟ್ಟದ ಮೇಲೆ ನಿಂತು ನೋಡಿದಾಗ ಏನೋ ಒಂದು ಸುಂದರವಾದ ನೋಟ ಕಾಣುತ್ತಿತ್ತು. ಆದ್ದರಿಂದ ಈ ಊರಿಗೆ ದೇವರು ಯಾವಾಗಲೂ ಒಳ್ಳೆಯದನ್ನು ಅಶೀರ್ವದಿಸಿ 'ಕಿಲಗೆರೆ' ಎಂದು ಸಂಭೋದಿಸಿದನಂತೆ ಎಂಬುದು ಜನಪದರ ನಂಬಿಕೆ.[೧೭]

**ಚಿಕ್ಕಹೊಳೆ**

ಈ ಗ್ರಾಮದಲ್ಲಿ ಚಿಕ್ಕದಾದ ಹೊಳೆಯೊಂದು ಹರಿಯುತ್ತಿದ್ದರಿಂದ ಇದಕ್ಕೆ 'ಚಿಕ್ಕಹೊಳೆ' ಎಂದೆ ಹೆಸರು ಬಂದಿದೆ. ಈ ಹೊಳೆ ಸುವರ್ಣಾವತಿ ನದಿಯ ಉಪನದಿ. ಈ ಹೊಳೆಯ ನೀರು ನಿರಂತರವಾಗಿ ಹರಿದು ವಿಸ್ತರವಾದ ಪ್ರದೇಶದಲ್ಲಿ ಸಂಗ್ರಹವಾದ್ದರಿಂದ ಮೊದಲ ಬಾರಿಗೆ ೧೯೫೮ರಲ್ಲಿ ಎತ್ತರವಾದ ಅಣೆಕಟ್ಟೆಯೊಂದನ್ನು ನಿರ್ಮಿಸಿದರು. ಈ ಅಣೆಕಟ್ಟು ನಿರ್ಮಾಣ ಕಾರ್ಯಕ್ಕಾಗಿ ಬಂದ ಜನರು ಮೂಲತಃ ತಮಿಳುನಾಡಿನವರು. ಹೀಗೆ ವಲಸೆ ಬಂದ ಜನರು ಇಲ್ಲಿಯೇ ನೆಲೆನಿಂತರು. ಇವರಲ್ಲಿ ಕೆಲವರು ಇಲ್ಲೇ ಭೂಮಿಯನ್ನು ಕೃಷಿ ಮಾಡಿಕೊಂಡು ವ್ಯವಸಾಯದಲ್ಲಿ ತೊಡಗಿದರು. ಮತ್ತೆ ಕೆಲವರು ಕೂಲಿ ಕೆಲಸದಲ್ಲಿ ನಿರತರಾದರು. ಹೀಗೆ ವಲಸೆ ಬಂದ ಕುಟುಂಬಗಳಿಂದ ಈ ಗ್ರಾಮ ಸೃಷ್ಟಿಯಾಯಿತು ಹಾಗೂ ಹೊಳೆ ಹರಿಯುವುದರಿಂದಲೇ ಚಿಕ್ಕ ಹೊಳೆಯೆಂಬ ಹೆಸರು ಬಂದಿತು ಎಂಬುದು ಊರಿನ ಕ್ಷೇತ್ರ ಕಾರ್ಯದಿಂದ ತಿಳಿದು ಬಂದಿದೆ.[೧೮]

**ನವಿಲೂರು**

ಜೈನಮುನಿಗಳ ಪ್ರಸ್ತಾಪ ಮಾಡುವಾಗ, ಪರಿಚಯ ಹೇಳುವಾಗ ಅವರು ಯಾವ ಸಂಘಕ್ಕೆ ಸೇರಿದವರೆಂದು ಹೇಳುವುದು ವಾಡಿಕೆಯಾಗಿದೆ. ದಿಗಂಬರ ಜೈನಾಚಾರ್ಯ ಪರಂಪರೆಯಲ್ಲಿ ಅತ್ಯಂತ ಪ್ರಾಚೀನವೂ ಮೂಲವೂ ಆದ ಸಂಘವನ್ನು ಮೂಲ 'ಸಂಘವೆಂದೆ' ನಿರ್ದೇಶಿಸಲಾಗಿದೆ. ಮೂಲ ಸಂಘವಲ್ಲದೆ ದ್ರಾವಿಡ ಸಂಘ, ನಂದಿ ಸಂಘ, ಯಾಪನೀಯ ಸಂಘ ಮುಂತಾದ ಇನ್ನಿತರ ಸಂಘಗಳು ಇವೆ. ಈ ಸಂಘಗಳಂತೆ ಪ್ರಸಿದ್ಧವಾದ ಇನ್ನೊಂದು ಸಂಘದ ಕೈ ಬಿಡುತ್ತಾರೆ.

ಈ ಇನ್ನೊಂದು ಸಂಘವೇ 'ನವಿಲೂರು ಸಂಘ' ಈ ಸಂಘದ ಪ್ರಥಮ ಉಲ್ಲೇಖ ಏಳನೆಯ ಶತಮಾನದ ಶ್ರವಣಬೆಳಗೊಳದ ಚಂದ್ರಗಿರಿಯಲ್ಲಿರುವ ಚಾವುಂಡರಾಯ ಬಸದಿಯ ಬಲಗಡೆ ಬಂಡೆಯ ಮೇಲೆ ಕೆತ್ತಲಾಗಿರುವ ಎರಡು ಶಾಸನಗಳಲ್ಲಿದೆ. ಅವುಗಳಲ್ಲಿ ಸ್ಪಷ್ಟವಾಗಿ 'ಮಯೂರ ಗ್ರಾಮ' - ಸಂಘಸ್ಯೆ ಎಂದು ಬರೆಯಲಾಗಿದೆ. ಈ ಸಂಘದಿಂದ ನವಿಲೂರು ಎಂಬ ಊರು ಮಹತ್ವ ಪಡೆದುಕೊಂಡಿದೆಯೆಂದು ತಿಳಿದುಬರುತ್ತಿದೆ. ಇದರಿಂದ ಕರ್ನಾಟಕದಲ್ಲಿ ಅನೇಕ ಗ್ರಾಮಗಳಲ್ಲಿ ಜೈನಧರ್ಮದ ನವಿಲೂರು ಅಥವಾ ಮಯೂರ ಸಂಘಗಳಿದ್ದವು ಎಂದು ಗ್ರಾಮ ನಿದರ್ಶನದಿಂದ ತಿಳಿದುಬರುತ್ತದೆ.[೧೯]

**ಮುಕ್ಕಡಹಳ್ಳಿ**

ಮಲೆಯೂರು ಗ್ರಾಮಕ್ಕೆ ಹತ್ತಿರದಲ್ಲಿ ಇರುವ ಇಂದಿನ ಮುಕ್ಕಡಹಳ್ಳಿಯ ಹಳೆಯ ಹೆಸರು ಮುಕ್ಕೊಡೆಹಳ್ಳಿ. ಇದರ ಸಂಸ್ಕೃತ ರೂಪವೇ ಛತ್ರತ್ರಯಪುರ, ಮುಕ್ಕೊಡೆಹಳ್ಳಿ> ಮುಕಡನಹಳ್ಳಿ> ಮುಕ್ಕೊಡ(ಹ)ಳ್ಳಿ> ಮುಕೊಡಿಹಳ್ಳಿ> ಮುಕ್ಕಡಹಳ್ಳಿ[೨೦]

ಮುಕ್ಕೊಡೆಯು ಜಿನರಿಗೆ ಇರುವ ಎಂಟು ಮಹಿಮೆ (ಅಷ್ಟಮಹಾಪ್ರಾತಿಚಾರ್ಯ)ಗಳಲ್ಲಿ ಒಂದು. ಈ ಹಳ್ಳಿಯಲ್ಲಿ ಗಂಗರ ಕಾಲಕ್ಕೆ ಸುಮಾರು ೭-ಅನೇ ಶತಮಾನಕ್ಕೆ ಸೇರಿದ ಬಸದಿಯ ಭಗ್ನ ಅವಶೇಷಗಳಿವೆ. ಅಲ್ಲದೆ ಪ್ರಾಚೀನ ಜಿನ ಶಾಸನ ದೇವಿಯ ಮೂರ್ತಿಯೊಂದು ಇಲ್ಲಿದ್ದು ಅದು ಇಂದು ಊರಿನ ಮಾಯಮ್ಮ ಎಂಬ ಮುಖ್ಯದೇವತೆಯಾಗಿ ಆರಾಧನೆಗೊಳ್ಳುತ್ತಿದೆ.

ಶಾಸನಗಳಲ್ಲಿ ಸಹ ಮುಕೊಡಿಹಳ್ಳಿ ಎಂಬ ಪ್ರಯೋಗಿವದೆ. ಕ್ರಮವಾಗಿ ಕ್ರಿ.ಶ. ೧೬ ಮತ್ತು ೧೭ನೇ ಶತಮಾನದ ಶಾಸನಗಳಲ್ಲಿ ಉಲ್ಲೇಖಗೊಂಡಿದೆ. ಅಲ್ಲದೆ ಮುಕ್ಕೊಡೆಹಳ್ಳಿಯ ಪ್ರಾಚೀನ ಬಸದಿಯ ಅವಶೇಷಗಳನ್ನು ನೆರೆಯ ಊರಾದ ಕೆಲಸೂರಿನಲ್ಲಿರುವ ಚಂದ್ರಪ್ರಭ ಬಸದಿಯ ಆವರಣದಲ್ಲಿ ಸೇರಿಸಲಾಗಿದೆ. ಈ ಕೆಲಸೂರು ಸಹ ಪ್ರಾಚೀನ ಕಾಲದಿಂದಲೂ ಜೈನ ಕೇಂದ್ರವಾಗಿದೆ. ಗಂಗರ ಸೈಗೊಟ್ಟ ಶಿವಮಾರನ ಕಾಲದಲ್ಲಿಯೇ, ಇಲ್ಲೊಂದು ಬಸದಿಯಿದ್ದು, ಅದಕ್ಕೆ ದತ್ತಿ ಕೊಡಲಾಗಿತ್ತು ಎಂಬುದು ಕುಲಗಾಣದ ಶಾಸನದಿಂದ ತಿಳಿದುಬರುತ್ತದೆ.

ಆಲೂರು

ಚಾಮರಾಜನಗರಕ್ಕೆ ಸುಮಾರು ೧೦ ಕಿ.ಮೀ. ದೂರದಲ್ಲಿರುವ ಹಲೇ ಆಲೂರಿನಲ್ಲಿ ಪ್ರಾಚೀನವಾದ ಅರ್ಕೇಶ್ವರ ದೇವಾಲಯವಿದೆ. ಹಿಂದಿನ ಹಳೇ ಆಲೂರೇ ಇಂದಿನ ಆಲೂರಾಗಿದೆ. ದೇವಾಲಯದ ಅರ್ಕೇಶ್ವರ ಮೂರ್ತಿ ಬಹಳ ಆಕರ್ಷಕವಾಗಿದ್ದು, ಈ ದೇವಾಲಯದ ಮಹಾದ್ವಾರದ ಹಸುಗಲ್ಲಿನಲ್ಲಿರುವ ಶಾಸನದಲ್ಲಿ ಅರ್ಕೇಶ್ವರ ದೇವರಿಗೆ ತೆಳ್ಳರು ಮತ್ತಿತರರು ದತ್ತಿ ಬಿಟ್ಟ ವಿಷಯ ನಿರೂಪಿತವಾಗಿದೆ. ಹೊಯ್ಸಳ ಅರಸ ಮೂರನೆಯ ವೀರನರಸಿಂಹನ ಆಳ್ವಿಕೆಯಲ್ಲಿ ಈ ಶಾಸನ ರಚಿತವಾಗಿದೆ.

ಬೂದಿಪಡಗ

ಈ ತಾಲೂಕಿನ ಹರದನಹಳ್ಳಿ ಹೋಬಳಿಗೆ ಸೇರಿರುವ ಒಂದು ಊರು. ಇದು ಹಿಂದೆ ಖೆಡ್ಡಾ ಕಾರ್ಯಕ್ರಮಗಳಿಗೆ ಪ್ರಸಿದ್ಧವದಾಗಿತ್ತ. ಪುಣಜನೂರು ರಾಜ್ಯ ಅರಣ್ಯ ವ್ಯಾಪ್ತಿಯಲ್ಲಿ ಕಂಡುಬರುವ ಈ ಬೂದಿಪಡಗ ಕಾಡಾನೆಗಳ ಆಗರ. ಮೈಸೂರು ಒಡೆಯರ ಕಾಲದಿಂದಲೂ ಇಲ್ಲಿ ಖೆಡ್ಡ ಕಾರ್ಯಕ್ರಮ ನಡೆಸಿ ಕಾಡಾನೆಗಳನ್ನು ಹಿಡಿದು ಪಳಗಿಸಲಾಗುತ್ತಿತ್ತು. ಆದರೆ ಇಲ್ಲಿಯ ಜನ ಇತ್ತೀಚೆಗೆ ಇದನ್ನು 'ರಂಗಸಮುದ್ರ' ಎಂದು ಪುನರ್ನಾಮಕರಣ ಮಾಡಿಕೊಂಡಿದ್ದಾರೆ. ಆದರೆ ಬೂದಿಪಡಗ ಎಂಬ ಹೆಸರೆ ಹೆಚ್ಚು ಪ್ರಚಲಿತವಾಗಿದೆ.

ಮಲೆಯೂರು

ಚಾಮರಾಜನಗರ ತಾಲೂಕಿನ ಹರವೆ ಹೋಬಳಿಗೆ ಸೇರಿರುವ ಮಲೆಯೂರು ಪ್ರಸಿದ್ಧ ಜೈನ ಕೇಂದ್ರಗಳಲ್ಲಿ ಒಂದು. ಈ ಸ್ಥಳವು ಹಿಂದೆ ಕನಕ ಗಿರಿ ಅಥವಾ ಕನಕಾಚಲ ಎಂಬ ಹೆಸರಿನಿಂದಲೂ ಜನಪ್ರಿಯವಾಗಿತ್ತು.

ಪಾರ್ಶ್ವನಾಥ ಬಸದಿಯು ಅತಿ ಪುರಾತನವಾದ ಹಾಗೂ ಸುಂದರವಾದ ಬಸದಿಯಾಗಿದೆ. ಇಲ್ಲಿಯ ಬೆಟ್ಟದಲ್ಲಿ ಈಗಲೂ ಜೈನ ಅವಶೇಷಗಳು ಕಂಡುಬರುತ್ತವೆ. ಜೈನರ ಯಾತ್ರಾಸ್ಥಳವಾಗಿರುವ ಇದು ಪೂಜ್ಯಪಾದ ಮಹರ್ಷಿಗಳ ನಾಗಾರ್ಜುನರ ತಪೋಭೂಮಿಯಾಗಿದೆ. ಈ ಕ್ಷೇತ್ರದ ಇತಿಹಾಸವು ಇಲ್ಲಿಯ ಶಿಲಾ ಶಾಸನಗಳಿಂದಲೂ, ತ್ರಾಮ ಶಾಸನಗಳಿಂದಲೂ, ದೇವಚಂದ್ರನ ರಾಜಾವಳಿ ಕಥೆಯಿಂದಲೂ, ಅನೇಕ ದಂತಕಥೆಗಳಿಂದಲೂ, ಸ್ಥಳಪುರಾಣಗಳಿಂದಲೂ ತಿಳಿದುಬರುತ್ತದೆ. ಕ್ರಿ.ಶ. ೩೭೫ರಲ್ಲಿ ಶ್ರೀ ಪೂಜ್ಯಪಾದರ ಅಳಿಯ ನಾಗಾರ್ಜುನನಿಗೆ ಶ್ರೀ ಪದ್ಮಾವತೀ ಅಮ್ಮನವರು ಪ್ರತ್ಯೇಕ್ಷಳಾಗಿ ಸಿದ್ಧರಭ್ಯಾಸವನ್ನು(ಲೋಹವನ್ನು ಚಿನ್ನ ಮಾಡುವ ಒಂದು ವಿದ್ಯೆ) ಮಾಡಿದಾಗ ಈ ಬೆಟ್ಟಕ್ಕೆ ಕನಕಗಿರಿ ಎಂಬ ಹೆಸರುಂಟಾಯಿತು. ನಾಗಾರ್ಜುನನು ಈ ಬೆಟ್ಟದಲ್ಲಿ ೧೪ ಅಂಕಣ ದೇವಾಲಯವನ್ನು ಕಟ್ಟಿಸಿ, ಪಾರ್ಶ್ವತೀರ್ಥಂಕರರ ಪದ್ಮಾವತಿ ಅಮ್ಮನವರು, ಕೂಷ್ಮಾಂಡಿನೀ ಅಮ್ಮನವರು, ಜ್ವಾಲಾಮಾಲಿನೀ ಅಮ್ಮನವರು, ಸುತ್ತಾಲೆ ಬ್ರಹ್ಮದೇವರು ಮತ್ತು ಕುದುರೆ ಬ್ರಹ್ಮದೇವರುಗಳನ್ನು ಪ್ರತಿಷ್ಠೆ ಮಾಡಿಸಿದರು. ನಂತರ ಕ್ರಿ.ಶ. ೩೮ಂನೇ ಇಸವಿಯಲ್ಲಿ ಈ ಕ್ಷೇತ್ರಕ್ಕೆ ಹತ್ತಿರದಲ್ಲಿದ್ದ ಎಂಟು ಗ್ರಾಮಗಳನ್ನು ಸರ್ವಮಾನ್ಯವಾಗಿ ಬಿಡಿಸಿ, ಈ ಬೆಟ್ಟದ ಕೆರೆಗೆ, ಕೊಳಂಗೆರೆ ಕ್ಷೇತ್ರಕ್ಕೆ ಪಶ್ಚಿಮದಲ್ಲಿ ಗವಿಹಳ್ಳದ ಬಾವಿ ಮುಂತಾದವುಗಳನ್ನು ಮಾಡಿಸಿ ದೇವಾಲಯದ ಸುತ್ತಲೂ ಎಸಳಿಗೆ ಬೇಲಿಯನ್ನು ಹಾಕಿದನು.

ಕ್ರಿ.ಶ. ೧೧೪೪ರಲ್ಲಿ ಬಲ್ಲಾಳರಾಯನು ಹಿಂದೆ ಈ ಕ್ಷೇತ್ರಕ್ಕೆ ಸರ್ವಮಾನ್ಯವಾಗಿದ್ದ ಗ್ರಾಮಗಳ ಪೈಕಿ ಚಲದಂಕಪುರ, ಪಡುವಳ ಹಾಲ್ಕೂಡು, ಮೂಡಣ ಹಾಲ್ಕೂಡು, ಕುಂತೂರು ಕಿನ್ನರಿಪುರ ಈ ಐದು ಗ್ರಾಮಗಳನ್ನು ಸರ್ವಮಾನ್ಯ ಮಾಡಿ ಬಿಡಿಸಿದನು. ಕ್ರಿ.ಶ. ೧೧೭೮ರಲ್ಲಿ ಬೆಟ್ಟವರ್ಧನ ರಾಯನು ವೈಷ್ಣವ ಮತಾವಲಂಬಿಯಾಗಿ ವಿಷ್ಣುವರ್ಧನನಾದಾಗ ಈ ಕ್ಷೇತ್ರಕ್ಕೆ ಸೇರಿದ್ದ ಗ್ರಾಮಗಳೆಲ್ಲಾ ಅರಮನೆಗೆ ಸೇರಹೋದೆವು. ಕ್ರಿ.ಶ. ೧೧೮೧ರಲ್ಲಿ ಧರಣಪಂಡಿತರ ಧರ್ಮಪತ್ನಿ ಚಿಕ್ಕಾಯಿ ಎಂಬುವರು ಈ ಕ್ಷೇತ್ರಕ್ಕೆ ಕಿನ್ನರಿಪುರ ಎಂಬ ಗ್ರಾಮವನ್ನು ಸರ್ವಮಾನ್ಯವಾಗಿ ಬಿಡಿಸಿದರು. ಕ್ರಿ.ಶ. ೧೪೯೩ರಲ್ಲಿ ಮೇಲ್ಕಂಡ ಚಲದಂಕಪುರವೆಂಬ ಗ್ರಾಮಕ್ಕೆ ಸಾವಿರ ವರ್ಷತುಂಬಲು ಅಬ್ಬಾಗಿಲಿನಿಂದ ಬಂದ ಲಿಂಗೇಗೌಡ ಮತ್ತು ಬೊಮ್ಮರಸಯ್ಯ ಎಂಬುವರು ಈ ಕ್ಷೇತ್ರಕ್ಕೆ ಸ್ವಲ್ಪ ದೂರವಾಗಿ ಹೊಸ ಭೂಮಿಯಲ್ಲಿ ಮಲೆಯೂರು ಎಂಬ ಹೆಸರಿನಿಂದ ಗ್ರಾಮವನ್ನು ನಿರ್ಮಿಸಿದನು.

**ಹೊಮ್ಮ**

ಈ ಹೊಮ್ಮ ಗ್ರಾಮದ ಬ್ರಾಹ್ಮಣರು ಸರ್ವ ವಿದ್ಯಾ ಪಾರಂಗತರಾಗಿದ್ದರು. ಎಷ್ಟೋ ಶಾಸನಪಾಠಗಳಲ್ಲಿ ಸುಂದರ ವರ್ಣನೆ ಕಂಡುಬರುವಂತೆಯೇ ಸುಸಂಸ್ಕೃತವಲ್ಲದ ಪದ ವಿಶೇಷವಾಗಿ ಶಾಪವಾಕ್ಯ ಭಾಗಗಳಲ್ಲಿ ಕಂಡುಬರುವುದುಂಟು. ಅಪಸಂಸ್ಕೃತಿಯೂ ಸಂಸ್ಕೃತಿಯ ಭಾಗವಷ್ಟೆ. ಕ್ರಿ.ಶ. ೮ನೆಯ ಶತಮಾನದಲ್ಲಿ ಇವಸರಇ ದೊಲಬಾರ್ಣ್ಣ ಸಿಯುಂ ಕವಿಲೆಯಮಸರಇದೊಂ ಎಂಬ ಸರಳ ಮಾತು ಕಾಲ ಕ್ರಮೇಣ ರೂಕ್ಷವಾಗುತ್ತ

ಹೋಯಿತು. ಪಾಲಿಸದಿದ್ದ ತಮ್ಮ ತಾಯಿಗೆ ತಪಿದವರು ತಪ್ಪಿದವರು ಸತ್ತ ಕತ್ತೆಯ ತಿಂದು ತೊರಳೆಯ ನೀರ ಕುಡಿದು ಹೋಗುವರು ಎಂಬಲ್ಲಾಗಲಿ ಭಾಷೆ ಬಿಂಬಿಸುವುದು ಸದಾಭಿರುಚಿಯನ್ನಲ್ಲ; ಜಾತಿಸೂಚಕ ನಿಂದನೆಯೂ ಕೆಲವೆಡೆ ಕಂಡುಬರುತ್ತದೆ.

ಕ್ರಿ.ಶ. ೧೬೮೯ರ ಚಂದಕವಾಡಿ ಶಾಸನದ ಫಲಸ್ತುತಿ ಭಾಗದಲ್ಲಿ ಪರದತ್ತಾಪ ಹಾರೇಣಸ್ವದತ್ತಂ ನಿಷ್ಫಲಂಭವೇತ್ ಎಂಬ ಪ್ರಸಿದ್ಧ ಶ್ಲೋಕಾರ್ಥವನ್ನು ಅತ್ಯಂತ ಸರಳವಾಗಿ ತಾನು ಅಂನ್ಯಾಯವ ಮಾಡಿ ಕೊಡೆ ತಾನು ಕೊಟ್ಟುದು ನಿಷ್ಫಲಮ್ ಎಂದು ಅನುವಾದಿಸಿರುವುದು ಗಮನಾರ್ಹ.

ಕವಿ ಲೇಖಕ ರೂವಾರಿಗಳು: ಕ್ರಿ.ಶ. ೧೩೮೦ರ ಹೊಮ್ಮ ಶಾಸನವು ಅಕ್ಷಾರದ ಗೋಪಂಣನ ಬರಹ. ಪ್ರಾಯಶಃ ಈತನು ಕವಿ ಇರಬೇಕು. ಕ್ರಿ.ಶ. ೫೧೧ರ ಮಲೆಯೂರು ಶಾಸನವನ್ನು ವಿದ್ಯಾನಂದೋಪಾಧ್ಯಾಯ ರಚಿಸಿದ. ಇದನ್ನು ಕಲ್ಲಿನ ಮೇಲೆ ಬರೆದವನು ವೃಷಭದಾಸವರ್ಣ. ಕ್ರಿ.ಶ. ೬೭೫ರ ಚಾಮರಾಜನಗರದ ಶಾಸನವು ತಿರುಮಲ ಯಾರ್ಯನ ರಚನೆ. ಈತ ಚಿಕ್ಕದೇವರಾಜ ವೊಡೆಯರ ಆಸ್ಥಾನದಲ್ಲಿ ಪ್ರಖ್ಯಾತ ಕವಿ ಹಾಗೂ ವಿದ್ವಾಂಸ. ಈತ ಅನೇಕ ಕೃತಿಗಳನ್ನು ರಚಿಸಿದನೆಂಬುದು ಸರ್ವವಿದಿತ ಸಂಗತಿ. ಸುಮಾರು ೧೭ನೆಯ ಶತಮಾನದ, ಹರದನಹಳ್ಳಿಯ ಒಂದು ಶಾಸನ ಲಿಂಗ್ಯನ ಬರಹ. ಈ ಶಾಸನೋಕ್ತ ದಾನಿಯೂ ಈತನೇ ಇರಬೇಕು. ಈತ ದೇವರಸಯ್ಯನ ಮೊಮ್ಮಗ, ಬೈರೋದೇವನ ಮಗ ಹಾಗೂ ಅದೇ ಊರಿನ ಕರಣಿಕನಾಗಿದ್ದವನು. ಹರದನಹಳ್ಳಿ ತಾಮ್ರ ಶಾಸನವು ವಿದ್ವಾನ್ ಕೃಷ್ಣದೀಕ್ಷಿತನಿಂದ ರಚಿತವಾದುದು; ಈತ ಕಾಶ್ಯಪಗೋತ್ರದ ಹಾಗೂ ಸೋಮಶಾಖೆಯವನು. ಕ್ರಿ.ಶ. ೧೫೫೫ರ ಅರಕಲವಾಡಿ, ಶಾಸನವು ರಂಗರಾಜಯ್ಯನ ಬರಹ. ರೂವಾರಿಗಳಲ್ಲಿ ಹನ್ನಿಭೋಜ, ಮಲ್ಲೋಜನ ಮಗ ದೊಡ್ಡೋಜ, ಕೊಂಗುಣಿಯರ ಮಾಯಾಣಾಯ ಚಾರಿಯ ಮಗ ಕೇತಾಚಾರಿ, ಶಿಲ್ಪಕ ವಟ್ಟಾಚಾರಿ, ವಿಶ್ವಕರ್ಮ ಸಿದ್ಧ, ನಾರಣಾಚಾರಿ ಮೊದಲಾದವರು ಸೇರಿದ್ದಾರೆ. ಎಷ್ಟೋ ಶಾಸನಪಾಠಗಳ ಕರಡು ಪ್ರತಿಯನ್ನು ಸೇನಬೋವ ಮುಂತಾದ ಅಧಿಕಾರಿಗಳು ಸಿದ್ಧಪಡಿಸಿಕೊಟ್ಟರೆಂದು ತಿಳಿದುಬರುತ್ತದೆ.

ಚಾಮರಾಜನಗರ ತಾಲೂಕಿನ ಶಾಸನಗಳನ್ನು ಬೇರೆ ಬೇರೆ ದೃಷ್ಟಿಕೋನಗಳಿಂದ ಅಧ್ಯಯನ ಮಾಡಲು ಸಾಧ್ಯವಿದೆ ಎಂಬುದನ್ನು ತೋರಿಸುವ ತುಂಬ ಸ್ಥೂಲವಾದ ಹಾಗೂ ಮೇಲ್ಪದರದ ಒಂದು ಸಾಮಾನ್ಯ ಸಮೀಕ್ಷೆ ಇದು. ಸೂಕ್ಷ್ಮ ಒಳನೋಟಗಳೂ ಇಲ್ಲಿ ಕಾಣದಿರಬಹುದು. ಅದಕ್ಕೆ ಸತತ ಪ್ರಯತ್ನ ಮತ್ತು ಸಾಕಷ್ಟು ಸಮಯಾವಕಾಶ ಬೇಕಾಗುತ್ತದೆ. ಸಂಖ್ಯಾದೃಷ್ಟಿಯಿಂದಲೂ ಸತ್ವದ ದೃಷ್ಟಿಯಿಂದಲೂ ಈ ತಾಲೂಕಿನ ಶಾಸನಗಳು ಗಮನಾರ್ಹವಾದವು ಎನ್ನುವುದು ನಿರ್ವಿವಾದದ ಸಂಗತಿ.

## ಶಾಸನೋಕ್ತ ಸ್ಥಳನಾಮಗಳು

ಚಾಮರಾಜನಗರ ತಾಲೂಕಿನ ಹಲವು ಗ್ರಾಮಗಳಿಗೆ ಸಾವಿರಾರು ವರ್ಷಗಳಿಗೂ ಮೀರಿದ ಪ್ರಾಚೀನ ಇತಿಹಾಸವಿದೆ. ಈ ತಾಲೂಕಿನ ಹಲವು ಗ್ರಾಮಗಳ ಮೂಲ ಹೆಸರಿನ ಸ್ವರೂಪ ಇಂದಿನಂತಿರಲಿಲ್ಲ.

ನಿದರ್ಶನಕ್ಕೆ ಹರದನಹಳ್ಳೀಯ ಪ್ರಾಚೀನ ಹೆಸರು ಮಗೆಯ ಅಥವಾ ಮರ್ಗೆಯ, ಇದು ಮಾಧವ ದಣ್ಣಾಯಕರ ಜನ್ಮಸ್ಥಳವಾಗಿತ್ತು ಎಂಬುದು ಶಾಸನದಿಂದ ತಿಳಿದುಬರುತ್ತದೆ. ಹಾಗೆಯೇ ಈತಿನ ಅಮಚವಾಡಿ-ಅಂಚವಾಡಿ ಮತ್ತು ಮಾದವಾಡಿ ಮೊದಲವಾಡಿ ಎಂದು ಶಾಸನಗಳಲ್ಲಿ ಉಲ್ಲೇಖಗೊಂಡಿವೆ. ಚಾಮರಾಜನಗರಕ್ಕೆ ಅರೆಕೊತಾರ, ಅರೆಕೊಟ್ಟರಾ, ಅರುಕುತಾರ ಎಂಬ ಹೆಸರಿತ್ತೆಂದು ತಿಳಿದುಬರುತ್ತದೆ.

ಉಮ್ಮತ್ತೂರಿಗೆ ಧತ್ತೂರಾಖ್ಯಪುರ ಎಂಬ ಹೆಸರಿತ್ತೆಂದು ಶಾಸನದಿಂದ ಸ್ಪಷ್ಟವಾಗಿ ಬರುತ್ತದೆ. ಆಲೂರು ಸಂಸ್ಥಾನವು ತೆಂಕಣ 'ಐಯಾವೊಳೆ' ಎಂದು ಪ್ರಖ್ಯಾತವಾಗಿತ್ತೆಂದು ಚಾ.ನ.೧೮೪ ಶಾಸನ ವಿವರಿಸುತ್ತದೆ.

ಹೊಂಗನೂರಿಗೆ ಹೊಂಗ ಅಗ್ರಹಾರ ಮತ್ತು ಕೊಳುಮು ಎಂಬ ಹೆಸರಿತ್ತೆಂದು ಶಾಸನದಲ್ಲಿ ಉಲ್ಲೇಖಿತವಾಗಿದೆ. ಈಗಿನ ಕೆರೆಹಳ್ಳಿಯ ಮೂಲ ಹೆಸರು ಪ್ರಾಯಶಃ ಶಿವಯ್ಯನ ಕೆರಿ ಎಂದು ಶಾಸನದಿಂದ ತಿಳಿಯುತ್ತದೆ. ಈಗಿನ ವೆಂಕಟಯ್ಯ ಛತ್ರವು ಶ್ರೀನಿವಾಸಪುರ ಅಥವಾ ಶ್ರೀನಿವಾಸ ಕ್ಷೇತ್ರ ಎಂದೂ ಪರಿಚಿತವಾಗಿತ್ತೆಂದು ಶಾಸನ ತಿಳಿಸುತ್ತದೆ.

ಹಾಗೆಯೇ ಮಲೆಯೂರಿಗೆ ಕನಕಗಿರಿ ಅಥವಾ ಕನಕಾಚಲ, ಹರದನಹಳ್ಳಿಗೆ ವಾಣಿಜ್ಯಪುರಿ, ಹೆಗ್ಗವಾಡಿಗೆ ತಮಿಳು ರೂಪಾಂತರ ಪೆರ್ಗೆಪಾಡಿ ಎಂಬ ಹೆಸರಿತ್ತೆಂದು ಶಾಸನದಿಂದ ತಿಳಿಯುತ್ತದೆ. ಇವುಗಳಲ್ಲದೆ ಈ ತಾಲೂಕಿನ ಶಾಸನಗಳಲ್ಲಿ ಉಲ್ಲೇಖಗೊಂಡಿರುವ ಕೆಲವು ಗ್ರಾಮಗಳ ಮೂಲನಾಮಗಳು ಇಂತಿವೆ. ಕುದೇರು (ಕುದಿಹೆರು, ಕುದಿಹೇರು, ಕುದುಂಯಿರು) ಎಲ್ಲೂರು (ಎಲವಕ್ಕಲೂರು); ಬಾಗಳಿ, (ಬಾಲ್ಗೆಲೆಯೂರು); ತೆಳನೂರು (ತೆನಳನೂರು); ಬಸವಟ್ಟಿ(ಭಸಟ್ಟಿ); ಎಡೂರು(ಎಡೆಯೂರು, ಇಡೈಯೂರು); ಹೊಮ್ಮ(ಪೊಮ್ಮಿ); ಬೂದಿಪಡಗಕ್ಕೆ(ಮಸಣಹಳ್ಳಿ) ಎಂಬ ಹೆಸರಿತ್ತೆಂದು ಶಾಸನಗಳಿಂದ ತಿಳಿದುಬರುತ್ತದೆ.

**ಚಾಮರಾಜನಗರ ತಾಲೂಕಿನ ಐತಿಹ್ಯಗಳು**

ಐತಿಹ್ಯಗಳು ಅಸ್ತಿತ್ವದಲ್ಲಿರುವ ಅಥವಾ ಇದ್ದ ಒಂದು ಸ್ಥಳ ಅಥವಾ ವ್ಯಕ್ತಿಯನ್ನು ಕುರಿತ ಹೇಳಿಕೆಗಳು. ಇವು ಸಾಮಾನ್ಯವಾಗಿ ಆ ಸ್ಥಳ ಅಥವಾ ವ್ಯಕ್ತಿಗೆ ಮಹತ್ವ ಇದ್ದವೆಂಬುದನ್ನು ವಿವರಿಸುತ್ತವೆ. ಯಾವ ಕಾರಣಕ್ಕಾಗಿ ಅವು ಅಸ್ತಿತ್ವದಲ್ಲಿವೆ ಎಂಬುದನ್ನು ತಿಳಿಯಪಡಿಸಲು ಪ್ರಯತ್ನಿಸುತ್ತವೆ. ಈ ಕಾರಣದಿಂದ ಇವು ಸ್ಥಳ ಅಥವಾ ವ್ಯಕ್ತಿಗಳಿಗೆ ಚಿರಂಜೀವಿತ್ವವನ್ನು ಗಳಿಸಿಕೊಡಲು ನೆರವಾಗುತ್ತದೆ.

ಸ್ಥಳನಾಮಗಳು ಅನೇಕ ವೇಳೆ ಅಲ್ಲೊಂದು ಐತಿಹ್ಯವಿರುವ ಸೂಚನೆ ಕೊಡುತ್ತವೆ. ಆದರೆ ಸ್ಥಳ ನಾಮಗಳೆಲ್ಲವೂ ಐತಿಹ್ಯ ಸೂಚನೆಗಳಲ್ಲ. ಸ್ಥಳನಾಮಗಳ ಹಿಂದೆ ಐತಿಹ್ಯಗಳಿರುವಂತೆಯೇ ಭೌಗೋಳಿಕ ಲಕ್ಷಣಗಳು ನಿರ್ದಿಷ್ಟ ವೃತ್ತಿಯವರಿರುವುದು ಮುಂತಾದ ಕಾರಣಗಳು ಇರುತ್ತವೆ. ಉದಾಹರಣೆಗೆ

ಚಾಮರಾಜನಗರದ ಸಮೀಪವಿರುವ ಹರದನಹಳ್ಳಿ. ಇದು ಅನೇಕ ಕಾರಣಗಳಿಂದ ಐತಿಹಾಸಿಕ ಕ್ಷೇತ್ರ. ಒಂದು ಸಲ ವ್ಯಾಪಾರಿಗಳು(ಬಣಜಿಗರು) ಅಡಕೆಯ ಮೂಟೆಗಳನ್ನು ಎತ್ತುಗಳ ಮೇಲೆ ಹೇರಿಕೊಂಡು ಮಧುರೆಯ ಕಡೆ ಪ್ರಯಾಣ ಮಾಡುತ್ತ ದಾರಿಯಲ್ಲಿ ಬೀಡನ್ನು ಬಿಟ್ಟರು. ಅವರು ಅಲ್ಲಿದ್ದ ಲಿಂಗವನ್ನು ಲಿಂಗವೆಂದು ತಿಳಿಯದೆ ಅದರ ಅಕ್ಕಪಕ್ಕದಲ್ಲಿ ಗುಂಡುಕಲ್ಲುಗಳನಿಟ್ಟು ಒಲೆಮಾಡಿ ಬೆಂಕಿಯೊಟ್ಟಿ ಅನ್ನದ ಮಡಕೆಯನ್ನು ಅದರ ಮೇಲಿಟ್ಟರು. ಕೂಡಲೇ ಆ ಮಧ್ಯದ ಲಿಂಗದ ಕಲ್ಲಿನಿಂದ ಹಾಲು ಒಸರಿ ಬೆಂಕಿ ನಂದಿತು. ಮಡಕೆ ಸೋರುತ್ತಿಲ್ಲ. ಆ ಬೆಂಕಿಯೇಕೆ ಆರಿತ್ತೆಂದು ಆ ಬಣಜಿಗರಿಗೆ ಆಶ್ಚರ್ಯ. ಬೂದಿಯೆಳೆದು ನೋಡುತ್ತಾರೆ. ಆ ಲಿಂಗದಿಂದ ಹಾಲು ಉಕ್ಕುತ್ತಿದೆ! ಅದನ್ನು ಕಂಡು ಗಾಬರಿಗೊಂಡು ಭಯ ಭಕ್ತಿಯಿಂದ ಆ ಲಿಂಗದ ಕಲ್ಲಿಗೆ 'ಅಮೃತೇಶ್ವರ' ಎಂದು ಮೊರೆಯಿಟ್ಟು ಇನ್ನೊಂದು ಕಡೆ ಅನ್ನ ಬೇಯಿಸಿ ಉಂಡು, ತಾಂಬೂಲಕ್ಕೆಂದು ಅಡಕೆಗಾಗಿ ಚೀಲಗಳಿಗೆ ಕೈ ಹಾಕಿದಾಗ ಅವೆಲ್ಲ ಅಳಲೆಕಾಯಿಯಾಗಿದ್ದವು.

ಒಡನೆಯೇ ಆ ಬಣಜಿಗರೆಲ್ಲ ಎದೆಯೊಡೆದುಕೊಂಡು ಅಳುತ್ತ ''ಎಲೆ ಲಿಂಗವೇ, ಈ ಅಡವಿಯಲ್ಲಿ ಜನರೆನ್ನುವಂತೆ ಅಳಲೇಶ್ವರನೆಂಬ ಹೆಸರು ಅನ್ವರ್ಥವಾಯಿತು. ಈ ಅಳಲೆಯಲ್ಲ ಅಡಕೆಯಾದರೆ ಬಂದ ಲಾಭದಿಂದ ನಿನಗೊಂದು ಗುಡಿಯನ್ನು ಪುರವನ್ನು ಕಟ್ಟಿಸುವೆವು'' ಎಂದು ಹರಕೆ ಮಾಡಿಕೊಂಡರು. ಮಧುರೆಗೆ ಹೋಗಿ ಅಡಕೆಯನ್ನು ಮಾರಿದಾಗ ಅವರಿಗೆ ಎಂದಿಗಿಂತ ಐದು ಮಡಿ ಆರು ಮಡಿ ಲಾಭ ಬಂದಿತು. ಅಳಲೇಶ್ವರನಲ್ಲಿಗೆ ದೃಢಭಕ್ತಿಯಿಂದ ಬಂದು ಗುಡಿ ಗೋಪುರ ಪ್ರಾಕಾರಗಳನ್ನು ಕಟ್ಟಿಸಿದರು. ಆ ಮೇಲೆ ಅವರು ಅಲ್ಲೇ ನೆಲೆಸಿ ಒಂದು ಊರನ್ನು ಕಟ್ಟಿಕೊಂಡು ಅದಕ್ಕೆ ವಾಣಿಜ್ಯಪುರ(ಹರದನಹಳ್ಳಿ) ಎಂದು ಹೆಸರಿಟ್ಟರು. ಎಂಬುದು ಒಂದು ಐತಿಹ್ಯ.[೨೧]

ಹಾಗೆಯೇ ಹಲವು ನದಿನಾಮಗಳ ಹಿಂದೆಯೂ ಐತಿಹ್ಯಗಳಿವೆ. ಈ ತಾಲೂಕಿನ ಮುಖ್ಯ ನದಿ ಸುವರ್ಣಾವತಿ. ಇದನ್ನು ಹೊನ್ನುಹೊಳೆ ಎಂದು ಸಹ ಕರೆಯುವರು. ನೀಲಗಿರಿಯಲ್ಲಿ ತಪಸ್ಸನ್ನು ಆಚರಿಸುತ್ತಿದ್ದ 'ಕಪಿಲ' ಋಷಿ ತನ್ನ ಕಮಂಡಲದಲ್ಲಿ ಇಟ್ಟುಕೊಂಡಿದ್ದ ಗಂಗೆಯ ನೀರನ್ನು ಉತ್ತರಾಭಿಮುಖವಾಗಿ ಹರಿಸುವುದರ ಮೂಲಕ ಸಕಲ ಜೀವರಾಶಿಗೆ ಮುಕ್ತಿಯನ್ನು ಕರುಣಿಸುವ ನದಿಯನ್ನಾಗಿ ಮಾಡಬೇಕೆಂದು ನಂದೀಶ್ವರ ಋಷಿಯನ್ನು ಪ್ರಾರ್ಥಿಸಿದ. ಅವನ ಪ್ರಾರ್ಥನೆ ಈಡೇರಿದ ಫಲವಾಗಿ ಸುವರ್ಣಾವತಿ ಹುಟ್ಟಿತು ಎಂಬ ಐತಿಹ್ಯ ಸುವರ್ಣಾವತಿ ನದಿಯ ಮೇಲಿದೆ.[೨೨]

### ಮೈಸೂರು ಒಡೆಯರನ್ನು ಕುರಿತ ಐತಿಹ್ಯ

ಯದುವಂಶದ ಅರಸರಲ್ಲಿ ಒಬ್ಬರು ಮೈಸೂರಿನಿಂದ ಕೊಂಗುನಾಡಿಗೆ ಹೊರಟಿದ್ದರು. ಅವರು ನಂಜನಗೂಡು ಚಾಮರಾಜನಗರ ಮಾರ್ಗವಾಗಿ ಹೊರಟು ಈಗಿನ ವೆಂಕಟಯ್ಯನ ಛತ್ರದ ವೆಂಕಟರಮಣ ಸ್ವಾಮಿ ದೇವಸ್ಥಾನದ ಕಲ್ಯಾಣಿಯ ಮುಂದೆ ಇದ್ದ ಒಂದು ಮಾವಿನ ಮರದ ಕೆಳಗೆ ವಿಶ್ರಾಂತಿ ಪಡೆಯಲು

ಇಳಿದರು. ಫಲಭರಿತ ಮಾವಿನ ಮರವನ್ನು ನೋಡಿ ಮಹಾರಾಜರಿಗೆ ಮಹಾದಾನಂದವಾಯಿತು. ಮಾವಿನ ಫಲವೊಂದನ್ನು ತಿಂದ ಮಹಾರಾಜರಿಗೆ ಒಂದು ಯೋಚನೆ ಹೊಳೆಯಿತು. ಈ ಫಲವನ್ನು ಅಭಿವೃದ್ಧಿಪಡಿಸ ಬೇಕೆಂದು, ಅದರಂತೆಯೇ ಕೊಂಗುನಾಡಿನಿಂದ ಮರಳಿ ಬರುವಾಗ ವೆಂಕಟಯ್ಯ ಎಂಬ ಒಬ್ಬ ಸೇವಕನನ್ನು ಕರೆದು ತಂದು ಈ ಮಾವಿನ ಫಲವನ್ನು ಹೆಚ್ಚಾಗಿ ಬೆಳೆದು ಅರಮನೆಗೆ ಸರಬರಾಜು ಮಾಡಲು ತಿಳಿಸಿದನು. ಅಂತೆಯೇ ವೆಂಕಟಯ್ಯ ಆ ಮಾವಿನ ಬೀಜಗಳನ್ನು ಅಲ್ಲಿ ನೆಟ್ಟು ಮಾವಿನ ತೋಪು ಬೆಳೆಸಿದನು. ಮಾವಿನ ಗಿಡಗಳಿಗೆ ನೀರು ಹಾಕಲು ಒಂದು ಬಾವಿಯನ್ನು ತೆಗೆಸಿಕೊಂಡನು. ಅರಮನೆಗೆ ಮಾವಿನ ಹಣ್ಣುಗಳನ್ನು ಕಳುಹಿಸುತ್ತಾ ಮಹಾರಾಜರ ವಿಶ್ವಾಸವನ್ನು ಚೆನ್ನಾಗಿ ಗಳಿಸಿಕೊಂಡನು. ಮಹಾರಾಜರು ಮತ್ತೊಮ್ಮೆ ಅತ್ತ ಬಿಜಯಂಗೈದಾಗ ಅಲ್ಲೊಂದು ಅರವಟ್ಟಿಗೆಯನ್ನು ತೆರೆದು ಪ್ರಯಾಣಿಕರಿಗೆ ನೆರವಾಗುವ ಉದ್ದೇಶವನ್ನು ವೆಂಕಟಯ್ಯ ಮಹಾರಾಜರ ಮುಂದಿಟ್ಟಾಗ, ಈಗಿನ ಸತ್ಯಮಂಗಲ ಚಾಮರಾಜನಗರ ರಸ್ತೆಯ ಬದಿಯಲ್ಲಿರುವ ಚೆನ್ನಬಸಪ್ಪ ಎಂಬುವರ ತೋಟದಲ್ಲಿ ಒಂದು ನೆಲಬಾವಿ ತೋಡಿಸಿ ಜನರಿಗೆ ನೀರು ಹಾಗೂ ಗಂಜಿ ಹಾಕುವ ಅರವಟ್ಟಿಗೆಯೊಂದನ್ನು ತೆರೆದು ಅದರ ಮೇಲ್ವಿಚಾರಣೆಯನ್ನು ವೆಂಕಟಯ್ಯನಿಗೆ ವಹಿಸಿದರು.

ಈ ವೆಂಕಟಯ್ಯನು ಕೊಂಗುನಾಡಿನ ತನ್ನ ಇಬ್ಬರು ಹೆಂಡತಿಯರನ್ನು ಕರೆತಂದು ಅವರ ಸಹಾಯದಿಂದ ಅರವಟ್ಟಿಗೆಯ ಕಾರ್ಯವನ್ನು ಚೆನ್ನಾಗಿಯೇ ನಿರ್ವಹಿಸಿದನು. ಅನಂತರ ವೆಂಕಟಯ್ಯ ಅಲ್ಲೊಂದು ದೇವಸ್ಥಾನ ಮತ್ತು ಕಲ್ಯಾಣಿಯ ನಿರ್ಮಾಣಕ್ಕಾಗಿ ಮಹಾಸ್ವಾಮಿಯವರ ಅನುಮತಿ ಬೇಡಿದನು. ಮಹಾರಾಜರು ಅದಕ್ಕೆ ನೆರವಾದರು. ಹೀಗೆ ವೆಂಕಟಯ್ಯನ ಯಜಮಾನಿಕೆಯಲ್ಲಿ ದೇವಸ್ಥಾನ ಮತ್ತು ಕಲ್ಯಾಣಿ ನಿರ್ಮಾಣವಾದವು. ಇವುಗಳ ನಿರ್ಮಾಣ ಕಾರ್ಯಕ್ಕಾಗಿ ಬಂದ ಕುಶಲಕರ್ಮಿಗಳಲ್ಲಿ ಕೆಲವರು ಅಲ್ಲಿಯೇ ನೆಲೆನಿಂತರು. ವೆಂಕಟಯ್ಯನ ಅರವಟ್ಟಿಗೆ ಆತನ ಹೆಸರಿನಲ್ಲಿ ಊರಾಯಿತು. ಅದು ವೆಂಕಟಯ್ಯನ ಛತ್ರವಾಯಿತು.[೨೫]

**ಜೈನ ಧರ್ಮಕ್ಕೆ ಸಂಬಂಧಿಸಿದ ಐತಿಹ್ಯಗಳು**

ಮೈಸೂರು ಮತ್ತು ಚಾಮರಾಜನಗರ ಜಿಲ್ಲೆಗಳ ತಲಕಾಡು ಚಿಕ್ಕಹನಸೋಗೆ, ಗೋಮಟಗಿರಿ, ಕನಕಗಿರಿ ಮತ್ತು ತೆರಕಣಾಂಬಿ ಮೊದಲಾದವು ಖ್ಯಾತ ಜೈನಕ್ಷೇತ್ರಗಳಾಗಿದ್ದವಷ್ಟೇ ಅಲ್ಲದೆ ಯದುವಂಶದ ಮಂಗರಸನಂಥ ಅರಸರು ಸಹ ಹಲವು ಪೀಳಿಗೆಗಳವರೆಗೆ ಜೈನಧರ್ಮಾವಲಂಬಿಗಳಾಗಿದ್ದರು. ಕೊನೆಯ ಮೈಸೂರು ಅರಸರಾದ ಜಯಚಾಮರಾಜ ಒಡೆಯರ ಆಸ್ಥಾನದಲ್ಲಿ ಕೂಡ ಎರ್ತೂರು ಶಾಂತಿರಾಜ ಶಾಸ್ತ್ರಿಯವರಂಥ ಜೈನ ವಿದ್ವಾಂಸರಿದ್ದರು. ಒಟ್ಟಿನಲ್ಲಿ ಈ ಎರಡು ಜಿಲ್ಲೆಗಳು ಸಾಕಷ್ಟು ಜೈನ ಪ್ರಭಾವವನ್ನು ಹೊಂದಿದ್ದು, ಈ ಕಾರಣದಿಂದ ಜೈನ ಐತಿಹ್ಯಗಳು ಸಾಕಷ್ಟು ಈ ಜಿಲ್ಲೆಯಲ್ಲಿ ಲಭ್ಯವಾಗುತ್ತವೆ. ಇವುಗಳಲ್ಲಿ ಕೆಲವು ಐತಿಹ್ಯಗಳಿದ್ದು ಅವುಗಳನ್ನು ಇಲ್ಲಿ ವಿಶ್ಲೇಷಿಸಲಾಗಿದೆ.

“ಮೈಸೂರು ದೊರೆ ದೊಡ್ಡ ಕೃಷ್ಣರಾಜನ ರಾಣಿಗೆ ಒಮ್ಮೆ ಭೂತ ಹಿಡಿಯಿತಂತೆ, ಅದನ್ನು ನಿವಾರಿಸಲೂ ಯಾರ್‍ಯಾರಿಂದಲೂ ಸಾಧ್ಯವಾಗದಿದ್ದಾಗ ಶ್ರವಣಬೆಳ್ಗೊಳದ ಪಟ್ಟಾಚಾರ್ಯರನ್ನು ಕರೆಯಿಸಿದ ನಂತೆ. ಅವರು ಆ ಪಿಶಾಚಿಯನ್ನು ಓಡಿಸಿದರು. ಆಗ ದೊರೆ ಅವರಿಗೆ ಮರ್ಯಾದೆ ಮಾಡಿ ಕಳಿಸಿದನಂತೆ. ಈ ಐತಿಹ್ಯ ದೇವಚಂದ್ರನ ರಾಜಾವಳೀ ಕಥೆಯಲ್ಲಿ ದೊರೆಯುತ್ತದೆ.”[೨೮] ಈ ಐತಿಹ್ಯ ಎರಡು ಅಂಶಗಳನ್ನು ಹೊರಚೆಲ್ಲುತ್ತದೆ. ಮೈಸೂರು ಅರಮನೆಗೂ ಶ್ರವಣಬೆಳ್ಗೊಳದ ಜೈನಭಟ್ಟಾರಕರಿಗೂ ಪರಸ್ಪರ ಗೌರವ ಆದರಾಭಿಮಾನಗಳಿದ್ದವು ಎಂಬುದು ಒಂದಾದರೆ, ಜೈನ ಭಟ್ಟಾರಕರಲ್ಲಿ ಭೂತಪ್ರೇತ ಪಿಶಾಚಿಗಳನ್ನು ಓಡಿಸಬಲ್ಲ ತಾಂತ್ರಿಕ ವಿದ್ಯೆಯನ್ನು ಬಲ್ಲವರಿದ್ದಾರೆಂಬುದು ಇನ್ನೊಂದು.

ದಿವಾನ್ ಪೂರ್ಣಯ್ಯ ಹಾಗೂ ಅರಸು ಮನೆತನದವರು ಬಸದಿಗಳನ್ನು ಕೀಳಿಸಿದ್ದು, ಪ್ರತಿಷ್ಠಾಪಿಸಿದ್ದು, ಸ್ಥಳಾಂತರಿಸಿದ್ದು, ಎಲ್ಲವೂ ಉಂಟು. ಇವುಗಳಲ್ಲಿ ಕೆಲವು ಐತಿಹಾಸಿಕವಾಗಿ ದಾಖಲಾಗಿದ್ದರೆ, ಇನ್ನೂ ಕೆಲವು ಐತಿಹ್ಯ ಕಥೆಯಾಗಿ ಮತ್ತೆ ಕೆಲವು, ಕತೆಗಳೂ ಅಲ್ಲದೆ ಹೇಳಿಕೆಗಳಾಗಿ ಉಳಿದುಕೊಂಡಿವೆ. ಇಂಥ ದೊಂದರ ಉಲ್ಲೇಖ ದೇವಚಂದ್ರನ ರಾಜಾವಳೀ ಕಥೆಯಲ್ಲಿ ಹೀಗಿದೆ.

ಆತನು ಮಹಿಷೂರ ಬಸ್ತಿ ಮುಖಮಂಟಪವನ್ನು ಬೆಳ್ಳಿಯುಳಿಯ ಬಸ್ತಿ ಮೊದಲಾದ ಆರೇಳು ಪೂಜೆಯಿಲ್ಲದ ಬಸ್ತಿಗಳನ್ನು ಕೀಳಿಸಿ ಕಲ್ಲುಗಳನ್ನು ಸಾಗಿಸಿಕೊಂಡನು. ತಾರಣ ಸಂವತ್ಸರದಲ್ಲಿ ದೇವರಾಜರಸನು ಪಟ್ಟಣದಲ್ಲಿದ್ದ ಬಸ್ತಿಯನ್ನು ಕೆಡವಿ ನಿಕ್ಷೇಪವಾಗಿದ್ದ ದೇವರನ್ನು ತೆಗೆಯಿಸಿ ವೈಸಾಖದಲ್ಲಿ ಪ್ರತಿಷ್ಠೆ ಮಾಡಿದನು.”[೨೯]

ಇಲ್ಲಿ ಪೂರ್ಣಯ್ಯ ಪ್ರಾಚೀನ ಬಸದಿಗಳನ್ನು ಸಂರಕ್ಷಿಸುವ ಬದಲು ಕೀಳಿಸಿದ ಎಂಬುದು ಮುಖ್ಯವಾದ ಅಂಶ. ದೇವರಾಜರಸನು ನಿಕ್ಷೇಪವಾಗಿದ್ದ ಎಂದರೆ ಹೂತುಹೋಗಿದ್ದ ಅಥವಾ ಮರೆಯಾಗಿದ್ದ ದೇವರನ್ನು ತೆಗೆಯಿಸಿದ ಎಂದಿದೆ. ಒಟ್ಟಿನಲ್ಲಿ ಈ ಅರಸರು ಜಿನಮಂದಿರಗಳನ್ನು ಕೆಡವದ್ದಂತೂ ಇಲ್ಲಿ ಸ್ಪಷ್ಟವಾಗಿದೆ.

ಜೈನ ದಿಗಂಬರ ಪಂಥದ ಪ್ರಸಿದ್ಧ ಆಚಾರ್ಯರಾದ ಪೂಜ್ಯಪಾದರ ತಂಗಿಯ ಮಗನೇ ನಾಗಾರ್ಜುನ. ಇವನ ತಂದೆ ತೀರಿ ಹೋಗಿದ್ದು, ತಾಯಿ ಬಡತನದಲ್ಲಿದ್ದಳು. ಪೂಜ್ಯಪಾದ ಮುನಿ ಭಿಕ್ಷೆಗಾಗಿ ಬಂದಾಗ ಈಕೆ ಶುಷ್ಕ ಆಹಾರ ನೀಡಿದಳು. ತನ್ನ ಬಡತನ ಹೋಗುವಂತೆ ಅನುಗ್ರಹಿಸಲು ಕೋರಿಕೊಂಡಳು. ಆಗ ಆ ಮುನಿ ಕಬ್ಬಿಣದ ಬಟ್ಟಲೊಂದನ್ನು ತರಿಸಿ, ಅದನ್ನು ಕೈಯಿಂದ ಒರೆಸಿ ಆಕೆಗೆ ಕೊಟ್ಟು - ಇದನ್ನು ಒಲೆಯಲ್ಲಿ ಎರಡು ಜಾವ ಇಟ್ಟರೆ ಬಂಗಾರವಾಗುತ್ತದೆ ಎಂದು ಹೇಳಿಹೋದರು. ತಾಯಿ ಅದೇ ರೀತಿ ಅದನ್ನು ಒಲೆಯಲ್ಲಿ ಇಟ್ಟಿದ್ದಳು. ದನ ಕಾಯಲು ಹೋಗಿದ್ದ ನಾಗಾರ್ಜುನ ಬಂದವನು ವಿಷಯ ತಿಳಿದು ಹಠ ಮಾಡಿ ಆ ಬಟ್ಟಲನ್ನು ಹೊರತೆಗೆದ. ಅದು ಅರೆ ಚಿನ್ನವಾಗಿತ್ತು. ಅವನು ಆ ವಿದ್ಯೆ ಕಲಿಯಲು

ಹೊರಟ. ಹೇಗೋ ಕಲಿತುಬಿಟ್ಟ. ಪದ್ಮಾವತಿಯಕ್ಷಿಯ ದಯದಿಂದ ಆ ಬೆಟ್ಟವನ್ನೆ ಕನಕಗಿರಿಯಾಗಿಸಿದ. ಆ ಪರ್ವತಕ್ಕೆ ಹೇಮಗಿರಿ ಎಂದು ಹೆಸರಾಯಿತು. ಅಲ್ಲಿ ಪಾರ್ಶ್ವಜಿನ ಚೈತ್ಯಾಲಯ, ಬ್ರಹ್ಮ, ಪದ್ಮಾವತಿಯರ ಪ್ರತಿಷ್ಠೆಯಾಯಿತು. ಆ ನಂತರ ಅವನು ಹಿಮಗಿರಿ ಬೆಟ್ಟಕ್ಕೆ ಹೋಗಿ ಅಲ್ಲಿ ಗೋಪಾಲಸ್ವಾಮಿ ಗುಡಿ ಮಾಡಿಸಿ ಕೆಲವು ದಿನ ಅಲ್ಲಿದ್ದ. ನಂತರ ಅಲ್ಲಿಂದ ಶ್ರೀಶೈಲಕ್ಕೆ ಹೋದ.[೨೫]

ದೇವಚಂದ್ರ ದಾಖಲಿಸಿರುವ ಈ ಐತಿಹ್ಯವನ್ನು ಸ್ಥಲದೂರದಲ್ಲಿ ಒಪ್ಪಬಹುದು. ಸಿದ್ಧಪುರುಷನೊಬ್ಬ ಸಾಮಾನ್ಯ ವ್ಯಕ್ತಿಯ ಒಳ್ಳೆಯ ತನಕ್ಕೆ ಕರೆಗೆ ಮೆಚ್ಚಿ ಆತನಿಗೆ ಸಹಾಯವಾಗುವಂಥ ಏನಾದರೂ ಹೇಳುವುದು, ಕೊಡುವುದು ಸಾಮಾನ್ಯ. ಆದರೆ ಆ ವ್ಯಕ್ತಿ ಆತುರ ದುರದುಷ್ಟದಿಂದಾಗಿ ಆ ಫಲಪೂರ್ಣ ದೊರೆಯದೇ ಹೋಗುವುದು ಜನಪದ ಕತೆಗಳ ಆಶಯ. ಅಂಥದೇ ಆಶಯ ಇಲ್ಲಿಯದು. ಹಿಮವದ್ ಗೋಪಾಲಸ್ವಾಮಿ ಬೆಟ್ಟದಲ್ಲಿ ಗೋಪಾಲಸ್ವಾಮಿ ದೇವಾಲಯವನ್ನು ನಾಗಾರ್ಜುನ ಕಟ್ಟಿಸಿದ ಎಂಬ ಕತೆಯಲ್ಲಿನ ಹೇಳಿಕೆ ಸತ್ಯದ ಪರಿವರ್ತಿತ ರೂಪವಾದದ್ದು. ವಾಸ್ತವವಾಗಿ ಆ ಗುಡಿ ಪ್ರದೇಶದಲ್ಲಿ ಜೈನ ಬಸದಿಯೊಂದಿತ್ತು ಎನ್ನುವುದಕ್ಕೆ ಶಾಸನಾಧಾರಗಳಿವೆ.

ಶಾಲಿವಾಹನ ಶಕೆಯ ಐತಿಹ್ಯ

ಶಾಲಿವಾಹನ ಶಕೆಯ ಆರಂಭಕ್ಕೆ ಕಾರಣನಾದ ಶಾಲಿವಾಹನನ ಹುಟ್ಟಿನ ಬಗೆಗೊಂದು ಐತಿಹ್ಯವಿದೆ. ಅದೆಂದರೆ ಮಾಘನಂದಿ ಎಂಬ ಜೈನ ಆಚಾರ್ಯನೊಬ್ಬನು ಕುಂಬಾರ ಸ್ತ್ರೀಯೊಬ್ಬಳಲ್ಲಿ ಅನುರಕ್ತನಾಗಿ ಸಂಸಾರಿಯಾಗುತ್ತಾನೆ. ಅವನಿಗೆ ಹುಟ್ಟಿದ ಮಗುವೆ ಈ ಶಾಲಿವಾಹನ. ಅವನು ಕ್ರಮೇಣ ಬಲಿಷ್ಠನಾಗಿ ದೊರೆಯಾಗುತ್ತಾನೆ. ದೇವಚಂದ್ರ ತನ್ನ ರಾಜಾವಳಿಯಲ್ಲಿ ಈ ಬಗ್ಗೆ ಒಂದೆರಡು ಸಾಲಿನಲ್ಲಿ ಉಲ್ಲೇಖಿಸಿ ಕೈಬಿಡುತ್ತಾನೆ. ''ಮಾಘನಂದಿ ಮುನಿಗೂ ಕುಲಾಲ ಸ್ತ್ರೀಗೂ ಹುಟ್ಟಿದ ಶಾಲಿವಾಹನ ರಾಜನು ಬಹುಧಾನ್ಯ ಸಂವತ್ಸರ ವಾರಾಭ್ಯ ತನ್ನ ಶಕೆಯನ್ನು ಪ್ರಕಟಿಸಿದನು''[೨೬] ಎಂದಷ್ಟೇ ಹೇಳಿದ್ದಾನೆ.

ಉಮ್ಮತ್ತೂರು ಮತ್ತು ಕಳಲೆ ಅರಸರ ನಡುವಿನ ಯುದ್ಧದ ಐತಿಹ್ಯ

ಅರಸು ಮನೆತನದ ವೀರನಂಜರಾಜನ ಕಾಲದಲ್ಲಿ ಉಮ್ಮತ್ತೂರಿನವರಿಗೂ ಕಳಲೆಯವರಿಗೊಂದು ಕುದುರೆ ವಿಚಾರದಲ್ಲಿ ಜಗಳವುಂಟಾಯಿತು. ಇಂದಿಗೂ ಕಳಕೆಯ್ಲಿ 'ದಾವಣೆಗದ್ದೆ' ಎಂದು ಕರೆಯಲ್ಪಡುವ ಒಂದು ಜಾಗವಿದೆ. ಈ ಜಾಗದಲ್ಲಿ ಕಳಲೆಯ ಅರಸು ಮನೆತನದವರನ್ನು ದಾವಣೆಕಟ್ಟಿ ತಲೆ ಹೊಯ್ದಿದರು. ಅನಂತರ ಕಳಲೆ ಅರಸರ ಗಂಧರ್ವ ಪತ್ನಿಯ ಮಗ ಕಾಂತಣ್ಣನವರಿಗೆ ಪಟ್ಟಕಟ್ಟಿದರು. ಅವರು ತಮ್ಮ ಒಡೆಯರ ಪಾವುಗೆಗಳನ್ನು ಸಿಂಹಾಸನದ ಮೇಲಿಟ್ಟು ರಾಜ್ಯಭಾರ ಮಾಡುತ್ತಿದ್ದರಂತೆ.[೨೮]

ಸುಮಾರು ಐದುವರೆ ಶತಮಾನಗಳ ಕಾಲ ರಾಜಧಾನಿಯಾಗಿ ಮೆರೆದ ಮೈಸೂರು ಪ್ರಾಂತ್ಯಕ್ಕೆ ಸೇರಿದ ಚಾಮರಾಜನಗರಕ್ಕೆ ಸಹಜವಾಗಿ ಐತಿಹಾಸಿಕ ಮಹತ್ವವಿದೆ. ಗಂಗರು, ಯದುವಂಶದವರು ತಮ್ಮ ಆಡಳಿತ

ಕೇಂದ್ರವನ್ನು ದೀರ್ಘಕಾಲ ಹೊಂದಿದ್ದ ತಾಲೂಕು ಇದು. ಈ ತಾಲೂಕಿನ ಬಹುತೇಕ ಸ್ಥಳಗಳ ಬಗ್ಗೆ ಒಂದು ಸಂಶೋಧನೆಗೆ ಅಗತ್ಯವಾದಷ್ಟು ಆಕರ್ಷಕವಾದ ಐತಿಹ್ಯಗಳಿವೆ. ಪ್ರಸ್ತುತ ಅಧ್ಯಯನದಲ್ಲಿ ಚರಿತ್ರೆಗೆ ಪೂರಕವಾದ ಅಂಶಗಳನ್ನು ಒದಗಿಸುವ ಕೆಲವು ಐತಿಹ್ಯಗಳನ್ನು ಮಾತ್ರ ಕ್ಷೇತ್ರಕಾರ್ಯ ಸಂದರ್ಭದಲ್ಲಿ ದೊರೆತ ಮಾಹಿತಿಯೊಂದಿಗೆ ವಿವೇಚಿಸಲಾಗಿದೆ.

ಅಡಿಟಿಪ್ಪಣಿಗಳು

೧. ರಘುಪತಿ ಕೆಮ್ಮೂರು, ಸ್ಥಳನಾಮಾಧ್ಯಯನ ಇತ್ತೀಚಿನ ಒಲವುಗಳು ಒಂದು ಸ್ಥೂಲ ಚಿತ್ರ, ಹರತಿಸಿರಿ, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೧೯೮೭, ಪು.೪೦೮

೨. ಶಾಲಿನಿ ರಘುನಾಥ, ಸ್ಥಳನಾಮ ಸ್ಥಳಿಯ ಚರಿತ್ರೆ ಪುರಾತತ್ವ ಮಾಲೆ, ಹಾನಗಲ್ಲು, ವಾಸುದೇವ ಬಡಿಗೇರ(ಸಂ), ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು.೧೫-೧೬

೩. ಜವರೇಗೌಡ ದೇ., ಸ್ಥಳವ್ಯಾಸಂಗ, ಸಹ್ಯಾದ್ರಿ ಪ್ರಕಾಶನ, ಮೈಸೂರು, ಪು.೧೯೪

೪. ಜಿವಿನಾ, ಸರ್ವೋದಯ ಪಥ, ಅಭಿನಂದನ ಸಮಿತಿ, ತುಮಕೂರು, ೧೯೮೨, ಪು.೩೬೫-೩೮೪

೫. ಮಠ ಎಸ್.ಎನ್., ಜಿಲ್ಲಾ ಅಂಕಿ ಅಂಶಗಳ ನೋಟ ೨೦೦೯-೧೦, ಜಿಲ್ಲಾ ಪಂಚಾಯತ್, ಚಾಮರಾಜನಗರ ಪು.೧೪

೬. ಅಶ್ವತ್ಥನಾರಾಯಣ, ಹಿರಿಯ ವಿದ್ವಾಂಸರು, ಚಾಮರಾಜನಗರ ಅವರ ಸಂದರ್ಶನದಿಂದ ಮಾಹಿತಿ

೭. ಎ.ಕ.೪.ಚಾಮರಾಜನಗರ ೨, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ಪು.೮

೮. ನಂಜಯ್ಯ ಹೊಂಗನೂರು(ಸಂ), ಚಾಮರಾಜನಗರ ತಾಲೂಕು ಸ್ಥಳನಾಮ ಅಧ್ಯಯನ, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ಮೈಸೂರು, ಪು.೧೦೭

೯. ಅಶ್ವತ್ಥನಾರಾಯಣ(ಸಂ), ಅರಳಿದ ಅರಿಕುಠಾರ, ಶೇಷಾದ್ರಿ ಪ್ರಕಾಶನ, ಚಾಮರಾಜನಗರ, ೧೯೯೮, ಪು.೨೩

೧೦. ಮಲೆಯೂರು ಗುರುಸ್ವಾಮಿ(ಸಂ), ಬಯಲು ಆದಿ ಜಗದ್ಗುರು ಶ್ರೀ ಶಿವರಾತ್ರೀಶ್ವರ ಭಗವತ್ಪಾದರ ೧೦೩೬ನೆಯ ಜಯಂತಿ ಮಹೋತ್ಸವ, ಸಂಚಿಕೆ, ಪು.೧೪೦

೧೧. ಎ.ಕ.೪. ಚಾಮರಾಜನಗರ ೧೧೭, ಹರದನಹಳ್ಳಿ, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ಪು.೪೬

೧೨. ನಂಜುಂಡಸ್ವಾಮಿ(ಸಂ), ಹರದನಹಳ್ಳಿ ದರ್ಶನ, ದೇಗುಲ ಪ್ರಕಾಶನ, ಚಾಮರಾಜನಗರ, ೧೯೯೯, ಪು.೩

೧೩. ತೋಂಟದ ಸಿದ್ಧಲಿಂಗಯತಿಗಳು ತಪಸ್ಸಿಗೆ ಕೂತಾಗ ಹಸುವೊಂದು ಹತ್ತದ ಬಳಿ ಹೋಗಿ ಹಾಲು ಕರೆದು ಬಂದ ಊರು. ಹರಿನಿಗೆ ಹಾಲುಕೊಟ್ಟ ಊರು, ಹರದನಹಳ್ಳಿ ಎಂಬುದು ಅಲ್ಲಿನ ಜನಪದರ ನಂಬಿಕೆ

೧೪. ಶ್ರೀ ನಾಗರಾಜ, ಉಪನ್ಯಾಸಕ, ದೊಡ್ಡರಾಯಪೇಟೆ ಕ್ಷೇತ್ರ ಕಾರ್ಯದಿಂದ ತಿಳಿದುಬಂದ ಮಾಹಿತಿ

೧೫. ಎ.ಕ.೪. ಚಾಮರಾಜನಗರ ೧೦೪, ಮೂಡಲ ಅಗ್ರಹಾರ, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ಪು.೫೮

೧೬. ನಂಜಯ್ಯ ಹೊಂಗನೂರು(ಸಂ), ಪೂರ್ವೋಕ್ತ, ಪು.೭೫

೧೭. ಮಹದೇವಪ್ಪ, ಕಿಲ್ಲಗೆರೆ, ಕ್ಷೇತ್ರಕಾರ್ಯ ಸಂದರ್ಭದಲ್ಲಿ ತಿಳಿದುಬಂದ ಮಾಹಿತಿ

೧೮. ರಂಗಶೆಟ್ಟಿ, ಚಿಕ್ಕಹೊಳೆ, ಕ್ಷೇತ್ರಕಾರ್ಯ ಸಂದರ್ಭದಲ್ಲಿ ತಿಳಿದುಬಂದ ಮಾಹಿತಿ

೧೯. ಹಂಪಾ ನಾಗಾರಾಜಯ್ಯ(ಸಂ), ಚಂದ್ರಕೊಟೆ, ಮಾತಾ ಪ್ರಿಂಟರ್ಸ್, ಮೈಸೂರು, ಪು.೬

೨೦. ಅದೇ, ಪು.೨೯

೨೧. ಗಂಗಾಧರನ್ ಹೆಚ್.(ಸಂ), ಶ್ರೀ ಗೋಸಲ ಪೀಠದ ಗುರುಪಂಪರೆ, ಶ್ವೇತಾದ್ರಿ ಪ್ರಕಾಶನ, ೧೯೯೦, ಪು.೨-೩

೨೨. ರಾಮಶೆಟ್ಟಿ, ಚಿಕ್ಕಹೊಳೆ, ವಕ್ತೃಗಳಿಂದ ತಿಳಿದ ಮಾಹಿತಿ

೨೩. ನಂಜಯ್ಯ ಹೊಂಗನೂರು(ಸಂ), ಪೂರ್ವೋಕ್ತ, ಪು.೧೨೮

೨೪. ಸಣ್ಣಯ್ಯ ಬಿ.ಎಸ್.(ಸಂ), ದೇವಚಂದ್ರನ ರಾಜಾವಳಿ ಕಥೆ, ಹರ್ಷ ಪ್ರಿಂಟರ್ಸ್, ಮೈಸೂರು, ೧೯೮೬, ಪು.೨೮೩-೮೪

೨೫. ಅದೇ, ಪು.೩೦೭

೨೬. ಅದೇ, ಪು.೧೧೯

೨೭. ಅದೇ, ಪು.೯೩

೨೮. ಅದೇ, ಪು.೧೯೭

ಯಾವುದೇ ಒಂದು ಪ್ರದೇಶದ ಗತ ಕಾಲದ ಇತಿಹಾಸವನ್ನು ಪುನರ್ ರಚಿಸಲು ಇರುವ ಪ್ರಾಕ್ತನ ಆಧಾರಗಳಲ್ಲಿ ಶಾಸನಗಳಿಗೆ ಅಗ್ರಸ್ಥಾನ ಸಲ್ಲುತ್ತದೆ. ಈ ಶಾಸನಗಳ ಅಧ್ಯಯನದಿಂದ ಅಲ್ಲಿ ಬಾಳಿ ಬದುಕಿದ ಪೂರ್ವಿಕರ ರಾಜಕೀಯ, ಸಾಮಾಜಿಕ, ಆರ್ಥಿಕ, ಧಾರ್ಮಿಕ ಹಾಗೂ ಸಾಂಸ್ಕೃತಿಕ ಇತಿಹಾಸದ ಸ್ಥೂಲ ಪರಿಚಯವನ್ನಾದರೂ ಮಾಡಿಕೊಳ್ಳಲು ಸಾಧ್ಯವಾಗಿದೆ; ಹಾಗೆಯೇ ಲಿಪಿ ಮತ್ತು ಭಾಷೆ ಬೆಳೆದು ಬಂದ ರೀತಿಯನ್ನು ಗುರುತಿಸಲೂ ಅನುಕೂಲತೆಯನ್ನು ಕಲ್ಪಿಸಿಕೊಟ್ಟಿವೆ.

ಇಂದಿನ ಚಾಮರಾಜನಗರ ತಾಲೂಕು ಪ್ರದೇಶವು ಪ್ರಾಕೃತಿಕವಾಗಿ ಎಷ್ಟು ಸಮೃದ್ಧವೋ ಸಾಂಸ್ಕೃತಿಕವಾಗಿ ಅಷ್ಟೇ ಸಂಪದ್ಭರಿತವು ಕೂಡ. ಈ ತಾಲೂಕಿನಲ್ಲಿ ಇರುವ ೧೯೦ ಗ್ರಾಮಗಳ ಪೈಕಿ ೧೦೪ ಗ್ರಾಮಗಳಲ್ಲಿ ಶಾಸನಗಳು ದೊರೆತಿವೆ. ಇವುಗಳಲ್ಲಿ ೧೦ ಶಾಸನಗಳು ಸಂಸ್ಕೃತ ಮತ್ತು ಕನ್ನಡ ಭಾಷೆಯಲ್ಲಿಯೂ, ೫೪ ಶಾಸನಗಳು ತಮಿಳು ಭಾಷೆಯಲ್ಲಿಯೂ ರಚಿತವಾಗಿವೆ. ಒಂದು ಶಾಸನ ತಮಿಳು ಮತ್ತು ಕನ್ನಡ ಮಿಶ್ರ ಭಾಷೆಯಲ್ಲಿದೆ. ಹೆಚ್ಚಿನವು ಕನ್ನಡ ಲಿಪಿಯಲ್ಲಿದ್ದರೆ, ಕೆಲವು ನಾಗರಿಲಿಪಿಯಲ್ಲಿ ಮತ್ತೆ ಕೆಲವು ತಮಿಳು ಹಾಗೂ ಗ್ರಂಥ ಲಿಪಿಗಳಲ್ಲಿವೆ. ಈ ಶಾಸನಗಳನ್ನು ವಂಶಾನು ಕ್ರಮದಲ್ಲಿ ಜೋಡಿಸಿಕೊಂಡರೆ ದೊರೆಯುವ ಪಟ್ಟಿ ಇದು.

| | | | |
|---|---|---|---|
| ಗಂಗ | ೧೫ | ಕಲ್ಯಾಣದ ಚಾಲುಕ್ಯ | ೧ |
| ಚೋಳ | ೮ | ಹೊಯ್ಸಳ | ೫೫ |
| ವಿಜಯನಗರ | ೬೧ | ಉಮ್ಮತ್ತೂರು | ೯ |
| ನಂದ್ಯಾಲ | ೧ | ಕಳಲೆ | ೪ |
| ಮೈಸೂರು ಒಡೆಯರು | ೨೫ | ಇತರೆ | ೨೩೧ |

ಬೇರೆ ಬೇರೆ ಆಕರ ಗ್ರಂಥಗಳಲ್ಲಿ ಚೆದುರಿ ಹೋಗಿದ್ದ ಶಾಸನಗಳನ್ನೆಲ್ಲ ಕ್ರೋಢಿಕರಿಸಿ ಹಾಗೂ ಕ್ಷೇತ್ರ ಕಾರ್ಯದಲ್ಲಿ ಲಭ್ಯವಾದ ಮಾಹಿತಿಗಳನ್ನು ಸೇರಿಸಲಾಗಿದೆ.

## ಗಂಗರಕಾಲದ ಶಾಸನಗಳು

ಕರ್ನಾಟಕವನ್ನು ಆಳಿದ ಪ್ರಾಚೀನ ರಾಜಮನೆತನಗಳಲ್ಲಿ ಗಂಗವಂಶವೂ ಒಂದು. ಕುಲಗಾಣದಲ್ಲಿ ದೊರೆತ ತಾಮ್ರ ಶಾಸನವೇ ಚಾಮರಾಜನಗರ ತಾಲೂಕಿನಲ್ಲಿ ಲಭ್ಯವಾದ ಪ್ರಾಚೀನ ತಾಮ್ರಶಾಸನ.[೧] ತೇದಿ

ವಿವರಗಳಲ್ಲಿ ಈ ಶಾಸನ ಸುಮಾರು ಕ್ರಿ.ಶ. ೭-ಅನೆಯ ಶತಮಾನದ್ದೆಂದು ಹೇಳಬಹುದು. ಇದರಲ್ಲಿ ಗಂಗವಂಶಾವಳಿಯನ್ನು ಕೊಟ್ಟಿದೆ. ಪಲ್ಲವೇಳಾರಸ ಕಣ್ಣಮ್ಮ ಮತ್ತು ಇತರರು ಗಂಗದೊರೆಯ ಅನುಮತಿಯನ್ನು ಪಡೆದು ಕೆಲ್ಲಿ ಪುಸೂರಿನ ಚೈತ್ಯಾಲಯಕ್ಕೆ ಭೂಮಿದಾನ ಮಾಡಿದ ಸಂಗತಿ ಈ ಶಾಸನದಲ್ಲಿ ನಿರೂಪಿತವಾಗಿದೆ. ಚಂದ್ರಸೇನಾಚಾರ್ಯ ಎಂಬ ಜೈನ ಗುರು ಶಾಸನೋಕ್ತ ದಾನವನ್ನು ಸ್ವೀಕರಿಸಿದ್ದಾನೆ.

ಶ್ರೀ ಪುರುಷ ಎಂಬ ದೊರೆಯ ಬಸವಟ್ಟಿ ಶಾಸನದಿಂದಾಗಿ ಆತನ ಆಳ್ವಿಕೆಯ ಅವಧಿ ಮೂರು ವರ್ಷಗಳಷ್ಟು ಹೆಚ್ಚಿದೆ ಎಂದು ವಿದ್ವಾಂಸರು ಹೇಳುತ್ತಾರೆ.[೨] ಈ ಕಾಲದಲ್ಲಿ ಅರಸರು ತಲವನಪುರದಲ್ಲಿದ್ದರು. ಈ ತಲವನಪುರ ಈಗಿನ ತಲಕಾಡು. ಶಾಸನವು ಉಲ್ಲೇಖಿಸುವ ಕುರುಂಬತೆರೆ ಹಲವು ತೆರನ ತೆರಿಗೆಗಳಲ್ಲೊಂದು. ಹೊಮ್ಮದ ಶಾಸನವೊಂದರಲ್ಲಿ ಈ ಗಂಗ ದೊರೆಯನ್ನು ಕೊಙ್ಗಣಿ ಮುತ್ತರಸನೆಂದು ಕರೆದಿದೆ. ಈತನ ಆಳ್ವಿಕೆಯ ಅವಧಿ ಸುಮಾರು ಕ್ರಿ.ಶ.೭೨೫ ರಿಂದ ೭೮೮ರವರೆಗೆ ಎಂದು ಭಾವಿಸಬಹುದು.[೩]

ಅಂಚವಾಡಿಯ ಶಾಸನವು ಸುಮಾರು ೮-ನೆಯ ಶತಮಾನದ ಲಿಪಿಯಲ್ಲಿರು ವುದರಿಂದ, ಅದು ಹೆಸರಿಸುವ ನೀತಿ ಮಾರ್ಗ ಪೆರ್ಮಾಡಿಯ ರಾಚಮಲ್ಲನ ಮಗನಾದ ನೀತಿ ಮಾರ್ಗ ಎರೆಗಂಗನೆಂದೂ ಊಹಿಸಲಾಗಿದೆ.[೪] ಹಾಗೆಯೇ ಲಿಪಿ ಮತ್ತು ಇತರ ಆಂತರಿಕ ಆಧಾರಗಳನ್ನು ಗಮನಿಸಿ ಹೊಂಗನೂರಿನ ಶಾಸನದಲ್ಲಿ ಉಕ್ತನಾದ ಗಂಗರಸ ಇಮ್ಮಡಿ ರಾಚಮಲ್ಲನೆಂದು ಭಾವಿಸಿದೆ.[೫]

ಬಸವಾಪುರದ ಶಾಸನದಿಂದ ಕುದಿರೂರು ಎಂಬಲ್ಲಿ ನಡೆದ ಕದನದಲ್ಲಿ ಸತ್ಯವಾಕ್ಯ ಪೆರ್ಮಾಡಿಯ ತಮ್ಮನಾದ ಬೂತರಸ ಮರಣಹೊಂದಿದ ವಿಷಯ ತಿಳಿದುಬರುತ್ತದೆ.[೬] ಈತ ಒಂದನೆಯ ಬೂತುಗನಿರಬಹುದು. ಹೊಸದಾಗಿ ಲಭ್ಯವಾದ ಕೆರೆಹಳ್ಳಿ ತಾಮ್ರಶಾಸನವು ಇಮ್ಮಡಿ ನೀತಿ ಮಾರ್ಗ ಎರೆ ಗಂಗನಿಗೆ ಸಂಬಂಧಿಸಿದುದು. ಇದರ ಕಾಲ ಕ್ರಿ.ಶ.೯೦೬ ಇದರಲ್ಲಿ ನೀಡಿರುವ ವಿವರಗಳು ನಂಜನಗೂಡು ತಾಲೂಕಿನ ಗಟ್ಟವಾಡಿ ತಾಮ್ರ ಶಾಸನವು ಕೊಡುವ ವಿವರಗಳನ್ನು ಬಹುಮಟ್ಟಿಗೆ ಹೋಲುವುದು ಗಮನಾರ್ಹ ಅಂಶ. ಅರಸನು ಶಿವಾರ್ಯ ಎಂಬಾತನಿಗೆ ಭೂದಾನ ನೀಡಿದ. ಆದರೆ ವಿವರಗಳು ನಷ್ಟವಾಗಿವೆ. ಈ ಶಿವಾರ್ಯನು ಅರಸನ ಪಟ್ಟಾಭಿಷೇಕ ಸಮಯದಲ್ಲಿ ಆಚಾರ್ಯತ್ವವನ್ನು ವಹಿಸಿದಂತೆ ತೋರುತ್ತದೆ. ಈಗ ಗಟ್ಟವಾಡಿ ಶಾಸನೋಕ್ತ ಶಿವಾರ್ಯನೆಂಬುದು ಸುಸ್ಪಷ್ಟ. ಈತ ಎಲ್ಲಣ ಕುಲದವನು ಹಾಗೂ ಅಹಿಚ್ಛತ್ರದಿಂದ ವಲಸೆ ಬಂದು ತಾಣಗುಂದೂರಿನಲ್ಲಿ ನೆಲಸಿದ ಕುಟುಂಬಗಳಲ್ಲೊಂದಕ್ಕೆ ಸೇರಿದವನೆಂದು ಈ ಶಾಸನದಿಂದ ಗೊತ್ತಾಗುತ್ತದೆ.[೭]

ಹೆಗ್ಗೊಠರಾದ ಶಾಸನವು ಉಲ್ಲೇಖಿಸುವ ಅರಸರು ಒಂದನೆಯ ನೀತಿ ಮಾರ್ಗನಿರಬೇಕೆಂದು ಡಾ.ಎಂ.ಎಚ್.ಕೃಷ್ಣ ಅವರು ಅಭಿಪ್ರಾಯ ಪಟ್ಟಿದ್ದಾರೆ. ಆದರೆ ಈತ ಕ್ರಿ.ಶ.೮೮೬-೮೮೭ರಿಂದಲೇ ಇಮ್ಮಡಿ

ರಾಚಮಲ್ಲನೊಡಗೂಡಿ ರಾಜ್ಯವಾಳುತ್ತಿದ್ದ ಇಮ್ಮಡಿ ನೀತಿ ಮಾರ್ಗ ಇರಬಹುದೆಂದು ಈಗ ಭಾವಿಸಲಾಗಿದೆ. ಶಾಸನದಲ್ಲಿ ನೀಡಿರುವ ತೇದಿ ವಿವರಗಳು ಸರಿಯಾಗಿಲ್ಲ.[೮]

ಮಂಗಲ ಶಾಸನವು ಇಮ್ಮಡಿ ಮಾರಸಿಂಹನದು. ಈತ ರಾಜಾದಿತ್ಯನ ಮೇಲೆ ಹೋರಾಟ ನಡೆಸಿದ ವಿಷಯವನ್ನು ತಿಳಿಸುವ್ ಎಲ್ಲೂರು(ಎಲಕ್ಕೂರು) ಶಾಸನವು ಭಿನ್ನವಾಗಿದೆ. ಇದರ ಕಾಲ ಕ್ರಿ.ಶ.೯೭೧-೭೨ ಇದರಲ್ಲಿ ಹೇಳಿರುವ ಗಂಗಚಕ್ರಾಯುಧ ಎಂಬ ಬಿರುದು ಹಾಗೂ ಕಳ್ವಪ್ಪುವಿನ (ಈಗಿನ ಶ್ರವಣಬೆಳಗೊಳ) ಉಲ್ಲೇಖ ಗಮನಾರ್ಹ.[೧೦]

ಕ್ರಿ.ಶ. ೯೯೯-೧೦೦೦ದ ಎಲ್ಲೂರು ಶಾಸನವು ನೀತಿ ಮಾರ್ಗ ಗೋವಿಂದರನಿಗೆ ಸೇರಿದುದು. ಈತ ನೀತಿಮಾರ್ಗ ರಾಚಮಲ್ಲನೆಂದು ವಿದ್ವಾಂಸರು ಗುರುತಿಸಿದ್ದಾರೆ. ಈತನ ಪತ್ನಿ ಪೃಥವಬ್ಬರಿಸಿ, ತ್ರಿಭುವನ ವೀರ ನೊಳಂಬರಸನ ಪುತ್ರಿ.[೧೧]

ಗಂಗ ದೊರೆಗಳಲ್ಲಿ ಅವಿನೀತ ಕದಂಬರಸ ಕೃಷ್ಣವರ್ಮನ ಭಾಗಿನೇಯನಾಗಿದ್ದ; ದುರ್ವಿನೀತನ ಸಮಸ್ತ ಪಾಟಾಣ ಪುನ್ನಾಟದ ದೇಶಗಳ ಒಡೆಯ ಶ್ರೀ ವಲ್ಲಭ ಅಥವಾ ಭೂವಿಕ್ರಮನು ಪಾಣಾಟಪುನ್ನಾಟದ್ಯನೇಕ ಜನಪದಾಧಿಪತಿಯಾಗಿದ್ದ ಶಿವಮಾರನು ಅವನಿಮಹೇಂದ್ರನೆಂದು ಖ್ಯಾತನಾಗಿದ್ದ.[೧೨]

**ಚಾಲುಕ್ಯರ ಕಾಲದ ಶಾಸನಗಳು**

ಕಲ್ಯಾಣದ ಚಾಲುಕ್ಯ ದೊರೆಗಳಿಗೆ ಸಂಬಂಧಿಸಿದಂತೆ ಈ ತಾಲೂಕಿನಲ್ಲಿ ದೊರೆತಿರುವ ಶಾಸನ ಒಂದೇ. ಇಮ್ಮಡಿ ತೈಲನ ಕಾಲದ್ದೆಂದು ಹೇಳಬಹುದು. ಕ್ರಿ.ಶ.೯೯೩ರ ಸೋಮಸಮುದ್ರ ಅಮ್ಮಡಿಗಾವುಂಡ ಎಂಬ ವ್ಯಕ್ತಿ ಕೆರೆಯೊಂದನ್ನು ಕಟ್ಟಿಸಿದ ವಿಷಯವನ್ನು ನಿರೂಪಿಸುತ್ತದೆ. ಶಾಸನ ಉಲ್ಲೇಖಿಸುವ ಕಿರುವಸೂರು ಈಗಿನ ಸೋಮಸಮುದ್ರ. ಈಗ ಈ ಕೆರೆಯನ್ನು ಕಾಳಿ ಎಂದು ಕರೆಯುತ್ತಾರೆ. ಕೆರೆಯನ್ನು ಕಟ್ಟಿಸಲು ಅಮ್ಮಡಿ ಗಾವುಂಡನು ನೊಳಂಬೆಯ ಗಾವುಂಡನಿಗೆ ಸೇರಿದ ಭೂಮಿಯ ಒಂದು ಭಾಗವನ್ನು ಕೊಂಡನೆಂದು ಈ ಶಾಸನವು ತಿಳಿಸುತ್ತದೆ.[೧೩]

**ಚೋಳರ ಕಾಲದ ಶಾಸನಗಳು**

ಗಂಗರು ಪಾಲಿಸುತ್ತಿದ್ದ ಪ್ರದೇಶದಲ್ಲಿ ಕೆಲವು ಭಾಗ ಕಾಲಕ್ರಮೇಣ ಚೋಳರ ಅಧೀನವಾದುದು ತಿಳಿದ ಸಂಗತಿ. ಆದ್ದರಿಂದ ಈ ತಾಲೂಕಿನಲ್ಲಿ ಸ್ವಾಭಾವಿಕವಾಗಿ ಚೋಳರ ಕೆಲವು ಶಾಸನಗಳು ದೊರೆತಿವೆ. ಕ್ರಿ.ಶ.೯೯೧ರ ಕೆಂಪನಪುರ ಶಾಸನವು ರಾಜರಾಜನನ್ನು 'ಚೋಳ ನಾರಾಯಣ' ಎಂದು ಕರೆದಿದೆ. ಈಶ್ವರಾನ್ವಯದ ಸೋಮರಾಶಿ ಭಟ್ಟಾರಕರಿಗೆ ಕೆಲ್ಲುರಪೊಳೆಯ ಎಂಬಾತನು ಕಿರುಹೇರೂರು ಗ್ರಾಮದಲ್ಲಿ ಭೂಮಿಕಾಣಿಕೆಯನ್ನು

ವಿದ್ಯಾದಾನವಾಗಿ ನೀಡಿದ ವಿಷಯ ಶಾಸನದ ವಸ್ತು.[೧೪] ಈ ಶಾಸನವು ಕನ್ನಡದಲ್ಲಿರುವ ಗಮನಿಸಬೇಕಾದ ಸಂಗತಿ. ಇದೇ ಅರಸನ ಹೊಂಗನೂರು ಶಾಸನವು ಕನ್ನಡ ಲಿಪಿ ಹಾಗೂ ತಮಿಳು ಭಾಷೆಯಲ್ಲಿ ರಚಿತವಾಗಿರುವುದೂ ಕುತೂಹಲಕರ. ಕಾಲದ ದೃಷ್ಟಿಯಿಂದ ಇದು ಕೆಂಪನಪುರ ಶಾಸನಕ್ಕಿಂತ ಈಚಿನದು. ತಮಿಳು ಭಾಷೆ ಮತ್ತ ಕನ್ನಡ ಲಿಪಿಯ ಮೂಲಕ ಚೋಳರು ಈ ಪ್ರದೇಶದಲ್ಲಿ ಬೇರೂರಿಸಲು ಮಾಡಿದ ಪ್ರಯತ್ನದ ಪ್ರಪ್ರಥಮ ಹಂತವನ್ನು ಇಲ್ಲಿ ಗುರುತಿಸಬಹುದು.[೧೫] ಒಂದನೆಯ ರಾಜೇಂದ್ರ ಚೋಳನ ಆಳ್ವಿಕೆಗೆ ಸೇರಿದ ಕಿರುಗೊಂಡರ ಶಾಸನವು ಬೇರನೊಬ್ಬ ತುರುಗಾಳಗವೊಂದರಲ್ಲಿ ಕಾದಿ ಮಾಡಿದ ಸಂಗತಿಯನ್ನು ದಾಖಲಿಸುವಂತೆ ತೋರುತ್ತದೆ. ಆದರೆ ವಿವರಗಳು ನಷ್ಟವಾಗಿವೆ.[೧೬] ಕ್ರಿ.ಶ. ೧೦೪೯-೫೦ಕ್ಕೆ ಸೇರಿದ ಮಂಗಲ ಶಾಸನವು ಒಂದನೆಯ ರಾಜಾಧಿರಾಜನ ಪ್ರಶಸ್ತಿಯನ್ನು ಒಳಗೊಂಡಿದೆ.[೧೭] ಇದೇ ಗ್ರಾಮದ ಇನ್ನೊಂದು ಶಾಸನದಲ್ಲಿ ಈ ಪ್ರಶಸ್ತಿ ಇದ್ದರೂ ವಿವರಗಳು ಸವೆದು ಹೋಗಿವೆ.[೧೮]

ಕೆಂಪನಪುರ ಶಾಸನವು ಅಯ್ಯಾ ಪೊಳಿಲ್ ನ ವಣಿಕ ಸಂಘವು ರಾಜಾಧಿರಾಜ ಚತುರ್ವೇದಿ ಮಂಗಲವೆಂಬ ಹೆಸರಿದ್ದ ವೇಲೂರನ್ನು ಎರವೀರಪಟ್ಟಣವನ್ನಾಗಿ ಪರಿವರ್ತಿಸಿದ ಸ್ವಾರಸ್ಯಕರ ಸಂಗತಿಯೊಂದನ್ನು ನಿರೂಪಿಸುತ್ತದೆ. ಊರಿನಂದೂರಿಗೆ ವ್ಯಾಪಾರನಿಮಿತ್ತ ಪ್ರಯಾಣ ಮಾಡುವ ವಣಿಕ ಸಮುದಾಯಕ್ಕೆ ಇಲ್ಲಿ ಒದಗಿಸಬೇಕಾದ ಸಾಮಾನುಸರಂಜಾಮುಗಳ ವಿವರಗಳು ಈ ಶಾಸನದಲ್ಲಿವೆ. ಅಂಥ ವ್ಯಾಪಾರಿಗಳಲ್ಲಿ ದರ್ಜೆಗಳನ್ನು ಗುರುತಿಸಿ ಅದಕ್ಕನುಗುಣವಾಗಿ ಅವರಿಗೆ ಬಟ್ಟೆ ಹಂಚಬೇಕಾದುದನ್ನು ಶಾಸನದಲ್ಲಿ ತಿಳಿಸಿದೆ. ವಣಿಕರ ಅಂಗರಕ್ಷಕರಿಗೆ ಇಲ್ಲಿ ತಂಗಿದ್ದಾಗ ಒದಗಿಸಬೇಕಾದ ಸೌಲಭ್ಯಗಳು ಹಾಗೂ ಮೃತ ವೀರರ ಸ್ಮರಣಾರ್ಥ ಮಾಡಬೇಕಾದ ವ್ಯವಸ್ಥೆಗಳನ್ನು ಕುರಿತು ಈ ಶಾಸನ ಪ್ರಸ್ತಾಪಿಸುತ್ತದೆ. ಊರುಗಳನ್ನು ಎರವೀರಪಟ್ಟಣಗಳಾಗಿ ಪರಿವರ್ತಿಸುವ ಪದ್ಧತಿ ತಮಿಳುನಾಡಿನಲ್ಲಿತ್ತು. ಈ ಪ್ರದೇಶದಲ್ಲಿಯು ಇದ್ದುದಕ್ಕೆ ಪ್ರಸ್ತುತ ಶಾಸನ ಒಂದು ನಿರ್ದಶನ.[೧೯]

ಕ್ರಿ.ಶ. ೧೦೫೮-೫೯ರ ಹಳೇ ಆಲೂರು ಶಾಸನದಿಂದ ಇಮ್ಮಡಿ ರಾಜೇಂದ್ರ ಚೋಳರಿಗೆ 'ರಾಜಕೇಸರಿ' ಎಂಬ ಬಿರುದಿತ್ತೆಂದು ತಿಳಿದುಬರುತ್ತದೆ.[೨೦] ಒಂದನೆಯ ಕುಲೋತ್ತುಂಗನ ಕಾಲದ ಎಣ್ಣೆಗುಂಬ ಶಾಸನವು ಆ ಗ್ರಾಮದ ತಿರುವಿನ ರಾಮೀಶ್ವರಮುಡೈಯ ಮಹಾದೇವರಿಗೆ ಗಂಗೈಕೊಂಡ ಚೋಳವಳನಾಡಾಳ್ವ ಮತ್ತು ಇತರರು ಭೂಮಿದಾನ ಮಾಡಿದ ವಿಷಯವನ್ನು ನಿರೂಪಿಸುತ್ತದೆ. ಇದರಲ್ಲಿ ಹಲವು ತೆರನ ತೆರಿಗೆಗಳ ಉಲ್ಲೇಖವಿದೆ.[೨೧]

### ಹೊಯ್ಸಳರ ಕಾಲದ ಶಾಸನಗಳು

ಕ್ರಿ.ಶ. ೧೧೧೭ರ ವೇಳೆಗೆ ಹೊಯ್ಸಳ ವಿಷ್ಣುವರ್ಧನನು ಗಂಗವಾಡಿಯಿಂದ ಚೋಳರನ್ನು ಹೊರದೂಡಿ ತನ್ನ ಆಳ್ವಿಕೆಯನ್ನು ಈ ಭಾಗದವರೆಗೆ ವಿಸ್ತರಿಸಿದುದು ಆತನ ಮಹಾಸಾಧನೆಗಳಲ್ಲೊಂದು. ಆತನ

ದಿಗ್ವಿಜಯಗಳಿಗೆ ಕಾರಣರಾದವರು ಹಲವು ನಿಷ್ಠ ದಂಡನಾಯಕರು ಮಹಾಮಾತ್ರ ಕುಲದ ಪುಣಿಸಮಯ್ಯ ಅವರಲ್ಲೊಬ್ಬ; ಈತ ವಿಷ್ಣುವರ್ಧನನ ಸೇನಾಧಿಪತಿ ಹಾಗೂ ಸಂಧಿ ವಿಗ್ರಹಿಯಾಗಿದ್ದ. ಈತನ ವಂಶಾವಳಿಯನ್ನು ಚಾಮರಾಜನಗರ ಶಾಸನದಲ್ಲಿ ಕೊಟ್ಟಿದೆ. ಈತನ ಶೌರ್ಯದಿಂದಾಗಿ ತೊದವರು (ತೊಂಡರು) ಹೆದರಿದರು; ಕೊಂಗರು ತಲೆಮರೆಸಿಕೊಂಡರು; ಪೊಲುವರು ಹತರಾದರು; ಮಲೆಯಾಳರು ಮಡಿದರು ಹಾಗೂ ನೀಲಾದ್ರಿ ವಶವಾಯಿತು. ಈತ ಕೇರಳಾಧಿಪತಿಯಾದ. ತನ್ನ ಸ್ವಾಮಿಭಕ್ತಿಯ ದ್ಯೋತಕವಾಗಿ ಈತ ತನ್ನ ಮಗನಿಗೆ ಅರಸನ ಹೆಸರನ್ನಿಟ್ಟಂತೆ ತೋರುತ್ತದೆ. ಪುಣಿಸನ ತಾತನಾದ ಪುಣಿಸಮಯ್ಯ 'ಶಾಸನವಾಚಕ ಚಕ್ರವತಿ' ಎಂದು ಖ್ಯಾತನಾಗಿದ್ದ. ಚಾಮರಾಜನಗರದಲ್ಲಿರುವ ಪಾರ್ಶ್ವನಾಥ ಬಸದಿಯನ್ನು ಇಮ್ಮಡಿ ಪುಣಿಸಮಯ್ಯನು ಕಟ್ಟಿಸಿದನು. ಈತನು ಗುರು ದ್ರಾವಿಡಾನ್ವವದ ಅಜಿತಮುನಿಪ.[೨೨]

ಕ್ರಿ.ಶ.೧೧೬೨ರ ತೆಳನೂರು ಶಾಸನದಲ್ಲಿ ಹೊಯ್ಸಳ ದೊರೆ ಒಂದನೆಯ ನರಸಿಂಹನನ್ನು ಜಗದೇಕಮಲ್ಲ ನರಸಿಂಹ ಹೊಯ್ಸಳನ ದೇವನೆಂದು ಕರೆದಿದೆ.[೨೩] ಇದಕ್ಕೆ ಎರಡು ವರ್ಷಗಳ ಹಿಂದೆ ಕ್ರಿ.ಶ.೧೧೬೦ರಲ್ಲಿ ಹಟ್ಟಲೂರಿನ ಕೇಶವದೇವರಿಗೆ ಮಯದಲ್ಲಿದೇವ ಮತ್ತು ಇತರರು ತಿಬ್ಬಹಳ್ಳಿ ಗ್ರಾಮವನ್ನು ದಾನವಿತ್ತ ಸಂಗತಿ ಹರಳಕೋಟೆ ಶಾಸನದಲ್ಲಿ ನಿರೂಪಿತವಾಗಿದೆ. ದೇಗುಲವನ್ನು 'ವಿಷ್ಣು ಗೃಹ'ವೆಂದು ಶಾಸನದಲ್ಲಿ ಕರೆದಿದೆ. ಇದನ್ನು ಕಟ್ಟಿಸಿದವರು ಮಲ್ಲಿದೇವ ಮಾರಾಯ ಮತ್ತು ಇತರರು.[೨೪]

ಕ್ರಿ.ಶ. ೧೧೭೩ರ ಕುಲಗಾಣ ಶಾಸನದಲ್ಲಿ ಅಲ್ಲಿ ಬಸದಿಗೆ ಇಡೈನಾಡಿನ ಅರವತ್ತು ಪ್ರಭುಗಾಮುಂಡರು ದತ್ತಿಬಿಟ್ಟ ವಿಷಯವಿದೆ. ಶ್ರೀಪಾದಿರಾಜದೇವ ಅಥವಾ ಶ್ರೀ ವಾದಿರಾಜದೇವ ಈ ದತ್ತಿಯನ್ನು ಸ್ವೀಕರಿಸಿದ ವ್ಯಕ್ತಿ. ಆಳುತ್ತಿದ್ದ ಹೊಯ್ಸಳ ದೊರೆ ಇಮ್ಮಡಿ ಬಲ್ಲಾಳ.[೨೫]

ಹೊಯ್ಸಳ ಸೋಮೇಶ್ವರನ ಆಳ್ವಿಕೆಗೆ ಸೇರಿದ ಎಡೂರು ಶಾಸನದ ಕಾಲ ಕ್ರಿ.ಶ. ೧೨೪೭. ಪ್ರಸ್ತುತ ಶಾಸನವು ಮಹಾಪ್ರಧಾನ ಪೆರುಮಾಳ ದಣ್ಣಾಯಕನನ್ನು ಉಲ್ಲೇಖಿಸುತ್ತದೆ. ಈತ ಸೋಮೇಶ್ವರನ ತರುವಾಯ ಮುಮ್ಮಡಿ ಬಲ್ಲಾಳನ ಕಾಲದಲ್ಲಿಯೂ ಅಧಿಕಾರಿಯಾಗಿದ್ದನೆಂದು ತಿಳಿದುಬರುತ್ತದೆ. ಆದ್ದರಿಂದ ಈತ ಚಿಕ್ಕವಯಸ್ಸಿನಲ್ಲಿಯೇ ಅಧಿಕಾರಿಯಾಗಿದ್ದನೆಂದು ಊಹಿಸಬಹುದು.[೨೬]

ಮುಮ್ಮಡಿ ನರಸಿಂಹ ಕಾಲದ, ಕ್ರಿ.ಶ. ೨೭೩ ಕಟ್ಟವಾಡಿ ಶಾಸನದಿಂದ ಹದಿನಾರು ಪ್ರಾಂತ್ಯವು ಕುಮಾರನಾಡು, ಹಿರಿಯನಾಡು ಹಾಗೂ ತೊರೆನಾಡು ಎಂಬ ಮೂರು ಉಪನಾಡುಗಳಿಂದ ಕೂಡಿತ್ತನೆಂದು ತಿಳಿದುಬರುತ್ತದೆ.[೨೭] ಕ್ರಿ.ಶ. ೧೨೯೪ರ ಮುಮ್ಮಡಿ ವೀರ ಬಲ್ಲಾಳನ ಹೊಮ್ಮ ಶಾಸನವು ತೊರೆನಾಡು, ತಗಡೂರು ಹಾಗೂ ಮೂಗೂರು ಕುಮಾರನಾಡಿನ ಭಾಗಗಳೆಂದು ತಿಳಿಸುತ್ತದೆ.[೨೮] ಅಂಚವಾಡಿಯ ಶಾಸನವು ಹಿರಿಯನಾಡಲ್ಲದೆ ಕೈಯರನಾಡು ಮತ್ತು ಪಕಳೀನಾಡು ಎಂದು ಎರಡು ನಾಡುಗಳನ್ನು ಹೆಸರಿಸುತ್ತದೆ.[೨೯]

ಇದರ ಕಾಲ ಕ್ರಿ.ಶ. ೧೨೭೩-೭೪; ಆಳುತ್ತಿದ್ದ ದೊರೆ ಮುಮ್ಮಡಿ ನರಸಿಂಹ. ಆಲದೂರು ಶಾಸನದಲ್ಲಿ ಕೊಟ್ಟಿರುವ ತೇದಿ ವಿವರಗಳು ಸರಿಯಾಗಿಲ್ಲ.[೩೦]

ಹಳೇ ಆಲೂರು ಶಾಸನದ ಕಾಲ ಕ್ರಿ.ಶ. ೧೨೭೮; ಆರಸ ಹೊಯ್ಸಳ ಮುಮ್ಮಡಿ ನರಸಿಂಹ. ಈ ಕಾಲದಲ್ಲಿ ಆಲೂರು ತೆಂಕಣ ಐಯಾವಳೆ ಎಂದು ಖ್ಯಾತವಾಗಿತ್ತು. ಈ ಊರಿನ ವೇಳರು, ಕೋವರು, ಕುಣಿಂದರು, ನಲ್ಗೊಡೆಯರು ಮುಂತಾದ ವಿವಿಧ ಜನಸಮುದಾಯದವರು ಸೇರಿ ಚಂದ್ರನಾಥ ಬಸದಿಯ ಜೀರ್ಣೋದ್ಧಾರ ಮಾಡಿ, ಆ ಬಸದಿಯಲ್ಲಿ ಪೂಜಾದಿ ಸೇವೆ ನಡೆಯಲೆಂದು ಭೂಮಿಕಾಣಿ ಹಾಗೂ ಮನೆಯನ್ನು ನೀಡಿದರು. ಆದರೆ ಈಗ ಬಸದಿ ಇಲ್ಲ. ಪ್ರಸ್ತುತ ಶಾಸನವು ಸುವರ್ಣಾವತಿ ನದೀ ತೀರದ ಮಂಟಪದ ಕಲ್ಲಿನ ಮೇಲಿದೆ.[೩೧] ಮುಮ್ಮಡಿ ಬಲ್ಲಾಳನ ಕಾಲದ ಚಾಮರಾಜನಗರ ತಮಿಳು ಶಾಸನವು ಸ್ಥಳದ ದೇವಾಲಯದ ಶ್ರೀ ವೈಷ್ಣವರು ಭಾರದ್ವಾಜಗೋತ್ರದ ವಾಲ್ಯೆಯಮ್ಮುಗಿಯಾರಂಡುತ್ತಗ್ಗೆ ಅಳಗಿಯಾನ್ ಎಂಬಾತನಿಗೆ ಗ್ರಾಮವೊಂದನ್ನು ದಾನವಿತ್ತ ವಿಷಯವನ್ನು ತಿಳಿಸುತ್ತದೆ. ಆದರೆ ದೇವಾಲಯದ ಹೆಸರಿಲ್ಲ. ಶಾಸನವು ಲಕ್ಷ್ಮೀಕಾಂತ ದೇಗುಲದ ತಳಪಾಯದ ಕಲ್ಲಿನ ಮೇಲೆ ಇರುವುದರಿಂದ ಶಾಸನೋಕ್ತ ವೈಷ್ಣವರು ಈ ದೇವಾಲಯದ ಧರ್ಮದರ್ಶಿಗಳಾಗಿದ್ದಿರಬೇಕು. ದಾನ ಪಡೆದಾತ ಮಹಾಮಂಟಪವೊಂದನ್ನು ಕಟ್ಟಿಸಿದ್ದ.[೩೨]

ಕೊತ್ತಲವಾಡಿ ಶಾಸನದಿಂದ ಮಾಧವ ದಣ್ಣಾಯಕನು ತೆರಕಣಾಂಬಿಯ ವರದರಾಜ ಅಲ್ಲಾಳನಾಥ ದೇವರ ಪ್ರತಿಷ್ಠಾಪಿಸಿ ದೇವರಿಗೆ ದತ್ತಿ ನೀಡಿದ ವಿಷಯ ತಿಳಿದುಬರುತ್ತದೆ. ಈ ಸಂದರ್ಭದಲ್ಲಿ ಆತನ ಮಗ ಕೇತಯ ದಣ್ಣಾಯಕನೂ ಜೊತೆಯಲ್ಲಿದ್ದ. ದಾನಿಯು ತೆರಕಣಾಂಬಿ ನೆಲವೀಡಿನಿಂದ ಪದಿನಾಲ್ಕು ನಾಡನ್ನು ಪಾಲಿಸುತ್ತಿದ್ದ. ಪ್ರಸ್ತುತ ಶಾಸನವು ಕೊತ್ತಲವಾಡಿ ಗ್ರಾಮಕ್ಕೆ ಸೇರಿದುದಾಗಿರಬೇಕು. ಈ ಶಾಸನದ ಕಾಲ ಕ್ರಿ.ಶ. ೧೩೦೩. ಇದೇ ಮಾಧವದಣ್ಣಾಯಕನು ಕ್ರಿ.ಶ. ೧೩೧೬ರಲ್ಲಿ ವಿದ್ಯಾನಿಧೀ ಪ್ರಸನ್ನಕೇಶವಪುರ ಎಂಬ ಅಗ್ರಹಾರವನ್ನು ಸ್ಥಾಪಿಸಿದ. ಶಾಸನಪಾಠ ಪೂರ್ಣವಾಗಿ ದೊರೆಯುವುದಿಲ್ಲ. ಹೊಯ್ಸಳ ದೊರೆ ಮುಮ್ಮಡಿ ನರಸಿಂಹ ಮತ್ತು ಅವನ ಮಗ ಮುಮ್ಮಡಿ ಬಲ್ಲಾಳ ಇಬ್ಬರ ಕಾಲದಲ್ಲಿಯೂ ಈ ದಣ್ಣಾಯಕ ಅಧಿಕಾರದಲ್ಲಿದ್ದನೆನ್ನುವುದು ಮೇಲಿನ ಎರಡು ಶಾಸನಗಳಿಂದ ವಿಧಿತವಾಗುತ್ತದೆ.[೩೩] ಈತನ ಜನ್ಮ ಸ್ಥಳ ಈಗಿನ ಹರದನಳ್ಳಿ. ಈ ಗ್ರಾಮದಲ್ಲಿನ ಅಣಿಲೇಶ್ವರ ದೇವಾಲಯವನ್ನು ಮಣಿಯದ (ಎಂದರೆ ಈಗಿನ ಹರದನಹಳ್ಳಿ) ಪುರುಸಗೌಡನ ಮಗನಾದ ಮಾರಗೌಡನು. ಕ್ರಿ.ಶ೧೩೧೬ರಲ್ಲಿ ಕಟ್ಟಿಸಿದಲೆಂದು ಅಲ್ಲಿನ ಶಾಸನವೊಂದು ತಿಳಿಸುತ್ತದೆ. ಈತ ಮಾಧವದಣಾಯಕನ ಕೈಕೆಳಗೆ ಅಧಿಕಾರಿಯಾಗಿದ್ದ; ತನ್ನ ಮರಣಕಾದಲ್ಲಿಯೂ ಈತ ದಾನವಿತ್ತುದು (ಸಾಯುವ ಹೊತ್ತಿನಲ್ಲಿ ಕೊಟ್ಟ ಶಿಲಾಶಾಸನ) ಇವನ ದಾನಶೀಲ ಗುಣವನ್ನು ಮನದಟ್ಟು ಮಾಡಿಕೊಡುತ್ತದೆ.[೩೪] ಕ್ರಿ.ಶ. ೧೩೪೦ರಲ್ಲಿ, ನಾಲ್ಕನೆಯ ಬಲ್ಲಾಳನು ಆಳುತ್ತಿದ್ದಾಗ, ಹರದನ ಹಳ್ಳಿಯ ಅಣಿಲೇಶ್ವರ ದೇವಾಲಯಕ್ಕೆ ಕಂಬಗಳನ್ನು ಬೇರೆ ಬೇರೆ ಗೌಡರುಗಳು ಮಾಡಿಸಿಕೊಟ್ಟ ಸಂಗತಿ

ಹರದನಹಳ್ಳಿಯ ನಾಲ್ಕು ಶಾಸನಗಳಲ್ಲಿ ನಿರೂಪಿತ ವಾಗಿವೆ. ಅಣಿಲೇಶ್ವರ ದೇವಾಲಯಕ್ಕೆ ಈಗ ದಿವ್ಯ ಲಿಂಗೇಶ್ವರ ದೇವಾಲಯವೆಂಬ ಹೆಸರು ಬಂದಿದೆ.[೩೫]

ಬಲ್ಲಾಳ ದೇವರಸನ್ನು 'ಕಾರುಣ್ಯದಿಂ ಕರುಣಿಸಿದ' ಹೊಸಬಾಳಿನಾಡನ್ನು ಪಾಲಿಸುತ್ತಿದ್ದ ಮಾಧವ ದಣ್ಣಾಯಕನು ತೆರಕಣಾಂಬೆಯ ಗೋಪಿನಾಥದೇವರಿಗೆ ಕೆಲಗೆರೆ ಮತ್ತು ಬೆಲಕುಪ್ಪೆ ಗ್ರಾಮಗಳನ್ನು ದಾನವಿತ್ತನೆಂದು ಕಿಲಗೆರೆ ಶಾಸನವು ತಿಳಿಸುತ್ತದೆ. ಈತನ ಬಿರುದುಗಳಲ್ಲಿ 'ಕೊಂಗಮಾರಿ', 'ಹೊಯಿಸಳ ರಾಜ್ಯ ಲಕ್ಷ್ಮೀ ರಕ್ಷಾ ಪ್ರಾಕಾರ', 'ಏಕಾದಶೀವ್ರತನಿರತ' ಮುಂತಾದವು ಗಮನಾರ್ಹ.[೩೬]

### ವಿಜಯನಗರ ಕಾಲದ ಶಾಸನಗಳು

ದಕ್ಷಿಣ ಭಾರತದ ಇತಿಹಾಸದಲ್ಲಿ ವಿಜಯನಗರದ ಉದಯವು ಒಂದು ಐತಿಹಾಸಿಕ ಅಗತ್ಯವಾಯಿತು. ವಿದ್ಯಾರಣ್ಯ ಪ್ರೇರಣೆ ಮತ್ತು ಹರಿಹರ ಹಾಗೂ ಬುಕ್ಕರ ಶೌರ್ಯ ಸಾಹಸಗಳಿಂದ ಹುಟ್ಟಿದ ಈ ಸಾಮ್ರಾಜ್ಯವು ಭಾರತೀಯ ಪರಂಪರೆ ಮತ್ತು ಸಂಸ್ಕೃತಿಗಳ ಬೇರುಗಳಿಗೆ ನೀರುಣಿಸಿ ಪುನರುತ್ಥಾನಕ್ಕೆ ಕಾರಣವಾಯಿತು. ವಿಜಯನಗರದ ಅರಸರ ಕೆಲವು ಶಾಸನಗಳು ಚಾಮರಾಜನಗರ ತಾಲೂಕಿನಲ್ಲಿ ಕಾಣಸಿಗುತ್ತವೆ. ಸಂಖ್ಯಾ ದೃಷ್ಟಿಯಿಂದಲೂ ವಿಜಯನಗರದ ಶಾಸನಗಳಿಗೆ ಅಗ್ರಸ್ಥಾನ ಸಲ್ಲುತ್ತದೆ.

ಒಂದನೆಯ ಬುಕ್ಕನ ಆಳ್ವಿಕೆಯನ್ನು ಉಲ್ಲೇಖಿಸುವ ಮಲದೇವನ ಹಳ್ಳಿ ಶಾಸನವು ದುರ್ದೈವದಿಂದ ತುಂಡಾಗಿದ್ದು, ವಿವರಗಳೆಲ್ಲ ನಷ್ಟವಾಗಿವೆ. ಅದರಲ್ಲಿ ಕೊಟ್ಟಿರುವ ತೇದಿ ವಿವರಗಳೂ ಸರಿಯಾಗಿಲ್ಲ.[೩೭] ಹರಳುಕೋಟೆ ಶಾಸನವು ಚಿಕ್ಕಕಂಪಣ್ಣ ವೊಡೆಯನನ್ನು ಉಲ್ಲೇಖಿಸುತ್ತದೆ. ಇದರ ಕಾಲ ೧೪ನೆಯ ಶತಮಾನವೆಂದು ಭಾವಿಸಬಹುದು.[೩೮] ಕ್ರಿ.ಶ. ೧೩೬೩ ಮತ್ತು ೧೩೬೮ರ ಹರದನ ಹಳ್ಳಿಯ ಎರಡು ಶಾಸನಗಳು ಬುಕ್ಕನ ಕಾಲದವಾಗಿದ್ದು ಮಹಾಪ್ರಧಾನ ಬಸವಯ್ಯ ದಣ್ಣಾಯಕನನ್ನು ಉಲ್ಲೇಖಿಸುತ್ತದೆ. ಈ ಅಧಿಕಾರಿಯ ಬಲದಕಯ್ಯ ಭಂಡಾರ ಎನಿಸಿದ ಗಣಪತಿ ಎಂಬಾತ ವಿಷ್ಣುವರ್ಧನ ಪ್ರತಾಪ ಹೊಯ್ಸಳ ಭುಜಬಳದೇಶದೊಳಗೆ ಕಾವೇರಿಯ ದಕ್ಷಿಣ ಭಾಗದ ಪ್ರದೇಶವನ್ನು ಪಾಲಿಸುತ್ತಿದ್ದ.[೩೯]

ಕ್ರಿ.ಶ. ೧೩೮೦ರ, ಇಮ್ಮಡಿ ಹರಿಹರನ ಆಳ್ವಿಕೆಯ ಕಾಲದ, ಹೊಮ್ಮ ಶಾಸನವು ಅರಸನು ಸಂಗಮ ಮತ್ತು ಕಾಮಾಯಿಯ ಮೊಮ್ಮಗನೆಂದು ತಿಳಿಸುತ್ತದೆ. ಈ ಕಾಲದಲ್ಲಿ ಬಲ್ಲಪ್ಪ, ಹದಿನಾಡನ್ನು ಆಳುತ್ತಿದ್ದ.[೪೦] ಕ್ರಿ.ಶ. ೧೩೯೭ರ ಹರದನಹಳ್ಳಿ ಶಾಸನವು ಹೊಯ್ಸಳ ದೇಶವನ್ನು ಪಾಲಿಸುತ್ತಿದ್ದ ಆಚಣ್ಣ ವೊಡೆಯನ್ನು ಉಲ್ಲೇಖಿಸುತ್ತದೆ. ಆತ ಮಗಪ್ಪದಣ್ಣಾಯಕರ ಬಲದಕಯ್ಯ ಭಂಡಾರವಾಗಿದ್ದ. ಮೂರು ದಶಕಗಳ ಅವಧಿಯಲ್ಲಿ ಈ ಪ್ರದೇಶದಲ್ಲಿನ ಆಡಳಿತಾಗಾರರು ಬೇರೆ ಬೇರೆಯಾಗಿದ್ದುದನ್ನು ಗಮನಿಸಬಹುದು.[೪೧]

ಕ್ರಿ.ಶ. ೧೪೩೨ರ ಮಲೆಯೂರಿನ ಶಾಸನಗಳು ಒಂದನೆಯ ದೇವರಾಯನ ಮಗನಾದ ಹರಿಹರರಾಯ ವೊಡೆಯನ್ನು ಕನಕಗಿರಿಯ ವಿಜಯನಾಥದೇವರಿಗೆ ಮಲೆಯೂರು ಮತ್ತು ಅದರ ಉಪಗ್ರಾಮಗಳನ್ನು

ಹಾಗೂ ಕೆಲವು ಸುಂಕದಾಯಗಳನ್ನು ದಾನವಿತ್ತ ಸಂಗತಿಯನ್ನು ನಿರೂಪಿಸುತ್ತವೆ. ಕೊಲಗಣದ(ಕುಲಗಾಣ) ವಾಸುದೇವರಿಗೆ ಹಿಂದೆ ದಾನವಿತ್ತಿದ್ದ ಮಲೆಯೂರಿನ ಭೂಮಿಕಾಣಿಗಳನ್ನು ಹೊರತುಪಡಿಸಿ ಉಳಿದ ಭಾಗವನ್ನು ದಾನ ನೀಡಿದೆ ಎನ್ನುವ ಅಂಶವನ್ನು ಎರಡನೆಯ ಶಾಸನ ಸ್ಪಷ್ಟಪಡಿಸುತ್ತದೆ.[೪೨]

ಇಮ್ಮಡಿ ದೇವರಾಯನು ಕಾಲದ ಕ್ರಿ.ಶ. ೧೪೨೫ರ ಹರದನಹಳ್ಳಿಯ ಶಾಸನವು ಹರಿಯಪ್ಪ ದಣ್ಣಾಯಕನನ್ನು ಹಾಗೂ ಕ್ರಿ.ಶ. ೪೨೯ರ ಪೂಣಜೂರು ಶಾಸನವು ದೇವದಣ್ಣಾಯಕನನ್ನು ಉಲ್ಲೇಖಿಸುತ್ತದೆ.[೪೩]

ಕ್ರಿ.ಶ.೧೫೧೩ರ ಕೃಷ್ಣ ದೇವರಾಯನ ಭಂಡಿಗೆರೆ ಶಾಸನವು ಹರದನಹಳ್ಳಿಯ ದಿವ್ಯ ಲಿಂಗ ಅಣಿಲೇಶ್ವರ ದೇವರಿಗೆ ಭೂಮಿ ದಾನ ನೀಡಿದ ವಿಷಯವನ್ನು ದಾಖಲಿಸುತ್ತದೆ.[೪೪] ಹೊಂಗನೂರಿನ ಶಾಸನದಲ್ಲಿ ಸ್ವಾರಸ್ಯಕ ಸಂಗತಿಯೊಂದು ನಿರೂಪಿತವಾಗಿದೆ. ದೊಡ್ಡಣ್ಣ ಸೆಟ್ಟಿ ಎಂಬಾತನಿಗೆ ಸೇರಿದ ಹತ್ತು ಅಂಕಣದ ಗೃಹ ನಿವೇಶನವೊಂದನ್ನು ಅರಮನೆಗೆ ತೆಗೆದುಕೊಂಡು ಬದಲಾಗಿ ಆತನಿಗೆ ಅದೇ ಅಳತೆಯ ಬೇರೆ ನಿವೇಶನವನ್ನು ನೀಡಲಾಯಿತು. ಈ ಬದಲಿ ನಿವೇಶನ ನಂಜೇದೇವನಿಗೆ ಸೇರಿದ್ದು ಆತ ಅದರ ಮೇಲಿನ ಕುಳಸ್ಥೆ(ತೆರಿಗೆ) ತೆರಲಾರದ ದುಃಸ್ಥಿತಿಯಲ್ಲಿದ್ದ ಅದರಿಂದ ಆತ ಅದನ್ನು ಅರಮನೆಗೆ ಒಪ್ಪಿಸಿ ಕೆಂಪೊತ್ತಿದ್ದ ವೋಲೆಯನ್ನು ನೀಡಿದ. ಈ ಓಲೆ ಬಹುಶಃ ಹಕ್ಕು ಪತ್ರವಾಗಿರಬಹುದು. ಶಾಸನದ ಕಾಲ ಕ್ರಿ.ಶ. ೧೫೧೫. ಸಾಳುವ ಗೋವಿಂದರಾಜಯ್ಯನಿಗೆ ಉಮ್ಮತ್ತೂರು ನಾಯಕನ ಪ್ರಾಪ್ತವಾಗಿತ್ತು.[೪೫] ಕ್ರಿ.ಶ. ೧೫೨೩ರ ಹರಳುಕೋಟೆ ಶಾಸನದಲ್ಲಿ ಜಡೆಯೂರು ಮುದಲಿಯೂರು ಎಂಬ ಮಾಗಣಿಕಾರನ ಉಲ್ಲೇಖವಿದೆ.[೪೬] ಅರಸನ ಧರ್ಮಕೀರ್ತಿ ಹೆಚ್ಚಲೆಂದು ಅವಸರದ ದೇಮರಸಯ್ಯನ ನಿರೂಪದ ಮೇರೆಗೆ ತಿಮ್ಮರಾಜನು ದೇವಾಲಯವೊಂದರ ಗರ್ಭಗೃಹ, ಸುಕನಾಸಿ ಮತ್ತು ಅದರ ಭಾಗಗಳ ಜೀರ್ಣೋದ್ಧಾರ ಮಾಡಿದನೆಂದು ಕ್ರಿ.ಶ. ೧೫೨೮ರ ಉಮ್ಮತ್ತೂರು ಶಾಸನದಿಂದ ತಿಳಿದುಬರುತ್ತದೆ. ಆದರೆ ದೇವಾಲಯದ ಹೆಸರು ನಷ್ಟವಾಗಿದೆ. ಈ ಶಾಸನೋಕ್ತ ದೇವರಸಯ್ಯನಿಗೆ ಉಮ್ಮತ್ತೂರು ದೊರೆಯ ನಾಯಕತನ ದೊರಕಿತ್ತೆಂದು ಹೆಗ್ಗೊಠಾರ ಶಾಸನವು ತಿಳಿಸುತ್ತದೆ. ಅರಸನ ಆದೇಶಾನುಸಾರ ಹೆಗ್ಗೋಠಾರ ಮತ್ತು ಅದರ ಉಪಗ್ರಾಮಪುರ ಇವೆರಡನ್ನೂ ಸರ್ವಸ್ವಾಮ್ಯ ಸಹಿತವಾಗಿ ಬಮ್ಮಾಪುರದ ಬಾಲಕೃಷ್ಣದೇವರ ಸೇವೆಗೆ ನೀಡಲಾಯಿತು. ಈ ದಾನ ಬಿಟ್ಟಿರುವುದು ತುಂಗಭದ್ರಾ ತೀರದ ಪಂಪಾ ಕ್ಷೇತ್ರದಲ್ಲಿ.[೪೭]

ಕ್ರಿ.ಶ. ೧೫೩೧ರ ನಂಜೇದೇವರಪುರ ಶಾಸನವು ಅರಸ ಸದಾಶಿವರಾಯನ ನಿರೂಪದ ಮೇರೆಗೆ ಪೆರುಮಾಳ ಅಧಿಕಾರಿಯ ಉಯಂಬಳಿ ಸ್ಥಳದ ದಣ್ಣಾಯಕನ ಪುರವನ್ನು ದತ್ತಿಬಿಟ್ಟನು.[೪೮] ಇದೇ ವರ್ಷ ದಳವಾಯಿ ರಂಗ ನಾಯಕನು ಉಮ್ಮತ್ತೂರ ರಂಗನಾಥದೇವರಿಗೆ ದಾನವಿತ್ತ[೪೯] ಸೋಮಶಿಲಾದೇವರಾ ಉತ್ತರಾಯ ಮಹಾ ಪಾತ್ರೆ ಅರಸು ತೆರಕಣಾಂಬಿಯ ತಿರುಮಲದೇವರಿಗೆ ಗ್ರಾಮ ದಾನ ಮತ್ತು ಭೂಮಿದಾನ ಮಾಡಿದ ವಿಷಯವನ್ನು ಕ್ರಿ.ಶ. ೧೫೩೮ರ ದಾಸನಪುರ ಶಾಸನ ನಿರೂಪಿಸುತ್ತದೆ.[೫೦] ಮಹಾಪಾತ್ರೆ ಎಂಬ

ಹೆಸರೇ ಈತನ ಒರಿಯಾ ಮೂಲವನ್ನು ಸೂಚಿಸುತ್ತದೆ. ಕೃಷ್ಣದೇವರಾಯನ ಕಳಿಂಗ ವಿಜಯದ ಅನಂತರ ಅರಸನ ಜೊತೆ ಬಂದ ಅಲ್ಲಿನ ಕೆಲವರು ವಿಜಯನಗರ ಸಾಮ್ರಾಜ್ಯದಲ್ಲಿ ಉನ್ನತ ಅಧಿಕಾರಿಗಳಾಗಿದ್ದರೆಂದು ತೋರುತ್ತದೆ. ಅಚ್ಯುತರಾಯನ ಅಧಿಕಾರಿಗಳಲ್ಲಿ ಒಬ್ಬನಾದ ರಾಯಾಭಟ್ಟಯ್ಯನ ಅಪ್ಪಣೆಯ ಮೇರೆಗೆ, ಹದಿನಾಟನ್ನು ಪಾಲಿಸುತ್ತಿದ್ದ ಯೆಲಪ್ಪಯ್ಯನು ಅಣಲೇಶ್ವರದೇವರಿಗೆ ದಾನವಿತ್ತನೆಂದು ಹರದನಹಳ್ಳಿ ಶಾಸನದಿಂದ ತಿಳಿದುಬರುತ್ತದೆ.[೫೧]

ಸದಾಶಿವರಾಯನ ಮಾಂಡಲಿಕರಲ್ಲಿ ಒಬ್ಬನಾದ ಮಹಾಮಂಡಲೇಶ್ವರ ರಾಮರಾಜ ತಿರುಮಲರಾಜಯ್ಯ ದೇವರು ಚಾಮರಾಜನಗರ ತಾಲೂಕಿನ ಕೆಲವು ಶಾಸನಗಳಲ್ಲಿ ಉಲ್ಲೇಖಗೊಂಡಿದ್ದಾನೆ.[೫೨] ಈತನ ಮಗ ರಾಮರಾಜಯ್ಯ, ಈ ತಂದೆ ಮಕ್ಕಳು ಕ್ರಿ.ಶ. ೧೫೭೦ರ ಕಾಗಲವಾಡಿ ಶಾಸನದಲ್ಲಿ ಕ್ರಮವಾಗಿ ದಾನಿ ಮತ್ತು ಪ್ರತಿಗ್ರಹಿಗಳಾಗಿ ಕಂಡುಬರುವುದು ಸ್ವಾರಸ್ಯಕರ ಸಂಗತಿ; ಅಷ್ಟೇ ಅಲ್ಲ ತಂದೆಗೆ ಮಗನೇ ಕಾರ್ಯಕರ್ತನಾಗಿದ್ದ.[೫೩]

ಒಂದನೆಯ ವೆಂಕಟಪತಿಯ ಆಳ್ವಿಕೆಗೆ ಸೇರಿದ, ಕ್ರಿ.ಶ. ೧೫೯೩ರ ಮೇಲುಮಾಳ ಶಾಸನದಿಂದ ಹದಿನಾಡ ಸೀಮೆಯ ಪ್ರಭುದೇವಪ್ಪಗೌಡನ ಮಗನಾದ ರಾಜರಾಜಮನಾಯಕರು ಸುತ್ತೂರು ಸಿಂಹಾಸನಕ್ಕೆ ಕರ್ತರಾದ ಶಿವರಾತ್ರೆದೇವರ ಶಿಷ್ಯ ಚೆನ್ನಬಸವರಾಜದೇವರಿಗೆ ಹಸುರಹಳ್ಳಿಯನ್ನು ದಾನಬಿಟ್ಟ ಸಂಗತಿ ತಿಳಿದು ಬರುತ್ತದೆ.[೫೪] ಕ್ರಿ.ಶ. ೧೬೧೩ರಲ್ಲಿ ನಂಜರಾಜವೊಡೆಯ ಹದಿನಾಡ ಸೀಮೆಯ ಪ್ರಭುವಾಗಿದ್ದ.[೫೫]

ಕ್ರಿ.ಶ. ೧೬೦೫ರ ಚಾಮರಾಜನಗರ ಶಾಸನವು ಅರೆಕೊರಠಾರದ ಪ್ರಭು ಚಂದ್ರಶೇಖರ ವೊಡೆಯನ್ನು ಮತ್ತು ಕಮ್ಮರವಳ್ಳಿಯ ಪ್ರಭು ಮಲರಾಜವೊಡೆಯರ ನಡುವೆ ಏರ್ಪಟ್ಟ ಒಂದು ಒಪ್ಪಂದವನ್ನು ಉಲ್ಲೇಖಿಸುತ್ತದೆ. ಈ ಒಪ್ಪಂದದಿಂದಾಗಿ ಹಂಗರೆಪುರವು ಅರೆಕೊಠಾರದ ವೀರಭದ್ರ ದೇವರಿಗೆ ಸಂದಿತು.[೫೬] ಶ್ರೀರಂಗಪಟ್ಟಣ ಮಠದಲ್ಲಿ ನಡೆಯುವ ದಾಸೋಹಕ್ಕಾಗಿ ಕ್ರಿ.ಶ. ೧೬೧೦ರಲ್ಲಿ ರಾಮರಾಜಯ್ಯ ತಿರುಮಲ್ಲ ರಾಜಯ್ಯದೇವರು ಕಿಲಗೆರೆ ಗ್ರಾಮವನ್ನು ದಾನವಿತ್ತ.[೫೭]

## ಮೈಸೂರಿನ ಒಡೆಯರ ಕಾಲದ ಶಾಸನಗಳು

ಕ್ರಿ.ಶ. ೧೬೪೮ರ ಹೊಂಗನೂರು ಶಾಸನವು ಕಂಠೀರವ ನರಸರಾಜವೊಡೆಯರ ಆಳ್ವಿಕೆಗೆ ಸೇರಿದೆ.[೫೮] ಇದೇ ಅರಸನ ಇನ್ನೆರಡು ಶಾಸನಗಳು ಈ ಗ್ರಾಮದಲ್ಲಿವೆ. ಮೊದಲ ಶಾಸನ ಅಲ್ಲಲ್ಲಿ ಸವೆದುಹೋಗಿದ್ದು, ಅಗ್ರಹಾರವೊಂದರ ಸ್ಥಾಪನೆಗೆ ಸಂಬಂಧಿಸಿದುದೆಂದು ತೋರುತ್ತದೆ. ಎರಡನೆಯ ಶಾಸನವು ಕಾಶಿಯ ವಿಶ್ವೇಶ್ವರ ಮತ್ತು ಇತರ ದೇವರಿಗೆ ಗ್ರಾಮಗಳನ್ನು ದತ್ತಿಬಿಟ್ಟ ವಿಷಯವನ್ನು ತಿಳಿಸುತ್ತದೆ.[೫೯]

ಕೇತಹಳ್ಳಿ ಶಾಸನದ ಪ್ರಕಾರ ಕ್ರಿ.ಶ. ೧೬೬೮ರಲ್ಲಿ ದೇವರಾಜವೊಡೆಯನ್ನು ಆಳುತ್ತಿದ್ದ ರಾಜಮಾತೆ ಅಮೃತಮ್ಮಣ್ಣಿ ತಾನು ಮೈಸೂರಿನಲ್ಲಿ ಕಟ್ಟಿಸಿದ ಮಹತ್ತಿನ ಮಠದಲ್ಲಿ ಅನ್ನದಾನ ನಡೆಸಲೆಂದು ಕೇತಹಳ್ಳಿಯನ್ನು ದಾನ ನೀಡಿದಳು.[೬೦]

ಚಿಕ್ಕ ದೇವರಾಜವೊಡೆಯನ ಕ್ರಿ.ಶ. ೬೭೫ರ ಚಾಮರಾಜನಗರ ಶಾಸನವು ವಿಶಿಷ್ಟ ಸಂಗತಿಯೊಂದನ್ನು ನಿರೂಪಿಸುತ್ತದೆ. ಅರಸನು ಗಯಾಕ್ಷೇತ್ರದಲ್ಲಿ ತನ್ನ ತಂದೆಯ ಶ್ರಾದ್ಧಾದಿಕರ್ಮಗಳನ್ನು ಕೃಷ್ಣದೀಕ್ಷಿತ ಎಂಬಾತನಿಂದ ಮಾಡಿಸಿದ. ಅದಕ್ಕಾಗಿ ಆತನಿಗೆ ಕಬ್ಬಲಿಗನಪುರ ಹಾಗೂ ಹುಲ್ಲಾಣ ಎಂಬ ಎರಡು ಗ್ರಾಮಗಳನ್ನು ದಾನವಿತ್ತ. ಈ ಗ್ರಾಮಗಳಿಗೆ ಕ್ರಮವಾಗಿ ಚಿಕ್ಕದೇವರಾಜಯಪುರ ಮತ್ತು ಕೃಷ್ಣಾಪುರ ಎಂದು ದಾನಿ ಹಾಗೂ ಪ್ರತಿಗ್ರಹಿಯ ಹೆಸರುಗಳಲ್ಲಿ ಪುನರ್ ನಾಮಕರಣ ಮಾಡಲಾಯಿತು. ಪ್ರಸ್ತುತ ಶಾಸನದಲ್ಲಿ ಮೈಸೂರರಸರ ವಂಶಾವಳಿಯನ್ನು ಕೊಟ್ಟಿದೆ. ಈ ತಾಮ್ರಾಶಾಸನದ ಕರ್ತೃ ತಿರುಮಲಾರ್ಯ.[೬೧] ಕ್ರಿ.ಶ. ೧೬೭೭ರ ವೆಂಕಟಯ್ಯನ ಛತ್ರ ಶಾಸನವು ಉಲ್ಲೇಖಿಸುವ ದೇವರಾಜವೊಡೆಯನು ಚಿಕ್ಕದೇವರಾಜನೇ. ಹರದನಹಳ್ಳಿಯಲ್ಲಿ ಛತ್ರವೊಂದರ ನಿರ್ವಹಣೆಗಾಗಿ ಮೊಮ್ಮನಹಳ್ಳಿಯನ್ನು ದಾನ ನೀಡಲಾಯಿತೆಂದು ಈ ಶಾಸನ ತಿಳಿಸುತ್ತದೆ.[೬೨]

ಕ್ರಿ.ಶ. ೧೭೪೪ರ ಹರದನಹಳ್ಳಿ ತಾಮ್ರ ಶಾಸನವು ಇಮ್ಮಡಿ ಕೃಷ್ಣರಾಜವೊಡೆಯನ ಕಾಲದ್ದು. ಇದರಲ್ಲಿ ಕೊಟ್ಟಿರುವ ರಾಜವಂಶಾವಳಿಯಿಂದ ಅರಸುಪೀಳಿಗೆಯು ಅನುಕ್ರಮವಾಗಿ ಅವಿಚ್ಛಿನ್ನವಾಗಿ ಹರಿದುಬರಲಿಲ್ಲ ವೆನ್ನುವುದು ಸ್ಪಷ್ಟಪಡುತ್ತದೆ.[೬೩] ಚಾಮರಾಜನಗರ ತಾಮ್ರ ಶಾಸನ ನೀಡುವ ವಂಶಾವಳಿಗೂ ಇದರಲ್ಲಿ ಕೊಟ್ಟಿರುವ ವಂಶಾವಳಿಗೂ ಹೊಂದಿಕೆಯಾಗುವುದಿಲ್ಲ. ಈ ಶಾಸನವು ಕಳಲೆ ವಂಶಸ್ಥರಾದ ನಂಜರಾಜ ಮತ್ತು ದೇವರಾಜ ಎಂಬ ಮಂತ್ರಿಗಳ ವೃತ್ತಾಂತವನ್ನು ನೀಡುತ್ತದೆ. ಮೊದಲನೆಯವನು ಸರ್ವಾಧಿಕಾರಿ; ಎರಡನೆಯವನು ಮಿಡಗೇಶಿ, ಮಾಗಡಿ ಮತ್ತು ಸಾವಂದಿಯ ಪ್ರಭುಗಳನ್ನು ಸೋಲಿಸಿದ ವೀರ.[೬೪] ಕ್ರಿ.ಶ. ೧೭೬೨ರ ಹಳೇ ಸರಗೂರು ಶಾಸನವು ಕಾಶಿವಾಶಿ ಜಯನಿ ರಾಮಭಟ್ಟರಿಗೆ ಬರೆಸಿಕೊಟ್ಟ ಕ್ರಯಭೂದಾನವನ್ನು ಕುರಿತಾದುದು. ಅರಸನೇ ಭೂಮಾರಾಟ ಮಾಡಿದ ಸಂಗತಿ ಗಮನಾರ್ಹ. ಇಂಥದೇ ಶಾಸನ ಯಳಂದೂರು ತಾಲೂಕಿನಲ್ಲಿ ಸಹ ಇದೆ. ಕೊಳ್ಳೇಗಾಲದ ವ್ಯಾಪಾರಿ ವೀರಸೆಟ್ಟಿಯ ಮೂಲಕ ಕೊಂಡವರು ಹಣ ಸಂದಾಯ ಮಾಡಿದರು.[೬೫]

ಕ್ರಿ.ಶ. ೧೭೯೯ ರಿಂದ ೮೬೮ರವರೆಗೆ ರಾಜ್ಯವಾಳಿದ ಮುಮ್ಮಡಿ ಕೃಷ್ಣರಾಜ ವೊಡೆಯರ ಹಲವು ಶಾಸನಗಳು ಆತನ ಧರ್ಮ ಪ್ರವೃತ್ತಿ ಮತ್ತು ದಾನ ಶೀಲತೆಗಳನ್ನು ಕೊಂಡಾಡುತ್ತವೆ. ಆತ ಕ್ರಿ.ಶ. ೮೨೮ರಲ್ಲಿ ಅರಿಕುಠಾರಕ್ಕೆ ಚಾಮರಾಜನಗರವೆಂಬ ಹೊಸ ಹೆಸರಿಟ್ಟು, ಅಲ್ಲಿ ಚಾಮರಾಜೇಶ್ವರ ದೇವಾಲಯವನ್ನು ಕಟ್ಟಿಸಿದ.[೬೬] ಇದಕ್ಕೆ ಎರಡು ವರ್ಷ ಮೊದಲ ಎಂದರೆ ೧೮೨೬ರಲ್ಲಿ ಅಂಚವಾಡಿಯ ವೀರಭದ್ರ ದೇವಾಲಯದ ಜೀರ್ಣೋದ್ಧಾರ ಮಾಡಿದ.[೬೭]

ಭಾರತೀಯ ಸಂಸ್ಕೃತಿಯ ಎಲ್ಲ ಪ್ರಕಾರಗಳಲ್ಲಿಯೂ ಧರ್ಮವು ಅಂತರ್ವಾಹಿನಿಯಾಗಿದೆ. ನಮ್ಮ ಹಿರಿಯರ ಧರ್ಮದ ಪರಿಕಲ್ಪನೆಯು ಕೇವಲ ವ್ಯಕ್ತಿಗತವಾದುದಾಗಿರಲಿಲ್ಲ; ಅದು ಜನಪರವೂ ಪರಿಸರ ಪೋಷಕವೂ ಆಗಿತ್ತು. ಆದ್ದರಿಂದಲೇ ಕೆರೆ ಬಾವಿ ದೇವತಾಗೃಹ ಅರವಂಟಿಗೆ ಸತ್ರ ನಿರ್ಮಾಣಗಳು ಪರಹಿತ

ಕಾರ್ಯಗಳಾಗಿದ್ದವು. ಅವುಗಳ ನಿರ್ವಹಣೆಗೂ ಅವರು ದಾನದತ್ತಿಗಳನ್ನು ನೀಡುತ್ತಿದ್ದರು. ಕೆರೆಬಾವಿ ತೋಪು ಜನರ ದೈನಂದಿನ ಜೀವನಕ್ಕೆ ಪ್ರಯೋಜಕವಾಗಿದ್ದವು. ದೇವಾಲಯವು ವಿದ್ಯೆ, ಧ್ಯಾನ ಮತ್ತು ಸಂಸ್ಕೃತಿಯ ಕೇಂದ್ರವಾಗಿತ್ತು. ಅರವಂಟಿಗೆ ದಾರಿಹೋಕರ ದಾಹ ತಣಿಸಿ ಆಯಾಸ ನೀಗುವ ತಾಣವಾಗಿತ್ತು. ಸತ್ರವು ಪ್ರವಾಸಿಗಳಿಗೆ, ಪರಸ್ಥಳದ ಭಕ್ತರಿಗೆ ಉಳಿದುಕೊಳ್ಳಲು ನೆಲೆಕಲ್ಪಿಸುತ್ತಿತ್ತು. ಇಂತ ಜನೋಪಯೋಗಿ ಧರ್ಮಕಾರ್ಯಗಳು ಚಾಮರಾಜನಗರ ತಾಲೂಕಿನ ಪ್ರದೇಶದಲ್ಲಿ ಹಿಂದಿನಿಂದ ನಡೆದುಕೊಂಡು ಬಂದಿವೆಯೆಂದು ಹೇಳಲು ಶಾಸನಾಧಾರಗಳು ದೊರೆಯುತ್ತವೆ.

ಕ್ರಿ.ಶ. ೯ನೆಯ ಶತಮಾನದಲ್ಲಿಯೇ ಎಲ್ಲೂರಿನಲ್ಲಿ ಕೆರೆಯೊಂದನ್ನು ಕಟ್ಟಿ, ಭೂಮಿ ದಾನ ನೀಡಿದ ಉಲ್ಲೇಖವಿದೆ.[೬೮] ಕ್ರಿ.ಶ. ೧೧ನೆಯ ಶತಮಾನದಲ್ಲಿ ಕಚ್ಚೆಗಾಮುಂಡನು ಕೊಳುಮ ಗ್ರಾಮದಲ್ಲಿ ಕೆರೆಗೆ ತೊಬೊಂದನ್ನು ಮಾಡಿಸಿದನೆಂದು ಹೊಂಗನೂರು ಶಾಸನದಿಂದ ತಿಳಿದುಬರುತ್ತದೆ.[೬೯] ಇದೇ ಊರಿನ ಇನ್ನೊಂದು ಶಾಸನವು ಅಂಕನಹಳ್ಳಿಯ ಮತ್ತು ಕೊಗ್ಗಿನಹಳ್ಳಿಯ ಜನರು ಕೆರೆಯೊಂದನ್ನು ಕಟ್ಟಿಸಿದ್ದ ವಿಷಯವನ್ನು ಉಲ್ಲೇಖಿಸುತ್ತದೆ. ಕಳಲೆ ನಂಜನರಾಜಯ್ಯನ ಮನೆವಾರ್ತೆ ನಿರ್ವಹಿಸುತ್ತಿದ್ದ ವೀರೈಯ ಎಂಬತ ಕ್ರಿ.ಶ. ೧೭೫೮ರಲ್ಲಿ ಮಲದೇವನಹಳ್ಳಿಯಲ್ಲಿ ಕೆರೆಯೊಂದನ್ನು ಮಾಡಿಸಿದ[೭೦] ಮರಿಯಾಲದ ಕೊಳದ ಮೇಲ್ಭಾಗದಲ್ಲಿ ನಿಂತಿರುವ ಶಾಸನದಿಂದ ಕ್ರಿ.ಶ. ೧೮೭೦ರಲ್ಲಿ ಮೈಸೂರ ಅರಮನೆಯ 'ಖಾಸ ಚೌರಿ' ಊಳಿಗದ ಮಲ್ಲಪ್ಪನವರ ಧರ್ಮಪತ್ನಿಯಾದ ಪುಟ್ಟನಂಜವ್ವೇರು ಅಮೃತ ಸರೋವರವನ್ನು ಕಟ್ಟಿಸಿದರೆಂದು ತಿಳಿದುಬರುತ್ತದೆ.[೭೧] ಸುಮಾರು ಇದೇ ಕಾಲದಲ್ಲಿ ಕರಿನಂಜನಪುರದಲ್ಲಿ ಕೊಳವೊಂದು ರೂಪುಗೊಂಡಿತು.[೭೨] ಕ್ರಿ.ಶ.೧೫೪೦ರಲ್ಲಿ ಕಾಳಮಲ್ಲಿಕಾರ್ಜುನದೇವ ಮತ್ತು ಕೆಂಪಿನ ಲಿಂಗಣ್ಣೊಡೆಯರು ಭಾವಿಯ ಜೀರ್ಣೋದ್ಧಾರ ವನ್ನು ಆಡಿದರು.[೭೩]

ದೇವಾಲಯದ ನಿರ್ಮಾಣ ಮತ್ತು ಅದಕ್ಕೆ ದಾನ ನೀಡಿದ ನಿದರ್ಶನಗಳು ಹೇರಳವಾಗಿ ದೊರೆಯುತ್ತವೆ. ಕೆಲವನ್ನಷ್ಟೇ ಇಲ್ಲಿ ಗುರುತಿಸಬಹುದು. ಪೆರ್ಮಾಡಿಯ ಸೂಳೆ ಜೊಗಬ್ಬೆಯ ಮಗಳು ಚಾವುಂಡಬ್ಬೆ ಕ್ರಿ.ಶ. ೯ನೆಯ ಶತಮಾನದಲ್ಲಿ ಹೆಗ್ಗೊತಾರದಲ್ಲಿ ಒಂದು ದೇಗುಲವನ್ನು ಕಟ್ಟಿಸಿದಳು.[೭೪] ಕ್ರಿ.ಶ. ೯೮೨ರಲ್ಲಿ ಮಲ್ಲಯ್ಯನುಂ ಮಾಡಿಸಿದ ದೇಗುಲಕ್ಕೆ ಮಳೂರು ಸಾವಿರ ಬ್ರಾಹ್ಮಣರು ಭೂದಾನ ಮಾಡಿದ ಸಂಗತಿ ಪುಣಜೂರು ಶಾಸನದಲ್ಲಿ ನಿರೂಪಿತವಾಗಿದೆ.[೭೫] ಚಾಮರಾಜನಗರದಲ್ಲಿನ ತ್ರಿಕೂಟ ಬಸದಿಯನ್ನು ಹೊಯ್ಸಳ ಸೇನಾನಿ ಪುಣಿಸಯ್ಯನು ಕ್ರಿ.ಶ. ೧೨ನೆಯ ಶತಮಾನದಲ್ಲಿ ಕಟ್ಟಿಸಿದ;[೭೬] ಮಾತ್ರವಲ್ಲ, ಆತ ಗಂಗವಾಡಿ ಪ್ರದೇಶವನ್ನು ಬದಿಗಳಿಂದ ಅಲಂಕರಿಸಿದ. ಹೆಗ್ಗವಾಡಿಯ ಶಂಭುಲಿಂಗೇಶ್ವರ ದೇವಾಲಯವನ್ನು ಸುಖನಾಸಿ ಗರ್ಭ ಗೃಹಸ್ತೂಪಿಪರಿಯಸ್ತಿ ಶಂಭುಗಾಮುಂಡನು ಕ್ರಿ.ಶ. ೧೨೪೨-೪೩ರಲ್ಲಿ ನಿರ್ಮಿಸಿದ[೭೭] ಹರದನಹಳ್ಳಿ, ಮಲೆಯೂರು, ಹಲೇ ಆಲೂರು, ಕುಲಗಾಣ, ಹರವೆ, ಹೊಮ್ಮ, ಸಾಗಡೆ ಉಮ್ಮತ್ತೂರು, ಅಮಚವಾಡಿ

ಮುಂತಾದ ಸ್ಥಳಗಳಲ್ಲಿನ ದೇವಾಲಯ ಜಿನಾಲಯಗಳು ಖ್ಯಾತವಾಗಿದ್ದವು. ಕುದೇರಿನ ಮಲ್ಲಿಕಾರ್ಜುನ ದೇವಾಲಯದ ಮುಂದಿನ ಬಲಿಪೀಠವನ್ನು ಮಲ್ಲವಡೆಯ[೭೮] ಹಾಗೂ ತೆಳನೂರಿನ ಶಂಭುಲಿಂಗೇಶ್ವರ ದೇವಾಲಯದ ಮುಂದಿನ ಬಲಿಪೀಠವನ್ನು ಕೆಂಗೋಜ ಮಾಡಿಸಿದರು.[೭೯] ತೆಳ್ಳನೂರ ಮಹಾಕಾಳಿದೇವಿಗೆ ಅಕ್ಕಸಾಲೆ ಕಾಲ್ಮೊಜನು ಕ್ರಿ.ಶ. ೧೩೮೮ರಲ್ಲಿ ಕಲ್ಲತೋರಣವನ್ನು ನಿಲ್ಲಿಸಿದನು.[೮೦] ಚನ್ನಪ್ಪನಪುರದಲ್ಲಿ ಮಂಟಪವೊಂದನ್ನು ನಿರ್ಮಿಸಿದಾತ ಯರಪ್ಪನಾಯಕ.[೮೧] ಹರದನಹಳ್ಳಿಯ ದಿವ್ಯಲಿಂಗೇಶ್ವರ ದೇವಾಲಯದ ರಂಗಮಂಟಪಗಳನ್ನು ಕಟ್ಟಿಸಿಕೊಟ್ಟವರು ಮಂಚೇಗೌಡ ಹಿರಿಯಗೌಡ ಮತ್ತು ಇತರರು(೨೬೬-೬೮). ದೇವಾಲಯದ ಸುಖನಾಸಿಯೊಳಗೆ ಇರುವ ಕಲ್ಲತೊಟ್ಟಿಯನ್ನು ಮಾಡಿಸಿ ಕೊಟ್ಟವನು ಬೆನಕ (೨೬೯).[೮೨] ಈ ದೇವಾಲಯದ ಪಶ್ಚಿಮಭಾಗದಲ್ಲಿ ಕ್ರಿ.ಶ. ೧೬೪೫ರಲ್ಲಿ ಲಿಂಗಯ್ಯ ಮಂತ್ರಿಯು ಕಾಳಹಸ್ತೀಶ್ವರನ ಪ್ರತಿಷ್ಠೆ ಮಾಡಿಸಿದ;[೮೩] ದಕ್ಷಿಣಾಮೂರ್ತಿಯನ್ನು ಕ್ರಿ.ಶ. ೧೭೫೩ರಲ್ಲಿ ರಾಮಸಮುದ್ರದ ಹನುಮಂತಯ್ಯ ಪ್ರತಿಷ್ಠೆ ಮಾಡಿಸಿದ[೮೪] ಒಂದು ದೇವಾಲಯದ ವಿವಿಧ ಭಾಗಗಳನ್ನು, ಮೂರ್ತಿಗಳನ್ನು, ವಾಹನಾಲಂಕಾರಗಳನ್ನು ಮಾಡಿಸಿಕೊಟ್ಟ ಹಲವು ನಿದರ್ಶನಗಳನ್ನು ಚಾಮರಾಜನಗರ ಶಾಸನಗಳಲ್ಲಿವೆ.

ಪಾಳು ಬಿದ್ದ ದೇವಾಲಯಗಳು ಜೀರ್ಣೋದ್ಧಾರ ಕಾರ್ಯ ಪುಣ್ಯದ ಕೆಲಸವೆಂದು ನಮ್ಮ ಪೂರ್ವಿಕರು ನಂಬಿಕೊಂಡಿದ್ದರಿಂದ ಎಷ್ಟೋ ದೇವಾಲಯಗಳು ಈ ಕಾಲದವರೆಗೂ ಉಳಿದುಕೊಂಡು ಬರಲು ಸಾಧ್ಯವಾಯಿತು. ಕ್ರಿ.ಶ.೧೮೨೭ರಲ್ಲಿ ಶ್ರೀ ಕೃಷ್ಣರಾಯರಿಗೆ ಧರ್ಮಕೀರ್ತಿಯಾಗಬೇಕೆಂದು ಲಕ್ಕರಾಜಗಳ ಮಗ ತಿಮ್ಮರಾಜಗಳು ಗರ್ಭಗೃಹ ಸುಕನಾಸಿ ಮೊದಲಾದ ಜೀರ್ಣೋದ್ಧಾರವನ್ನೂ ಮಾಡಿಸಿದ ವಿಷಯ ಉಮ್ಮತ್ತೂರು ಶಾಸನದಲ್ಲಿದೆ.[೮೫] ಕ್ರಿ.ಶ. ೧೮೨೬ರಲ್ಲಿ ಮೈಸೂರ ರಾಣಿ ಲಿಂಗಾಜಮ್ಮಣ್ಣಿ ಅಮಚವಾಡಿಯ ವೀರಭದ್ರ ದೇವಾಲಯದ ಜೀರ್ಣೋದ್ಧಾರ ಮಾಡಿದ ವಿಷಯವನ್ನು ಗುಡ್ಡದ ಮಠ ಶಾಸನವು ತಿಳಿಸುತ್ತದೆ.[೮೬]

ಚಾಮರಾಜನಗರ ತಾಲೂಕಿನ ಶಾಸನಗಳಲ್ಲಿ ಅನೇಕ ವೀರಶೈವ ಮಠಗಳ ಉಲ್ಲೇಖ ಕಂಡುಬರುತ್ತವೆ. ಚಂದ್ರಣಿ ಮಠ, ಕಂಚಿ ತೆಲುಗಾಣ್ಯದ ಮಠ, ವಾಣಿಜ್ಯಪುರಿ ಮಠ, ಕೆಂಬಲ್ಲುಮಠ ಹಾಗೂ ಮಹಾಲಿಂಗಮಠ.[೮೭] ಉಮ್ಮತ್ತೂರು ಉಪ್ಪರಿಗೆಯ ಮಠಕ್ಕೆ ನಿರಾಸಿ ಮಠವೆಂಬ ಹೆಸರಿತ್ತು.[೮೮] ಈ ಮಠದ ಆರೋಗಣೆಯ ಅವಸರಕ್ಕೆ ಶ್ರೀರಂಗಪಟ್ಟಣದ ಉಭಯ ಕಾವೇರಿ ಮಧ್ಯದ ಗಂಗಾಧರ ದೇವರ ಸನ್ನಿಧಿಯಲ್ಲಿ ಗ್ರಾಮವೊಂದನ್ನು ಕ್ರಿ.ಶ ೧೫೪೪ರಲ್ಲಿ ನೀಡಲಾಯಿತು.[೮೯] ಕ್ರಿ.ಶ. ೧೫೯೩ರಲ್ಲಿ ಒಂದನೆಯ ವೆಂಕಟಪತಿಯ ಆಳ್ವಿಕೆಯ ಕಾಲದಲ್ಲಿ ಹದಿನಾಡ ಸೀಮೆಯ ಪ್ರಭು ದೇವಪ್ಪಗೆ ಉಡರ ಮಖಿಳುಯಿಂಮಡಿ ರಾಮರಾಜನಾಯಕರು ಸಜ್ಜನಶುದ್ಧ ಸಿವಾಚಾರ ಸಂಪಂನರಾದ ದೇವಾಪೃಥ್ವಿ ಮಹಾಮಹತ್ತಿನೊಳಗಾದ ಸುತ್ತೂರ ಸಿಂಹಾಸನಕ್ಕೆ ಕರ್ತರಾದ ಸಿವರಾತ್ರಿಯ ದೇವರ ಶಿಷ್ಯರು ಚನ್ನಬಸವರಾಜದೇವರಿಗೆ ಹೊಂಗನೂರು ಸ್ಥಳಕ್ಕೆ ಸೇರಿದ ಹಸುರಹಳ್ಳಿಯನ್ನು ತಮ್ಮ ತಾಯಿ ಚೆನ್ನಾಜಿಯಮ್ಮನ ಪುಣ್ಯಾರ್ಥ ದಾನಪಿತ್ತ ಸಂಗತಿಯು ಮೇಲುಮಾಳ ಶಾಸನದಲ್ಲಿ ನಿರೂಪಿತ

ವಾಗಿದೆ.[೯೦] ಕ್ರಿ.ಶ. ೧೬ನೆಯ ಶತಮಾನದಲ್ಲಿ ವೀರಸೋಮರಾಯನು ಹುಲಿಯೂರ ಆರಾಧ್ಯವೊಡೆಯರಿಗೆ ಭಕ್ತಿಪೂರ್ವಕವಾಗಿ ಮಠ ಮಾಡಿಸಿಕೊಟ್ಟನು.[೯೧]

ಕ್ರಿ.ಶ. ೮ನೆಯ ಶತಮಾನದ ಹೊಮ್ಮ ಶಾಸನದಲ್ಲಿ ಆ ಸ್ಥಳದ ವಿನಿತೀಶ್ವರದೇವರಿಗೆ ದೇವೇಂದ್ರ ತಮ್ಮಡಿ ಮತ್ತು ಮುದ್ದೆಗಣ ಭೂದಾನವಿತ್ತ ವಿಷಯವನ್ನು ಹೇಳಿದೆ. ಇವರ ದಾನವನ್ನು ಗೋಷ್ಟಿ ಧರ್ಮ್ಮಮ್ ಎಂದು ಕರೆಯಲಾಗಿದೆ.[೯೨] ಕ್ರಿ.ಶ. ೧೨೮೧ರಲ್ಲಿ ಅರಕೊತಾರದ ಸಮಸ್ತಗವುಡುಗಳ ಭುಜಂಗೇಶ್ವರ ದೇವರಿಗೆ ನೀರುಕೂಲಿ ನಿಚಂಡಿ ಹೊಂಬಳಿಬೆಡುಗೆ ಮನೆವಣ ಮುಂತಾದ ಕರಾದಾಯವನ್ನು ಬಿಟ್ಟರು.[೯೩] ಮರಹಳ್ಳಿಯ ಮಲ್ಲಿಕಾರ್ಜುನ ದೇವರಿಗೆ ಕ್ರಿ.ಶ. ೧೨೨೧ರಲ್ಲಿ ಹರಗವುಡನು ಗಾಣವೊಂದನ್ನು ದಾನವಿತ್ತ[೯೪] ಕ್ರಿ.ಶ. ೧೦-೧೧ನೆಯ ಶತಮಾನದಲ್ಲಿ ಚಾಮುಂಡ ಪುರದ ಕೆರೆಯ ಮೂಡಣತೂಬನ್ನು ದೇವರಿಗೆ ಬಿಡಲಾಯಿತು.[೯೫] ಕ್ರಿ.ಶ.೧೫೧೩ರಲ್ಲಿ ಕಾಶೀ ಕ್ಷೇತ್ರಕ್ಕೆ ಸಮಾನವಾದ ತಿರುಮಕೂಡಲಿಗೆ ದಕ್ಷಿಣ ಭಾಗದ ಉಮ್ಮತ್ತೂರು ಗ್ರಾಮದ ರಂಗನಾಥ ದೇವರ ಸೇವೆಗೆ ಭೂಮಿದಾನ ಮಾಡಲಾಯಿತು.[೯೬] ಕಾಶಿಯಲ್ಲಿ ವಿಶ್ವೇಶ್ವರ ಮೊದಲಾದ ದೇವತೆಗಳಿಗೆ ಅಭಿಷೇಕ ಪೂಜೆ ಸಹಸ್ರನಾಮ ದೀಪಾರಾಧನೆ ನೈವೇದ್ಯ ವಿಶೇಷಪರ್ವಾಚರಣ ಕಾರ್ತಿಕ ಮಾಘ ವೈಶಾಖ ಈ ಮಾಸತ್ರಯದಲ್ಲಿ ಸ್ನಾನದಾನ ನಿತ್ಯದಲ್ಲಿ ನೂರು ಬ್ರಾಹ್ಮಣರಿಗೆ ಮೃಷ್ಟಾನ ಛತ್ರ ಕಾಶಿ ವಾಶಿಗಲಿಗೆ ವರ್ಷಾಶನ ಪ್ರಯಾಣೆಯಲ್ಲಿ ಮಾಘಸ್ನಾನ ಮುಂತಾದ ಹಲವು ಸೇವೆಗಳಿಗೆ ಕಂಠೀರವ ನರಸರಾಜನು ಹೊಂಗನೂರು ಸ್ಥಳವನ್ನು ದಾನ ನೀಡಿದ[೯೭] ಕ್ರಿ.ಶ. ೧೮ನೆಯ ಶತಮಾನದಲ್ಲಿ ಸುರಗಿಯ ಬಸವಣ್ಣವೊಡೆಯನು ಗೆಬ್ಬರೂರು ಮತ್ತು ಯೆಗಾಲೂರಿನ ಜಂಗಮರ ಆರೋಗನೆ ನಿರ್ವಹಿಸಲು ಭೂದಾನ ಮಾಡಿದರು.[೯೮] ಹೀಗೆಯೇ ತೆರಕಣಾಂಬಿಯ ವರದರಾಜ[೯೯] ಮತ್ತು ಗೋಪಿನಾಥ.[೧೦೦] ಹೆಡತಲೆಯ ನಗರೇಶ್ವರ, [೧೦೧] ಹರದನಹಳ್ಳಿಯ ಅಣಿಲೇಶ್ವರ,[೧೦೨] ಅಮಚವಾಡಿಬೆಟ್ಟದ ವೀರಭದ್ರ, ಕುಂಭೇಶ್ವರ ಹಾಗೂ ಬಸವೇಶ್ವರ,[೧೦೩] ಚಾಮರಾಜನಗರ, ಗಾಜನೂರು, ಕುಲಗಾಣ, ಹಳೇ ಆಲೂರು ಮೊದಲಾದ ಸ್ಥಳಗಳಲ್ಲಿನ ದೇವರಿಗೆ ಭೂಮಿಕಾಣಿ, ಕರಾದಾಯ ಹಾಗೂ ಧನದಾನಗಳನ್ನು ನೀಡಿದುದನ್ನು ಈ ತಾಲೂಕಿನ ಶಾಸನಗಳಿಂದ ತಿಳಿದುಕೊಳ್ಳಬಹುದು. ಹರದನಹಳ್ಳಿಯ ಛತ್ರದ ನಿರ್ವಹಣೆಗಾಗಿ ೧೬೭೬ರಲ್ಲಿ ಮೈಸೂರ ದೇವರಾಜವೊಡೆಯ ಬೊಮ್ಮನಹಳ್ಳಿ ಗ್ರಾಮವನ್ನು ದಾನವಿತ್ತ ಸಂಗತಿ ವೆಂಕಟಯ್ಯನ ಛತ್ರ ಶಾಸನ ಹೇಳಿದೆ.[೧೦೪]

ವ್ಯಕ್ತಿಗಳಿಗೆ ನೀಡಲಾದ ದಾನಗಳೂ ವಿವಿಧ ಬಗೆಯವು : ಯುದ್ಧದಲ್ಲಿ ಹೋರಾಡಿ ಮಡಿದ ವೀರನಿಗೆ ಬಾಳ್ಗಳ್ಚು ಆಗಿ,[೧೦೫] ರಕ್ತಕೊಡುಗೆಯಾಗಿ[೧೦೬] ಅಥವಾ ನೆತ್ತರು ಕೊಡಗೆಯಾಗಿ,[೧೦೭] ತನ್ನ ತಂದೆ ತಾಯಿಗಳಿಗೆ ತ್ರಿಸಂಧ್ಯಾ ಕಾಲದಲ್ಲು ಪುಣ್ಯವಾಗಬೇಕೆಂದು ದಾನ ನೀಡಲಾಯಿತು.[೧೦೮] ಹೊಂಗನೂರಿನ ಒಂದು ಶಾಸನ ವಿಶಿಷ್ಟವಾದುದು. ಇದರ ಕಾಲ ಕ್ರಿ.ಶ.೧೪೫೩ ಲಖಣ ಎಂಬ ವ್ಯಕ್ತಿಯು ತನ್ನ ಕುಟುಂಬಕ್ಕೆ ಅಡಿಗೆ

ಮಾಡಿಯಿಕುವ ಬ್ರಾಹ್ಮಣನೊಬ್ಬನಿಗೆ ಒಂದು ಖಂಡುಗ ಗದ್ದೆಯನ್ನು ದಾನವಿತ್ತ. ಇಂಥ ಉದಾಹರಣೆಗಳು ಹಲವು ದಾನಗಳನ್ನು ಲಕ್ಷ್ಮೀನಾರಾಯಣ ಪ್ರೀತ್ಯರ್ಥವಾಗಿ ಶಿವಾರ್ಪಿತವಾಗಿ ಅಥವಾ ವಿಶ್ವೇಶ್ವರಾರ್ಪಣ ಬುದ್ಧಿಯಿಂದ ನೀಡಲಾಗುತ್ತಿತ್ತು.[೧೦೯]

ಹಿಂದಿನ ಕಾಲದಲ್ಲಿನ ಜನರು ಬೇರೆ ಬೇರೆ ಧರ್ಮಕ್ಕೆ ಸೇರಿದವರಾಗಿದ್ದರೂ ಸಾಮರಸ್ಯದಿಂದ ಬಾಳಿದರು. ಕ್ರಿ.ಶ. ೧೩೭೮ರಲ್ಲಿ ಹಳೇ ಆಲೂರು ಶಾಸನದಲ್ಲಿ ಮೇಳ, ಕೋವ, ಕುಣಂದ, ನಲ್ಲೊಡೆಯ ಮುಂತಾದ ವಿವಿಧ ವರ್ಗದ ಜನರು ಚಂದ್ರನಾಥ ಬಸದಿಯ ಜೀರ್ಣೋದ್ಧಾರ ಮಾಡಿದ ಉಲ್ಲೇಖಸಿದೆ. ಕವಿ ಹಾಗೂ ಗಮಕಿ ಎಂದು ವರ್ಣಿತನಾದ ಮಲ್ಲಿಸೇನ ಮಲಧಾರಿಯ ಶಿಷ್ಯರಾದ ಆದಿಯಣ್ಣ ಮತ್ತು ಚೆಲುವಣ್ಣ ಭೂದಾನ ಪಡೆದರು. ಸ್ವಾರಸ್ಯದ ಸಂಗತಿ ಎಂದರೆ ಶಿವ ಮತ್ತು ವಿಷ್ಣು ದೇವಾಲಯಗಳ ಸ್ಥಾನಪತಿಗಳು ಈ ದತ್ತಿಗೆ ಸಾಕ್ಷಿಗಳಾಗಿದ್ದುದು ಹಾಗೂ ಅದರ ರಕ್ಷಣೆಗೆ ಹೊಣೆಗಾರರಾಗಿದ್ದರು.[೧೧೦]

ಎಣ್ಣೆಗುಂಬ ಶಾಸನದ ಕಾಲ ಸುಮಾರು ಕ್ರಿ.ಶ.೧೧೦ ಆಳುತ್ತಿದ್ದ ಅರಸ ಚೋಳ ಕುಲ್ಲೋತ್ತುಂಗ. ಈ ಶಾಸನವು ಹಲವು ತೆರಿಗೆಗಳನ್ನು ಹೆದರಿಸುತ್ತದೆ. ಮಡ ಪರಿಯಾ, ಪುಲುವರಿ, ವೆಟ್ಟುವರಿ, ವೆಂಗುವರಿ ಇತ್ಯಾದಿ. ಪುಲುವರಿಯು ಗೋಮಾಳದ ತೆರಿಗೆ. ಒಟ್ಟನಲ್ಲಿ ಚಾಮರಾಜನಗರ ತಾಲೂಕಿನ ಶಾಸನಗಳಲ್ಲಿ ಕಂಡುಬರುವ ತೆರಿಗೆಗಳಲ್ಲಿ ಸಿದ್ಧಾಯು, ಮನೆವಣ, ನೀರುಕೂಲಿ, ಬಿನುಗುದೆರೆ, ಕಾವಲಿಯ ಸುಂಕ, ಬಿಟ್ಟಿ, ಬಿಡಾರ, ಸೊಲ್ಲಗೆ, ಮಲ್ಲಿಗೆ ನಿಚಂಡಿ, ಮಂಡೆಗದ್ಯಾಣ ಮುಂತಾದ ಹಲವು ಬಗೆಯ ತೆರಿಗೆಗಳು ಸೇರಿವೆ. ಹಾಗೆಯೇ ಸಲಗೆ, ಖಂಡುಗ, ಗುಳಿ, ಕೊಳಗ, ಮಾನ, ಕಮ್ಮ ಅಥವಾ ಕಂಬ, ಮಾರು ಮುಂತಾದ ಅಳತೆಗಳೂ, ಹಾಗ ಪಣ ಗದ್ಯಾಣ, ಕಂಠೀರಾಯಿಗಳಿಗೆ, ಬೇಳೆ, ಕಾಸು ಮುಂತಾದ ನಾಣ್ಯಗಳ ಕೆಚ್ಚೆ, ಎರೆಯಮಣ್ಣು, ನೀರ್ಮಣ್ಣು ಇತ್ಯಾದಿ ಮಣ್ಣ ಬಗೆಗಳೂ ಶಾಸನಗಳಲ್ಲಿ ಉಕ್ತವಾಗಿರುವುದನ್ನು ಗಮನಿಸಬಹುದು.[೧೧೧]

ಕೆಲವು ರೀತಿಯ ಧಾರ್ಮಿಕ ನಂಬಿಕೆಗಳೂ ಶಾಸನಗಳಲ್ಲಿ ನಿರೂಪಿತವಾಗಿರುವುದನ್ನು ಗಮನಿಸಬಹುದು. ವೀರನೊಬ್ಬ ಮೃತನಾದಾಗ ಆತನ ಮಗ ನಿಕಗಾವುಂಡ ತಮ್ಮಯ್ಯಂಗೆ ಶೇಷಕ್ರಿಯಂಗೆಯ್ದು ಕಲ್ಲನ್ನು ನಿಲ್ಲಿಸಿದ ವಿಷಯ ಬಾಗಳಿ ಶಾಸನದಲ್ಲಿದೆ.[೧೧೨] ಕ್ರಿ.ಶ. ೧೬೭೫ರಲ್ಲಿ ಚಿಕ್ಕದೇವರಾಜ ವೊಡೆಯ ತನ್ನ ತಂದೆಗೆ ಗಯಾ ಕ್ಷೇತ್ರದಲ್ಲಿ ಶ್ರಾದ್ಧ ಮಾಡಿಸಿದನು.[೧೧೩]

ಹರದನಹಳ್ಳಿಯ ದಿವ್ಯಲಿಂಗೇಶ್ವರನ ಸನ್ನಿಧಿಯಲ್ಲಿ ನ್ಯಾಯ ವಿಚಾರಣೆಯೊಂದು ನಡೆಯಿತು. ಕುಂಬಾರರಿಗೆ ಕಾಲುಗುರು ಮೇಲು ಕಟ್ಟುಗಳ ಹಕ್ಕಿಲ್ಲವೆಂದು ನಾವಿದರು ಮತ್ತು ಅಗಸರು ವಾದಿಸಿದಾಗ ಕುಂಬಾರಸೆಟ್ಟಿಗಳು ದೇವರ ಸನ್ನಿಧಿಯಲ್ಲಿ ಬಿಸಿತುಪ್ಪದಲ್ಲಿ ಕೈ ಅದ್ದುವ ದಿವ್ಯದಲ್ಲಿ ಪಾಲ್ಗೊಂಡು ಗೆದ್ದರು ಅಮಾನುಷವೆನ್ನಿಸಿದರೂ ಇಂಥ ದಿವ್ಯ ಪದ್ಧತಿ ಈ ಪ್ರದೇಶದಲ್ಲಿಯೂ ಪ್ರಚಲಿತವಾಗಿತ್ತು.

ಕ್ರಿ.ಶ. ೧೫೪೦ ಹೊಂಡರಬಾಳು ಶಾಸನವು ಈ ಪ್ರದೇಶದಲ್ಲಿ ಉಂಟಾದ ತೀವ್ರ ಕ್ಷಾಮದ ಚಿತ್ರಣವನ್ನು ನೀಡುತ್ತೆ. ಪ್ರಾಯಶಃ ಒಂದು ಹಣಕ್ಕೆ ಏಳು ಮಾನ ಧಾನ್ಯ ಸಿಗುತ್ತಿತ್ತೆಂದು ತೋರುತ್ತದೆ. ಹಣ ೧ಕ್ಕೆ ೬ ಮಾನ ಮಟೆ ಮನುಶಮನುಶರ ತಿಂದರು. ಪುಟ್ಟ ಮಾತಿನಲ್ಲಿರುವ ಬರದ ತೀವ್ರತೆಯನ್ನು ನಮ್ಮ ಮನಸ್ಸನ್ನು ಸೃಷ್ಟಿಸುತ್ತದೆ.

ಕ್ರಿ.ಶ. ೧೫೪೮ರ ಹೊಂಗನೂರು ಶಾಸನದಲ್ಲಿ ಭೂಮಿ ಸಾಗುವಳಿಗೆ ಸಂಬಂಧಿಸಿದಂತೆ ಕೆಲವು ನಿಬಂಧನೆಗಳನ್ನು ಕೆಲವು ನಿಬಂಧನೆಗಳನ್ನು ಸೂಚಿಸಿದೆ. ಸ್ಥಳೀಯರನ್ನು ಹೊರತುಪಡಿಸಿ ಬೇರೆಯಾರಾದರೂ ವ್ಯವಸಾಯ ಮಾಡಬೇಕಾದರೆ ಮಾಗಣೆಕಾರ, ಪಾರುಪತ್ಯಗಾರ ಅಥವಾ ಗೌಡಸೇನಬೋವರಿಂದ ಪಟ್ಟೆ ಪಡೆದುಕೊಳ್ಳಬೇಕಿತ್ತು. ಹಾಗೂ ವಿಧಿಸಿದ ನಿಬಂಧನೆಗಳಿಗೆ ಅನುಗುಣವಾಗಿ ಕೃಷಿ ಕೆಲಸ ಮಾಡಬೇಕಿತ್ತು. ಅನಧಿಕೃತ ಸಾಗುವಳಿಯನ್ನು ತಪ್ಪಿಸಲು ಕ್ರಮ ಕೈಗೊಳ್ಳಲಾಯಿತು.[೧೧೪]

ಕ್ರಿ.ಶ. ೧೬ನೆಯ ಶತಮಾನದಲ್ಲಿ ತಮ್ಮಣ್ಣನಾಯಕ ಎಂಬ ಅಧಿಕಾರಿಯ ಭೂಮಿಯನ್ನು ಗುತ್ತಿಗೆಯಾಗಿ ಪಡೆದ. ಆದರೆ ಹದಿನಾಡ ರಾಮನಾಯಕನಿಗೆ ಆತ ನಿರ್ದಿಷ್ಟ ಮೊತ್ತದ ವಾರ್ಷಿಕ ಕಂದಾಯ ಸಲ್ಲಿಸಬೇಕಿತ್ತು. ದುರ್ದೈವದಿಂದ ಈ ಶಾಸನದ ವಿವರಗಳು ದೊರೆಯುವುದಿಲ್ಲ.[೧೧೫]

ಬಾಗಳಿಯ ಭುಜಂಗೇಶ್ವರ ದೇವಾಲಯದ ಅರ್ಚಕ ಕೂಚಿ ಭಟಾರಕನಿಗೆ ಕೊಟ್ಟ ದತ್ತಿಯನ್ನು ಕ್ರಿ.ಶ. ೧೧ನೆಯ ಶತಮಾನದ ಶಾಸನ ಉಲ್ಲೇಖಿಸುತ್ತದೆ. ಈತ ನೀರ್ಗುದದ ಗೊರವನೆಂದು ಮತ್ತು ಮೊದಲ ಬಾರಿಗೆ ದಾನಿಗಳಿಂದ ನೇಮಿತನಾದವನೆಂದು ಶಾಸನವು ಸಾರುತ್ತದೆ. ಈತ ದೇವಾಲಯದ ಆಡಳಿತ ನಿರ್ವಹಣೆಯನ್ನು ನೋಡಿಕೊಳ್ಳಬೇಕಿತ್ತು. ಹತ್ತು ಮಂದಿ ಪಾತ್ರದವರ ಯೋಗ್ಯಕ್ಷೇಮದ ಜವಾಬ್ದಾರಿಯನ್ನು ವಹಿಸಬೇಕಿತ್ತು.[೧೧೬] ಸುಮಾರು ೧೨-೧೩ನೆಯ ಶತಮಾನದ ಸಿಂಗಪುರ ಶಾಸನವು ನಂಬಿ, ಪಾರಿಚಾರಕ, ಗಣಿಕ, ಹನವಡೆಗ, ದವನಿಗ, ಹಾಡುಗಾರ, ವಾದ್ಯವಾದಕ, ಪಾತ್ರದವರು ಮುಂತಾದವರನ್ನು ಉಲ್ಲೇಖಿಸುವುದರಿಂದ ಆ ಕಾಲದ ದೇವಾಲಯವು ಆರ್ಥಿಕ, ಸಾಮಾಜಿಕ ಹಾಗೂ ಧಾರ್ಮಿಕ ಅಂಶಗಳನ್ನೊಳಗೊಂಡ ಒಂದು ಸಂಕೀರ್ಣ ಸಂಸ್ಥೆಯಾಗಿತ್ತೆಂದು ತಿಳಿಸುತ್ತದೆ.[೧೧೭]

ಭಾರತದ ಬಹುಪಾಲು ಶಾಸನಗಳು ವಾಸ್ತವವಾಗಿ ದಾನ ಶಾಸನಗಳು. ಸಂಸ್ಥೆಗಳಿಗೆ ಹಾಗೂ ವ್ಯಕ್ತಿಗಳಿಗೆ ಬೇರೆ ಬೇರೆ ಕಾರಣಗಳಿಗಾಗಿ ನೀಡಲಾದ ದಾನ ವಿಷಯವೇ ಶಾಸನಗಳ ಮೂಲವಸ್ತು. ದಾನಗಳ ಹಾಗೂ ಅವುಗಳ ಕಾರಣಗಳ ವೈವಿಧ್ಯ ಬೆರಗನ್ನು ಉಂಟುಮಾಡುತ್ತದೆ. ಚಾಮರಾಜನಗರ ತಾಲೂಕಿನ ಕೆಲವು ಶಾಸನಗಳನ್ನು ಈ ದೃಷ್ಟಿಯಿಂದ ಸ್ಥೂಲವಾಗಿ ಸಮೀಕ್ಷಿಸಬಹುದಾಗಿದೆ.

## ಅಡಿಟಿಪ್ಪಣಿಗಳು

೧. ಎಫಿಗ್ರಾಫಿಯಾ ಕರ್ನಾಟಿಕಾ, ಸಂಪುಟ, ೪, ಚಾಮರಾಜನಗರ, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಪು.೨೨೦-೨೨೧

೨. ಎಫಿಗ್ರಾಫಿಯಾ ಕರ್ನಾಟಿಕಾ, ಸಂಪುಟ ೪, ಚಾಮರಾಜನಗರ, ಪು.೭೧-೭೨

೩. ಹೊಮ್ಮ ೧೪೭, ಚಾಮರಾಜನಗರ, ಪು.೯೦

೪. ಅಂಚವಾಡಿ ೨೫೬, ಚಾಮರಾಜನಗರ, ಪು.೧೫೭-೧೫೮

೫. ಹೊಂಗನೂರು ೧೬೫, ಚಾಮರಾಜನಗರ, ಪು.೧೦೧

೬. ಬಸವಾಪುರ ೨೩೭, ಚಾಮರಾಜನಗರ, ಪು.೧೪೫-೧೪೬

೭. ಕೆರೆಹಳ್ಳಿ ೩೫೪, ಚಾಮರಾಜನಗರ, ಪು.೨೨೬-೨೩೬

೮. ಹೆಗ್ಗೋಠರ ೩೮೫, ಚಾಮರಾಜನಗರ, ಪು.೨೨೫

೯. ಮಂಗಲ, ೧೩೮, ಚಾಮರಾಜನಗರ, ಪು.೮೩

೧೦. ಎಲಕ್ಕೂರು ೭೯, ಚಾಮರಾಜನಗರ, ಪು.೪೬-೪೭

೧೧. ಎಲಕ್ಕೂರು ೮೨, ಚಾಮರಾಜನಗರ, ಪು.೪೮-೪೯

೧೨. ಎಲಕ್ಕೂರು ೩೪೭, ಚಾಮರಾಜನಗರ, ಪು.೨೨೦-೨೨೪

೧೩. ಸೋಮಸಮುದ್ರ ೪೦೪, ಚಾಮರಾಜನಗರ, ಪು.೨೬೫

೧೪. ಕೆಂಪನಪುರ ೧೧೮, ಚಾಮರಾಜನಗರ, ಪು.೮೭-೮೮

೧೫. ಹೊಂಗನೂರು ೧೬೭, ಚಾಮರಾಜನಗರ, ಪು.೧೦೧-೧೦೨

೧೬. ಕಿರುಗೊತಾರ ೪೦೭, ಚಾಮರಾಜನಗರ, ಪು.೨೬೬

೧೭. ಮಂಗಲ ೧೩೨, ಚಾಮರಾಜನಗರ, ಪು.೭೬-೭೮

೧೮. ಮಂಗಲ ೧೩೫, ಚಾಮರಾಜನಗರ, ಪು.೮೦-೮೨

೧೯. ಕೆಂಪನಪುರ ೧೪೬, ಚಾಮರಾಜನಗರ, ಪು.೮೮-೮೯

೨೦. ಆಲೂರು ೧೮೬, ಚಾಮರಾಜನಗರ ಪು.೧೧೩-೧೧೫

೨೧. ಏಣ್ಣೆಗುಂಬ ೩೦೩, ಚಾಮರಾಜನಗರ, ಪು.೧೮೬-೧೮೭

೨೨. ಚಾಮರಾಜನಗರ ೩, ಚಾಮರಾಜನಗರ, ಪು.೭-೮

೨೩. ತೆಳನೂರು ೧೩೨, ಚಾಮರಾಜನಗರ, ಪು.೭೦

೨೪. ಹರಳಕೋಟೆ ೨೨೨, ಚಾಮರಾಜನಗರ, ಪು.೧೩೫-೧೭೬

೨೫. ಕುಲಗಾಣ ೩೪೩, ಚಾಮರಾಜನಗರ, ಪು.೨೧೭-೨೧೮

೨೬. ಎಡೂರು ೧೨೮, ಚಾಮರಾಜನಗರ, ಪು.೭೩-೭೪

೨೭. ಕಟ್ಟವಾಡಿ ೩೧೦, ಚಾಮರಾಜನಗರ, ಪು.೨೦೩

೨೮. ಹೊಮ್ಮ ೧೪೯, ಚಾಮರಾಜನಗರ, ಪು.೯೨-೯೩

೨೯. ಅಂಚವಾಡಿ ೨೫೩, ಚಾಮರಾಜನಗರ, ಪು.೧೫೫

೩೦. ಆಲದೂರು ೧೦೮, ಚಾಮರಾಜನಗರ, ಪು.೬೨

೩೧. ಆಲೂರು ೧೯೫, ಚಾಮರಾಜನಗರ, ಪು.೧೨೦-೧೨೧

೩೨. ಚಾಮರಾಜನಗರ ೬೨, ಚಾಮರಾಜನಗರ, ಪು.೩೮-೩೯

೩೩. ಕೊತ್ತಲವಾಡಿ ೩೦೯, ಚಾಮರಾಜನಗರ, ಪು.೨೦೧-೨೦೨

೩೪. ಹರದನಹಳ್ಳಿ ೨೬೩, ಚಾಮರಾಜನಗರ, ಪು.೧೬೨

೩೫. ಹರದನಹಳ್ಳಿ ೩೭೫ ಮತ್ತು ೨೭೮, ಚಾಮರಾಜನಗರ, ಪು.೧೭೦-೧೭೧

೩೬. ಕಿಲಗೆರೆ ೩೦೬, ಚಾಮರಾಜನಗರ, ಪು.೧೯೮-೨೦೦

೩೭. ಮಲದೇವನಹಳ್ಳಿ ೨೨೭, ಚಾಮರಾಜನಗರ, ಪು.೧೩೮

೩೮. ಹರಳಕೋಟೆ ೨೨೧, ಚಾಮರಾಜನಗರ, ಪು.೧೩೫

೩೯. ಹರದನಹಳ್ಳಿ ೨೬೪ ಮತ್ತು ೨೬೦, ಚಾಮರಾಜನಗರ, ಪು.೧೫೯-೧೬೦, ೧೬೩

೪೦. ಹೊಮ್ಮ ೧೪೮, ಚಾಮರಾಜನಗರ, ಪು.೯೦-೯೨

೪೧. ಹರದನಹಳಿ ೨೬೧, ಚಾಮರಾಜನಗರ, ಪು.೧೬೦-೧೬೧

೪೨. ಮಲೆಯೂರು ೩೫೫ ಮತ್ತು ೭೨, ಚಾಮರಾಜನಗರ, ಪು.೨೩೯, ೨೪೬-೨೪೮

೪೩. ಹರದನಹಳ್ಳಿ ೨೬೫, ಚಾಮರಾಜನಗರ, ಪು.೧೬೧-೧೬೨, ೧೪೮

೪೪. ಭಂಡಿಗೆರೆ ೨೪೦, ಚಾಮರಾಜನಗರ, ಪು.೧೪೨-೧೪೩

೪೫. ಹೊಂಗನೂರು ೧೬೨, ಚಾಮರಾಜನಗರ, ಪು.೯೯-೧೦೦

೪೬. ಹರಳಕೋಟೆ ೩೨೪, ಚಾಮರಾಜನಗರ, ಪು.೧೩೭-೧೩೮

೪೭. ಹೆಗ್ಗೋಠರ ೨೧೭, ಚಾಮರಾಜನಗರ, ಪು.೧೩೭-೧೩೮

೪೮. ನಂಜದೇವನಪುರ ೪೦೦, ಚಾಮರಾಜನಗರ, ಪು.೨೬೩

೪೯. ಉಮ್ಮತ್ತೂರು ೪೯, ಚಾಮರಾಜನಗರ, ಪು.೫೧

೫೦. ದಾಸನಪುರ ೩೦೨, ಚಾಮರಾಜನಗರ, ಪು.೧೯೬-೧೯೭

೫೧. ಹರದನಹಳ್ಳಿ ೨೬೯, ಚಾಮರಾಜನಗರ, ಪು.೧೬೬

೫೨. ಚಾಮರಾಜನಗರ ೨೫೪, ೯೫, ೨೧೭, ೩೧೫, ಚಾಮರಾಜನಗರ, ಪು.೧೫೬-೧೫೭, ೫೭-೫೪, ೧೩೨-೧೩೩, ೨೪೦

೫೩. ಕಾಗಲವಾಡಿ ೭೭, ಚಾಮರಾಜನಗರ, ಪು.೧೦೭-೧೦೮

೫೪. ಮೇಲುಮಾಳ ೨೧೬, ಚಾಮರಾಜನಗರ, ಪು.೧೩೧-೧೩೨

೫೫. ಉಮ್ಮತ್ತೂರು ೨೫೬, ಚಾಮರಾಜನಗರ, ಪು.೧೫೭

೫೬. ಚಾಮರಾಜನಗರ ೧, ಚಾಮರಾಜನಗರ, ಪು.೫-೭

೫೭. ಕಿಲಗೆರೆ ೩೦೭, ಚಾಮರಾಜನಗರ, ಪು.೨೦೦-೨೦೧

೫೮. ಹೊಂಗನೂರು ೧೭೦, ಚಾಮರಾಜನಗರ, ಪು.೧೦೩

೫೯. ಹೊಂಗನೂರು ೧೬೯, ೧೭೧, ಚಾಮರಾಜನಗರ, ಪು.೧೦೨-೧೦೪

೬೦. ಕೇತಹಳ್ಳಿ ೩೭೯, ಚಾಮರಾಜನಗರ, ಪು.೨೫೦-೨೫೧

೬೧. ಚಾಮರಾಜನಗರ ೧೧, ಚಾಮರಾಜನಗರ, ಪು.೧೨-೧೩

೬೨. ವೆಂಕಟಯ್ಯನಛತ್ರ ೨೪೯, ಚಾಮರಾಜನಗರ, ಪು.೧೫೨-೧೫೩

೬೩. ಹರದನಹಳ್ಳಿ ೨೯೧, ಚಾಮರಾಜನಗರ, ಪು.೧೭೬-೧೮೬

೬೪. ಚಾಮರಾಜನಗರ ೧೧, ಚಾಮರಾಜನಗರ, ಪು.೧೨-೧೩

೬೫. ಹಳೇ ಸರಗೂರು ೧೯೭, ಚಾಮರಾಜನಗರ, ಪು.೧೨೨-೧೨೩

೬೬. ಚಾಮರಾಜನಗರ ೫, ಚಾಮರಾಜನಗರ, ಪು.೮-೧೦

೬೭. ಅಂಚವಾಡಿ ೨೪೮, ಚಾಮರಾಜನಗರ, ಪು.೧೫೨

೬೮. ಎಲಕ್ಕೂರು ೮೧, ಚಾಮರಾಜನಗರ, ಪು.೪೭-೪೮

೬೯. ಹೊಂಗನೂರು ೧೬೮, ಚಾಮರಾಜನಗರ, ಪು.೧೦೨

೭೦. ಮಲ್ಲೇದೇವನಹಳ್ಳಿ ೨೨೮, ಚಾಮರಾಜನಗರ, ಪು.೧೩೯

೭೧. ಮರೆಯಾಲ ೬೬, ಚಾಮರಾಜನಗರ, ಪು.೪೦

೭೨. ಕರಿನಂಜನಪುರ ೨೨೫, ಚಾಮರಾಜನಗರ, ಪು.೧೩೮

೭೩. ಕೆಂಪನಪುರ ೨೩೨, ಚಾಮರಾಜನಗರ, ಪು.೧೪೨

೭೪. ಹೆಗ್ಗೋಠಾರ ೩೮೫, ಚಾಮರಾಜನಗರ, ಪು.೨೫೫

೭೫. ಪುಣಜೂರು ೨೪೧, ಚಾಮರಾಜನಗರ, ಪು.೧೪೯

೭೬. ಚಾಮರಾಜನಗರ ೨, ಚಾಮರಾಜನಗರ, ಪು.೫

೭೭. ಹೆಗ್ಗವಾಡಿ ೮೫, ಚಾಮರಾಜನಗರ, ಪು.೫೦

೭೮. ಕುದೇರು ೭೪, ಚಾಮರಾಜನಗರ, ಪು.೪೪

೭೯. ತೆಳ್ಳನೂರು ೧೨೧, ಚಾಮರಾಜನಗರ, ಪು.೭೯

೮೦. ತೆಳ್ಳನೂರು ೧೨೦, ಚಾಮರಾಜನಗರ, ಪು.೯

೮೧. ಚನ್ನಪ್ಪನಪುರ ೨೪೭, ಚಾಮರಾಜನಗರ, ಪು.೧೫೧

೮೨. ಹರದನಹಳ್ಳಿ ೨೭೯, ಚಾಮರಾಜನಗರ, ಪು.೧೭೨

೮೩. ರಾಮಸಮುದ್ರ ೨೭೧, ಚಾಮರಾಜನಗರ, ಪು.೧೬೭-೧೬೮

೮೪. ರಾಮಸಮುದ್ರ ೨೭೩, ಚಾಮರಾಜನಗರ, ಪು.೧೬೮-೧೬೯

೮೫. ಉಮ್ಮತ್ತೂರು ೧೦೦, ಚಾಮರಾಜನಗರ, ಪು.೫೬

೮೬. ಅಮಚವಾಡಿ ೨೪೮, ಚಾಮರಾಜನಗರ, ಪು.೩೨೦

೮೭. ಉಮ್ಮತ್ತೂರು ೨೯೨, ಚಾಮರಾಜನಗರ, ಪು.೧೬೭-೧೮೯

೮೮. ಉಮ್ಮತ್ತೂರು ೨೨೯, ಚಾಮರಾಜನಗರ, ಪು.೧೩೯

೮೯. ದೊಡ್ಡರಾಯಪೇಟೆ ೨೧೭, ಚಾಮರಾಜಸಗರ, ಪು.೧೩೨-೧೩೩

೯೦. ಬಸವನಪುರ ೨೧೬, ಚಾಮರಾಜನಗರ, ಪು.೧೩೧-೧೩೨

೯೧. ಹುಲಿಯೂರು ೧೬೩, ಚಾಮರಾಜನಗರ, ಪು.೧೦೦

೯೨. ಹೊಮ್ಮ ೧೪೭, ಚಾಮರಾಜನಗರ, ಪು.೯೦

೯೩. ಚಾಮರಾಜನಗರ ೪, ಚಾಮರಾಜನಗರ, ಪು.೮

೯೪. ಸಂತೇಮರಳ್ಳಿ ೧೨೭, ಚಾಮರಾಜನಗರ, ಪು.೭೨-೭೩

೯೫. ಹರಳಕೋಟೆ ೧೩೨, ಚಾಮರಾಜನಗರ, ಪು.೭೦

೯೬. ಉಮ್ಮತ್ತೂರು ೮೯, ಚಾಮರಾಜನಗರ, ಪು.೫೧-೫೨

೯೭. ಹೊಂಗನೂರು ೧೭೧, ಚಾಮರಾಜನಗರ, ಪು.೧೦೪

೯೮. ಕೆಬ್ಬೆಪುರ ೨೧೨, ಚಾಮರಾಜನಗರ, ಪು.೧೨೯

೯೯. ತೆರಕಣಾಂಬಿ ೩೦೧, ಚಾಮರಾಜನಗರ, ಪು.೧೯೪-೧೯೬

೧೦೦. ಗೋಪಿನಾಥ ೩೦೬, ಚಾಮರಾಜನಗರ, ಪು.೧೯೮-೨೦೦

೧೦೧. ಯಡತಲೆ ೩೧೦, ಚಾಮರಾಜನಗರ, ಪು.೨೦೩

೧೦೨. ಹರನದಹಳ್ಳಿ ೨೦೬, ಚಾಮರಾಜನಗರ, ಪು.೧೬೪

೧೦೩. ಅಮಚವಾಡಿ ಬೆಟ್ಟ ೨೪೬, ಚಾಮರಾಜನಗರ, ಪು.೧೫೧

೧೦೪. ವೆಂಕಟಯ್ಯನ ಛತ್ರ ೨೪೯, ಚಾಮರಾಜನಗರ, ಪು.೧೫೨-೧೫೩

೧೦೫. ಬಾಳ್ಗಳ್ಳು ೭೯, ಚಾಮರಾಜನಗರ, ಪು.೪೬

೧೦೬. ಬಾಳ್ಗಳ್ಳು ೭೫, ಚಾಮರಾಜನಗರ, ಪು.೪೪

೧೦೭. ಬಾಳ್ಗಳ್ಳು ೭೬, ಚಾಮರಾಜನಗರ, ಪು.೧೫೫

೧೦೮. ಬಾಳ್ಗಳ್ಳು ೭೯, ಚಾಮರಾಜನಗರ, ಪು.೧೩೯-೧೪೦

೧೦೯. ಹೊಂಗನೂರು ೧೫೯, ಚಾಮರಾಜನಗರ, ಪು.೯೭-೯೮

೧೧೦. ಆಲೂರು ೧೯೫, ಚಾಮರಾಜನಗರ, ಪು.೧೨೦-೧೨೧

೧೧೧. ಎಣ್ಣೆಗುಂಬ ೩೦೩, ಚಾಮರಾಜನಗರ, ಪು.೧೯೬-೧೯೭

೧೧೨. ಬಾಗಳಿ ೧೧೭, ಚಾಮರಾಜನಗರ, ಪು.೬೭-೬೮

೧೧೩. ಚಾಮರಾಜನಗರ ೧೧, ಚಾಮರಾಜನಗರ, ಪು.೧೯

೧೧೪. ಹೊಂಗನೂರು ೧೬೧, ಚಾಮರಾಜನಗರ, ಪು.೯೯

೧೧೫. ಚಾಮರಾಜನಗರ ೧೫೩, ಚಾಮರಾಜನಗರ, ಪು.೯೪-೯೫

೧೧೬. ಬಾಗಳಿ ೧೧೪, ಚಾಮರಾಜನಗರ, ಪು.೬೫-೬೬

೧೧೭. ಸಿಂಗನಪುರ ೧೪೩, ಚಾಮರಾಜನಗರ, ಪು.೮೪-೮೫

# ಅಧ್ಯಾಯ ೫

# ಚಾಮರಾಜನಗರ ತಾಲೂಕಿನ ದೇವಾಲಯಗಳು

ಧರ್ಮಕಾರ್ಯಗಳ ಬಳಕೆಗೆ ನಿರ್ಮಿತವಾದ ಕಟ್ಟಡ ವಿನ್ಯಾಸವನ್ನು ಧಾರ್ಮಿಕ ವಾಸ್ತುಶಿಲ್ಪ ಎಂದು ಗುರುತಿಸಬಹುದು. ಭಾರತದಲ್ಲಿ ವಿವಿಧ ಧರ್ಮಕ್ಕೆ ಸಂಬಂಧಿಸಿದಂತೆ ವಿಭಿನ್ನ ಕಟ್ಟಡಗಳನ್ನು ನಿರ್ಮಿಸಲಾಗಿದೆ. ಅದು ಆ ಜನರ ದೈವ ಹಾಗೂ ಧರ್ಮದ ತಿಳುವಳಿಕೆ ನೀಡುತ್ತದೆ. ದೈವದ ಕಲ್ಪನೆ ಪೂಜಾ ವಿಧಾನದ ತಂತ್ರ ಬೆಳೆದಂತೆಲ್ಲಾ ವಾಸ್ತುಶಿಲ್ಪವೂ ವಿಕಾಸಗೊಳ್ಳುತ್ತ ಸಾಗಿತು. ಒಂದು ಪ್ರದೇಶದ ವಾಸ್ತು ಕಲೆಯು, ಆ ವಾಸ್ತು ನಿರ್ಮಾಣಕ್ಕೆ ಕಾರಣವಾದ ಜನತೆಯ ಮನೋಧರ್ಮಗಳನ್ನೂ ಮನೋವಿಲಾಸಗಳನ್ನೂ ಪ್ರತಿಬಿಂಬಿಸುತ್ತವೆ.

ಮಾನವ ತನ್ನ ಸುತ್ತಲಿನ ಪರಿಸರದಲ್ಲಾಗುವ ಬದಲಾವಣೆಗಳ ಹಿಂದೆ ಯಾವುದೇ ಒಂದು ಅನಂತ ಮತ್ತು ಅಗೋಚರ ಶಕ್ತಿ ಇದೆ ಎಂದು ನಂಬಿ ಅದಕ್ಕೆ ಒಂದು ರೂಪವನ್ನು ಕೊಟ್ಟನು. ಆ ರೂಪಗಳ ರಕ್ಷಣಾರ್ಥವಾಗಿ ಪ್ರಾರಂಭದಲ್ಲಿ ನೈಸರ್ಗಿಕ ಗುಹಾಲಯಗಳನ್ನು ಬಳಸಿಕೊಂಡ, ತರುವಾಯ ಪ್ರತ್ಯೇಕ ಆಲಯಗಳನ್ನು ನಿರ್ಮಿಸಲು ಪ್ರಾರಂಭಿಸಿದನು. ಆ ಪರಿಕಲ್ಪನೆಯೇ ದೇವಾಲಯಗಳ ನಿರ್ಮಾಣಕ್ಕೆ ನಾಂದಿಯಾಯಿತು. ಆರಂಭದಲ್ಲಿ ದೇವಾಲಯವು ದೇವರ ಪ್ರತಿಮೆಯನ್ನು ಪ್ರತಿಷ್ಠಾಪಿಸಲು ಬೇಕಾದ ಒಂದು ಚಿಕ್ಕ ಮಂಟಪದಷ್ಟಿತ್ತು. ಕಾಲಾನುಕ್ರಮದಲ್ಲಿ ಪೂಜಾ ವಿಧಾನ ಮತ್ತು ಆಚರಣೆಗಳು ಹೆಚ್ಚಿದಂತೆ ಅದಕ್ಕೆ ತಕ್ಕಂತೆ ದೇವಾಲಯವು ವಿಸ್ತೃತ ರೂಪವನ್ನು ಪಡೆಯಲಾರಂಭಿಸಿತ್ತು.[೧]

## ದೇಸೇಶ್ವರ ದೇವಾಲಯ, ಆಲೂರು

ಈ ತಾಲೂಕಿನಲ್ಲಿ ಪ್ರಾಚೀನ ಕಾಲದಿಂದ ದೇವಾಲಯಗಳ ನಿರ್ಮಾಣ ನಡೆಯುತ್ತ ಬಂದಿದೆ. ನೈಸರ್ಗಿಕವಾಗಿ ಮತ್ತು ಐತಿಹಾಸಿಕವಾಗಿ ಸಂಪತ್ಭರಿತವಾಗಿರುವ ಈ ತಾಲೂಕಿ ಆಲೂರು ಗ್ರಾಮದಲ್ಲಿ ಚೋಳ ವಾಸ್ತುಶೈಲಿಗೆ ಸಂಬಂಧಪಟ್ಟಂತೆ ಮೂರು ದೇವಸ್ಥಾನಗಳು ಕಂಡುಬರುತ್ತವೆ. ಅವುಗಳೆಂದರೆ ಅರ್ಕೇಶ್ವರ, ದೇಸೇಶ್ವರ ಮತ್ತು ಈಶ್ವರ ದೇವಾಲಯಗಳು.

ದೇಸೇಶ್ವರ ದೇವಾಲಯ ಸಂಪೂರ್ಣ ಭಗ್ನಗೊಂಡ ಕೇವಲ ಅವಶೇಷಗಳು ಮಾತ್ರ ಉಳಿದಿವೆ. ಈಶ್ವರ ದೇವಸ್ಥಾನ ಭಾಗಶಃ ಹಾಳಾಗಿದ್ದು, ಶೋಚನೀಯ ಸ್ಥಿತಿಯಲ್ಲಿ ಕಲ್ಲುಗಂಬಗಳ ಮೇಲೆ ನಿಂತಿದೆ. ಅರ್ಕೇಶ್ವರ ದೇವಾಲಯ ಮಾತ್ರ ಮೂಲ ಅಧಿಷ್ಠಾನದ ಮೇಲೆಯೇ ಪುನರ್ ನಿರ್ಮಾಣವಾಗಿದ್ದು ಹೊಸ ಶಿಲಾಫಲಕಗಳನ್ನೂ ಸೇರಿಸಿಕೊಂಡು ನಿರ್ಮಿಣವಾಗಿದೆ. ಈ ಎಲ್ಲಾ ದೇವಸ್ಥಾನಗಳಿಗೂ ಆಯತಾಕಾರದ ತಲವಿನ್ಯಾಸವಿದ್ದು, ಮೂಲತಃ ಗರ್ಭಗೃಹದ ಮೇಲೆ ದ್ರಾವಿಡ ವಿಮಾನವಿದ್ದಿರಬಹುದಾದರೂ ಈಗ ಯಾವ ಅವಶೇಷಗಳು ಕಂಡುಬರುವುದಿಲ್ಲ.

ಈ ದೇವಸ್ಥಾನಗಳಲ್ಲಿ ದೇಸೇಶ್ವರ ದೇವಸ್ಥಾನವು ಪ್ರಾಯಶಃ ಅತ್ಯಂತ ಪ್ರಾಚೀನವೆಂದು ತೋರುತ್ತದೆ. ಗಂಗರ ದೊರೆ ಎರಡನೇ ರಾಚಮಲ್ಲನ ಕಾಲದಲ್ಲಿ ನಿರ್ಮಾಣವಾಗಿದ್ದು, ಈ ದೇವಸ್ಥಾನಕ್ಕೆ ರಾಜೇಂದ್ರ ಚೋಳನ ಕಾಲದಲ್ಲಿ(ಕ್ರಿ.ಶ. ೧೦೫೪-೫೫) ಹಲವಾರು ದತ್ತಿಗಳನ್ನು ನೀಡಿದ ಉಲ್ಲೇಖಗಳಿವೆ.[೨]

ಮುಮ್ಮಡಿ ಚೋಳನು ತಿರುಮಲಸ್ಥಾನ ಉದಯರ್ ದೇವರಿಗೆ ಅಂದರೆ ಮೂಲಸ್ಥಾನೇಶ್ವರ ಶಿವನಿಗೆ ದತ್ತಿಗಳನ್ನು ನೀಡಿದ ವಿವರಗಳು ದೊರೆಯುತ್ತವೆ. ಸರಳವಾದ ಗರ್ಭಗೃಹ, ಶುಕನಾಸಿ ಮತ್ತು ನವರಂಗ ಹಾಗೂ ಮುಖಮಂಟಪವನ್ನು ಹೊಂದಿ ಈ ಇಂದು ಸಂಪೂರ್ಣವಾಗಿ ನಾಶವಾಗಿ ಅದೇ ಸ್ಥಳದಲ್ಲಿ ಹೊಸದಾಗಿ ಕಲ್ಲು ದಿಂಡಿನಿಂದ ದೇವಸ್ಥಾನ ನಿರ್ಮಾಣವಾಗಿದೆ. ಹೀಗಾಗಿ ಇದನ್ನು ಕುರಿತಂತೆ ಹೆಚ್ಚಾದ ವಿವರಣೆ ಸಾಧ್ಯವಿಲ್ಲ. ದೇವಸ್ಥಾನದ ಮುಂಭಾಗದಲ್ಲಿ ಬಿದ್ದಿರುವ ಅಷ್ಟಮುಖ ಕಂಬಗಳು, ಪಲಕ(ಅಬ್ಯಾಕಸ್) ಗಳು ಒಂದು ಮಂಟಪದಲ್ಲಿ ನಿಲ್ಲಿಸಿರುವ ವಿವಿಧ ಮುಖಗಳ ವೃತ್ತಾಕಾರದ ದಿಂಡುಗಳುಳ್ಳ ಕಂಬಗಳು. ಕುಂಭದಂತಿರುವ ಮೇಲ್ಭಾಗ ಹಾಗೂ ಕಂಬದ ದಿಂಡಿನಲ್ಲಿ ಅಷ್ಟಮುಖ ಪಟ್ಟಿಯಲ್ಲಿ ಕಂಡುಬರುವ ವಿವಿಧ ಕೆತ್ತನೆಗಳು ಈ ದೇವಸ್ಥಾನದ ಪ್ರಾಚೀನತೆಯನ್ನು ಮತ್ತು ಪ್ರಾಮುಖ್ಯತೆಯನ್ನು ತೋರುತ್ತದೆ. ಇವುಗಳು ಗಂಗ-ಚೋಳ ಮಿಶ್ರಣ ಶೈಲಿಯಲ್ಲಿ ಕಂಡುಬರುವ ಶಿಲ್ಪಗಳೆನ್ನುವುದರಲ್ಲಿ ಸಂದೇಹವಿಲ್ಲ.

### ಅರ್ಕೇಶ್ವರ ದೇವಾಲಯ, ಆಲೂರು

ಹೆಚ್ಚು ಕಡಿಮೆ ದೇಸೇಶ್ವರ ದೇವಾಲಯದಂತೆ ಇರುವ ಅರ್ಕೇಶ್ವರ ದೇವಸ್ಥಾನ ಬಹುಶಃ ಕ್ರಿ.ಶ. ೧೧ನೇ ಶತಮಾನದ ಆದಿಭಾಗದಲ್ಲಿ ನಿರ್ಮಾಣವಾಗಿದೆ ಎಂದು ತೋರುತ್ತದೆ. ಈ ದೇವಸ್ಥಾನದ ಅಧಿಷ್ಠಾನದ ಮೇಲೆ ಕಂಡುಬರುವ ತಮಿಳು ಗ್ರಂಥ ಲಿಪಿಯಲ್ಲಿರುವ ಶಾಸನಗಳು ಇದಕ್ಕೆ ಪೂರಕ ಸಾಕ್ಷಿಗಳಾಗಿವೆ.[೩] ಚೌಕಾಕಾರದ ಗರ್ಭಗೃಹ, ಅಂತರಾಳ ಹಾಗೂ ನವರಂಗವನ್ನು ಈ ದೇವಸ್ಥಾನ ಹೊಂದಿದೆ. ಈ ದೇವಸ್ಥಾನದ ಅಧಿಷ್ಠಾನವು ಇತರ ದಿಂಡುಗಳ ಜೊತೆಗೆ ತ್ರಿಪಟ್ಟ ಕುಮುದವನ್ನು ಹೊಂದಿದೆ. ಸರಳವಾದ ಭಿತ್ತಿಯನ್ನು ಹೊಂದಿದ್ದು ಇಲ್ಲಿಯೂ ಕೂಡ ಶಿಖರವಿರುವುದಿಲ್ಲ. ನವರಂಗದ ಮುಂಭಾಗದಲ್ಲಿ ಪ್ರಾಯಶಃ ಏನೊಂದು ಬದಲಾವಣೆ ಕಾಣದ ನಂದಿ ಮಂಟಪವಿದೆ. ದೇವಸ್ಥಾನದ ಹೊರಭಾಗ ಅತ್ಯಂತ ಸರಳವಾಗಿದ್ದು, ಯಾವುದೇ ತರಹದ ಕೋಷ್ಠವಾಗಲಿ ಅರೆ ಕಂಬವಾಗಲಿ ಕಂಡುಬರುವುದಿಲ್ಲ. ನವರಂಗದಲ್ಲಿ ಮಾತ್ರ ಸಾಲಂಕೃತವಾದ ಕಥಾನಕ ಶಿಲ್ಪಗಳನ್ನುಳ್ಳ ಕಂಬಗಳಿವೆ. ಈ ದೇವಸ್ಥಾನದ ನವರಂಗದ ಭುವನೇಶ್ವರಿಯಲ್ಲಿ ಅಷ್ಟದಿಕ್ಪಾಲಕರ ಶಿಲ್ಪವಿದ್ದು, ಮಧ್ಯದಲ್ಲಿ ನಟರಾಜನ ಶಿಲ್ಪವಿದೆ.

ಈ ದೇವಸ್ಥಾನವು ವಾಸ್ತುಕೃತಿಗಿಂತ ಶಿಲ್ಪಗಳಲ್ಲಿ ಪ್ರಧಾನವಾಗಿದೆ. ಬಾಗಿಲುವಾಡ, ಭುವನೇಶ್ವರಿ ಕಂಬಗಳು, ನಂದಿಮಂಟಪದ ನಾಲ್ಕು ಕಂಬಗಳು ಹಾಗೂ ವಲಭಿಯು ಅತ್ಯಂತ ಸುಂದರವಾಗಿ ಅಲಂಕೃತವಾಗಿದೆ. ಸಾಮಾನ್ಯವಾಗಿ ಎಲ್ಲ ಕಂಬಗಳ ಪೀಠವು ಚೌಕಾಕಾರವಾಗಿದ್ದು, ದಿಂಡು ವೃತ್ತಾಕಾರವಾಗಿದೆ. ಕೆಲವೊಂದು

ಕಂಬಗಳ ದಿಂಡು ಮತ್ತು ಪೀಠವೂ ಸಹ ಕಥಾನಕ ಶಿಲ್ಪಗಳಿಂದ ಕೂಡಿದೆ. ಪೀಠದ ಮೇಲೆ ಪದ್ಮಪಟ್ಟಿಕೆ ದಿಂಡಿನ ಮಧ್ಯೆ ಪಟ್ಟಿಕೆ, ಸುಂದರ ಬಳ್ಳಿ ಹಾಗೂ ಮಣಿಸರಗಳ ಅಲಂಕಾರಗಳು ಇನ್ನುಳಿದ ಅಲಂಕರಣಗಳಾಗಿವೆ. ಬೋದಿಗೆ ದಿಂಬಿನಾಕೃತಿಯಲ್ಲಿ ಅದರ ಮೇಲೆ ತರಂಗಗಳುಳ್ಳ ಮತ್ತು ಮಧ್ಯದಲ್ಲಿ ಅಲಂಕಾರಿಕ ಪಟ್ಟಿಯುಳ್ಳ ಚಾಚುಪೀಠಗಳಿವೆ.

ದೇವಸ್ಥಾನದ ಮತ್ತು ನಂದಿ ಮಂಟಪದ ಅಧಿಷ್ಠಾನ ದೇವಾಲಯದ ಮಾದರಿಯಲ್ಲಿಯೇ ಇದೆ. ಹೊರ ಭಿತ್ತಿ ಸರಳವಾಗಿರುವುದನ್ನು ಈ ಮೇಲೆ ಹೇಳಿದ್ದೇವೆ. ನವರಂಗದ ಬಾಗಿಲುವಾಡ ಸುಂದರವಾಗಿದ್ದು, ಒಂದೇ ಪಟ್ಟಿಕೆಯನ್ನು ಮತ್ತು ಹಣೆಪಟ್ಟಿಯನ್ನು ಹೊಂದಿದೆ. ಈ ಪಟ್ಟಿಕೆಯ ಮೇಲೆ ನಾಜೂಕಾಗಿ ಕೆತ್ತಿದ ಬಳ್ಳಿಯ ಸುರುಳಿಯಲ್ಲಿ ನರ್ತಿಸುತ್ತಿರುವ ನರ್ತನ ಸ್ತ್ರೀಯರು ಕಂಡುಬರುತ್ತಾರೆ. ಹಾಗೆಯೇ ಈ ಬಾಗಿಲುವಾಡದ ಎರಡೂ ಪಕ್ಕದಲ್ಲಿ ವಿವಿಧ ವಾದ್ಯಗಳನ್ನು ನುಡಿಸುತ್ತಿರುವ ಪುರುಷಾಕೃತಿಗಳನ್ನು ನಾಲ್ಕು ಹಂತಗಳಲ್ಲಿ ಕೆತ್ತಲಾಗಿದೆ. ಗರ್ಭಗೃಹದ ಬಾಗಿಲುವಾಡ ಅತ್ಯಂತ ಸರಳವಾಗಿ ಕಂಡುಬಂದಿದೆ.

ಈ ದೇವಸ್ಥಾನವು ವರುಣದಲ್ಲಿರುವ ಮಹಾಲಿಂಗೇಶ್ವರ ದೇವಾಲಯದಂತೆ ಮತ್ತು ನರಸಮಂಗಲದ ರಾಮೇಶ್ವರ ದೇವಾಲಯದಂತೆ ಸುಂದರವಾದ ಶಿಲ್ಪಗಳನ್ನು ಹೊಂದಿದೆ. ದೇವಸ್ಥಾನದ ನವರಂಗದ ಒಳಮಾಳಿಗೆಯಲ್ಲಿ ನಟರಾಜ ಶಿವನನ್ನು ಒಳಗೊಂಡ ಅಷ್ಟದಿಕ್ಪಾಲಕರ ಕೆತ್ತನೆ ಇದೆ. ನರಸಮಂಗಲದ ಇಂತಹದೇ ಶಿಲ್ಪಕ್ಕಿಂತಲೂ ಸ್ವಲ್ಪ ಸರಳವಾದ ಶೈಲಿಯನ್ನೂ ಹೊಂದಿರುವ ಈ ಶಿಲ್ಪದಲ್ಲಿ ಒಂಬತ್ತು ಅಂಕಣಗಳು ಅಳತೆಯಲ್ಲಿ ಸಮವಾಗಿವೆ. ಮಧ್ಯದಲ್ಲಿ ಶಿವ, ನಟರಾಜ, ಈಶಾನ, ಇಂದ್ರ, ಅಗ್ನಿ, ಯಮ, ನೈರುತಿ, ವರುಣ, ವಾಯು, ಕುಬೇರ ಇವರುಗಳ ಸಪತ್ನೀಯರಾಗಿ ತಮ್ಮ ತಮ್ಮ ವಾಹನಗಳ ಮೇಲೆ ಆಯುಧಾರೂಢರಾಗಿ ಕುಳಿತಿದ್ದಾರೆ. ಈ ಶಿಲ್ಪಗಳು ನರಸಮಂಗಲದ ಶಿಲ್ಪಗಳಂತೆ ಅಲಂಕೃತವಾದ ಶೈಲಿಯನ್ನು ಹೊಂದಿಲ್ಲ ಅಥವಾ ಕೆತ್ತನೆಯಲ್ಲಿ ಹೆಚ್ಚು ಶ್ರೀಮಂತವಾಗಿಲ್ಲ. ನವರಂಗದ ಕಂಬಗಳ ಮೇಲೆ ಹಲವಾರು ಕಥಾನಕ ಶಿಲ್ಪಗಳಿರುವುದನ್ನು ಈ ಮೇಲೆ ತಿಳಿಸಿದ್ದೇವೆ. ಈ ಕಂಬಗಳ ಮೇಲೆ ವಿದ್ಯಾರ್ಥರೂ, ಕುಳಿತ ರಾಜದಂಪತಿಯರು ಮತ್ತು ಯುದ್ಧಕ್ಕೆ ಸಂಬಂಧಿಸಿದ ಯುದ್ಧದ ಹಲವಾರು ಸನ್ನಿವೇಶಗಳು ಕಂಡುಬರುತ್ತವೆ. ಈ ಯುದ್ಧದ ಸನ್ನಿವೇಶಕ್ಕೆ ಸಂಬಂಧಿಸಿದಂತೆ ಇವುಗಳ ವಿಷಯವನ್ನು ಅಂದು ನಡೆದಿರುವ ಹಲವಾರು ಯುದ್ಧಗಳೊಂದಿಗೆ ಸಮೀಕರಿಸಿ ಗುರುತಿಸುವ ಪ್ರಯತ್ನವನ್ನು ಹಲವಾರು ವಿದ್ವಾಂಸರು ಮಾಡಿದ್ದಾರೆ. ಆರ್. ನರಸಿಂಹಾಚಾರ್ಯರವರು ರಾಜೇಂದ್ರಚೋಳನ ಯುದ್ಧದ ವರ್ಣನೆಗಳಿವು ಎಂದು ಗುರುತಿಸಿದ್ದಾರೆ. ಇದನ್ನು ಐ.ಕೆ.ಶರ್ಮರವರು ಗಂಗ-ರಾಷ್ಟ್ರಕೂಟರು ಚೋಳರ ದೊರೆ ಮೊದಲನೇ ಪರಂತಂಕನೊಂದಿಗೆ ಕ್ರಿ.ಶ.೯೪೦-೫೦ರಲ್ಲಿ ತಕ್ಕೋಲಂ ಎಂಬಲ್ಲಿ ನಡೆಸಿದ ಯುದ್ಧದ ಸನ್ನಿವೇಶವೆಂದು ಗುರುತಿಸಿದ್ದಾರೆ.[೪] ಆ ಕಾಲದಲ್ಲಿ ರಾಷ್ಟ್ರಕೂಟರ ಮೂರನೇ ಕೃಷ್ಣ ಮತ್ತು ಗಂಗರ ಎರಡನೇ ಬೂತುಗ ಇವರು ಈ ಯುದ್ಧದ ನೇತೃತ್ವ ವಹಿಸಿದ್ದರು ಎಂಬುದು ತಿಳಿದಿರುವ ವಿಚಾರ. ಈ ಯುದ್ಧದಲ್ಲಿ ಚೋಳ ಸೈನ್ಯಕ್ಕೆ ಸೋಲಾಯಿತು. ರಾಷ್ಟ್ರಕೂಟ

ಮುಮ್ಮಡಿ ಕೃಷ್ಣನು ಈ ಯುದ್ಧದಲ್ಲಿ ಗಳಿಸಿದ ಯುದ್ಧಕ್ಕೆ ಪ್ರತಿಯಾಗಿ ಬೂತುಗನಿಗೆ ಬನವಾಸಿ ಹನ್ನೆರಡು ಸಾವಿರ ಮತ್ತು ಬೆಳ್ವಲ ಮುನ್ನೂರು ಇವುಗಳ ಭಾಗಗಳನ್ನು ನೀಡಿದನೆಂದು ದಾಖಲೆಗಳಿವೆ. ಯುದ್ಧ ಸನ್ನಿವೇಶದ ವಿಷಯವೇನೇ ಇರಲಿ ಶಿಲ್ಪಕಲೆಯ ದೃಷ್ಟಿಯಿಂದ ಅದರಲ್ಲೂ ಕಥಾನಕ ಚಿತ್ರಗಳ ದೃಷ್ಟಿಯಿಂದ ಅಪೂರ್ವವಾದ ಘಟನಾವಳಿಗಳ ಚಿತ್ರಣ ಇವೆಂದು ಹೇಳಬಹುದು.

ಈ ದೇವಸ್ಥಾನದಲ್ಲಿ ದೊರೆತಿರುವ ಬಿಡಿಶಿಲ್ಪಗಳು ಆಕರ್ಷಕವಾಗಿವೆ. ದೇವಸ್ಥಾನದ ಪ್ರಾಕಾರದಲ್ಲಿರುವ ಶಿಲ್ಪಗಳಲ್ಲಿ ಅತ್ಯಂತ ಆಕರ್ಷಕವಾಗಿ ಕಂಡುಬರುವ ಶಿಲ್ಪಗಳೆಂದರೆ ಸಮಭಂಗದಲ್ಲಿ ಮಹಿಷನ ತಲೆ ಮೇಲೆ ನಿಂತಿರುವ ದುರ್ಗಿ ಹಾಗೂ ಕಾಳಿ. ಅಷ್ಟಭುಜವನ್ನು ಹೊಂದಿದ್ದು ಆಸನದ ಮೇಲೆ ಕುಳಿತು ರೌದ್ರಾವತಾರದಲ್ಲಿರುವ ಕಾಳಿ, ಉಳಿದ ಶಿಲ್ಪಗಳ ಕೆತ್ತನೆಯ ವಿಧಕ್ಕಿಂತ ವಿಭಿನ್ನವಾಗಿದೆ. ಸೌಮ್ಯವದನೆಯಾಗಿ ಅಭಯ ಹಸ್ತದಲ್ಲಿ ಮತ್ತು ಕಟ್ಯಾವ ಲಂಬಿತ ಮುದ್ರೆಯಲ್ಲಿ ಶಂಖ ಮತ್ತು ಚಕ್ರವನ್ನು ಪ್ರಯೋಗ ಮುದ್ರೆಯಲ್ಲಿ ಹಿಡಿದು ಆಕರ್ಷಕವಾದ ಮೈಮಾಟವನ್ನು ಹೊಂದಿ ನಿಂತಿದ್ದಾರೆ ದುರ್ಗಿ. ದೇವಿಯ ಅಲಂಕೃತವಾದ ಚಿಕ್ಕ ಕಿರೀಟ, ಕಂಠಹಾರ, ಕೈಬಂಧ, ಅಂದಗಳು, ಸಿಂಹಮುಖವಿರುವ ಕಟಿಬಂಧ ಬಿಗಿಯಾದ ಮೊಳಕಾಲಿನವರೆಗೆ ಉಡುಗೆ ಹಾಗೂ ಸೊಂಟದಿಂದ ಇಳಿ ಬಿದ್ದಿರುವ ಆಕರ್ಷಕವಾದ ಬಟ್ಟೆಯ ಕಟಿಬಂಧದ ಗುಚ್ಛಗಳು ದೇವಿಯನ್ನು ಆಕರ್ಷಕವಾಗಿ ಕಾಣುವಂತೆ ಮಾಡುತ್ತದೆ. ಮಹಿಷದ ಮುಖವನ್ನು ಸಾಂಕೇತಿಕವಾಗಿ ಇಲ್ಲೂ ತೋರಿಸಿದ್ದು, ಅದು ಕೂಡ ಅತ್ಯಂತ ನೈಜವಾಗಿ ಮೂಡಿಬಂದಿದೆ. ಈ ಶಿಲ್ಪ ಚೋಳರ ಕಾಲದ ಶೈಲಿಯನ್ನು ಹೊಂದಿದ್ದು ಚೋಳರ ಕಾಲದಲ್ಲಿ ನಿರ್ಮಾಣವಾಗಿದೆ. ಆದ್ದರಿಂದ ಇದು ಚೋಳರ ಕಾಲದ್ದೇ ಎಂದು ಹೇಳಬಹುದು.

ಕಾಳಿಯ ಶಿಲ್ಪದಲ್ಲಿ ಅಷ್ಟು ನೈಜವಲ್ಲದ ಕೆತ್ತನೆ ಕಾಣಬರುತ್ತದೆ. ಅಷ್ಟಭುಜವುಳ್ಳ ದೇವಿಯ ಹಲವಾರು ಆಯುಧಗಳನ್ನು ಹಿಡಿದುಕೊಂಡು ರುಂಡಮಾಲಾಧಾರಳಾಗಿ ಕುಳಿತಿದ್ದಾಳೆ. ಹೆಚ್ಚು ಆಕರ್ಷಕವಲ್ಲದ ಕೆತ್ತನೆ ಇವರದು ಎನ್ನಬಹುದ. ಆಶ್ಚರ್ಯವೆಂದರೆ ಈ ಶಿಲ್ಪದ ಮೂಲಕೃತಿ ಎಂಬಂತೆ ನವರಂಗದ ಕಂಬವೊಂದರ ಮೇಲೆ ಕಾಳಿಯ ಉಬ್ಬುಕೆತ್ತನೆ ಕಂಡುಬರುತ್ತದೆ. ಇದು ಇಲ್ಲಿನ ವಿಶೇಷತೆ.

ನಂದಿಮಂಟಪದ ವಲಭಿ ಭಾಗದಲ್ಲೂ ಕೂಡ ಹಲವಾರು ಉತ್ತಮ ಉಬ್ಬುಶಿಲ್ಪಗಳಿವೆ. ಇವುಗಳಲ್ಲಿ ನವಿಲಿನ ಮೇಲೆ ಕುಳಿತಿರುವ ಕುಮಾರ, ವಾಹನರೂಢನಾದ ಅಷ್ಟದಿಕ್ಪಾಲಕರು ಕಂಡುಬರುತ್ತಾರೆ.

### ಈಶ್ವರದೇವಾಲಯ, ಆಲೂರು

ಈಶ್ವರ ದೇವಸ್ಥಾನ ಇದು ಕೂಡ ಅರ್ಕೇಶ್ವರ ದೇವಸ್ಥಾನದಂತೆ ಪ್ರಾಯಶಃ ಒಂದು ಸುಂದರ ದೇವಾಲಯವಾಗಿದ್ದಂತೆ ತೋರುತ್ತದೆ. ಆದರೆ ಇಂದು ವಿನಾಶದ ಅಂಚಿನಲ್ಲಿರುವ ಈ ದೇವಸ್ಥಾನದಲ್ಲಿ ಹಲವಾರು ಮೂಲ ವಾಸ್ತು ಭಾಗಗಳು ಉಳಿದುಕೊಂಡು ಬಂದಿವೆ. ಇದು ಕೂಡ ಆಯತಾಕಾರದ

ತಳವಿನ್ಯಾಸವುಳ್ಳ ಸರಳ ದೇವಾಲಯವಾಗಿದ್ದು ಚಿಕ್ಕದಾದ ಗರ್ಭಗೃಹವನ್ನು ಹೊಂದಿದೆ. ನವರಂಗ ಮತ್ತು ಮಹಾಮಂಟಪಗಳು ಇದಕ್ಕೆ ಇದ್ದಂತೆ ತೋರುತ್ತದೆ. ಕಂಬಗಳು ಚೋಳ ಮಾದರಿಯಲ್ಲಿಯೇ ಇದೆ. ಗರ್ಭಗೃಹದ ಮೂಲೆಯಲ್ಲಿ ಉಳಿದುಕೊಂಡಿರುವ ಕಂಬವನ್ನು ಗಮನಿಸಿದರೆ ಇದೊಂದು ಸುಂದರವಾದ ದೇವಾಲಯವಾಗಿತ್ತು ಎಂಬುದರಲ್ಲಿ ಸಂಶಯವಿಲ್ಲ. ಚೌಕಾಕಾರದ ದಿಂಡಿನ ಮೇಲ್ಭಾಗವು ಹೂದಾನಿಯಾಕಾರದಲ್ಲಿದೆ. ಇದರ ಮೇಲೆ ಬೋದಿಗೆ ಮತ್ತು ಅದರ ಮೇಲೆ ಚೋಳ ರೀತಿಯ ಚಾಚುಪೀಠಗಳಿವೆ. ಈ ಕಪೋತದ ಸ್ವಲ್ಪವೇ ಸ್ವಲ್ಪ ಭಾಗವು ಗರ್ಭಗೃಹದ ಹಿಂಭಾಗದ ಮೂಲೆಯ ಮೇಲೆ ಮಾತ್ರ ಉಳಿದುಕೊಂಡಿದೆ. ಇದರ ಮೇಲೆ ಅಸ್ಪಷ್ಟವಾಗಿ ಕೂಡುಗಳ ಕೆತ್ತನೆ ಕಾಣಬರುತ್ತದೆ.

ಆಲೂರಿನ ಈ ದೇವಾಲಯಗಳೆಲ್ಲವೂ ಜೈನ ದೇವಾಲಯಗಳೇ ಆಗಿವೆ. ಇವುಗಳ ಕಾಲದ ಬಗ್ಗೆ ಒಮ್ಮತವಿಲ್ಲ. ಆದರೆ ಶಾಸನಗಳ ಹಿನ್ನೆಲೆಯನ್ನು ಗಮನಿಸಿದಾಗ ಮೂಲತಃ ಗಂಗರ ಕಾಲದಲ್ಲಿ ದೇವಾಲಯಗಳು ಪ್ರಾರಂಭಗೊಂಡು ಬಹುಶಃ ಚೋಳರು ಇಲ್ಲಿ ಅಧಿಕಾರದ ಚುಕ್ಕಾಣಿ ಹಿಡಿದ ಮೇಲೆ ಕೊನೆಯ ಹಂತದ ಕೆಲಸಗಳು ಆಗಿರಬಹುದು. ಅಂದರೆ ಗಂಗರ ಕಾಲದ ವಾಸ್ತು ಕಲೆಯನ್ನು ಚೋಳರು ಮುಂದುವರೆಸಿಕೊಂಡು ಹೋದರೆಂದು ಸೂಚ್ಯವಾಗಿ ತಿಳಿಯಬಹುದು."

### ರಾಮೇಶ್ವರ ದೇವಾಲಯ, ನರಸಮಂಗಲ

ಪ್ರಸ್ತುತ ಅಧ್ಯಯನದ ವ್ಯಾಪ್ತಿಯಲ್ಲಿ ಬರುವ ದೇವಾಲಯಗಳಲ್ಲಿ ಚಾಮರಾಜನಗರ ತಾಲೂಕಿನ ನರಸಮಂಗಲದ ರಾಮೇಶ್ವರ ಅಥವಾ ರಾಮಲಿಂಗೇಶ್ವರ ದೇವಾಲಯ ಒಂದು. ಹೊಯ್ಸಳ ಶಾಸನಗಳಲ್ಲಿ ನರಸಮಂಗಲವನ್ನು ನರಸಿಂಹಮಂಗಲವೆಂದು ಉಲ್ಲೇಖಿಸಲಾಗಿದೆ. ಪ್ರಾಚೀನ ನರಸಿಂಹಮಂಗಲ ಈಗ ನರಸಮಂಗಲವಾಗಿದೆ. ಇಟ್ಟಿಗೆಯಿಂದ ನಿರ್ಮಾಣವಾದ ಈ ದೇವಾಲಯ ಪ್ರಾಚೀನ ಕಾಲದಿಂದಲೂ ಉತ್ತಮ ಸ್ಥಿತಿಯಲ್ಲಿ ಉಳಿದುಕೊಂಡು ಬಂದಿದೆ. ನೋಡಲು ಪಲ್ಲವರ ಕಾಲದ ಮಹಾಬಲಿಪುರಂನ ಏಕಶಿಲಾರಥಗಳನ್ನು ಜ್ಞಾಪಕಕ್ಕೆ ತರುವಂತಿದೆ. ಅದರಲ್ಲೂ ಧರ್ಮರಾಯ ರಥವನ್ನು  ಹೋಲುವ ಬಾಹ್ಯ ಸೌಂದರ್ಯವನ್ನು ಹೊಂದಿದೆ. ಪೂರ್ವಾಭಿಮುಖವಾಗಿರುವ ಈ ದೇವಸ್ಥಾನದ ಮಹಾಮಂಟಪ(ಮುಖಮಂಟಪ) ಭಾಗ ಸಂಪೂರ್ಣವಾಗಿ ನಾಶವಾಗಿ ಹೋಗಿದೆ. ಪ್ರಾಯಶಃ ಅದು ಅನೇಕ ಕಂಬಗಳಿಂದ ರಚಿತವಾಗಿದ್ದಿರಬೇಕು. ವಾಸ್ತುಶೈಲಿಯ ಮತ್ತು ಶಿಲ್ಪಗಳ ದೃಷ್ಟಿಯಿಂದ ಅತ್ಯಂತ ಚರ್ಚಿತವಾಗಿರುವ ಈ ದೇವಸ್ಥಾನದ ನಿರ್ಮಾಣದ ಕಾಲದ ಬಗ್ಗೆ ಇದುವರೆಗೂ ವಿದ್ವಾಂಸರಲ್ಲಿ ಸ್ಪಷ್ಟವಾದ ನಿಲುವು ಇಲ್ಲ.

ಇಲ್ಲಿಯೂ ಕೂಡ ಹಲವಾರು ರಾಜ ಮನೆತನಗಳ ವಾಸ್ತು ಕಲಾ ಚಟುವಟಿಕೆಗಳನ್ನು ನಾವು ಗಮನಿಸಬಹುದು. ಇದನ್ನು ಮೂಲತಃ ತಲಕಾಡಿನ ಗಂಗರ ಕಾಲದ ದೇವಾಲಯವೆಂದೂ ನಂತರ ಚೋಳರ ಕಾಲದಲ್ಲಿ ಬದಲಾವಣೆಗಳಾಗಿರಬಹುದೆಂದು ತಿಳಿಯಲಾಗಿದೆ. ಆಶ್ಚರ್ಯವೆಂದರೆ ಇದನ್ನು ಗಂಗರ ಕಾಲದ್ದೆಂದು

ಅಥವಾ ಚೋಳರ ಕಾಲದ್ದೆಂದು ಹೇಳುವ ನಿಖರವಾದ ಶಾಸನಗಳ ಅನುಪಸ್ಥಿತಿಯಲ್ಲಿಯೂ ಕೂಡ ವಾಸ್ತು ಶೈಲಿಯ ದೃಷ್ಟಿಯಿಂದ ನಿರ್ದಿಷ್ಟ ಬೆಳವಣಿಗೆಯನ್ನು ಗುರುತಿಸಬಹುದು. ಹೊಯ್ಸಳರ ಕಾಲದ ವಾಸ್ತು ಅಂಶಗಳ ಸೇರ್ಪಡೆಗೆ ಪೂರಕವಾಗಿ ಹೊಯ್ಸಳರ ಕಾಲದ ಹಲವಾರು ಶಾಸನಗಳ ಉಲ್ಲೇಖಗಳು ಇಲ್ಲಿ ಕಂಡುಬರುತ್ತದೆ.

ರಾಮೇಶ್ವರ ದೇವಸ್ಥಾನ ಒಂದು ಸುಂದರವಾದ ದ್ರಾವಿಡ ಶೈಲಿಯಲ್ಲಿರುವ ವಾಸ್ತುಕೃತಿ. ಇಟ್ಟಿಗೆ ಗಾರೆಗಳ ಮಿಶ್ರಣದಿಂದ ನಿರ್ಮಾಣಗೊಂಡ ಗಾರೆ ಶಿಲ್ಪಗಳ ಅಲಂಕರಣೆಯನ್ನು ಹೊಂದಿದೆ. ಈ ದೇವಸ್ಥಾನದ ಅದಿಷ್ಠಾನ ಕಲ್ಲಿನಲ್ಲಿ ನಿರ್ಮಾಣವಾಗಿದೆ. ಉಪಾನ, ಪದ್ಮಪಟ್ಟಿ, ಜಗತಿ ಹಾಗೂ ಅರ್ಧವೃತ್ತಾಕಾರವಾದ ಕುಮುದ ಇದರ ಮೇಲೆ ಪದ್ಮದಳಗಳ ಅಲಂಕರಣೆ ಇದೆ. ಇದರ ಮೇಲೆ ಕಂಠ, ಕಪೋತ, ಪಟ್ಟಿಕಾ, ಕಂಪ ಪ್ರತಿಗಳು ಕಂಡುಬರುತ್ತವೆ. ಗಜವ್ಯಾಳಗಳು ಕಂಪದ ಕೆಳಭಾಗದಲ್ಲಿ ಕಂಡುಬರುತ್ತವೆ. ಅಧಿಷ್ಠಾನದಲ್ಲಿ ಕಪೋತದ ಕಲ್ಪನೆ ಬಾದಾಮಿ ಚಾಳುಕ್ಯರಿಂದ ನಿರೂಪಿಸಲ್ಪಟ್ಟ ಭಾಗ. ಇದಕ್ಕೆ ಸಮವಾಗಿ ತಮಿಳು ನಾಡಿನಲ್ಲಿ ಅಂದರೆ ಪಲ್ಲವ ಶೈಲಿಯಲ್ಲಿ ಕಪೋತದ ಬದಲು ಪಟ್ಟಿಕಾಂಬ ದಿಂಡನ್ನು ಅಧಿಷ್ಠಾನದಲ್ಲಿ ಕೂಡಿಸುವ ಪದ್ಧತಿ ಇತ್ತು. ಕರ್ನಾಟಕ ಹಾಗೂ ತಮಿಳುನಾಡಿನ ಮಧ್ಯದ ಭಾಗಗಳಾದ ಕೋಲಾರ, ಧರ್ಮಪುರಿ ಜಿಲ್ಲೆಗಳಲ್ಲಿನ ಕ್ರಿ.ಶ. ೯-೧೦ನೇ ಶತಮಾನದ ದೇವಾಲಯಗಳಲ್ಲಿ ಕಪೋತ ಮತ್ತು ಪಟ್ಟಿಕಾ ಇವೆರಡನ್ನೂ ಹೊಂದಿರುವ ಅಧಿಷ್ಠಾನದ ಕಲ್ಪನೆ ಕಾಣಬರುತ್ತದೆ. ಉದಾಹರಣೆಗೆ ಧರ್ಮಪುರಿಯ ಕಾಮಾಕ್ಷಿಯನ್ನು ದೇವಾಲಯ. ಈ ದೇವಾಲಯದಲ್ಲಿ ಕಪೋತದ ಭಾಗ, ಸ್ವಲ್ಪ ಭಾಗ ಕಪೋತವಾಗಿಯೂ ಮತ್ತು ಸ್ವಲ್ಪ ಭಾಗ ಪಟ್ಟಿಕೆಯಾಗಿಯೂ ಕಾಣಬರುತ್ತದೆ. ಈ ರೀತಿಯ ಚಾಲುಕ್ಯ-ಪಲ್ಲವ ಅಧಿಷ್ಠಾನದ ಅಂಶಗಳನ್ನು ಮಿಶ್ರನ ಮಾಡಿ ಕಟ್ಟುವುದು ಈ ಎರಡೂ ರಾಜ್ಯಗಳ ಗಡಿಭಾಗದಲ್ಲಿ ಕಾಣಬರುವ ದೇವಾಲಯ ವಾಸ್ತು ಲಕ್ಷಣ. ಇದೇ ಲಕ್ಷಣ ನರಸಮಂಗಲ ದೇವಾಲಯದಲ್ಲೂ ಕಂಡುಬಂದಿರುವುದು. ಈ ದೇವಾಲಯದ ವಿಶೇಷವೆಂದು ಪರಿಗಣಿಸ ಬಹುದು. ಒಟ್ಟಿನಲ್ಲಿ ಈ ದೇವಸ್ಥಾನದ ಅಧಿಷ್ಠಾನವು ಆಕರ್ಷಕ ಅಲಂಕರಣೆಯನ್ನು ಹೊಂದಿ ಭವ್ಯವಾಗಿದೆ. ಇದರ ಮೇಲೆಯೇ ಉತ್ತರ ದಿಕ್ಕಿನಲ್ಲಿ ಆನೆಯ ಸೊಂಡಿಲಿನಂತಿರುವ ತೀರ್ಥ ಪ್ರನಾಳವು ಭೂತಗಣದ ಮೇಲೆ ಕಂಡುಬರುತ್ತದೆ. ಗರ್ಭಗೃಹದ ಮೇಲೆ ಇಟ್ಟಿಗೆ ಮತ್ತು ಗಾರೆಯಿಂದ ನಿರ್ಮಿತವಾದ ಗರ್ಭಗೃಹವು ಸುಮಾರು ಮೂರು ಮೀಟರ್ ವಿಸ್ತೀರ್ಣವುಳ್ಳದ್ದಾಗಿದೆ. ಗರ್ಭಗೃಹಕ್ಕೆ ಅರ್ಧಮಂಟಪದಿಂದ ಪ್ರವೇಶವಿದ್ದು, ೧೬ ಕಂಬಗಳ ನವರಂಗವು ಇದಕ್ಕೆ ಹೊಂದಿಕೊಂಡಿದೆ. ಇದರ ಕಂಬಗಳು ಇಂದಿಗೂ ಉಳಿದುಕೊಂಡು ಬಂದಿದೆ. ಬಹುಶಃ ಅಂದು ಇದ್ದಿರಬಹುದಾದ ಇಟ್ಟಿಗೆ ಮತ್ತು ಗಾರೆಯ ಗೋಡೆ ಕಾಲಕ್ರಮದಲ್ಲಿ ಹಾಳಾಗಿದ್ದು, ಇತ್ತೀಚಿನ ದಿನಗಳಲ್ಲಿ ಹೊಸದಾಗಿ ಗೋಡೆಯನ್ನು ನಿರ್ಮಿಸಿದ್ದಾರೆ. ನವರಂಗದ ಮಧ್ಯದಲ್ಲಿರುವ ನಾಲ್ಕು ಚೋಳಶೈಲಿಯ ಕಂಬಗಳು ರುದ್ರಕಾಂತ ಮಾದರಿಯಲ್ಲಿದೆ. ಘಂಟಾಕಾರ ಅದರ ಮೇಲೆ ಪುಷ್ಪಮಾಲೆಗಳ ಅಲಂಕರಣೇ ಇದ್ದು, ಅದರ ಮೇಲೆ ಕಂಠ ನಂತರ ಮೇಲಿನ ಭಾಗದಲ್ಲಿ ದಿಂಬಿನಾಕಾರದ ಬೋದಿಗೆ ಇದೆ.

ಬೋದಿಗೆಯು ಬಹುಮುಖಗಳನ್ನು ಹೊಂದಿವೆ. ಈ ದೇವಾಲಯದ ನವರಂಗದ ಕಂಬಗಳ ವಿಶೇಷತೆ ಏನೆಂದರೆ ಅರಳುಗುಪ್ಪೆ, ಕೋಲಾರದಲ್ಲಿನ ಗಂಗರ ದೇವಾಲಯಗಳ ಕಂಬಗಳಂತೆ ಕುಳ್ಳಗೆ ಇರದೆ ಸ್ವಲ್ಪ ಎತ್ತರವಾಗಿವೆ. ಈ ದೃಷ್ಟಿಯಿಂದ ಇದು ಚೋಳರ ಕಾಲದ ಕಂಬಗಳೆಂದು ಪರಿಗಣಿಸಬಹುದಾಗಿದೆ. ನವರಂಗದಲ್ಲಿರುವ ಭುವನೇಶ್ವರಿ ಬಹು ಸುಂದರವಾಗಿದೆ. ಅಂಧಕಾಸುರನ ಮೇಲೆ ನರ್ತಿಸುತ್ತಿರುವ ಅಷ್ಟಭುಜ ಶಿವನ ಸುತ್ತಲೂ ಅಷ್ಟದಿಕ್ಪಾಲಕರನ್ನು ಕೆತ್ತಿರುವ ಈ ಭುವನೇಶ್ವರಿ ಬಹಳ ಗಮನಾರ್ಹವಾದುದು.

ನವರಂಗದಲ್ಲಿರುವ ಎಲ್ಲಾ ತೊಲೆಗಳಲ್ಲಿ ಒಳಗೆ ಮತ್ತು ಹೊರಗೆ ಸುತ್ತಲೂ ಅನೇಕ ಬಿಡಿ ಉಬ್ಬು ಶಿಲ್ಪಗಳನ್ನು ಕೆತ್ತಲಾಗಿದೆ. ಆನೆ, ಸಿಂಹ, ತುಬ್ಬರು, ಕಾಮಧೇನು, ಕೃಷ್ಣ, ಗಣೇಶ, ಪಂಚತಂತ್ರದ ಕಥಾನಕ ಅಶೋಕ ವನದಲ್ಲಿ ಸೀತೆ ಮತ್ತು ಗಜಲಕ್ಷ್ಮೀ ಉಬ್ಬು ಶಿಲ್ಪಗಳನ್ನು ಕೆತ್ತಲಾಗಿದೆ. ಅಂತರಾಳದ ಗೋಡೆಗೆ ಹೊಂದಿಕೊಂಡಂತೆ ಎರಡು ಕಂಬಗಳಿವೆ. ನವರಂಗದ ಮಧ್ಯದಲ್ಲಿ ಕಂಬಗಳ ಮೇಲಿರುವ ತೊಲೆಗಳ ಸುತ್ತಲೂ ಉಬ್ಬು ಶಿಲ್ಪಗಳ ಕೆತ್ತನೆ ಇದೆ. ದಕ್ಷಿಣ ದಿಕ್ಕಿಗೆ ಆನೆಗಳು, ಪಶ್ಚಿಮ ದಿಕ್ಕಿಗೆ ಹಂಸ, ಗಿಳಿಸಾಲು, ಉತ್ತರ ದಿಕ್ಕಿಗೆ ಸ್ತ್ರೀ ಶಿಲ್ಪಗಳು ಸಾಲು, ಪೂರ್ವ ದಿಕ್ಕಿಗೆ ಆನೆ ಸಾಲು ಮತ್ತು ಸ್ತ್ರೀ ಉಬ್ಬು ಶಿಲ್ಪಗಳ ಕೆತ್ತನೆಗಳಿವೆ. ನವರಂಗದ ದ್ವಾರದ ಇಕ್ಕೆಲಗಳಲ್ಲಿ ನಿಲುವು ಕಂಬಗಳಲ್ಲಿ ಉಬ್ಬು ಶಿಲ್ಪಗಳು ಇವೆ. ಲಲಾಟ ಬಿಂಬದಲ್ಲಿ ಸಣ್ಣ ಸಣ್ಣ ಶಿಲ್ಪಗಳಿವೆ ಹಾಗೂ ಬಳ್ಳಿ ಸುರುಳಿ ಕೆತ್ತನೆಯಿಂದ ಅಲಂಕೃತವಾಗಿದೆ. ಮುಂಭಾಗದಲ್ಲಿ ವಿಶಾಲವಾದ ಮುಖ ಮಂಟಪವಿದ್ದಿತ್ತಾದರೂ ಈಗ ಅಧಿಷ್ಠಾನ ಮಾತ್ರ ಉಳಿದಿದ್ದು ಈ ಭಾಗವು ಪೂರ್ವ-ಪಶ್ಚಿಮಾಭೀಮುಖವಾಗಿ ೧೦ ೧/೨ ಮೀಟರೆ ಉದ್ದವನ್ನು ಉತ್ತರ ದಕ್ಷಿಣಾಭೀಮುಖವಾಗಿ ೭ ೧/೨ ಮೀಟರ್ ಅಗಲವಾಗಿದೆ. ಉತ್ತರ ದಿಕ್ಕಿಗೆ ಮತ್ತು ದಕ್ಷಿಣ ದಿಕ್ಕಿಗೆ ಮೆಟ್ಟಲುಗಳಿವೆ. ಈ ಆಧಾರದ ಮೇಲೆ ಎರಡು ಕಡೆ ದ್ವಾರಗಳಿದ್ದವೆಂದು ಗುರುತಿಸಬಹುದಾಗಿದೆ.

ನವರಂಗದ ಮತ್ತು ಗರ್ಭಗೃಹದ ಬಾಗಿಲವಾಡಗಳು ಅತ್ಯಂತ ಸುಂದರವಾಗಿದ್ದು, ಹಲವಾರು ಕೆತ್ತನೆಗಳಿಂದ ಕೂಡಿದೆ. ಗರ್ಭಗೃಹದ ಬಾಗಿಲವಾಡದ ಮೇಲೆ ಲಲಾಟಬಿಂಬದ ಮೇಲೆ ಗಜಲಕ್ಷ್ಮೀಯ ಉಬ್ಬುಕೆತ್ತನೆ ಶಿಲ್ಪವಿದ್ದು, ಕಮಲದ ದಳಗಳ ಕೆತ್ತನೆ ಕಂಡುಬರುತ್ತದೆ.

ರಾಮೇಶ್ವರ ದೇವಸ್ಥಾನದ ಸುತ್ತಮುತ್ತಲೂ ಹಲವಾರು ಪರಿವಾರ ದೇವತೆಗಳ ದೇವಸ್ಥಾನಗಳು ಇದ್ದ ಬಗ್ಗೆ ಇಂದು ಅಲ್ಲಿ ಉಳಿದಿರುವ ಅವಶೇಷಗಳು ಸಾಕ್ಷಿಯಾಗಿ ನಿಂತಿವೆ. ಕೇವಲ ಕಲ್ಲಿನಲ್ಲಿ ನಿರ್ಮಿಸಿದ ಅಧಿಷ್ಠಾನಗಳು, ಪೀಠಗಳು ಕಂಡುಬಂದಿದ್ದು ಮುಖ್ಯ ದೇವಾಲಯದಂತೆ ಇವುಗಳು ಕೂಡ ಇಟ್ಟಿಗೆಯಲ್ಲಿ ನಿರ್ಮಾಣವಾದಂತೆ ತೋರುತ್ತದೆ. ಈ ದೇವಸ್ಥಾನಗಳಲ್ಲಿ ಇದ್ದಂತಹ ಎಲ್ಲ ಶಿಲ್ಪಗಳು ದೇವಸ್ಥಾನದ ಆವರಣದಲ್ಲಿರುವ ಒಂದು ಹೊಸ ಕಟ್ಟಡಗಳಲ್ಲಿ ಇಡಲಾಗಿದೆ. ದೇವಾಲಯದ ಆವರಣದಲ್ಲಿ ಪರಿವಾರ ದೇವತಾ ಗೃಹಗಳು ನಿರ್ಮಾಣವಾಗಿದ್ದಂತೆ ತೋರುತ್ತದೆ.

ಈ ದೇವಸ್ಥಾನದ ಶಿಲೆಗಳನ್ನು ವಿಶೇಷವಾಗಿ ಗಾರೆ ಶಿಲ್ಪಗಳನ್ನು ನಾವು ಗಮನಿಸಿದಾಗ ಅದರ ಇತಿಹಾಸ ಬೆರಗುಗೊಳಿಸುವಂತದ್ದೇ. ಶಿಲಾ ಶಿಲ್ಪಗಳಿಗೆ ಪೂರಕವಾಗಿ ಗಾರೆ ಶಿಲ್ಪಗಳು ಸಹ ಇಲ್ಲಿ ಬೆಳವಣಿಗೆ ಹೊಂದಿವೆ. ವಿಮಾನದ ಮೇಲೆ ಎಲ್ಲ ತಲಗಳಲ್ಲಿ ಕಂಡುಬರುವ ಈ ಆಕೃತಿಗಳು ಅತ್ಯಂತ ಸುಂದರವಾಗಿವೆ. ಪ್ರಮಾಣಬದ್ಧವಾದ ದೇಹ ಮಿತವಾದ ಅಲಂಕಾರ ಹಾಗೂ ಅವುಗಳ ವಿಭನ್ನವಾದ ಭಂಗಿಗಳು ಆಕೃತಿಯಲ್ಲಿ ಅತ್ಯಂತ ಚಾಲನೆಯನ್ನು ತುಂಬುತ್ತವೆ. ಇಟ್ಟಿಗೆಯ ತುಂಡುಗಳಿಂದ ಗಾರೆಯ ಮಿಶ್ರಣದೊಂದಿಗೆ ಮಾಡಿದಂತಹ ಈ ಗಾರೆ ಶಿಲ್ಪಗಳು ನವೀನ ಕಾಂಕ್ರಿಟ್ ತಾಂತ್ರಿಕತೆಗಳ ಮುನ್ನುಡಿಯಾಗಿವೆ. ವಿಮಾನದ ದಕ್ಷಿಣ ಮುಖದ ಮೇಲೆ ಮೊದಲನೆಯ ತಳದಲ್ಲಿ ಕುಳಿತ ಸ್ತ್ರೀ ದೇವತೆಗಳು ಕರ್ಣಕೂಟದ ಕೊನೆಯಲ್ಲಿ ಕಂಡುಬರುತ್ತದೆ. ಇವುಗಳ ಪಕ್ಕದಲ್ಲಿ ಶಿವನ ಗಜಾಂತಕ ರೂಪವನ್ನು ಗಜಸಂಹಾರ ಶಿಲ್ಪವನ್ನಾಗಿ ತೋರಿಸಿದ್ದಾನೆ. ಶಾಲದ ಮುಂಭಾಗದ ಮಧ್ಯದಲ್ಲಿ ಕುಳಿತ ಭಂಗಿಯಲ್ಲಿ ಇರುವ ಯೋಗ ದಕ್ಷಿಣಾ ಮೂರ್ತಿಯ ಶಿಲ್ಪವಿದೆ. ಮಧ್ಯದ ತಲದಲ್ಲಿ ಕೂಡುಗಳು, ವ್ಯಾಳ ಮುಖಗಳು ಹಾಗೂ ಕರ್ಣ ಮತ್ತು ಶಾಲದಡಿಯಲ್ಲಿ ಒಂದೊಂದು ಕುಳಿತ ಆಕೃತಿಗಳು ಇವೆ. ಕೊನೆಯ ತಲದ ಮಧ್ಯದಲ್ಲಿ ಕುಳಿತ ದಕ್ಷಿಣಾಮೂರ್ತಿ ಹಾಗೂ ಎರಡು ಬದಿಯಲ್ಲಿ ಕುಳಿತ ನಂದಿಯ ಗಾರೆ ಶಿಲ್ಪಗಳಿವೆ. ವಿಮಾನದ ಉತ್ತರಮುಖದಲ್ಲಿ ಮೂಲತಃ ಭಿಕ್ಷಾಟನ ಶಿವನ ಶಿಲ್ಪವಿದ್ದವೆಂದು ಡಾ.ಐ.ಕೆ.ಶರ್ಮರವರು ಗುರುತಿಸಿರುತ್ತಾರೆ. ಈ ತಲದಲ್ಲಿ ಸಂಹಾರ ಮೂರ್ತಿ ಶಿವ, ಬ್ರಹ್ಮ, ಚಾಮುಂಡಿ, ಕಾಳಿ ಇವರುಗಳ ಗಾರೆ ಶಿಲ್ಪಗಳಿವೆ. ಎರಡನೇ ತಲದಲ್ಲಿ ಕುಳಿತ ಸ್ತ್ರೀಯ ಒಂದು ಶಿಲ್ಪವಿದ್ದು ಕರ್ಣಕೂಟ ಮತ್ತು ಶಾಲದಡಿಯಲ್ಲಿ ಮೂರು ಕುಳಿತ ಗಾರೆ ಆಕೃತಿಗಳಿವೆ. ವಿಮಾನದ ಪಶ್ಚಿಮ ಮುಖದಲ್ಲಿ ಮೊದಲನೆಯ ತಲದ ಮೇಲೆ ತ್ರಿವಿಕ್ರಮ, ಗರುಡಾರೂಢ ವಿಷ್ಣು, ಕಾಳಿ, ನರಸಿಂಹ ಮತ್ತು ವೈಷ್ಣವ ದ್ವಾರಪಾಲಕರ ಆಕೃತಿಗಳಿವೆ. ಮುಂಭಾಗದ ತಲಗಳ ಮೇಲೆ ಅಂತಹ ವಿಶೇಷ ಶಿಲ್ಪಗಳು ಕಂಡುಬರುವುದಿಲ್ಲ. ಶುಕನಾಸದಂತೆ ಕೊಂಚ ಮುಂಚಾಚಿರುವ ಶಿಖರದ ಭಾಗ ಇಲ್ಲಿನ ವಿಶೇಷತೆಯಾಗಿದೆ.

ಈ ಗಾರೆ ಶಿಲ್ಪಗಳು ಶೈಲಿಯ ದೃಷ್ಟಿಯಿಂದ ಅವುಗಳ ಕಾಲ ಪಲ್ಲವ-ಚೋಳ ಶಿಲ್ಪ ಶೈಲಿಯನ್ನು ಹೋಲುತ್ತದೆ. ನೀಳವಾದ ಮತ್ತು ಪ್ರಮಾಣ ಬದ್ಧವಾದ ದೇಹ, ಚಾಲನೆ ತುಂಬಿರುವ ಮತ್ತು ಭಾವಪೂರ್ಣವಾದ ಹಾಗೂ ನಾಟಕೀಯ ಅಂಶಗಳುಳ್ಳ ಸಂಜ್ಞೆಗಳು, ಪ್ರಮಾಣಬದ್ಧವಾದ ಅಲಂಕಾರ, ಶಿಲ್ಪಗಳನ್ನು ಉತ್ತಮ ಗುಣಮಟ್ಟದ್ದನ್ನಾಗಿಸುತ್ತವೆ. ದೇವಸ್ಥಾನದ ವಿಭಿನ್ನ ಭಾಗಗಳನ್ನು ಅಂದರೆ ಹೊರಗೋಡೆಯಲ್ಲಿ ಕಂಡುಬರುವ ಕಂಬಗಳು, ಕಪೋತಗಳು, ಆಕೃತಿಗಳು ಮತ್ತು ವಿಭಿನ್ನ ವಾಸ್ತು ಅಂಶಗಳು ಎಲ್ಲವೂ ಇಟ್ಟಿಗೆ ಮತ್ತು ಗಾರೆಯಿಂದಲೇ ನಿರ್ಮಾಣವಾಗಿವೆ. ಇಲ್ಲಿಯ ವಾಸ್ತು ತಂತ್ರಜ್ಞಾನ ತಾಂತ್ರಿಕಜ್ಞಾನವನ್ನು ನಾವು ಮೆಚ್ಚಲೇಬೇಕು. ಇಟ್ಟಿಗೆಗಳನ್ನು ಆಯಾ ಅವಶ್ಯಕತೆಗಳಿಗೆ ಅನುಗುಣವಾಗಿ ಕಲ್ಲಿನಂತೆಯೇ ಕೆತ್ತಿ ಅದಕ್ಕೊಂದು ಆಕಾರ ಕೊಟ್ಟು ಬಳಸಿರುವುದು ಸ್ಪಷ್ಟವಾಗಿ ಕಂಡುಬರುತ್ತದೆ. ಸಂಪೂರ್ಣವಾಗಿ ದೇವಸ್ಥಾನದ ಕಟ್ಟಡ ನಿರ್ಮಾಣವಾಗಿ ವಿಮಾನ ಶಿಲ್ಪಗಳು ರೂಪುಗೊಂಡ ಮೇಲೆ ವಜ್ರ ಲೇಪದಂತೆ ಗಾರೆ ಲೇಪವನ್ನು ಶಿಲ್ಪಿ ಮಡಿದ್ದಾನೆ. ಇದರಿಂದ

ಆಕೃತಿಗಳ ಮತ್ತಿ ದೇವಸ್ಥಾನದ ಅಂದ ದ್ವಿಗುಣವಾಗಿದೆ. ಇಟ್ಟಿಗೆ ಮತ್ತು ಗಾರೆ ಉಪಯೋಗಿಸುವ ಈ ಪದ್ಧತಿ ಅಂದಿನ ಕರ್ನಾಟಕದಲ್ಲಿ ಮತ್ತು ತಮಿಳುನಾಡಿನಲ್ಲಿ ಅಧಿಕ ಪ್ರಮಾಣದಲ್ಲಿ ಇದ್ದಿತೆಂಬುದನ್ನು ಗಮನಿಸಬೇಕು. ಇದೇ ಒಂದು ಶೈಲಿಯನ್ನು ಮತ್ತು ತಾಂತ್ರಿಕತೆಯನ್ನು ವಿಜಯನಗರ ಕಾಲದಲ್ಲಿ ಅತ್ಯಂತ ಪ್ರಭಾವಶಾಲಿಯಾಗಿ ಬಳಸಿರುವುದನ್ನು ನಾವು ಗಮನಿಸಬಹುದು.[೬]

ಗಾರೆ ಶಿಲ್ಪಗಳಂತೆ ಸುಂದರವಾದ ಕಲ್ಲಿನಲ್ಲಿ ಕೆತ್ತಿದ ಶಿಲ್ಪಗಳು ಕೂಡ ಇಲ್ಲಿ ಕಂಡುಬರುತ್ತದೆ. ನವರಂಗದಲ್ಲಿ ಕಂಡುಬರುವ ಹಂಸವಲಭಿ, ನವರಂಗದ ಒಳಮಾಳಿಗೆಯಲ್ಲಿ ಮಧ್ಯದಲ್ಲಿರುವ ಒಂಭತ್ತು ಅಂಕಣದ ಅಷ್ಟದಿಕ್ಪಾಲಕರ ಮಧ್ಯದಲ್ಲಿ ಅಪಸ್ಮಾರನ ಮೇಲೆ ನರ್ತನಗೈಯುತ್ತಿರುವ ನಟರಾಜ ಕಂಡುಬರುತ್ತಾರೆ. ಈ ಶಿಲಾ ಫಲಕವನ್ನು ಒಂಭತ್ತು ಭಾಗಗಳಾಗಿ ವಿಂಗಡಿಸಿದ್ದು, ಮಧ್ಯದ ಭಾಗ ಶಿವನ ನರ್ತನಕ್ಕೆ ಅನುಕೂಲವಾಗುವಂತೆ ದೊಡ್ಡದಾಗಿದೆ. ಉಳಿದಂತೆ ಅಷ್ಟದಿಕ್ಪಾಲಕರು ತಮ್ಮ ವಾಹನಗಳ ಮೇಲೆ ತಮ್ಮ ಪತ್ನಿಯರೊಂದಿಗೆ ಆಸೀನರಾಗಿರುವ ಆಕೃತಿಯನ್ನು ತೋರಿಸಲಾಗಿದೆ. ಈ ಎಲ್ಲ ಆಕೃತಿಗಳನ್ನು ಸುಲುವಿನ ಕೆತ್ತನೆ ಇರುವ ಪಟ್ಟಿಕೆಗಳಿಂದ ವಿಭಾಗಿಸಲಾಗಿದೆ. ಇವುಗಳಲ್ಲಿ ಇಂದ್ರ, ವರುಣ, ಅಗ್ನಿ, ಯಮ, ಕುಬೇರ, ನೈರುತ್ಯ, ವಾಯು, ಈಶಾನ ಇವುಗಳು ಕೆತ್ತಲ್ಪಟ್ಟಿವೆ. ನವರಂಗದ ವಲಭಿಯಲ್ಲಿಯೇ ಶೇಷಶಾಯಿ ವಿಷ್ಣುವಿನ ಸುಂದರವಾದ ಶಿಲ್ಪ ಕೆತ್ತನೆಯು ಇದೆ. ಈ ಶಿಲ್ಪದಲ್ಲಿ ವಿಷ್ಣು ದ್ವಿಭುಜನಾಗಿದ್ದು ಎಡಗೈಯನ್ನು ತಲೆಗೆ ಅಸರೆಯಾಗಿಟ್ಟುಕೊಂಡು ಬಲಗೈ ವಿಸ್ಮಯ ಚಿಹ್ನೆಯಲ್ಲಿ ಐದು ಹೆಡೆಯ ಸರ್ಪದ ಹಾಸಿಗೆಯಲ್ಲಿ ಮಲಗಿದ್ದಾನೆ.

ಬಿಡಿ ಶಿಲ್ಪಗಳಲ್ಲಿ ದುರ್ಗಾ ಮಹಿಷಮರ್ದಿನಿ ಶಿಲ್ಪ, ವೀಣಾಧರ ಶಿವನ ಶಿಲ್ಪ ಸಪ್ತಮಾತೃಕೆಯರು, ವಿನಾಯಕ, ದಕ್ಷಬ್ರಹ್ಮ, ಭೈರವ, ವೀರಭದ್ರ, ವಿಷ್ಣು, ಸೂರ್ಯ, ದುರ್ಗಾಲ-ಮಹೀಷಮರ್ದಿನಿ ಶಿಲ್ಪವನ್ನು ಉಳಿದು ಮಿಕ್ಕೆಲ್ಲ ಶಿಲ್ಪಗಳು ತಮ್ಮ ಮೂಲ ಸ್ಥಳದಲ್ಲಿ ಇಲ್ಲ. ಇವುಗಳನ್ನು ದೇವಸ್ಥಾನದ ಆವರಣದಲ್ಲಿಯೇ ಸಂಗ್ರಹಿಸಿ ಇಟ್ಟಿದ್ದಾರೆ. ಮಹಿಷಮರ್ದಿನಿ ಶಿಲ್ಪವು ಮಾತ್ರ ಮೂಲ ಅಧಿಷ್ಠಾನದ ಮೇಲೆ ಇಂದಿಗೂ ಹಾಗೆಯೇ ಉಳಿದುಕೊಂಡು ಬಂದಿದೆ. ಅಷ್ಟಭುಜಗಳನ್ನು ಹೊಂದಿರುವ ದೇವಿಯು ನೀಳವಾದ ದೇಹವನ್ನು ಹೊಂದಿದ್ದಾಳೆ. ಉದ್ದನೆಯ ಕಿರೀಟ ಹಿಂಗೈಗಳಲ್ಲಿ ಪ್ರಯೋಗ ಮುದ್ರೆಯಲ್ಲಿ ಶಂಖ, ಚಕ್ರಗಳು, ಖಡ್ಗ, ಬಾಣ ಮತ್ತು ಬಿಲ್ಲು, ಖೇಟ ಹಾಗೂ ತ್ರಿಶೂಲಗಳನ್ನು ಹಿಡಿದಿದ್ದಾಳೆ. ದೇವಿಯ ತಲೆಯ ಹಿಂಭಾಗದಲ್ಲಿ ಪ್ರಭಾಮಂಡಲವಿದೆ. ಅಂತೆಯೇ ಕೈಗಳಿಗೆ ಆಸರೆಯಾಗಿ ಹಿಂಭಾಗದಲ್ಲಿ ಸರಳವಾದ ಪ್ರಭಾವಳಿ ಇದೆ. ಮುಮ್ಮುಖವಾಗಿ ನಿಂತಿರುವ ದೇವಿ ಎಡಗಾಲನ್ನು ಅರ್ಧಕ್ಕೆ ಮಡಿಸಿ ಮಹಿಷನ ಕತ್ತನ್ನು ಎಡಗಾಲಿನಿಂದ ತುಳಿದು ಬಲಗೈಯಿಂದ ಶೂಲವನ್ನು ಅವನ ಬೆನ್ನಿನಲ್ಲಿ ಚುಚ್ಚಿದಂತೆ ತೋರುತ್ತದೆ. ಮಹಿಷಿ ಶಿರದ ಭಾಗವನ್ನು ದೇವಿಯು ಆಗಲೇ ಕತ್ತರಿಸಿದ್ದು, ಅದರ ಒಳಭಾಗದಿಂದ ಮನುಷ್ಯರೂಪಿಯಾದ ಮಹಿಷಾಸುರನು

ಶಿರದ ಭಾಗದಿಂದ ಹೊರಬರುತ್ತಿದ್ದಾನೆ. ದೇವಿಯು ಎಡಗೈಯಲ್ಲಿ ಈ ರಾಕ್ಷಸನ ಕೇಶವನ್ನು ಹಿಡಿದು ಸಂಹರಿಸಲು ಸನ್ನದ್ಧಳಾಗಿರುವಂತೆ ತೋರುತ್ತದೆ. ಶಿಲ್ಪವೂ ಸಿಂಹಪೀಠದ ಮೇಲೆ ನಿಂತಿದೆ. ಮಹಿಷ ಹಿಂಭಾಗವನ್ನು ದೇವಿಯ ವಾಹನವಾದ ಸಿಂಹವು ಕಚ್ಚುತ್ತಿರುವಂತೆ ತೋರಿಸಲಾಗಿದೆ. ಈ ಶಿಲ್ಪದ ಭಂಗಿ ಹಾಗೂ ಶೈಲಿ ಬಾದಾಮಿ ಚಾಲುಕ್ಯರ ಶಿಲ್ಪಗಳನ್ನು ನೆನಪಿಗೆ ತರುತ್ತದೆ.

ವೀಣಾಧರ ಶಿವನ ಶಿಲ್ಪದಲ್ಲಿ ಶಿವನು ತನ್ಮಯನಾಗಿ ವೀಣೆ ನುಡಿಸುತ್ತಾ ಪದ್ಮಾಸನದಲ್ಲಿ ತನ್ನ ವಾಹನವಾದ ನಂದಿಯ ಮೇಲೆ ಕುಳಿತಿದ್ದಾನೆ. ಎತ್ತರವಾದ ಜಟಾಮಕುಟ ಕುಂಡಲಗಳು ನಾಗಬಂಧ ಉದರಬಂಧ, ಯಜ್ಞೋಪವೀತಗಳಿಂದ ಅಲಂಕೃತವಾದ ಶಿವ ಚತುರ್ಭುಜನಾಗಿದ್ದಾನೆ. ಹಿಂದಿನ ಎಡಗೈಗಳಲ್ಲಿ ತ್ರಿಶೂಲ ಮತ್ತು ಡಮರುಗಳನ್ನು ಹಿಡಿದಿದ್ದಾನೆ. ಮುಂದಿನ ಎರಡು ಕೈಯಲ್ಲಿ ವೀಣೆ ಇದೆ. ವೀಣೆಯನ್ನು ಹಿಡಿದಿರುವ ವಿಧ ಅತ್ಯಂತ ಆಕರ್ಷಕವಾದದ್ದು. ವೀಣೆಯ ತಂಬೂರಿಯ ಭಾಗವನ್ನು ಎಡಭುಜದ ಮೇಲೆ ಎತ್ತಿಕೊಂಡು ಅದಕ್ಕೆ ಹೊಂದಿಕೊಂಡಿರುವ ತಂತಿಗಳು ಚಾಚಿಕೊಂಡಿರುವ ಕಟ್ಟಿಗೆಗಳನ್ನು ಎರಡು ಕೈಗಳಲ್ಲಿ ನುಡಿಸುತ್ತಿದ್ದಾನೆ. ಇದು ಅತ್ಯಂತ ಅಪರೂಪದ ದೃಶ್ಯ ಎಂದೇ ಹೇಳಬಹುದು. ಇದೇ ರೀತಿ ಸೂರ್ಯ, ದಕ್ಷಬ್ರಹ್ಮ, ವೀರಭದ್ರ ಆಕೃತಿಗಳು ಕೂಡ ಅತ್ಯಂತ ನೈಜವಾಗಿ ಮೂಡಿಬಂದಿದ್ದು ಇದೇ ಶೈಲಿಯನ್ನು ಹೊಂದಿದೆ.

ದೇವಸ್ಥಾನದ ಕಾಲದ ಬಗ್ಗೆ ಸೂಕ್ಷ್ಮವಾಗಿ ನಾವು ಈ ಮೇಲೆ ತಿಳಿಸಿದ್ದೇವೆ. ಡಾ.ಎಂ.ಎಚ್.ಕೃಷ್ಣರವರು ಈ ದೇವಾಲಯವನ್ನು ಸುಮಾರು ಕ್ರಿ.ಶ. ೮ನೇ ಇಸವಿಗೆ ಇದನ್ನು ಸೇರಿಸುತ್ತಾರೆ. ಡಾ. ಐ.ಕೆ.ಶರ್ಮರವರು ಇದನ್ನು ಎರಡನೇ ರಾಜಮಲ್ಲನ ಆಳ್ವಿಕೆಯ ಕಾಲಕ್ಕೆ ಸೇರಿಸುತ್ತಾರೆ. ಅಂದರೆ ಸುಮಾರು ಕ್ರಿ.ಶ. ೮೭೦ರ ನಂತರ ಈ ದೇವಸ್ಥಾನ ನಿರ್ಮಾಣವಾಗಿರಬಹುದೆಂದು ಅವರು ತರ್ಕಿಸುತ್ತಾರೆ. ಆದರೆ ಕೇವಲ ವಾಸ್ತು ಮತ್ತು ಶಿಲ್ಪ ಶೈಲಿಯಿಂದ ಮಾತ್ರ ಈ ಕಾಲವನ್ನು ಊಹಿಸಿ ನಿರ್ಧರಿಸಿದ್ದಾರೆಯೇ ಹೊರತು ಯಾವುದೇ ಶಾಸನೋಕ್ತ ದಾಖಲೆಗಳಿಂದ ಅಲ್ಲ. ಆದುದರಿಂದ ಈ ದೇವಸ್ಥಾನವು ಚೋಳರ ಆಕ್ರಮಣದ ನಂತರ ಅದರಲ್ಲೂ ರಾಜರಾಜ ಚೋಳನ ಕಾಲದಲ್ಲಿ ಹಲವಾರು ಬದಲಾವಣೆಗಳನ್ನು ಅಥವಾ ನವೀಕರಣವನ್ನು ಹೊಂದಿರಬಹುದೆಂದು ನಾವು ಗುರುತಿಸಬಹುದಾಗಿದೆ.

ನವರಂಗದಲ್ಲಿ ಕಂಬಗಳು ಇದಕ್ಕೆ ಪೂರಕವಾಗಿ ಚೋಳ ಶೈಲಿಯ ಕಂಬಗಳೆಂಬುದನ್ನು ನಾವು ಇಲ್ಲಿ ಗಮನಿಸಬೇಕು. ಎಲ್ಲಕ್ಕಿಂತ ಮಿಗಿಲಾಗಿ ದೇವಸ್ಥಾನದ ಹೊರ ಭಿತ್ತಿಯ ಭಾಗದ ಕೂಡುಗಳಲ್ಲಿ ಅಲಂಕೃತ ಯಕ್ಷ ಹಾಗೂ ಅಪ್ಸರೆಯರ ಶಿಲ್ಪಗಳಿವೆ. ಇವುಗಳಲ್ಲದೆ ಅಂಧಕಾಸುರಮರ್ಧನ, ದಕ್ಷಿಣಾಮೂರ್ತಿ, ವಿಷ್ಣು, ಉಗ್ರನರಸಿಂಹ, ಬ್ರಹ್ಮ, ಭೈರವ, ದುರ್ಗಾ ಮುಂತಾದ ಸುಂದರ ಶಿಲ್ಪಕೃತಿಗಳಿವೆ. ಗೋಡೆಯ ಮೇಲೆ ರಾಮಾಯಣಕ್ಕೆ ಸಂಬಂಧಿಸಿದ ಹಲವಾರು ಸನ್ನಿವೇಶಗಳನ್ನು ಕೆತ್ತಲಾಗಿದೆ. ಈ ಶಿಲ್ಪಗಳು ಚೋಳ ಶೈಲಿಯನ್ನು ಪ್ರತಿಬಿಂಬಿಸುತ್ತವೆ. ವಿಮಾನವು ಚೋಳರ ಕಾಲದಲ್ಲಿ ಅಲ್ಪ ಸ್ವಲ್ಪ ಬದಲಾವಣೆಗೆ ಒಳಗಾಗಿರುವ ಸಾಧ್ಯತೆಗಳನ್ನು

ತಳ್ಳಿ ಹಾಕುವಂತಿಲ್ಲ. ಗಾರೆ ಶಿಲ್ಪಗಳನ್ನು ಗಮನಿಸಿದಾಗ ಇವುಗಳ ವಸ್ತ್ರಾಲಂಕಾರವು ಸುಮಾರು ಕ್ರಿ.ಶ. ೧೧ನೇ ಶತಮಾನದ ಶಿಲ್ಪಗಳಲ್ಲಿ ಕಂಡುಬರುವ ಅಲಂಕಾರವನ್ನು ನೆನಪಿಗೆ ತರುತ್ತದೆ. ಈ ದೃಷ್ಟಿಯಿಂದ ನರಸಮಂಗಲದ ರಾಮೇಶ್ವರ ದೇವಾಲಯದಲ್ಲಿ ಚೋಳರ ಕೊಡುಗೆ ಹೆಚ್ಚಿನ ಅಂಶದಲ್ಲಿದೆ ಎಂಬುದನ್ನು ಇಲ್ಲಿರುವ ಶಿಲ್ಪಗಳು, ದೇವಾಲಯದ ವಿಮಾನ ಮತ್ತು ಕಂಬಗಳ ಆಧಾರದಿಂದ ದೃಢಪಡಿಸಬಹುದು.

## ಅರ್ಕೇಶ್ವರ ದೇವಾಲಯ, ಹೊಂಗನೂರು

ಚಾಮರಾಜನಗರ ಜಿಲ್ಲೆಯ ಅದೇ ತಾಲೂಕಿಗೆ ಹೊಂಗನೂರು ಗ್ರಾಮ ಸೇರಿದೆ. ಊರಿನ ಹೊರಗೆ ಪೂರ್ವ ದಿಕ್ಕಿಗೆ ಪೂರ್ವಾಭಿಮುಖವಾಗಿ ಈ ದೇವಾಲಯವಿದೆ. ಹಲವಾರು ಶಾಸನಗಳ ಉಲ್ಲೇಖಗಳುಳ್ಳ ಈ ಗ್ರಾಮ ಗಂಗರ ಕಾಲದಿಂದ ಹಿಡಿದು ಒಡೆಯರ ಕಾಲದವರೆಗೂ ನಿರಂತರವಾಗಿ ಚಟುವಟಿಕೆಯ ಕೇಂದ್ರವಾಗಿತ್ತು. ಗಂಗರ ದೊರೆ ಕೊಂಗುಣಿವರ್ಮನ ಶಾಸನವು ಕಂಡುಬರುತ್ತದೆ.[೭]

ಅಲ್ಲದೆ ನಂತರ ಚೋಳರ, ಹೊಯ್ಸಳರ ಕಾಲದ ಶಾಸನಗಳು ಹಾಗೂ ವಿಜಯನಗರದ ಶ್ರೀಕೃಷ್ಣ ದೇವರಾಯನು ಈ ಗ್ರಾಮವನ್ನು ಅಗ್ರಹಾರವನ್ನಾಗಿ ಮಾಡಿ ಇದಕ್ಕೆ ಹಲವಾರು ದಾನವನ್ನು ನೀಡಿದ ವಿವರವನ್ನು ತಿಳಿಸುವ ಶಾಸನ ಇಲ್ಲಿದೆ. ಕಂಠೀರವ ನರಸರಾಜ ಒಡೆಯರ ಕಾಲದ ಒಂದು ಶಾಸನವು ಇಲ್ಲಿ ಕಂಡುಬಂದಿದೆ.

ಈ ಶಾಸನವನ್ನು ಗಮನಿಸಿದಾಗ ಇಲ್ಲಿನ ಅರ್ಕೇಶ್ವರ ದೇವಾಲಯ ಪ್ರಾಯಶಃ ಗಂಗರ ಕಾಲದ ನಿರ್ಮಾಣದಂತೆ ತೋರುತ್ತದೆ. ಬಹುಶಃ ಮೊದಲನೇ ರಾಜರಾಜಚೋಳನ ಕಾಲದಲ್ಲಿ ಅಭಿವೃದ್ಧಿ ಹೊಂದಿರುವ ಸಾಧ್ಯತೆಗಳನ್ನು ತಳ್ಳಿ ಹಾಕುವಂತೆ ಇಲ್ಲ.

ಅರ್ಕೇಶ್ವರ ದೇವಾಲಯ ಒಂದು ವಿಶಾಲವಾದ ದೇವಾಲಯವಾಗಿದೆ. ತಳವಿನ್ಯಾಸದಲ್ಲಿ ಗರ್ಭಗೃಹ, ಶುಕನಾಸಿ ಸ್ವಲ್ಪ ಮುಚ್ಚಿದ ಅರ್ಧಮಂಟಪ, ನವರಂಗ ಇವುಗಳು ಮೂಲ ಸ್ವರೂಪದ್ದಾಗಿವೆ. ನವರಂಗದ ಮುಂದೆ ಪ್ರಾಯಶಃ ನಂತರದ ಕಾಲದಲ್ಲಿ ನಿರ್ಮಿಸಿರಬಹುದಾದ ವಿಶಾಲವಾದ ಮಂಟಪವಿದ್ದು, ಪೂರ್ವದಿಕ್ಕಿಗೆ ಒಂದು ಮಹಾದ್ವಾರ ಮತ್ತು ದಕ್ಷಿಣ ಭಾಗದಲ್ಲಿ ಮಂಟಪದ್ವಾರ ಕಂಡುಬರುತ್ತದೆ. ಅಲ್ಲದೆ ಉತ್ತರ ಭಾಗದಲ್ಲೂ ಕೂಡ ಒಂದು ಕೋಷ್ಠ ದೇವಾಲಯವಿದೆ. ಗರ್ಭಗೃಹದ ದಕ್ಷಿಣ ಭಾಗದಲ್ಲಿ ಹೊರಗೋಡೆಗೆ ಹೊಂದಿಕೊಂಡಂತೆ ಒಂದು ಚಿಕ್ಕ ಕೋಷ್ಠ ಗುಡಿ ನಿರ್ಮಿಸಲಾಗಿದ್ದು, ಇದರಲ್ಲಿ ವಿಷ್ಣುವಿನ ಶಿಲ್ಪವನ್ನು ಇಡಲಾಗಿದೆ. ಈ ದೇವಸ್ಥಾನದ ಗರ್ಭಗೃಹ ೩ x ೩ ಮೀಟರ್ , ಶುಕನಾಸ ೩ x ೩ ಮೀಟರ್ , ಅರ್ಧಮಂಟಪ ೨ x ೨ ಮೀಟರ್ ಹಾಗೂ ನವರಂಗ ೭ x ೭ ಮೀಟರ್ ವಿಸ್ತೀರ್ಣವುಳ್ಳದ್ದಾಗಿದೆ. ನವರಂಗದ ಮುಂದೆ ಇರುವ ಮಹಾಮಂಟಪ ನಂತರ ಕಾಲದ್ದು ಎಂದು ಈ ಮೇಲೆ ತಿಳಿಸಲಾಗಿದೆ. ಇದರ ವಿಸ್ತೀರ್ಣ ೭ x ೧೧ ಮೀಟರ್.

ಈ ದೇವಾಲಯ ಸುಂದರವಾದ ಅಧಿಷ್ಠಾನದ ಮೇಲೆ ನಿರ್ಮಾಣವಾಗಿದೆ. ಅಧಿಷ್ಠಾನ ಮಣ್ಣಿನಲ್ಲಿ ಮುಚ್ಚಿಹೋಗಿದೆ. ಈಗ ಕೇವಲ ಎರಡು ದಿಂಡುಗಳು ಹೊರಗೆ ಕಾಣುತ್ತವೆ. ಇದರ ಕೆಳಭಾಗದಲ್ಲಿ ಬಹುಶಃ ತ್ರಿಪಟ್ಟಕುಮುದ, ಕಂಪ, ಜಗತಿ, ಉಪಾನಗಳಿರಬಹುದೆಂದು ತೋರುತ್ತದೆ. ಅಧಿಷ್ಠಾನದ ತ್ರಿಪಟ್ಟ ಕುಮುದದ ಮೇಲ್ಭಾಗದಲ್ಲಿ ಸಾಲಾಗಿ ನಿರ್ದಿಷ್ಟ ಅಂತರದಲ್ಲಿ ಬಾರವಾಹಕದಂತೆ ಇರುವ ವ್ಯಾಳವಾರಿ ಇದೆ. ಸಿಂಹಗಳು ಮುಮ್ಮುಖವಾಗಿದ್ದು ಎರಡು ಮುಂಗೈಗಳನ್ನು ಮೇಲಕ್ಕೆತ್ತಿ ಹೊರ ಬಿಗಿಯುತ್ತಿದ್ದಂತೆ ಕೆತ್ತಲಾಗಿದೆ. ಇಷ್ಟು ನೈಜವಾದ ಮತ್ತು ಅಲಂಕಾರಿಕವಾದ ಅಧಿಷ್ಠಾನ ಮಾರೇಹಳ್ಳಿಯ ಅಮೃತೇಶ್ವರ ಮತ್ತು ಅರಗದ ದುರ್ಗಾ, ತಲಕಾಡಿನ ಮರುಳೇಶ್ವರ ದೇವಾಲಯಗಳಲ್ಲಿ ಕಂಡುಬರುತ್ತವೆ.

ಏರುವಿನ್ಯಾಸದಲ್ಲಿ ಅರೆಕಂಬಗಳ ಸಾಲು ಮತ್ತು ಮಧ್ಯದಲ್ಲಿ ದೇವಕೋಷ್ಟಕಗಳು ಕಂಡುಬರುತ್ತವೆ. ಅರೆಕಂಬಗಳು ಚಪ್ಪಟೆಯಾದ ದಿಂಡು, ದಿಂಬು ಮತ್ತು ಪಲಗೈಗಳನ್ನು ಹೊಂದಿವೆ. ದೇವಕೋಷ್ಟಗಳು ಶಾಲ ಮಾದರಿಯ ಶಿಖರಗಳನ್ನು ಅರ್ಧ ಭೇದಿತ ಕಂಬಗಳನ್ನು ಹೊಂದಿವೆ. ಭಿತ್ತಿಯ ಮೇಲಿನ ಅರೆಕಂಬಗಳು ಅಧಿಷ್ಠಾನದ ವ್ಯಾಳವಾರಿಯ ವ್ಯಾಳಗಳು ನೇರವಾಗಿ ನಿರ್ದಿಷ್ಟ ಅಂತರದಲ್ಲಿದೆ. ಅಲ್ಲದೆ ಕಪೋತವು ಅಲಂಕಾರಿಕ ಕೂಡುಗಳನ್ನು ಹೊಂದಿದೆ. ಕೂಡುಗಳು ಕೂಡ ಕಂಬದ ಮೇಲೆ ನೇರವಾಗಿ ಇರುವಂತೆ ಕೆತ್ತಲಾಗಿದೆ. ಕಪೋತದ ಮೇಲ್ಭಾಗದಲ್ಲಿ ದಂತಗಳನ್ನು ಹೊಂದಿದ ಪೀಠವಾಗಿರಬಹುದು. ಕಪೋತದ ಕೆಳಗಡೆ ವಲಭಿಯಲ್ಲಿ ಹಲವಾರು ತೆಳು ಉಬ್ಬು ಶಿಲ್ಪ ಕಂಡುಬರುತ್ತವೆ. ಈ ಶಿಲ್ಪಗಳು ಗರ್ಭಗೃಹ ಮತ್ತು ಶುಕನಾಸದ ಭಾಗದಲ್ಲಿ ಮಾತ್ರ ಕಂಡುಬರುವುದು ವಿಶೇಷ. ಇವುಗಳಲ್ಲಿ ನರ್ತನ ಭಂಗಿಯಲ್ಲಿ ಸ್ತ್ರೀಶಿಲ್ಪ, ಸಂಗೀತಗಾರರು ಇನ್ನಿತರ ಹಲವಾರು ಶಿಲ್ಪಗಳು ಕಂಡುಬರುತ್ತವೆ.

ಈ ದೇವಸ್ಥಾನದ ಹೊರವಿನ್ಯಾಸವು ಕೂಡ ಕುಂತೂರಿನ ಮಹಾಲಿಂಗೇಶ್ವರ ದೇವಾಲಯದ ಹೊರಭಿತ್ತಿಯನ್ನು ಜ್ಞಾಪಕಕ್ಕೆ ತರುತ್ತದೆ. ಗರ್ಭಗೃಹ ಮತ್ತು ಶುಕನಾಸದ ಬಾಗಿಲವಾಡ ಕೂಡ ಸರಳವಾದ ಕೆತ್ತನೆಯಿಂದ ಕೂಡಿದೆ. ನವರಂಗದ ನಾಲ್ಕು ಕಂಬಗಳು ಮತ್ತು ಶಿಲ್ಪಗಳುಳ್ಳ ಭುವನೇಶ್ವರಿಗಳಲ್ಲಿ ಚೌಕವಾದ ಪೀಠ, ದುಂಡಾದ ದಿಂಡನ್ನು ಈ ಕಂಬಗಳು ಹೊಂದಿವೆ. ದಿಂಡಿನ ಮೇಲ್ಭಾಗದ ಹೂದಾನಿ ಆಕಾರವಾಗಿದ್ದು, ದಿಂಬಿನ ಬೋದಿಗೆ ಮತ್ತು ಪಲಗೈಗಳನ್ನು ಹೊಂದಿವೆ. ಕಂಬಗಳ ಮಧ್ಯಭಾಗದಲ್ಲಿ ಮೂರು ಸಣ್ಣ ಸಣ್ಣ ಭಾಗಗಳಾಗಿ ವಿಭಾಗಿಸಿ ಇವುಗಳ ಮೇಲೆ ನರ್ತನ ಭಂಗಿಯಲ್ಲಿರುವ ತೆಳು ಉಬ್ಬುಶಿಲ್ಪಗಳನ್ನು ಕೆತ್ತಲಾಗಿದೆ. ಈ ಕಂಬಗಳು ಆಲೂರು ಮತ್ತು ಮದ್ದೂರು ಹಾಗೂ ವಿಜಯಪುರಗಳಲ್ಲಿ ಕಂಡುಬರುವ ಕಂಬಗಳ ಮಾದರಿಯನ್ನು ಹೋಲುತ್ತವೆ. ನವರಂಗದ ಮೇಲ್ಛಾವಣಿ ಮದ್ದೂರು, ಆಲೂರು ಮತ್ತು ನರಸಮಂಗಲದಂತೆ ವಿಶೇಷವಾಗಿದ್ದು, ಅಷ್ಟದಿಕ್ಪಾಲಕರ ಮಧ್ಯದಲ್ಲಿ ಶಿವನಟರಾಜನನ್ನು ಬಿಂಬಿಸಲಾಗಿದೆ. ಭುವನೇಶ್ವರಿಯನ್ನು ಒಂದು ಹಂತದವರೆಗೆ ಎತ್ತರಿಸಲಾಗಿದ್ದು, ಒಳಚಪ್ಪಡಿಗಳ ಮೇಲೆ ನವಗ್ರಹಗಳ ಶಿಲ್ಪಗಳನ್ನು ತೋರಿಸಲಾಗಿದೆ.

ಈ ಶಿಲ್ಪಗಳು ಸುಮಾರು ಐದು ಅಂಗುಲ ಎತ್ತರವಿದ್ದು, ಉತ್ತಮವಾಗಿ ಮೂಡಿ ಬಂದಿವೆ. ಭುವನೇಶ್ವರಿಯಲ್ಲಿ ಶಿಲಾಫಲಕವನ್ನು ಒಂಭತ್ತು ಕಟ್ಟುಗಳನ್ನಾಗಿ ವಿಭಜಿಸಿ ಮಧ್ಯದಲ್ಲಿ ನಟರಾಜನನ್ನು ಕೆತ್ತಲಾಗಿದೆ. ನಟರಾಜನ ಸುತ್ತಲೂ ಪತ್ನೀ ಸಮೇತರಾಗಿ ತಮ್ಮ ತಮ್ಮ ವಾಹನಗಳ ಮೇಲೆ ಆಯುಧಗಳನ್ನು ಹಿಡಿದು ಆಸೀನರಾಗಿರುವ ಅಷ್ಟದಿಕ್ಪಾಲಕರ ಶಿಲ್ಪಗಳಿವೆ. ಈಶಾನ್ಯ, ವಾಯು, ಅಗ್ನಿ, ಕುಬೇರ, ಇಂದ್ರ, ವರುಣ, ಯಮ, ನಿರಋತಿ ಇವರುಗಳ ಶಿಲ್ಪಗಳು ಕಂಡುಬರುತ್ತವೆ. ಈ ಶಿಲಾ ಫಲಕವೂ ಕೂಡ ನರಸಮಂಗಲ, ಆಲೂರು ಮತ್ತು ಮದ್ದೂರುಗಳ ಶಿಲ್ಪ ಗುಂಪಿಗೆ ಸೇರುತ್ತದೆ. ನವರಂಗದ ಬಾಗಿಲವಾಡವು ಕೂಡ ಸರಳ ಕೆತ್ತನೆ ಹೊಂದಿದೆ. ನವರಂಗದಲ್ಲಿ ಗಣಪತಿ, ಸೂರ್ಯ ಮತ್ತು ಭೈರವ ಶಿಲ್ಪಗಳಿವೆ. ಈ ಎಲ್ಲ ಶಿಲ್ಪಗಳು ಕ್ರಿ.ಶ. ೧೧-೧೨ನೇ ಶತಮಾನದ ಚೋಳ ಶಿಲ್ಪಶೈಲಿಯನ್ನು ಪ್ರತಿಬಿಂಬಿಸುತ್ತವೆ.

### ಪಾರ್ಶ್ವನಾಥ ಬಸದಿ(ಕನಕಗಿರಿ), ಮಲೆಯೂರು

ಚಾಮರಾಜನಗರ ಜಿಲ್ಲೆಯ ಅದೇ ತಾಲೂಕಿನ ಒಂದು ಜೈನಧರ್ಮದ ಪ್ರಸಿದ್ಧ ಕೇಂದ್ರ ಈ ಗ್ರಾಮದ ಕನಕಗಿರಿ ಬೆಟ್ಟದ ಮೇಲೆ ಪಾರ್ಶ್ವನಾಥ ಬಸದಿ ಇದೆ. ಈ ಬಸದಿಯ ಪೂರ್ವಾಭಿಮುಖವಾಗಿದ್ದು, ದ್ರಾವಿಡ ವಿಮಾನವನ್ನು ಹೊಂದಿದೆ. ಗರ್ಭಗೃಹ ಶುಕನಾಸ, ನವರಂಗ ಮತ್ತು ಮಹಾಮಂಟಪಗಳಿಂದ ಕೂಡಿದೆ.

ಪಾರ್ಶ್ವನಾಥ ಬಸದಿಯು ಚಿಕ್ಕಹನಸೋಗೆಯ ಆದಿನಾಥ ಬಸದಿಯಂತೆ ಮೂಲಸಂಘ, ದೇಸಿಯಗಣ ಮತ್ತು ಪುಸ್ತಕಗುಚ್ಛ ಸಂಪ್ರದಾಯಕ್ಕೆ ಸೇರಿದ ಬಸದಿಯಾಗಿದೆ. ಈ ಬಸದಿಗೆ ಸಂಬಂಧಿಸಿದಂತೆ ಕಂಡುಬರುವ ಅತ್ಯಂತ ಪ್ರಾಚೀನ ಶಾಸನವೆಂದರೆ ಕ್ರಿ.ಶ. ೧೧೮೧ನೇ ಇಸವಿಗೆ ಸೇರಲ್ಪಟ್ಟ ದಾನ ಶಾಸನವಾಗಿದೆ. ಈ ಶಾಸನದಲ್ಲಿ ಯಾವುದೇ ರಾಜನ ಉಲ್ಲೇಖಗಳು ಕಂಡುಬರುವುದಿಲ್ಲ. ಅಚ್ಚುತವೀರೇಂದ್ರ ಎಂಬ ರಾಜ ಪ್ರಮುಖನು ಇಲ್ಲಿನ ವಿದ್ಯಾನಂದಸ್ವಾಮಿಯ ಮೂಲಕ ಬಸದಿಯಲ್ಲಿ ಆಚಾರ್ಯರಿಗೆ ದಾನಗಳನ್ನು ನೀಡಿದ ವಿವರವನ್ನು ಕೊಡುತ್ತದೆ. ಕ್ರಿ.ಶ. ೧೧೮೧ರ ಕಾಲ ಹೊಯ್ಸಳರ ಆಡಳಿತ ಕಾಲವಾಗಿದೆ. ಆದರೆ ಹೊಯ್ಸಳ ದೇವಾಲಯವನ್ನು ಉಲ್ಲೇಖಿಸುವ ಯಾವುದೇ ಶಾಸನ ಇಲ್ಲಿ ಕಂಡುಬರುವುದಿಲ್ಲ. ನಂತರದ ಅತೀ ಪ್ರಮುಖವಾದ ಶಾಸನವೆಂದರೆ ವಿಜಯನಗರದ ದೊರೆ ಹರಿಹರರಾಯನ ಶಾಸನವಾಗಿದೆ. ಹರಿಹರರಾಯನು ಕನಕಗಿರಿಯ ವಿಜಯ ಪಾರ್ಶ್ವನಾಥನ ಪೂಜೆಗಾಗಿ ನೀಡಿದ ದಾನಧರ್ಮಗಳನ್ನು ಉಲ್ಲೇಖಿಸುತ್ತದೆ.[೮]

ಈ ಭಾಗದ ಇತರೆ ದೇವಾಲಯಗಳಂತೆ ಈ ಬಸದಿಯು ಕೂಡ ವಿವಿಧ ಹಂತಗಳಲ್ಲಿ ನಿರ್ಮಾಣವಾಗಿದೆ. ಏರುವಿನ್ಯಾಸದಲ್ಲಿ ಮತ್ತು ಅಧಿಷ್ಠಾನದ ಮಾದರಿಯಲ್ಲಿ ಗಂಗ ಚೋಳ ಕಾಲದ ದ್ರಾವಿಡ ಶೈಲಿಯ ವಿಮಾನವನ್ನು ಹೋಲುವ ಗರ್ಭಗೃಹ ೩ x ೩ ಮೀಟರ್, ಶುಕನಾಸ ೨ x ೨.೫೦ ಮೀಟರ್, ನವರಂಗ ೪ x ೪.೫ ಮೀಟರ್ ಇದೆ. ಈ ಭಾಗಗಳೆಲ್ಲವು ಗಂಗ ಮತ್ತು ಚೋಳ ಶೈಲಿಯ ಏರುವಿನ್ಯಾಸವನ್ನು ಒಳವಿನ್ಯಾಸವನ್ನು ಹೊಂದಿವೆ.

ನವರಂಗದ ಮುಂದೆ ಮತ್ತೆ ಎರಡು ಮಂಟಪಗಳು ಇದ್ದು ಅವುಗಳು ೭ x ೧೨ ಮೀಟರ್ ಮತ್ತು ೭ x ೧೩ ಮೀಟರ್ ವಿಸ್ತೀರ್ಣಗಳನ್ನು ಹೊಂದಿವೆ.

ಗರ್ಭಗೃಹ, ಸುಕನಾಸ, ನವರಂಗಗಳು ಮಾತ್ರ ಪ್ರಾಚೀನ ಕಾಲದ್ದಾಗಿದ್ದು ಉಳಿದೆರಡು ಮಂಟಪಗಳು ಬಹುಶಃ ವಿಜಯನಗರದ ಮತ್ತು ವಿಜಯನಗರೋತ್ತರ ಕಾಲದಲ್ಲಿ ನಿರ್ಮಾಣವಾಗಿದೆ ಎಂದು ತೋರುತ್ತದೆ.

ಬಸದಿಯ ಅಧಿಷ್ಠಾನವು ಬಹುತೇಕವಾಗಿ ಮಣ್ಣಲ್ಲಿ ಹೂತು ಹೋಗಿದ್ದು, ಈಗ ಉಳಿದಿರುವ ಭಾಗವನ್ನು ಗಮನಿಸಿದರೆ ನಾಲ್ಕು ದಿಂಡುಳ್ಳ ಅಧಿಷ್ಠಾನ ಇದಾಗಿತ್ತೆಂದು ತೋರುತ್ತದೆ. ಈಗ ತ್ರಿಪಟ್ಟಕುಮುದ, ಕಂಪ ಮತ್ತು ಪ್ರತಿ ಇವುಗಳು ಕಾಣುತ್ತವೆ. ಉಪಾನ ಮತ್ತು ಜಗತಿಗಳು ಮುಚ್ಚಿ ಹೋಗಿವೆ.

ದೇವಸ್ಥಾನದ ಹೊರಗೋಡೆಯ ಮೇಲೆ ಗರ್ಭಗೃಹದ ಮತ್ತು ನವರಂಗದ ಭಾಗಗಳು ಮಾತ್ರ ಸರಳವಾದ ಚಪ್ಪಟೆಯಾದ ಅರೆಗಂಬಗಳನ್ನು ಹೊಂದಿವೆ. ದಿಂಬಿನ ಬೋದಿಗೆ, ಅಬ್ಯಾಕಸ್ ಮತ್ತು ಚಾಚುಪೀಠಗಳು ಇರುವ ಈ ಅರೆಕಂಬಗಳು ಚೋಳ ರೀತಿಯದ್ದಾಗಿವೆ. ಗರ್ಭಗೃಹದ ಹೊರಗೋಡೆಯ ಮೂರು ಪಾರ್ಶ್ವಗಳಲ್ಲಿ ಅರ್ಧಭೇದಿತ ಕಂಬಗಳ ಮೇಲೆ ಸಾಲು ಶಿಖರಗಳು ಕಂಡುಬರುತ್ತವೆ. ಈ ಬಸದಿಯ ಹೊರವಿನ್ಯಾಸ ಹೊಗನೂರಿನ ಅರ್ಕೇಶ್ವರ ದೇವಾಲಯದ ಹೊರಭಿತ್ತಿಯನ್ನು ಹೋಲುತ್ತದೆ. ಹೊರಭಿತ್ತಿಯಲ್ಲ ಹೊರಚಾಚಿದ ಮತ್ತು ಕೆಳಗಡೆದೆ ಪಟ್ಟಿಕೆಗಳಲ್ಲಿರುವ ಕಪೋತವಿದೆ. ಈ ಕಪೋತವು ಗೋಡೆಗಂಬಗಳ ಮೇಲ್ಭಾಗಕ್ಕೆ ನೇರವಾಗಿಯೇ ಅಲಂಕಾರಿಕ ಕೂಡುಗಳನ್ನು ಹೊಂದಿದೆ. ಇದು ಕೂಡ ಹೊಂಗನೂರಿನ ದೇವಾಲಯವನ್ನು ಜ್ಞಾಪಕಕ್ಕೆ ತರುತ್ತದೆ. ಬಸದಿಯ ಶಿಖರ ದ್ರಾವಿಡ ವಿಮಾನ ಹೊಂದಿದ್ದು, ಬಹುಶಃ ಮೈಸೂರು ಒಡೆಯರ ಕಾಲದಲ್ಲಿ ನಿರ್ಮಾಣವಾಗಿರಬಹುದೆಂದು ತೋರುತ್ತದೆ. ಹೀಗಾಗಿ ವಿಮಾನವನ್ನು ಮತ್ತು ಎರಡು ಮಹಾಮಂಟಪಗಳನ್ನು ಇಲ್ಲಿ ಚರ್ಚಿಸಲಾಗಿಲ್ಲ.

ನವರಂಗದ, ಶುಕನಾಸದ, ಗರ್ಭಗೃಹದ ಮತ್ತು ಛಾವಣಿಗಳಲ್ಲಿ ಯಾವುದೇ ವಿಶೇಷ ಕೆತ್ತನೆ ಕಂಡುಬರುವುದಿಲ್ಲ. ನವರಂಗದ ಕಂಬಗಳು ಮಾತ್ರ ಚಿಕ್ಕಹನಸೋಗೆಯ ಆದಿನಾಥ ಬಸದಿಯ ಕಂಬದಂತೆ ಕಂಡುಬರುತ್ತವೆ. ಇವುಗಳ ಚೌಕಟ್ಟಾದ ಪೀಠ, ದುಂಡಾದ ದಿಂಡು, ಮಧ್ಯದಲ್ಲಿ ಮೂರು ಬಳೆಗಳು, ಕಿರುಕಂಠ, ದಿಂಬಿನ ಬೋದಿಗೆ ಮತ್ತು ಪಲಗೈಗಳನ್ನು ಹೊಂದಿವೆ.

ಕನಕಗಿರಿಯ ಪಾರ್ಶ್ವನಾಥ ಬಸದಿಯ ಗರ್ಭಗೃಹದಲ್ಲಿ, ಏಳು ಹೆಡೆ ಸರ್ಪದ ಕೆಳಗಡೆ ಧ್ಯಾನ ಮುದ್ರೆಯಲ್ಲಿ ಕುಳಿತಿರುವ ಸುಮಾರು ಐದು ಅಡಿ ಎತ್ತರದ ಪಾರ್ಶ್ವನಾಥನ ಶಿಲ್ಪ ಇದೆ. ಪ್ರಭಾವಳಿಯು, ಪದ್ಮಾವತಿ ಮತ್ತು ಧರಣೇಂದ್ರ ಯಕ್ಷರ ಶಿಲ್ಪಗಳನ್ನು ಹೊಂದಿದೆ. ಈ ಶಿಲ್ಪವನ್ನು ಬಳಪದ ಕಲ್ಲಿನಲ್ಲಿ ಕೆತ್ತಲಾಗಿದ್ದು ಚಿಕ್ಕಹನಸೋಗೆಯ ಆದಿನಾಥನ ಶಿಲ್ಪವನ್ನು ಶಿಲ್ಪಶೈಲಿಯಲ್ಲಿ ಜ್ಞಾಪಕಕ್ಕೆ ತರುತ್ತದೆ.

ಜೈನ ಬಸದಿಗಳ ನಿರ್ಮಾಣ ಗಂಗರ ಕಾಲದಲ್ಲಿ ಜನಪ್ರಿಯತೆ ಹೊಂದಿತ್ತು ಎಂಬುದು ತಿಳಿದ ವಿಚಾರ. ಶ್ರವಣ ಬೆಳಗೊಳದಲ್ಲಿ ಗಂಗರ ಮಂತ್ರಿ ಚಾವುಂಡರಾಯ ನಿರ್ಮಿಸಿದ ಪಾರ್ಶ್ವನಾಥ ಬಸದಿ ಅಥವಾ ಚಾವುಂಡರಾಯ ಬಸದಿ ಒಂದು ಉತ್ತಮ ಉದಾಹರಣೆಯಾಗಿದೆ. ಅದೇ ರೀತಿ ಪ್ರಸ್ತುತ ಕನಕಗಿರಿ ಪಾರ್ಶ್ವನಾಥ ಬಸದಿಯ ಮೂಲದಲ್ಲಿ ಒಂದು ಸುಂದರ ದ್ರಾವಿಡ ಶಿಖರ ಹೊಂದಿದ್ದಿರಬೇಕೆಂದು ತೋರುತ್ತದೆ. ಕಾಲಾನಂತರದಲ್ಲಿ ಹೊಸದಾಗಿ ವಿಜಯನಗರ ಶೈಲಿಯಲ್ಲಿ ಹೊಸ ಶಿಖರ ನಿರ್ಮಾಣವಾಗಿದೆ. ಇದರಿಂದ ಕನಕಗಿರಿ ಬಸದಿಯ ಮೂಲದಲ್ಲಿ ದ್ರಾವಿಡ ಶಿಖರವುಳ್ಳ ಬಸದಿಯಾಗಿತ್ತೆಂದು ಹೇಳಬಹುದು.

### ಮಲ್ಲಿಕಾರ್ಜುನ ದೇವಾಲಯ, ಅಮಚವಾಡಿ

ಈ ಗ್ರಾಮವು ಚಾಮರಾಜನಗರ ಜಿಲ್ಲೆಯ ಅದೇ ತಾಲೂಕಿನ ಹರದನಹಳ್ಳಿ ಹೋಬಳಿಯಲ್ಲಿರುವ ಗ್ರಾಮ. ಈ ಗ್ರಾಮದಲ್ಲಿ ಮಲ್ಲಿಕಾರ್ಜುನ ದೇವಾಲಯವು ಪೂರ್ವಾಭಿಮುಖವಾಗಿದೆ. ನೇರವಾಗಿ ಈ ದೇವಸ್ಥಾನಕ್ಕೆ ಸಂಬಂಧಿಸಿದಂತೆ ಯಾವ ಶಾಸನಗಳು ಕಂಡುಬಾರದೇ ಇದ್ದರೂ ಈ ಊರಿನ ಪ್ರಾಚೀನತೆಯನ್ನು ಗಂಗರ ಕಾಲಕ್ಕೆ ಸೇರಿಸಬಹುದಾಗಿದೆ. ಗಂಗರ ದೊರೆ ನೀತಿಮಾರ್ಗ ಪೆರ್ಮಾನಡಿಯ ಕಾಲದ ವೀರಗಲ್ಲಿನ ಮೇಲೆ ಶಾಸನ ಒಂದು ಕಂಡುಬರುತ್ತದೆ. ಈ ವೀರಗಲ್ಲು ವೇಳಯ ಪುಣಸುಂಗ ಎಂಬುವವನು ವೀರ ಮರಣವನ್ನಪ್ಪಿದ ವಿಷಯ ಅಮಚವಾಡಿಯ ಪೆರ್ಮಾಡಿ ಗಾವುಂಡರನ್ನು ಉಲ್ಲೇಖಿಸುತ್ತದೆ. ಈ ಘಟನೆ ಗಂಗರ ದೊರೆ ನೀತಿಮಾರ್ಗ ಪೆರ್ಮಾನಡಿಯ ಮೊದಲನೆಯ ಆಳ್ವಿಕೆಯ ವರ್ಷದಲ್ಲಿ ನಡೆದ ಬಗ್ಗೆ ಮತ್ತು ಈ ಶಾಸನವನ್ನು ಗಾವಲಿಶೆಟ್ಟಿ ಮಗಧಾರನು ಬರೆದ ವಿಷಯವು ಉಲ್ಲೇಖವಾಗಿದೆ. ಈ ಶಾಸನದಿಂದ ಮತ್ತು ದೇವಸ್ಥಾನದ ರೂಪುರೇಷೆಗಳಿಂದ ಇದೊಂದು ಪ್ರಾಚೀನ ದೇವಾಲಯವಾಗಿರಬಹುದೆಂದು ಹೇಳಬಹುದಾಗಿದೆ.[1]

ಈ ದೇವಸ್ಥಾನವು ಗರ್ಭಗೃಹ, ಶುಕನಾಸ, ನವರಂಗ ಮತ್ತು ಮುಖಮಂಟಪ ಹೊಂದಿದ್ದು, ಗರ್ಭಗೃಹದಲ್ಲಿ ಶಿವಲಿಂಗವನ್ನು ಪೀಠದ ಮೇಲೆ ಪ್ರತಿಷ್ಠಾಪಿಸಲಾಗಿದೆ. ಗರ್ಭಗೃಹ ೨ ೧/೨ x ೨ ೧/೨ ಮೀಟರ್ ಚದರ ಸುತ್ತಳತೆಯನ್ನು ಹೊಂದಿದೆ. ಶುಕನಾಸದ ಅಂಕಣವು ೨x೨ ಮೀಟರ್ ಇದ್ದು ಇದಕ್ಕೆ ಹೊಂದಿಕೊಂಡಂತೆ ೭ x ೭ ಮೀಟರ್ ನವರಂಗವಿದೆ. ನವರಂಗದ ಮಧ್ಯದಲ್ಲಿ ನಂತರ ಕಾಲಕ್ಕೆ ಸೇರಿದ ನಾಲ್ಕು ಕಂಬಗಳಿವೆ ಹಾಗೂ ಗಣಪತಿ, ವೀರಭದ್ರ, ಸಿದ್ದೇಶ್ವರ ಸರ್ಪಕಲ್ಲು ಬಿಡಿ ಶಿಲ್ಪಗಳಿವೆ. ಹಾಗೂ ಒಂದು ನಂದಿ ಶಿಲ್ಪವಿದೆ.

ದೇವಾಲಯದ ಹೊರಭಾಗದ ಏರು ವಿನ್ಯಾಸದಲ್ಲಿ ಗರ್ಭಗೃಹ ಮತ್ತು ಶುಕನಾಸ ಭಾಗದಲ್ಲಿ ಜಗತಿ, ತ್ರಿಪಟ್ಟ ಕುಮುದ, ಕಂಠ, ಪ್ರತಿಗಳಿವೆ. ಅಧಿಷ್ಠಾನವು ಮಣ್ಣಿನಲ್ಲಿ ಮುಚ್ಚಿಹೋಗಿದೆ. ಭಿತ್ತಿಯಲ್ಲಿ ಶುಕನಾಸ ಮತ್ತು ಗರ್ಭಗೃಹದ ಸುತ್ತಲೂ ಚೋಳ ಮಾದರಿಯ ದ್ರಾವಿಡ ಶೈಲಿಯ ಅರೆಕಂಬಗಳನ್ನು ಮತ್ತು ಆಳವಿಲ್ಲದ ಕೋಷ್ಠಮಂಟಪಗಳನ್ನು ಕಡೆಯಲಾಗಿದೆ. ಕಪೋತದಲ್ಲಿ ಸರಳವಾದ ಕೂಡುಗಳಿವೆ. ಈ ದೇವಾಲಯದ

ಗರ್ಭಗೃಹ ಮತ್ತು ಶುಕನಾಸ ಚೋಳರ ಕಾಲದ ದ್ರಾವಿಡ ಕಟ್ಟಡವಾದರೂ ನಂತರ ಕಾಲದ ನವರಂಗ ಮುಖಮಂಟಪ ಮತ್ತು ವಿಮಾನಗಳನ್ನು ಒಳಗೊಂಡಿದೆ. ಅವುಗಳ ವಿವರಗಳನ್ನು ಇಲ್ಲಿ ಕೈಬಿಡಲಾಗಿದೆ.

## ದಿವ್ಯಲಿಂಗೇಶ್ವರ ದೇವಾಲಯ, ಹರದನಹಳ್ಳಿ

ಈ ತಾಲೂಕಿನ ಹರದನಹಳ್ಳಿಯಲ್ಲಿ ಪ್ರಾಚೀನ ಕಾಲದ ದಿವ್ಯ ಲಿಂಗೇಶ್ವರ ದೇವಾಲಯವು ಉತ್ತರಾಭಿಮುಖವಾಗಿ ನಿಂತಿರುವ ದ್ರಾವಿಡ ಶೈಲಿಯ ಒಂದು ದೇವಾಲಯವಾಗಿದೆ. ಈ ಗ್ರಾಮ ಚಾಮರಾಜನಗರ ತಾಲೂಕಿನ ಒಂದು ಹೋಬಳಿ ಕೇಂದ್ರವೂ ಸಹ ಆಗಿದೆ. ಈ ಗ್ರಾಮಕ್ಕೆ ಪ್ರಾಚೀನ ಹೆಸರು ವಾಣಿಜ್ಯಪುರ ಎಂದು. ಹಿಂದೆ ಈ ಊರು ಪಾಳೆಯಪಟ್ಟಿನ ಕೇಂದ್ರವಾಗಿತ್ತೆಂದು ತೋರುತ್ತದೆ.[೧೦]

ಈ ದೇವಾಲಯವು ಗರ್ಭಗೃಹ, ಶುಕನಾಸ, ನವರಂಗ ಮುಖಮಂಟಪ ಕಂಬದ ಸಾಲುಗಳು ಮತ್ತು ಮಹಾಗೋಪುರ ಇವುಗಳನ್ನು ಹೊಂದಿದೆ. ಆದರೆ ಪ್ರಸ್ತುತ ಅಧ್ಯಯನ ದೃಷ್ಟಿಯಿಂದ ಮೂಲ ಗರ್ಭಗುಡಿ ಮತ್ತು ಶುಕನಾಸದ ಭಾಗಗಳು ಮಾತ್ರ ಚೋಳರ ಕಾಲದ ದ್ರಾವಿಡ ಶೈಲಿಯದ್ದಾಗಿದೆ. ಗರ್ಭಗೃಹ ಮತ್ತು ಸುಕನಾಸದ ಹೊರಗೋಡೆಯ ಭಿತ್ತಿಯಲ್ಲಿ ಸುತ್ತಲೂ ಚೋಳ ಶೈಲಿ ಅರೆಕಂಬಗಳು ಆಳವಿಲ್ಲದ ಕೋಷ್ಠಗಳು ಮತ್ತು ಮಕರತೋರಣಗಳು ಸುಂದರವಾಗಿ ಮೂಡಿಬಂದಿವೆ. ಈ ರೀತಿಯ ಮಕರ ತೋರಣವನ್ನು ಯಳಂದೂರು ತಾಲೂಕು ಅಗರ ಗ್ರಾಮದ ದುರ್ಗಾ ದೇವಾಲಯದಲ್ಲಿರುವ ಪ್ರವೇಶದ್ವಾರದ ಲಲಾಟಬಿಂಬದ ಮೇಲೆ ಕಾಣುತ್ತೇವೆ ಮತ್ತು ತಿ.ನರಸೀಪುರ ತಾಲೂಕು ತಡಮಾಲಂಗಿಯಲ್ಲಿ ಇರುವ ಮಹಾಲಿಂಗೇಶ್ವರ ದೇವಾಲಯದ ಭಿತ್ತಿಯಲ್ಲಿರುವ ದೇವಕೋಷ್ಠದಲ್ಲಿರುವಂತೆಯೂ ಸಹ ಮಕರತೋರಣ ಕಂಡುಬರುತ್ತದೆ. ಆದ ಕಾರಣ ಈ ದೇವಾಲಯವು ಈಗ ದುಃಸ್ಥಿತಿಯ ಹಂತದಲ್ಲಿದೆ. ಮೂಲಗರ್ಭಗುಡಿಯಲ್ಲಿ ಶಿವಲಿಂಗ ಇದೆ. ಮೇಲ್ಭಾಗದಲ್ಲಿ ಸುಂದರವಾದ ಭುವನೇಶ್ವರಿ ಇದೆ. ಶುಕನಾಸಿಯ ಅಂಕಣದಲ್ಲಿ ನಂದಿ ಶಿಲ್ಪ ಇದೆ. ಗರ್ಭಗೃಹ ೩ x ೩ ಮೀಟರ್ ಚದರ ಸುತ್ತಳತೆಯನ್ನು ಹೊಂದಿದೆ. ಇಲ್ಲಿರುವ ದ್ವಾರಗಳು ಸರಳವಾದ ಕೆತ್ತನೆಯಿಂದ ಕೂಡಿದೆ.

## ಆದಿನಾಥ ಬಸದಿ, ಕುದೇರು

ಚಾಮರಾಜನಗರ ತಾಲೂಕಿನಲ್ಲಿರುವ ಒಂದು ಚಿಕ್ಕ ಗ್ರಾಮ ಕುದೇರು. ಪ್ರಾಚೀನ ಕಾಲದ ಶಾಸನಗಳು ಇಲ್ಲಿ ದೊರೆತಿವೆ. ಪ್ರಸ್ತುತ ಅಧ್ಯಯನಕ್ಕೆ ಸಂಬಂಧಿಸಿದಂತೆ ಕುದೇರಿನ ಆದಿನಾಥ ಬಸದಿ ಒಂದು ಉದಾಹರಣೆಯಾಗಿದೆ.

ಕುದೇರಿನಲ್ಲಿ ದೊರೆಯುವ ಅತ್ಯಂತ ಪ್ರಾಚೀನ ಶಾಸನವೆಂದರೆ ಹೊಯ್ಸಳರ ದೊರೆ ವೀರಸೋಮೇಶ್ವರ ಕಾಲದ್ದು. ಇದು ಕ್ರಿ.ಶ.೧೨೪೮-೪೯ರ ಇದು ಒಂದು ದಾನ ಶಾಸನವಾಗಿದೆ. ಆದರೆ ನೇರವಾಗಿ ಬಸದಿಯ ಮೇಲೆ ಬೆಳಕನ್ನು ಚೆಲ್ಲುವಂತಹ ಶಾಸನಗಳು ಇಲ್ಲಿ ದೊರೆತಿಲ್ಲ.[೧೧] ಈ ಮೊದಲೇ ಹೆಸರಿಸಿದ ಶಾಸನ

ತಮಿಳು ಗ್ರಂಥ ಲಿಪಿಯಲ್ಲಿದೆ. ಇದರಿಂದ ಈ ಭಾಗದಲ್ಲಿ ಹೊಯ್ಸಳರು ರಾಜ್ಯಾಡಳಿತ ಪ್ರಾರಂಭಿಸಿ ಸುಮಾರು ೧೫೦ ವರ್ಷಗಳು ಕಳೆದ ಮೇಲೂ ಉಳಿದುಕೊಂಡು ಬಂದಿರುವ ತಮಿಳು ಪ್ರಭಾವವನ್ನು ನಾವು ಗಮನಿಸಿದಾಗ ಮತ್ತು ಇಲ್ಲಿ ಕಂಡುಬರುವ ಆದಿನಾಥ ಬಸದಿಯ ವಾಸ್ತು ಲಕ್ಷಣಗಳನ್ನು ಗಮನಿಸಿದಾಗ, ಈ ಬಸದಿ ಪ್ರಾಯಶಃ ಚೋಳ ನಿರ್ಮಿತಿ ಎಂಬುದನ್ನು ದೃಢಪಡಿಸುವುದು.

ಆದಿನಾಥ ಬಸದಿಯ ಗರ್ಭಗೃಹ, ಶುಕನಾಸ, ಅರ್ಧಮಂಟಪ, ನವರಂಗ ಮತ್ತು ಮುಖಮಂಟಪಗಳನ್ನು ಹೊಂದಿದ ದ್ರಾವಿಡ ಶೈಲಿಯ ಏಕಕೂಟ ಬಸದಿಯಾಗಿದೆ. ಇದು ಕೂಡ ಮೂಲ ಚೋಳ ನಿರ್ಮಿತಿಯಾಗಿದ್ದು ನಂತರದ ಕಾಲಗಳಲ್ಲಿ ಬದಲಾವಣೆಗಳನ್ನು ಕಂಡಿದೆ. ಗರ್ಭಗೃಹ ಸುಮಾರು ೩ x ೩ ಮೀಟರ್ ಅಳತೆ ಹೊಂದಿದೆ. ಗರ್ಭಗೃಹ ಮಧ್ಯದಲ್ಲಿ ಪೀಠದ ಮೇಲೆ ಆದಿನಾಥ ಅಥವಾ ವೃಷಭನಾಥ ತೀರ್ಥಕರರ ಶಿಲ್ಪವಿದ್ದು, ಇದರ ಪ್ರಭಾವಳಿಯ ಇಕ್ಕೆಲಗಳಲ್ಲಿ ಚತುರ್ಬಾಹು ಯಕ್ಷಣಿಯರ ಶಿಲ್ಪಗಳು ಕಂಡುಬರುತ್ತವೆ. ಈ ಶಿಲ್ಪ ಚಿಕ್ಕಹನಸೋಗೆಯಲ್ಲಿರುವ ತೀರ್ಥಕರರ ಶಿಲ್ಪವನ್ನು ಜ್ಞಾಪಕಕ್ಕೆ ತರುತ್ತದೆ. ಗರ್ಭಗೃಹದ ಒಳಮಾಳಿಗೆ ಅಲಂಕಾರಿಕವಾಗಿದ್ದು, ನಕ್ಷತ್ರಾಕಾರದ ಮತ್ತು ಚೌಕಾಕಾರದ ಭುವನೇಶ್ವರಿ ಹೊಂದಿದ್ದು ಮಧ್ಯದಲ್ಲಿ ಅರಳಿದ ಪದ್ಮ ಅದರ ಮಧ್ಯದಲ್ಲಿ ಹೊರಚಾಚಿರುವ ಬಾಳೇ ಹೂವಿನಂತಹ ಭಾಗ ಸುಂದರವಾಗಿ ಮೂಡಿಬಂದಿದೆ. ಗರ್ಭಗೃಹದ ಬಾಗಿಲವಾಡ ಸರಳವಾಗಿದ್ದು ಯಾವುದೇ ಅಲಂಕಾರವನ್ನು ಹೊಂದಿಲ್ಲ. ಆದರೆ ಲಲಾಟ ಬಿಂಬದಲ್ಲಿ ತೀರ್ಥಕರರ ಬಿಂಬವಿದೆ. ಶುಕನಾಸವು ಕೂಡ ಗರ್ಭಗೃಹದಷ್ಟೇ ಅಗಲವಾಗಿದ್ದು ಇಲ್ಲಿನ ಗೋಡೆ ತೊಲೆಗಳ ಮೇಲೆ ಬಳ್ಳಿ ಸುರುಳಿಗಳ ಕೆತ್ತನೆಗಳು ಕಂಡುಬರುತ್ತವೆ. ಶುಕನಾಸದ ದ್ವಾರ ಬಂಧದ ಲಲಾಟಬಿಂಬದಲ್ಲಿ ಕೂಡ ಜಿನಬಿಂಬದ ಕೆತ್ತನೆ ಕಂಡುಬರುತ್ತದೆ. ನವರಂಗದ ನಾಲ್ಕು ಮಧ್ಯ ಕಂಬಗಳನ್ನು ಹೊಂದಿದ್ದು ಸುಮಾರು ೮ x ೫.೮೦ ಮೀಟರ್ ಅಳತೆ ಹೊಂದಿದೆ. ಕಂಬಗಳು ದ್ರಾವಿಡ ಶೈಲಿಯದಾಗಿದ್ದು ಚೌಕದ ಪೀಠ, ವೃತ್ತಾಕಾರದ ದಿಂಬು ಮತ್ತು ಪಲಗೈ ಬೋದಿಗೆ ಕಂಡುಬರುತ್ತದೆ. ನವರಂಗದಲ್ಲಿ ಇನ್ನಿತರ ಯಾವುದೇ ಹೆಚ್ಚಿನ ಅಲಂಕಾರ ಕಂಡುಬರುವುದಿಲ್ಲ. ಆದರೆ ಜೈನ ಸಂಪ್ರದಾಯಕ್ಕೆ ತಕ್ಕಂತೆ ಕುದುರೆ ಮೇಲೆ ಕುಳಿತಿರುವ ಬ್ರಹ್ಮ, ಜ್ವಾಲಾಮಾಲಿನಿ, ಯಕ್ಷಿ, ಸರಸ್ವತಿ ಮತ್ತು ತೀರ್ಥಕರರ ಶಿಲ್ಪ ಮತ್ತು ಕುಂಚಿನ ವಿಗ್ರಹಗಳನ್ನು ಇಲ್ಲಿ ಇಡಲಾಗಿದೆ. ಇವೆಲ್ಲವು ನಂತರದ ಕಾಲದವು. ಅದರಂತೆ ನವರಂಗದ ಮುಂದಿನ ಭಾಗ ಕೂಡ ಹೊಯ್ಸಳೋತ್ತರ ಕಾಲದಲ್ಲಿ ನಿರ್ಮಾಣಗೊಂಡಿದ್ದು, ಪ್ರಸ್ತುತ ಅಧ್ಯಯನದಲ್ಲಿ ಅದನ್ನು ಚರ್ಚಿಸಿರುವುದಿಲ್ಲ. ಹೊರಭಿತ್ತಿಯಲ್ಲಿ ದೇವಸ್ಥಾನದ ತನ್ನ ಮೂಲಸ್ವರೂಪವನ್ನು ಕಳೆದುಕೊಂಡಿರುವ ಪರಿಣಾಮವಾಗಿ ಅಧಿಷ್ಠಾನವಾಗಲಿ ಅರೆಕಂಬಗಳಾಗಲಿ, ಕೋಷ್ಠಕಗಳಾಗಲಿ ಯಾವುದು ಕಂಡುಬರುವುದಿಲ್ಲ.

### ಪಾರ್ಶ್ವನಾಥ ಬಸದಿ, ಚಾಮರಾಜನಗರ

ಚಾಮರಾಜನಗರ ಪಟ್ಟಣದಲ್ಲಿ ಈಗ ಉಳಿದಿರುವ ಪ್ರಾಚೀನವಾದ ಕಟ್ಟಡವೆಂದರೆ ಪಾರ್ಶ್ವನಾಥ ಬಸದಿ. ಇದೊಂದು ತ್ರಿಕೂಟಬಸದಿ. ಈ ಬಸದಿಯಲ್ಲಿರುವ ಶಾಸನವೊಂದು ಹೊಯ್ಸಳ ವಿಷ್ಣುವರ್ಧನನ

ಸೇನಾಪತಿಯೂ, ಸಂಧಿವಿಗ್ರಹಿಯೂ ಆಗಿದ್ದ ಇಮ್ಮಡಿ ಪುಣಿಸಮಯ್ಯನ ದಂಡಯಾತ್ರೆಗಳನ್ನು, ಆತ ವಂಶಾವಳಿಯನ್ನು ನಿರೂಪಿಸುತ್ತದೆ. ಇದರ ಕಾಲ ಕ್ರಿ.ಶ. ೧೧೧೬, ಇಮ್ಮಡಿ ಪುಣಿಸಮಯ್ಯನು ಚಾಮರಾಜ ನಗರದ ಈ ಬಸದಿಯನ್ನು ಕಟ್ಟಿಸಿದನಲ್ಲದೆ ಗಂಗವಾಡಿ ೯೬೦೦೦ ಬಸದಿಗಳನ್ನು ಊರ್ಜಿತಗೊಳಿಸಿದನೆಂದು ಶಾಸನವೊಂದರಿಂದ ತಿಳಿಯುತ್ತದೆ.[೧೨] ಇಲ್ಲಿನ ದೇವತೆ ಪಾರ್ಶ್ವನಾಥಮೂರ್ತಿಯ ಜೊತೆಗೆ ಯಕ್ಷ ಧರಣೇಂದ್ರ ಮತ್ತು ಯಕ್ಷಿ ಪದ್ಮಾವತಿ ವಿಗ್ರಹಗಳೂ ಇವೆ. ಪದ್ಮಾವತಿ ವಿಗ್ರಹವನ್ನು ತೆರಕಣಾಂಬಿಯಿಂದ ತಂದರೆನ್ನಲಾಗಿದೆ.[೧೩] ಈ ಮೂರ್ತಿಗಳ ಜೊತೆಗೆ ಏಳು ಹೆಡೆಗಳ ಸರ್ಪದ ಮುಂದೆ ನಿಂತಿರುವ ಪಾರ್ಶ್ವನಾಥ ಮೂರ್ತಿಯು ಇದೆ. ಈ ಮೂರ್ತಿಯನ್ನು ಸಹ ಹರಳುಕೋಟೆಯಿಂದ ತಂದು ಪ್ರತಿಷ್ಠಾಪಿಸಿದ್ದೇನ್ನಲಾಗಿದೆ.[೧೪]

## ಜನಾರ್ಧನ ದೇವಾಲಯ, ಹರಳುಕೋಟೆ

ದ್ರಾವಿಡ ಶೈಲಿಯಲ್ಲಿ ನಿರ್ಮಿತವಾಗಿರುವ ಈ ದೇವಾಲಯವನ್ನು ಕ್ರಿ.ಶ. ೧೧೬೦ರಲ್ಲಿ ಹೊಯ್ಸಳರ ಒಂದನೆಯ ವೀರನರಸಿಂಹ ಕಟ್ಟಿಸಿದನೆಂದು ಶಾಸನದಿಂದ ತಿಳಿದುಬರುತ್ತದೆ.[೧೫] ಈ ದೇವಾಲಯವು ಹೊಯ್ಸಳ ವಾಸ್ತುಶಿಲ್ಪ ರೀತಿಯಲ್ಲಿ ಕಣ-ಶಿಲೆ ಮತ್ತು ಇಟ್ಟಿಗೆ ಗಾರೆಯಿಂದ ನಿರ್ಮಾಣವಾಗಿದೆ. ಈ ದೇವಾಲಯವು ಪಶ್ಚಿಮಾಭಿಮುಖವಾಗಿದ್ದು ದೊಡ್ಡ ದೊಡ್ಡ ಮತ್ತು ಸಣ್ಣ ಸಣ್ಣ ಅನೇಕ ಕಲ್ಲಿನ ಕಂಬಗಳ ಆಧಾರದ ಮೇಲೆ ಕಟ್ಟಲಾಗಿದೆ. ಶಿಖರವು ಇಟ್ಟಿಗೆ ಗಾರೆಯಿಂದಾಗಿ ಸುಂದರವಾಗಿಯೂ, ಶಾಸ್ತ್ರೀಯವಾಗಿಯೂ ಇದೆ. ಜನಾರ್ಧನ ಸ್ವಾಮಿ ವಿಗ್ರಹವು ಕಣಶಿಲೆಯದ್ದಾಗಿದೆ. ಇದನ್ನು ಕೇಶವ ದೇವಸ್ಥಾನವೆಂದೂ, ಇಲ್ಲಿ ಮೂರ್ತಿಯನ್ನು ಶ್ರೀನಿವಾಸಮೂರ್ತಿ ಎಂದು ಸಹ ಕರೆಯಲಾಗುತ್ತದೆ.

ಈ ದೇವಾಲಯವನ್ನು ನೋಡಿದಾಗ ನಮಗೆ ಹಲವು ಬಗೆಯ ಸೋಜಿಗ ಸಂಗತಿಗಳು ಬೆಳಕಿಗೆ ಬರುತ್ತವೆ. ಸಾಮಾನ್ಯವಾಗಿ ಎಲ್ಲಾ ವಿಷ್ಣುದೇಗುಲಗಳು ಪೂರ್ವಾಭಿಮುಖವಾಗಿಯೇ ಇರುತ್ತವೆ. ಆದರೆ ಈ ದೇಗುಲವು ಪಶ್ಚಿಮಾಭಿಮುಖವಾಗಿದೆ. ಇದರಲ್ಲೇನಾದರೂ ವಿಶೇಷವುಂಟೋ ಎಂದು ಊರಿನವರನ್ನು ವಿಚಾರಿಸಿದಾಗ ಅವರು ಹೇಳುವುದೇನೆಂದರೆ 'ಅಸ್ತಮ ಸೂರ್ಯನ ಕಿರಣಗಳು ಸ್ವಾಮಿಯ ಪಾದದ ಮೇಲೆ ನೇರವಾಗಿ ಬೀಳುತ್ತದೆ' ಎಂದು.[೧೬] ಈ ದೇವಾಲಯದ ಎದುರಿಗೆ ಸುಮಾರು ೭೦ ಅಡಿಗಳಷ್ಟು ಎತ್ತರದ ಗರುಡಗಂಬವಿದೆ. ಇಷ್ಟು ಎತ್ತರದ ಇಡೀ ಕಂಬವನ್ನು ಒಂದೇ ಕಲ್ಲಿನಿಂದ ಮಾಡಲಾಗಿದೆ. ಇದನ್ನು ವಿಜಯನಗರದ ಅರಸರ ಕಾಲದಲ್ಲಿ ನಿಲ್ಲಿಸಲಾಗಿದೆ. ಇಷ್ಟು ಎತ್ತರದ ಏಕಶಿಲಾಸ್ತಂಭವನ್ನು ಸುತ್ತಮುತ್ತಲೂ ಎಲ್ಲೂ ಕಾಣಲಾರೆವು. ಇದರ ಪೂರ್ವಭಾಗದಲ್ಲಿ ಗರುಡ ಲಾಂಛನವಿದೆ. ಈಗ್ಗೆ ಸುಮಾರು ೭೦ ವರ್ಷಗಳ ಹಿಂದಿನವರೆವಿಗೂ ವಿಶೇಷ ದಿನಗಳಲ್ಲಿ ಈ ಗರುಡ ಗಂಬದ ಮೇಲೆ ನಂದಾದೀಪ ಹಚ್ಚುವ ವ್ಯವಸ್ಥೆ ಇದ್ದಿತಂತೆ. ಇದಕ್ಕಾಗಿ ಉಪಯೋಗಿಸಲಾಗುತ್ತಿದ್ದ ಕಬ್ಬಿಣದ ಸರಪಳಿ ಮತ್ತು ವಿಶೇಷ ರಾಟ ವ್ಯವಸ್ಥೆ ಇದ್ದಿತಂತೆ. ಕಬ್ಬಿಣದ ಸರಪಳಿ ಮತ್ತು ವಿಶೇಷ ರಾಟ ವ್ಯವಸ್ಥೆಯ ಅವಶೇಷಗಳನ್ನು ಈಗಲೂ ಸಹ

ಗರುಡ ಗಂಭದ ಮೇಲೆ ಕಾಣಬಹುದು. ದೀಪವನ್ನು ಮೇಲಕ್ಕೆ ಎಳೆಯಲು ಉಪಯೋಗಿಸುತ್ತಿದ್ದ ಸರಪಳಿಯನ್ನು ಆನೆಯೊಂದು ಕಿತ್ತು ಹಾಕಿತಂತೆ ಎಂಬುದು ಕ್ಷೇತ್ರಕಾರ್ಯದಿಂದ ತಿಳಿದುಬಂದ ಮಾಹಿತಿ.[೧೪]

ಈ ದೇವಾಲಯದ ಗರ್ಭಗುಡಿಯೊಳಗೆ ಉತ್ತರಭಾಗದಲ್ಲಿ ಒಂದು ಸುರಂಗಮಾರ್ಗವಿದೆ. ಈ ಸುರಂಗಮಾರ್ಗವು ಗರುಡಗಂಬದ ತಳಭಾಗದಲ್ಲಿ ಕೊಪ್ಪರಿಗೆಗಳಲ್ಲಿ ಚಿನ್ನದ ನಾಣ್ಯಗಳು ಇರುವುದೆಂದೂ ಅದನ್ನು ಏಳು ಹೆಡೆಯ ಸರ್ಪವು ಕಾಯುತ್ತಿರುವುದೆಂದೂ ಇಲ್ಲಿನ ಜನರ ಪ್ರತೀತಿ. ಅಲ್ಲದೆ ಈ ಸುರಂಗ ಮಾರ್ಗ ಚಾಮರಾಜನಗರದ ಪಕ್ಕದಲ್ಲಿರುವ ಕರಿವರದರಾಜಸ್ವಾಮಿ ಬೆಟ್ಟದವರೆಗೂ ಹೋಗಿರುವುದಾಗಿ ಇಲ್ಲಿನ ಜನರ ನಂಬಿಕೆ. ಆದರೆ, ಅದಕ್ಕೆ ಯಾವುದೇ ರೀತಿಯ ಕುರುಹುಗಳು ಅಲ್ಲಿಲ್ಲ. ಈ ದೇವಾಲಯದ ಸುತ್ತಮುತ್ತ ಹಲವು ಶಾಸನ ಕಲ್ಲುಗಳಿವೆ ಹಾಗೂ ಶಿಥಿಲವಾದ ಗೋಡೆಗಳಿವೆ. ಇತ್ತೀಚೆಗೆ ಈ ದೇವಾಲಯವನ್ನು ಸ್ವಲ್ಪಮಟ್ಟಿಗೆ ಜೀರ್ಣೋದ್ಧಾರ ಮಾಡಲಾಗಿದೆ.

### ರಂಗನಾಥ ದೇವಾಲಯ, ಉಮ್ಮತ್ತೂರು

ಉಮ್ಮತ್ತೂರಿನ ಪಾಳೆಗಾರರ ಕಾಲದಲ್ಲಿ ಈ ಊರಿನಲ್ಲಿ ಅನೇಕ ದೇವಾಲಯಗಳು ನಿರ್ಮಾಣವಾಗಿವೆ. ಅವುಗಳ ಪೈಕಿ ದ್ರಾವಿಡ ಶೈಲಿಯಲ್ಲಿ ಕಟ್ಟಿರುವ ರಂಗನಾಥ ದೇವಾಲಯ ಮತ್ತು ಭುಜಂಗೇಶ್ವರ ದೇವಾಲಯ ಮುಖ್ಯವಾದವು. ಭುಜಂಗರಾಯನ ಆಳ್ವಿಕೆಯ ಕಾಲದಲ್ಲಿ ಶ್ರೀರಂಗನಾಥ ದೇವಾಲಯವನ್ನು ಕಟ್ಟಿಸಿದುದಾಗಿ ಚಾಮರಾಜನಗರದ ೪೦೧ನೇ ಶಾಸನ ತಿಳಿಸುತ್ತದೆ. ರಂಗನಾಥ ದೇವಾಲಯದ ಒಳಗಡೆ ಒಂದು ಶಾಸನವಿದ್ದು ಅದು ಅಚ್ಯುತರಾಯರಿಗೆ ಪುಣ್ಯವಾಗಬೇಕೆಂದು ತಿಳಿಸುತ್ತದೆ. ಈ ರಂಗನಾಥ ದೇವಾಲಯಕ್ಕೆ ಕ್ರಿ.ಶ. ೧೫೩೧ರಲ್ಲಿ ತಿರುಮಕೂಡಲ ದಳವಾಯಿ ಗಂಗನಾಯಕರ ಕುಮಾರ ದಳವಾಯಿ ರಂಗನಾಯಕರು ಉಮ್ಮತ್ತೂರು ಗ್ರಾಮದ ಶ್ರೀರಂಗನಾಥ ದೇವರಿಗೆ ಪೂಜೆ ನೈವೇದ್ಯಗಳಿಗಾಗಿ ಒಂದು ಬೈಲನ್ನು ದಾನವಾಗಿ ಬಿಟ್ಟನೆಂದು ತಿಳಿದು ಬರುತ್ತದೆ.[೧೫]

ಈ ದೇವಾಲಯದ ಮುಂದೆ ದೊಡ್ಡ ಗರುಡಗಂಭವಿದೆ. ಅದರ ಬುಡದ ನಾಲ್ಕು ಮುಖಗಳಲ್ಲಿಯೂ ಅನುಕ್ರಮವಾಗಿ ಭಕ್ತಿ ವಿಗ್ರಹ, ಹನುಮ, ಗರುಡ ಮತ್ತು ಪರವಾಸುದೇವ ಮೂರ್ತಿಗಳಿವೆ. ಭಕ್ತವಿಗ್ರಹ ಉಮ್ಮತ್ತೂರು ಪಾಳೆಗಾರ ಅರಸನೊಬ್ಬನದಿರಬಹುದೆಂದು ಊಹಿಸಲಾಗಿದೆ. ಈ ದೇವಾಲಯದಲ್ಲಿ ಮಹಾವಿಷ್ಣು ಶೇಷಶಾಹಿಯಾಗಿ ಮಲಗಿದ್ದಾನೆ. ಮುದ್ದುಬೆಣ್ಣೆಕೃಷ್ಣನ ವಿಗ್ರಹವಂತು ನೋಡಲು ಆಕರ್ಷಕವಾಗಿದೆ.

### ಭುಜಂಗೇಶ್ವರ ದೇವಾಲಯ, ಉಮ್ಮತ್ತೂರು

ಈ ದೇವಾಲಯವನ್ನು ಭುಜಂಗೇಶ್ವರನ ಎರಡನೆಯ ಮಗನಾದ ಲಿಂಗರಾಯನೆಂಬುವನು ತಂದೆಯ ಜ್ಞಾಪಕಾರ್ಥವಾಗಿ ವಿಜಯನಗರದ ಸದಾಶಿವರಾಯನ ಅನುಮತಿಯನ್ನು ಪಡೆದು ಕ್ರಿ.ಶ. ೧೫೪೫ರಲ್ಲಿ

ಕಟ್ಟಿಸಿದನು. ಈ ದೇವಾಲಯದಲ್ಲಿ ಪಂಚಲಿಂಗಗಳೊಂದರಲ್ಲಿ ಜಡೆಯಿದ್ದು ಅದರ ಮೇಲೆ ಚತುರ್ಭುಜ ಗಂಗೆಯ ಮೂರ್ತಿಯಿದೆ. ಇದು ಬಹಳ ಅಪರೂಪದ ಮೂರ್ತಿ. ಈ ದೇವಾಲಯದ ಪೂಜಾ ಕೈಂಕರ್ಯಕ್ಕಾಗಿ ಮೂರು ಗ್ರಾಮಗಳ ಆದಾಯವನ್ನು ದತ್ತಿಯಾಗಿ ಮೂಡಲ ಅಗ್ರಹಾರದ ಬ್ರಾಹ್ಮಣರಿಗೆ ಕೊಟ್ಟಿದ್ದನೆಂದು ಭುಜಂಗೇಶ್ವರ ದೇವಾಲಯದ ಮುಂದಿರುವ ಗರುಡಗಂಭದ ಪಕ್ಕದ ಕೆಳಗಿನ ಕಲ್ಲಿನಲ್ಲಿ ಕೆತ್ತಿರುವ ಶಾಸನದಿಂದ ತಿಳಿದುಬರುತ್ತದೆ.[೧೯]

ಈ ದೇವಾಲಯದ ಗರುಡಗಂಬದ ಚೌಕನಾದ ಬುಡದ ಮೇಲುಗಡೆ ಮೂಲೆಯೊಂದರಲ್ಲಿ ತೆರೆದ ಬಾಯಿ, ಕೋರೆ ಹಲ್ಲುಗಳು, ಉಬ್ಬಿದ ಕಣ್ಣು ಮತ್ತು ಕೆದರಿದ ತಲೆಯುಳ್ಳ ಸ್ಥೂಲಕಾಯದ ಬೇತಾಳ ಮೂರ್ತಿಯಿದೆ. ಈ ಊರ ಅರಸನಿಗೆ ಬೇತಾಳ ತೊಂದರೆ ಕೊಡುತ್ತಿತ್ತೆಂದೂ, ಭುಜಂಗೇಶ್ವರ ದೇವಾಲಯವನ್ನು ನಿರ್ಮಿಸಿದ ತರುವಾಯ ಅರಸನಿಗೆ ಬೇತಾಳದಿಂದ ಬಿಡುಗಡೆಯಾಯಿತ್ತೆಂದೂ ಜನಪದ ಕಥೆಯಿಂದ,[೨೦] ಈ ಊರಿನಲ್ಲಿ ಈ ದೇವಾಲಯಗಳಲ್ಲದೆ, ವೀರಭದ್ರ ದೇವಾಲಯ ಮತ್ತು ಸಪ್ತಮಾತೃಕಾ ದೇವಾಲಯಗಳೂ ಇವೆ.

### ಹನುಮಂತ ದೇವಾಲಯ, ಹರಳುಕೋಟೆ

ಬಭ್ರುವಾಹನನ ಮಣಿಪುರವೆಂದು ಸ್ಥಳೀಯ ಜನ ಭಾವಿಸುವ ತಾಲೂಕಿನ ಹರಳುಕೋಟೆಯಲ್ಲಿ ಒಂದು ಬೃಹತ್ ಆಂಜನೇಯ ದೇವಾಲಯವಿದೆ. ಈ ದೇವರನ್ನು ಹರಳುಕೋಟೆಯ ಹನುಮಂತನೆಂದು, ಹರಳುಕೋಟೆಯ ವೀರಾಂಜನೆಯನೆಂದೂ ಮತ್ತು ಅರ್ಜುನ ಪ್ರತಿಷ್ಠ ಆಂಜನೇಯನೆಂದೂ ಕರೆಯಲಾಗುತ್ತದೆ.[೨೧] ಈ ದೇವಸ್ಥಾನವೂ ಉತ್ತರಾಭಿಮುಖವಾಗಿದೆ. ಈ ದೇವಸ್ಥಾನದ ಮುಂಭಾಗ ಇತ್ತೀಚೆಗಷ್ಟೇ ನಿರ್ಮಿಸಲಾದ ಪ್ರಾಕಾರ ಗೋಡೆ ಇದೆ. ದೇವಸ್ಥಾನದ ಮುಖ್ಯ ದ್ವಾರದಿಂದ ಒಳ ಹೋದರೆ ಕಾಣುವುದೇ ದಿವ್ಯ ಮೂರ್ತಿ ಆಂಜನೇಯ. ಬೃಹದಾಕಾರದ ಈ ಆಂಜನೇಯ ಸ್ವಾಮಿಯ ಗಂಭೀರ ಮೂರ್ತಿ ದರ್ಶನವಾದಂತೆ ಭಕ್ತರ ಮೈ ಪುಳುಕಿತ ವಾಗುತ್ತದೆ. ಮುಮ್ಮುಖವಾಗಿ ನಿಂತಿರುವ ಭವ್ಯಮೂರ್ತಿ, ಎಡಗೈಯನ್ನು ಸುಂಟದ ಬಳಿ ಇಟ್ಟುಕೊಂಡು ಬಲಗೈಯನ್ನು ಮೇಲೆತ್ತಿ ಅಭಯ ನೀಡುತ್ತಿರುವ 'ಅಭಯ ಪ್ರದಾಯಕ ವೀರಾಂಜನೇಯ'ನ ನಿಲುವು ಎಂತಹ ನಾಸ್ತಿಕನನ್ನು ಅಸ್ತಿಕನನ್ನಾಗಿ ಪ್ರಚೋದಿಸುತ್ತದೆ.

ದೇವಸ್ಥಾನದ ಗರ್ಭಗುಡಿಯ ಮೇಲ್ಭಾಗದಲ್ಲಿ ಗೋಪುರವಿದೆ ಹಾಗೂ ಮುಂಭಾಗ, ಹಿಂಭಾಗ ಮತ್ತು ಎಡಭಾಗಗಳಲ್ಲಿ ಒಂದೊಂದು ಮಂಟಪಗಳಿವೆ. ದೇವಸ್ಥಾನ ಹಿಂದುಗಡೆ ಒಂದು ಕಲ್ಯಾಣಿ ಇದೆ. ಹಿಂದೆ ಈ ನೀರಿನಿಂದಲೇ ದೇವರಿಗೆ ಅಭಿಷೇಕ ಮಾಡಲಾಗುತ್ತಿತ್ತು ಮತ್ತು ಬಲಭಾಗದ ರಸ್ತೆಯ ಪಕ್ಕದಲ್ಲೊಂದು ಕೊಳವಿದ್ದು ಈಗ ಬತ್ತಿಹೋಗಿದೆ. ಇಲ್ಲಿಯ ಆಂಜನೇಯ ಸ್ವಾಮಿಗೆ ಪ್ರತಿನಿತ್ಯವೂ ಪೂಜೆ ನಡೆಯುತ್ತಿದ್ದು, ವಿಶೇಷ ದಿನಗಳಾದ ಹನುಮ ಜಯಂತಿ, ವಿಷ್ಣುದೀಪ, ಸಂಕ್ರಾಂತಿ ಹಾಗೂ

ಶ್ರಾವಣ ಶನಿವಾರಗಳಲ್ಲಿ ವಿಶೇಷ ಪೂಜಾದಿಗಳು ನಡೆಯುತ್ತವೆ. ವಿಶೇಷ ದಿನಗಳಲ್ಲಿ ಆಂಜನೇಯಯನಿಗೆ ಪಂಚಮುಖ ಹನುಮನ ಮುಖವಾಡವನ್ನು ತೊಡಿಸಲಾಗುತ್ತದೆ. ಇದನ್ನು ಪಂಚಲೋಹದಿಂದ ತಯಾರಿಸಲಾಗುತ್ತದೆ.

ಈ ಹರಳುಕೋಟೆಯ ಪೂರ್ವ ದಿಕ್ಕಿನ ದೊಳ್ಳಿಪುರದಲ್ಲಿ, ಉತ್ತರ ದಿಕ್ಕಿನ ಕೋಟಂಬಳ್ಳಿಯಲ್ಲಿ ಮತ್ತು ಪಶ್ಚಿಮದ ಕೊಳಗಾಲಪುರದಲ್ಲಿ ಭವ್ಯವಾದ ಆಂಜನೇಯ ದೇವಾಲಯಗಳಿವೆ. ಅಲ್ಲದೆ ಈ ತಾಲೂಕಿನ ಬಹುತೇಕ ಊರುಗಳಲ್ಲಿ ಹನುಮಂತನ ಗುಡಿಗಳಿದ್ದು ಇವು ಈ ಪ್ರಾಂತ್ಯದ ಜನರು ಹನುಮಂತನ ಭಕ್ತರೂ ಆರಾಧಕರೂ ಆಗಿದ್ದರೆಂಬುದಕ್ಕೆ ನಿದರ್ಶನವಾಗಿದೆ.

## ಚಾಮರಾಜನಗರ ತಾಲೂಕಿನ ಪ್ರಮುಖ ವೀರಭದ್ರ ದೇವಾಲಯಗಳು

ಈ ತಾಲೂಕಿನಲ್ಲಿ ವೀರಭದ್ರೇಶ್ವರ ದೇವರ ಜನಪ್ರಿಯತೆ ಹೆಚ್ಚಿದ್ದು, ವಿಜಯನಗರ ಮತ್ತು ವಿಜಯನಗರೋತ್ತರ ಕಾಲದಲ್ಲಿ ಹಲವು ವೀರಭದ್ರದೇವರ ದೇವಾಲಯಗಳು ರಚನೆಯಾಗಿವೆ. ಅದರಲ್ಲೂ ವಿಶೇಷವಾಗಿ ಉಮ್ಮತ್ತೂರಿನ ಪ್ರಭುಗಳು ವೀರಭದ್ರದೇವಾಲಯಗಳ ನಿರ್ಮಾಣಕ್ಕೆ ಪ್ರೋತ್ಸಾಹ ನೀಡಿ, ಭೂಮಿ ಕಾಣಿಕೆಗಳನ್ನು ದಾನ ನೀಡಿರುವುದಕ್ಕೆ ಶಾಸನಗಳು ನಿದರ್ಶನವಾಗಿವೆ.

### ವೀರಭದ್ರೇಶ್ವರ, ಗಂಗವಾಡಿ

ಗಂಗವಾಡಿ ಚಾಮರಾಜನಗರ ತಾಲೂಕಿನ ಒಂದು ಗ್ರಾಮ. ಇಲ್ಲಿ ವಿಜಯನಗರ ಶೈಲಿಯ ವೀರಭದ್ರೇಶ್ವರ ದೇವಾಲಯವೊಂದಿದೆ. ಅಲ್ಲಿಯ ಶಾಸನವೊಮದರ ಪ್ರಕಾರ ದೇವರಸ ರೂಪಯ್ಯನವರು ದೇವರ ಮಧ್ಯಾಹ್ನದ ನೈವೇದ್ಯಕ್ಕಾಗಿ ಹನ್ನೆರಡು ಹೊನ್ನುಕ್ರಯಕೊಟ್ಟು ಅಮೃತ ಪಡಿಸೇವೆಯನ್ನು ಮಾಡಿದ್ದರೆಂದು ತಿಳಿದುಬರುತ್ತದೆ. ಈ ಶಾಸನದ ಕಾಲ ಕ್ರಿ.ಶ. ೧೫೦೫ ರಕ್ತಾಕ್ಷಿ ಸಂವತ್ಸರ ಪುಷ್ಯ ಸೋಮವಾರ ಎಂದಿದೆ. ಈ ಶಾಸನವನ್ನು ದೇವಾಲಯಕ್ಕಾಗಿಯೇ ನೀಡಿದ ಶಾಸನವೆಂದು ಹೇಳಬಹುದು.[೨೨]

ಈ ದೇವಾಲಯ ವಿಜಯನಗರ ಶೈಲಿಯ ದ್ರಾವಿಡ ಸಂಪ್ರದಾಯ ಲಕ್ಷಣಗಳನುಳ್ಳ ಒಂದು ಸಾಮಾನ್ಯ ತಳವಿನ್ಯಾಸದಲ್ಲಿ ಗರ್ಭಗೃಹ, ಶುಕನಾಸಿ, ಅರ್ಧಮಂಟಪ, ನವರಂಗ ಮತ್ತು ನವರಂಗಕ್ಕೆ ಪೂರ್ವ ಹಾಗೂ ದಕ್ಷಿಣ ದಿಕ್ಕಿಗೆ ಎರಡು ಮುಖ ಮಂಟಪಗಳು ನಿರ್ಮಾಣವಾಗಿವೆ. ಮುಖ್ಯ ಗುಡಿಯ ವಾಯುವ್ಯಕ್ಕೆ ಸ್ವಲ್ಪ ಹಿಂದಕ್ಕೆ ಪೂರ್ವಕ್ಕೆ ಮುಖ ಮಾಡಿರುವ ಭದ್ರಕಾಳಮ್ಮನ ಗುಡಿಯಿದೆ. ಈ ಗುಡಿಯಲ್ಲಿ ಗರ್ಭಗೃಹ ಮತ್ತು ಶುಕನಾಸಿಗಳು ಮಾತ್ರ ಮೂಲ ರೂಪವಾಗಿದ್ದು ನವರಂಗ, ಮುಖಮಂಟಪಗಳು ನಂತರದ ಸೇರ್ಪಡೆಗಳಾಗಿವೆ. ಇತ್ತೀಚೆಗೆ ಈ ದೇವಾಲಯಕ್ಕೆ ಸುತ್ತಲೂ ಪ್ರಾಕಾರ ಹಾಗೂ ಪರಿಹಾರ ದೇವತೆಗಳ ಗುಡಿಗಳನ್ನು ನಿರ್ಮಿಸಲಾಗಿದೆ. ಸ್ಥಳೀಯವರಾದ ಶ್ರೀಮಂತರೊಬ್ಬರು ಈ ಶಿಥಿಲ ದೇವಸ್ಥಾನವನ್ನು ದುರಸ್ಥಿಗೊಳಿಸಿ, ದೈನಂದಿನ ಪೂಜಾ ಕೈಂಕರ್ಯಗಳಿಗೆ ತೊಂದರೆಯಾದಂತೆ ವ್ಯವಸ್ಥೆ ಮಾಡಿರುತ್ತಾರೆ.

## ವೀರಭದ್ರ ದೇವಾಲಯ, ಹರಳುಕೋಟೆ

ಚಾಮರಾಜನಗರ ತಾಲೂಕಿನ ಹರಳುಕೋಟೆಯಲ್ಲಿ ವೀರಭದ್ರೇಶ್ವರ ದೇವಾಲಯವೊಂದಿದ್ದು, ಅದು ವಿಜಯನಗರದ ದೊರೆ ಕೃಷ್ಣದೇವಾರಾಯನ ಕಾಲದ್ದು. ಈ ದೇವಾಲಯದ ದಕ್ಷಿಣ ಕಡೆಗೆ ಶಾಸನವೊಂದುದ್ದು, ಅದರ ತೇದಿ ವಿವರಗಳು ಕ್ರಿ.ಶ. ೧೫೨೩ರ ಆಗಸ್ಟ್ ೬ ಗುರುವಾರಕ್ಕೆ ಸರಿಯಾಗಿ ಹೊಂದುತ್ತವೆ. ಸಾಳುವ ಗೋವಿಂದರಾಜ ವಡೆಯ ವಿಜಯನಗರದ ದೊರೆಯ ವೀರ ಪ್ರಧಾನನಾಗಿದ್ದ; ಆತನ ಮಾಗಣಿಕಾರ ತುರುಮುಡಿ ಪಾಕ ಸ್ಥಳದವನಾದ ತಿರುವೆಂಗಡ ಮೊದಲಿಯಾರನ ಮಗ ಜಡೆಯಾರು ಮೊದಲಿಯಾರು. ಆತನ 'ಮಾಗಣಿ'ಯಾದ ಹಟ್ಟಿಲಕೋಟೆಯಲ್ಲಿ ''ಶ್ರೀಮನ್ನಹಾದೇವ ದೇವೋತ್ತಮ ಶ್ರೀವೀರಭದ್ರದೇವರ ಪ್ರತಿಷ್ಠೆಯನ್ನು ಮಾಡಿಸಿ ದೇವರ ಶ್ರೀಯಂಗ ಬೋಗಕೆ'' - ಬೇರೆ ಬೇರೆ ಸ್ಥಳಗಳನ್ನು ಭೂದಾನ ಮಾಡಲಾಯಿತು ಎಂದು ವಿವರಿಸುತ್ತದೆ.[೨೩] ಪ್ರಸ್ತುತ ವೀರಭದ್ರದೇವರ ದೇವಾಲಯದ ಪ್ರತಿಷ್ಠಾಪನೆಯನ್ನು ಈ ಶಾಸನ ಸ್ಪಷ್ಟವಾಗಿ ವಿವರಿಸುತ್ತದೆ. ಪೂರ್ವಾಭಿಮುಖವಾಗಿರುವ ಈ ದೇವಾಲಯವೂ ತುಂಬಾ ಶಿಥಿಲವಾಗಿದ್ದು ಈಗ ಜೀರ್ಣೋದ್ಧಾರವಾಗುತ್ತಿದೆ.

## ವೀರಭದ್ರದೇವಾಲಯ, ಚಾಮರಾಜನಗರ

ಇದು ವಿಜಯನಗರದ ದೊರೆ ಒಂದನೆಯ ವೆಂಕಟಪತಿಯ ಆಳ್ವಿಕೆ ಕಾಲಕ್ಕೆ ಸೇರಿದ್ದು. ಇಲ್ಲಿ ಒಂದು ಶಾಸನವಿದ್ದು, ಅದರ ಕಾಲ ಕ್ರಿ.ಶ. ೧೬೦೫ರ ಏಪ್ರಿಲ್ ೧೧ಕ್ಕೆ ಹೊಂದಿಕೆಯಾಗುತ್ತದೆ. ಈ ಶಾಸನದಲ್ಲಿ ಅರೆಕೂತಾರದ ಪ್ರಭುಚಂದ್ರಶೇಖರವೊಡೆಯ ಮತ್ತು ಕಮ್ಮರವಳ್ಳಿಯ ಮಲ್ಲರಾಜವೊಡೆಯರು ಪರಸ್ಪರ ಒಡಂಬಟ್ಟು ಈ ಹಂಗರೆಪುರ ಎಂಬ ಗ್ರಾಮವನ್ನು ಸರ್ವಸ್ವಾಮ್ಯ ಸಹಿತವಾಗಿ ಅರೆಕೂತಾರದ ವೀರಭದ್ರದೇವರಿಗೆ ದಾನವಾಗಿತ್ತ ವಿವರವಿದೆ. ಶಾಸನದ ಕೊನೆಯಲ್ಲಿ ಅವರಿಬ್ಬರ ಸಹಿಗಳಿವೆ. ಅವರಿಬ್ಬರ ಕುಲದೈವ ವೀರಭದ್ರ; ''ನಂಮ ಕುಲಸ್ವಾಮಿ ಶ್ರೀಮನ್ಮಹಾದೇವ ದೇವೋತ್ತಮ ದಕ್ಷಾಧ್ವರಧ್ವ ಸನ ವಿನೋಧ ವಿಲಾಸಿಯಪ್ಪ ಅರೆಕುತಾರದ ವೀರಭದ್ರದೇವರ ನೈವೇದ್ಯ ಪಾತ್ರಭೋಗಕ್ಕೆ ದಾನವಿತ್ತುದೇ ಶಾಸನದ ವಸ್ತು.''[೨೪]

ಈ ದೇವಾಲಯವೂ ವಿಜಯನಗರ ಶೈಲಿಯ ದ್ರಾವಿಡ ಸಂಪ್ರದಾಯ ಲಕ್ಷಣಗಳನ್ನು ಒಂದು ಸರಳ ಸಾಮಾನ್ಯ ದೇವಾಲಯವಾಗಿದೆ. ಉತ್ತರಾಭಿಮುಖವಾಗಿರುವ ಈ ದೇವಾಲಯದ ಗರ್ಭಗೃಹ, ಶುಕನಾಸಿ, ನವರಂಗ, ಮಂಟಪಗಳು ಮೂಲ ರೂಪದಾಗಿವೆ. ದೇವರ ವಿಗ್ರಹ ಐದು ಅಡಿಯ ಬೃಹತ್ ವಿಗ್ರಹವಾಗಿದ್ದು ನೋಡಲು ಆತ್ಯಾಕರ್ಷಕವಾಗಿವೆ.

## ವೀರಭದ್ರ ದೇವಾಲಯ, ಚನ್ನಪ್ಪನಪುರ

ಚಾಮರಾಜನಗರ ತಾಲೂಕಿನ ಈ ದೇವಾಲಯವೂ ಸಹ ವಿಜಯನಗರದ ದೊರೆ ಒಂದನೆಯ ವೆಂಕಟಪತಿಯ ಆಳ್ವಿಕೆಯ ಕಾಲಕ್ಕೆ ಸೇರಿದ್ದು. ಊರ ಮುಂದಿನ ಗುಡ್ಡದ ಮೇಲಿರುವ ನಿರ್ಮಾಣವಾದ ಈ

ದೇವಾಲಯವೂ ನೋಡಲು ತುಂಬಾ ಆಕರ್ಷಕವಾಗಿದೆ. ಇದು ವಿಜಯನಗರ ಶೈಲಿಯ ದ್ರಾವಿಡ ಸಂಪ್ರದಾಯ ಲಕ್ಷಣಗಳನ್ನೊಳಗೊಂಡಿದೆ. ದೇವಾಲಯದಲ್ಲಿನ ದೇವರ ಮೂರ್ತಿಯೂ ಸಹ ಐದು ಅಡಿಗಳಷ್ಟು ಎತ್ತರವಿದ್ದು, ಬಹುಶಃ ಗಂಗವಾಡಿ, ಚಾಮರಾಜನಗರ ಪಟ್ಟಣ ಮತ್ತು ಈ ದೇವಾಲಯದ ವಿಗ್ರಹಗಳನ್ನು ಒಬ್ಬನೆ ಶಿಲ್ಪಿಯಿಂದ ರಚನೆಯಾಗಿರಬಹುದು. ಈ ಊರಿನಲ್ಲಿ ಒಂದು ಶಾಸನ ದೊರೆತ್ತಿದ್ದು, ಅದು ಒಂದನೆಯ ವೆಂಕಟಪತಿಯ ಆಳ್ವಿಕೆಯ ಕಾಲಕ್ಕೆ ಕ್ರಿ.ಶ. ೧೬೧೩ರ ಜನವರಿ ೨೪ಕ್ಕೆ ಸಲ್ಲುತ್ತದೆ. ಹದಿನಾಡ ಸೀಮೆಯ ಅರಸುಗಳು ಚೆಂನೂಡೆಯರ ಕುಮಾರ ನಂಜರಾಜೊಡೇರು ಅಮಚವಾಡಿಯ ಬೆಟ್ಟದ ಕುಂಭೇಶ್ವರ ದೇವರು, ವೀರಭದ್ರದೇವರು, ಬಸವೇಶ್ವರ ದೇವರಿಗೆ ಅಮೃತಪಡಿ ದೀಪ ಹೂವಿನ ತೋಟಕ್ಕೆ ಸಲವಾಗಿ- ಪ್ರಸ್ತುತ ಶಾಸನವಿರುವ ಗ್ರಾಮವನ್ನು ದಾನ ನೀಡಿದರೆಂದು ತಿಳಿದುಬರುತ್ತದೆ.[೨೫]

**ಸಪ್ತ ಮಾತೃಕೆಯರ ದೇವಾಲಯ, ಕಮ್ಮರವಾಡಿ**

ಏಳು ದೇವಾಲಯಗಳು ಒಂದೆಡೆ ನೆಲೆಸಿ ಭಕ್ತರನ್ನು ಆಕರ್ಷಿಸುತ್ತಿರುವ ಪುಣ್ಯಭೂಮಿ ಚಾಮರಾಜನಗರ ತಾಲೂಕಿನ ಕಮ್ಮರವಾಡಿ ಗ್ರಾಮ. ಈ ಗ್ರಾಮದಲ್ಲಿ ಸಪ್ತಮಾತೃಕೆಯರಾದ ಬ್ರಾಹ್ಮೀ, ಮಾಹೇಶ್ವರೀ, ಕೌಮಾರೀ, ವೈಷ್ಣವೀ, ವಾರಾಹೀ, ಇಂದ್ರಾಣೀ ಚಾಮುಂಡಾದೇವಿ ಅಥವಾ ಚೌಡೇಶ್ವರಿ ಇಲ್ಲಿ ಒಂದೆಡೆ ನೆಲೆಸಿ ಆಗಮಿಸುವ ಭಕ್ತರ ಅಭೀಷ್ಟಗಳನ್ನು ನೆರವೇರಿಸುತ್ತಾ ವಿರಾಜಮಾನರಾಗಿದ್ದಾರೆ.

ಸಾವಿರಾರು ವರ್ಷಗಳ ಹಿಂದೆ ತಮಿಳುನಾಡಿನ ಚೋಳರ ಆಡಳಿತವಿದ್ದಾಗ ದಕ್ಷಿನ ಭಾರತದಲ್ಲಿ ಶೈವಧರ್ಮ ಪ್ರಾಬಲ್ಯವಾಗಿತ್ತು. ಆ ಸಂದರ್ಭದಲ್ಲಿ ತಾಲೂಕಿನಲ್ಲಿ ಹಲವು ಶೈವ ದೇವಾಲಯಗಳು ನಿರ್ಮಾಣವಾಗಿದ್ದು, ಅವುಗಳಲ್ಲಿ ಕಮರವಾಡಿ ಸಪ್ತ ಮಾತೃಕಾ ಶ್ರೀ ಚೌಡೇಶ್ವರಿ ದೇವಸ್ಥಾನವೂ ಒಂದು ಎಂದು ಹೇಳಲಾಗಿದೆ. ಈ ದೇವಾಲಯವನ್ನು ಸ್ಥಾಪನೆ ಮಾಡಿದ ಯಾವುದೇ ನಿರ್ದಿಷ್ಟ ವ್ಯಕ್ತಿಯ ಬಗ್ಗೆ ಮಾಹಿತಿ ಲಭ್ಯವಾಗಿಲ್ಲವಾದರೂ ಪರಿಣತರ ಅಭಿಪ್ರಾಯ, ಶಿಲೆಗಳ ಗುಣಮಟ್ಟ, ಶಿಲ್ಪಗಳ ಶೈಲಿಯ ಲೆಕ್ಕಾಚಾರ ಹಾಗೂ ಸ್ಥಳೀಯ ಗ್ರಾಮೀಣ ವೃದ್ಧರು ಹೇಳುವ ಕಥೆಗಳ ಪ್ರಕಾರ ಈ ದೇವಸ್ಥಾನದ ಇತಿಹಾಸ ಕ್ರಿ.ಶ. ೧೧ನೇ ಶತಮಾನಕ್ಕೆ ಸೇರಿದ್ದೆಂದು ನಿರ್ಧರಿಸಬಹುದು.[೨೬]

ಗ್ರಾಮದಲ್ಲಿರುವ ಸಮಸ್ತ ಮಾತೃಕೆಯರ ವಿಗ್ರಹಗಳೂ ಸಹ ವೈಶಿಷ್ಟ್ಯ ಪೂರ್ಣದಿಂದ ಕೂಡಿವೆ. ಸಾಮಾನ್ಯವಾಗಿ ಶಕ್ತಿದೇವತೆಗಳು ಅಕ್ರಮಣಕಾರಿಗಳೆಂದೂ, ಅವುಗಳ ಸಂತೃಪ್ತಿಗಾಗಿ ಪ್ರಾಣಿಬಲಿ ಅಗತ್ಯವೆಂಬ ನಂಬಿಕೆ. ಆದರೆ ಇಲ್ಲಿನ ಸಪ್ತ ಮಾತೃಕಾ ದೇವಿಯರ ವಿಗ್ರಹಗಳು ಮಂದಸ್ಮಿತವಾಗಿ ಸೌಮ್ಯ ಸ್ವರೂಪಗಳಾಗಿವೆ. ಹೀಗಾಗಿ ಇಲ್ಲಿ ಹೋಮ, ಹವನ, ಅಷ್ಟೋತ್ತರ, ಅರ್ಚನೆ ಇತ್ಯಾದಿಗಳಿಂದಷ್ಟೇ ಪೂಜಿಸಲ್ಪಡುತ್ತವೆ. ಇಲ್ಲಿನ ಏಳೂ ವಿಗ್ರಹಗಳು ೨ ಅಡಿ ಎತ್ತರ ೨.೫ ಅಡಿ ಅಗಲ ಮತ್ತು ೪ ಅಂಗುಲ ದಪ್ಪದಿಂದ ಕೂಡಿವೆ.

ಮನೋಹರವಾದ ಉಡುಗೆ-ತೊಡುಗೆಗಳಿಂದ ಅವು ಸ್ವಾಲಂಕೃತವಾಗಿರುವಂತೆ ಕೆತ್ತಲ್ಪಟ್ಟಿದ್ದು, ನೋಡುಗರ ಮನದಲ್ಲಿ ಭಕ್ತಿಭಾವ ಮೂಡಿಸುವಂತೆ ಆಕರ್ಷಣೀಯವಾಗಿದೆ.

ಬ್ರಹ್ಮನ ಶಕ್ತಿಯಾದ ಬ್ರಾಹ್ಮೀ, ವಿಷ್ಣುವಿನ ಶಕ್ತಿಯಾದ ವೈಷ್ಣವೀ, ವರಾಹಾವತಾರದ ಶಕ್ತಿಯಾದ ವಾರಾಹೀ, ಮಹೇಶ್ವರನ ಶಕ್ತಿಯಾದ ಮಹೇಶ್ವರೀ, ಕುಮಾರನ ಅಂದರೆ ಸುಬ್ರಹ್ಮಣ್ಯನ ಶಕ್ತಿಯಾದ ಕೌಮರೀ, ದುರ್ಗೆಯ ಮತ್ತೊಂದು ರೂಪವಾದ ಚೌಡೇಶ್ವರಿ ಹಾಗೂ ದೇವತೆಗಳ ಒಡೆಯ ಇಂದ್ರನ ಶಕ್ತಿಯಾದ ಇಂದ್ರಾಣೀ ಹೀಗೆ ಈ ಏಳೂ ದೇವತೆಗಳೂ ಒಂದೇ ಕಡೆ ನೆಲೆಸಿ ಕಮರವಾಡಿ ಗ್ರಾಮವನ್ನು ಒಂದು ಪುಣ್ಯಕ್ಷೇತ್ರವನ್ನಾಗಿಸಿದೆ. ಅಲ್ಲದೆ ಇದರೊಟ್ಟಿಗೆ ಇನ್ನೊಂದು ವಿಶೇಷವೂ ಇಲ್ಲಿದೆ. 'ಸುಖ-ದುಃಖದಮ್ಮ' ಎಂದು ಕರೆಯಲ್ಪಡುವ ಮತ್ತೊಂದು ದೇವತೆ ಇಲ್ಲಿ ನೆಲೆಗೊಂಡಿದ್ದಾಳೆ. ಈಕೆ ಆಗಮಿಸುವ ಭಕ್ತರ ಸುಖ-ದುಃಖಗಳಿಗೆ ಸ್ಪಂದಿಸುತ್ತಾ ಅದನ್ನು ಈ ದೇವತೆ ಸಪ್ತಮಾತೃಕೆಯರಿಗೆ ನಿವೇದಿಸುವಾ ಮಧ್ಯವರ್ತಿ, ಈಕೆ ಭಕ್ತರ ದುಃಖ ಪರಿಹಾರಕ್ಕಾಗಿ ದಿನದ ೨೪ ಗಂಟೆಗಳೂ ಎಚ್ಚರದಿಂದಿದ್ದು, ಭಕ್ತಾದಿಗಳ ನೋವನ್ನು ಆಲಿಸಿ ಸಪ್ತಮಾತೃಕೆಯರಿಗೆ ನಿವೇದಿಸುತ್ತಾಳೆ ಎಂದು ನಂಬಿಕೆ ಇಲ್ಲಿಯ ಭಕ್ತರಲ್ಲಿ ಮನೆ ಮಾಡಿದೆ.

ಸಪ್ತಮಾತೃಕೆಯರಾದ ವಾರಾಹೀಯೂ ಕಾಮವನ್ನು, ಮಾಹೇಶ್ವರಿಯೂ ಕ್ರೋಧವನ್ನು, ವೈಷ್ಣವಿಯೂ ಲೋಭವನ್ನು, ಬ್ರಹ್ಮಾಣೀಯೂ ಸ್ವಾರ್ಥವನ್ನು ಹೀಗೆ ಮಾನವನಲ್ಲಿರುವ ಅರಿಷಡ್ವರ್ಗಗಳನ್ನು ನಿಯಂತ್ರಿಸಿ ಮನುಷ್ಯನನ್ನು ಪರಿಪೂರ್ಣ ವ್ಯಕ್ತಿಯನ್ನಾಗಿಸಿ ಅಷ್ಟೈಶ್ವರ್ಯಗಳನ್ನು ದಯಪಾಲಿಸುತ್ತಾರೆ ಎಂಬುದು ಭಕ್ತಾದಿಗಳ ಅಚಲ ನಂಬಿಕೆ.

ಹೀಗೆ ಇತಿಹಾಸ ಕಾಲದಿಂದಲೂ ವೈಭವದಿಂದ ಮೆರೆದ ಸಪ್ತಮಾತೃಕೆಯರ ದೇವಸ್ಥಾನ ಕಾಲನಂತರ ಜನರಿಂದ ನಿರ್ಲಕ್ಷ್ಯಕ್ಕೊಳಗಾಗಿ, ಸಂಪೂರ್ಣವಾಗಿ ಶಿಥಲಗೊಂಡಿತ್ತು. ಇತ್ತೀಚೆಗೆ ಒಂದು ಟ್ರಸ್ಟ್ ರಚನೆಯಾಗಿ ಇಡೀ ದೇವಸ್ಥಾನವನ್ನು ಜೀರ್ಣೋದ್ಧಾರಗೊಳಿಸಿದೆ. ಅಲ್ಲದೆ ಈ ಟ್ರಸ್ಟ್ ವತಿಯಿಂದ ಒಂದು ಭೋಜನ ಶಾಲೆಯೂ ನಿರ್ಮಾಣವಾಗಿದೆ. ಪ್ರತಿನಿತ್ಯದ ಪೂಜಾ ಕೈಂಕರ್ಯಗಳು ಯಶಸ್ವಿಯಾಗಿ ನಡೆಯುತ್ತಿದ್ದು, ಪ್ರತಿ ತಿಂಗಳ ಎರಡನೇ ಭಾನುವಾರ ವಿಶೇಷ ಪೂಜೆಯನ್ನು ಹಮ್ಮಿಕೊಳ್ಳಲಾಗುತ್ತಿದೆ. ಅಂದು ರಾಜ್ಯದ ಹಲವು ಕಡೆಗಳಿಂದ ಸಾವಿರಾರು ಭಕ್ತಾದಿಗಳು ಪಾಲ್ಗೊಳ್ಳುತ್ತಿದ್ದು, ಅವರೆಲ್ಲರಿಗೂ ಆಡಳಿತಮಂಡಳಿ ವತಿಯಿಂದ ಉಚಿತ ಉಪಹಾರ ಮತ್ತು ಭೋಜನ ಸೌಲಭ್ಯವನ್ನು ಕಲ್ಪಿಸಲಾಗಿದೆ. ಅಲ್ಲದೆ ಪ್ರತಿವರ್ಷ ಕಾರ್ತಿಕ ಹುಣ್ಣಿಮೆಯಂದು ದೇವಿಗೆ ಮಹಾಭಿಷೇಕ, ಸಂಜೆ ಸ್ಕಂದನೋತ್ಸವ, ರಥೋತ್ಸವ ನಡೆಯಲಿದೆ.

### ಕರಿವರದರಾಜ ಬೆಟ್ಟ, ಚಾಮರಾಜನಗರ

ಚಾಮರಾಜನಗರ ಪಟ್ಟಣದ ಗಾಳಿಪುರ ಬಡಾವಣೆಗೆ ಹೋಗಿ ಅಲ್ಲಿಂದ ಸುಮಾರು ೪ ಕಿ.ಮೀ. ದೂರ ಹೋದರೆ ಒಂದು ಬೆಟ್ಟ ಸಿಗುತ್ತದೆ. ಅದೇ ಕರಿವರದರಾಜ ಬೆಟ್ಟ. ನೋಡಲು ಸುಂದರವಾಗಿರುವ

ಈ ಬೆಟ್ಟ ಪ್ರಶಾಂತತೆ ಬಯಸುವವರಿಗೆ, ಪರಿಸರ ಪ್ರಿಯರಿಗೆ ಹೇಳಿ ಮಾಡಿಸಿದ ತಾಣದಂತಿದೆ. ಅಲ್ಲದೆ ಸಾಹಸಪ್ರಿಯರಿಗೆ ಹಾಗೂ ಚಾರಣ ಪ್ರಿಯರಿಗೂ ಇದು ಮೆಚ್ಚಿನ ತಾಣವಾಗಿದೆ.

ಹಲವು ವಿಸ್ಮಯಗಳ ಆಗರವೇ ಆಗಿರುವ ಕರಿವರದರಾಜಸ್ವಾಮಿ ಬೆಟ್ಟದ ಸಾಲುಗಳು ಹತ್ತಾರು ಕಿ.ಮೀ.ಗಳವರೆಗೂ ಚಾಚಿಕೊಂಡಿದೆ. ಚಾಮರಾಜನಗರದ ಮಿನಿ ಹಿಮಾಲಯ ಪರ್ವತದಂತಿರುವ ಈ ಬೆಟ್ಟವನ್ನು ಒಮ್ಮೆ ಪ್ರದಕ್ಷಿಣೆ ಹಾಕಿದರೆ ಕೈಲಾಸ ವೈಕುಂಠಗಳನ್ನು ಸುತ್ತಿ ನೋಡಿದಂತಾಗುತ್ತದೆ. ಏಕೆಂದರೆ ಮಹಾವಿಷ್ಣು ಸ್ವರೂಪನಾದ ಕರಿವರದರಾಜ ಸ್ವಾಮಿ ದೇವಸ್ಥಾನ ವೈಷ್ಣವ ಕ್ಷೇತ್ರವಾದರೆ, ಅದೇ ಸಾಲಿನಲ್ಲಿ ಬರುವ ಎಡಬೆಟ್ಟದ ಮಹದೇಶ್ವರ ದೇವಾಲಯ ಅಪರೂಪದ ಶೈವ ಕ್ಷೇತ್ರ. ಹಾಗೆಯೇ ಬಳಸಿಕೊಂಡು ಹಿಂದಕ್ಕೆ ಹೋದರೆ ಎಣ್ಣೆಹೊಳೆ ಮಹದೇಶ್ವರ ದೇವಾಲಯದ ದರ್ಶನವಾಗುತ್ತದೆ. ಹೀಗೆ ವೈಷ್ಣವ, ಶೈವ ಸಾನ್ನಿಧ್ಯವನ್ನು ತನ್ನೊಡಲಿನಲ್ಲಿರಿಸಿಕೊಂಡು ಈ ಬೆಟ್ಟದ ಸಾಲುಗಳ ನಡುವೆ 'ಚಂದ್ರಪ್ರಭಾ' ಗುಹೆ ಎಂಬ ಜೈನ ಕ್ಷೇತ್ರವೊಂದಿರುವುದು ಇಲ್ಲಿನ ವಿಶೇಷ.[೨೭]

## ಯಡಬೆಟ್ಟ, ಶಿವಪುರ

ಚಾಮರಾಜನಗರದಿಂದ ಗುಂಡ್ಲುಪೇಟೆ ಮಾರ್ಗವಾಗಿ ಹೋಗುವಾಗ ಶಿವಪುರ ಎಂಬ ಗ್ರಾಮ ಸಿಗುತ್ತದೆ. ಇಲ್ಲಿ ಸುಮಾರು ೩-೪ ಕಿ.ಮೀ. ದೂರ ಶ್ರಮಿಸಿದರೆ (ಮಿಲಿ ಮಹದೇಶ್ವರ ಬೆಟ್ಟದಂತಿರುವ) ಯಡಬೆಟ್ಟ ಸಿಗುತ್ತದೆ. ಪ್ರಶಾಂತತೆಯ ವಾತಾರವಣವಾಗಿದ್ದು. ನಿಸರ್ಗ ಪ್ರಿಯರಿಗೆ, ಹಲವು ವಿಸ್ಮಯಗಳನ್ನುಂಟು ಮಾಡುವ ತಾಣ ಇದಾಗಿದೆ. ಈ ಬೆಟ್ಟದ ಮೇಲೆ ವಿಶಾಲವಾದ, ಆಸ್ತಿಕ ಮನೋಭಾವನೆಯನ್ನು ವೃದ್ಧಿಸುವ ಮಹದೇಶ್ವರ ದೇವಸ್ಥಾನವೊಂದಿದೆ. ವಾರದ ಸೋಮವಾರ ಮತ್ತು ಶುಕ್ರವಾರ ಹಾಗೂ ಅಮವಾಸ್ಯೆ ದಿನಗಳಲ್ಲಿ, ಯುಗಾದಿ, ದೀಪಾವಳಿ ಹಬ್ಬಗಳಲ್ಲಿ ಸುತ್ತ-ಮುತ್ತಲಿನಿಂದ ಅಪಾರ ಸಂಖ್ಯೆಯ ಭಕ್ತರು ಇಲ್ಲಿಗೆ ಆಗಮಿಸುತ್ತಾರೆ.

## ಚಂದ್ರಪ್ರಭಾ ಗುಹೆ, ಚಾಮರಾಜನಗರ

ಚಾಮರಾಜನಗರದಿಂದ ಗುಂಡ್ಲುಪೇಟೆಗೆ ಹೋಗುವ ರಸ್ತೆಯಲ್ಲಿ ಸುಮಾರು ೧.೫ ಕಿ.ಮೀ. ಕಾಲುದಾರಿಯಲ್ಲಿ ಶ್ರಮಿಸಿದರೆ ಸಿಗುವ ಬೆಟ್ಟದಲ್ಲಿರುವುದೇ ಚಂದ್ರಪ್ರಭಾ ಗುಹೆ. ಇಲ್ಲಿ ತೀರ್ಥಂಕರರು ವಿಗ್ರಹ ರೂಪದಲ್ಲಿರದೆ ಕೇವಲ ಕಲ್ಲಿನಲ್ಲೇ ಕೆತ್ತಿರುವ ರೇಖಾಚಿತ್ರದ ರೂಪದಲ್ಲಿದೆ. ಪದ್ಮಾಸನದ ಭಂಗಿಯಲ್ಲಿ ದಿಗಂಬರರಾಗಿ ಧ್ಯಾನ ಮುದ್ರೆಯಲ್ಲಿ ಕುಳಿತಿದ್ದಾನೆ. ಯಾವುದೇ ಮಂದಿರ, ಮಂಟಪ ಇಲ್ಲದೆ, ಗೊಮ್ಮಟನಂತೆಯೇ ಬಿಸಿಲು, ಮಳೆ, ಚಳಿಗೆ ಮೈಯೊಡ್ಡಿ ಚಂದ್ರಪ್ರಭಾ ತೀರ್ಥಂಕರರು ರೇಖಾ ಚಿತ್ರದಂತೆ ಕುಳಿತಿದ್ದಾನೆ. ಕಡಿದಾದ ಬೆಟ್ಟವನ್ನು ಸ್ವಲ್ಪ ಪ್ರಯಾಸಪಟ್ಟು ಹತ್ತಿ ನೋಡಿದರೆ ಆನೇ ತೀರ್ಥಂಕರರ ದರ್ಶನ ಲಭ್ಯವಾಗುತ್ತದೆ.

ಹಿಂದೆ ಪ್ರತಿವರ್ಷ ಭಾದ್ರಪದ ಮಾಸದ ಅನಂತನಾಥ ವ್ರತದ ಹಬ್ಬ ಮುಗಿದ ಮೇಲೆ ಒಂದು ಭಾನುವಾರ ಜೈನ ಸಮಾಜದವರು ಇಲ್ಲಿಗೆ ಬಂದು ಬೆಳಗಿನಿಂದ ಸಂಜೆವರೆಗೆ ಅಭಿಷೇಕ ಪೂಜೆಗಳನ್ನು ಮಾಡಿಸಿ ಚಂದ್ರನಾಥಸ್ವಾಮಿಗೆ ಪೂಜೆ ಸಲ್ಲಿಸಿ ಹಬ್ಬ ಆಚರಿಸುತ್ತಿದುದ್ದು ವಾಡಿಕೆಯಾಗಿತ್ತಂತೆ. ಈ ನಡುವೆ ಕೆಲವು ವರ್ಷಗಳ ಕಾಲ ನಿಂತು ಹೋಗಿದ್ದ ಈ ಪೂಜೆ ಭುವನಕೀರ್ತಿ ಭಟ್ಟಾರಕರ ಮಾರ್ಗದರ್ಶನದಲ್ಲಿ ಮತ್ತೆ ಆರಂಭವಾಗಿದೆ. ಈ ಹಿಂದೆ ೧೮ನೇ ಶತಮಾನದಲ್ಲಿ ತಮಿಳುನಾಡು ಕಡೆಯಿಂದ ಆಗಮಿಸಿದ ಅನಂತನಾಥಸ್ವಾಮಿ ಎಂಬ ಜೈನಮುನಿಗಳು ಇಲ್ಲಿಯೇ ತಪಸ್ಸು ಆಚರಿಸಿ ದೇಹತ್ಯಾಗ ಮಾಡಿದರಂತೆ. ಅವರು ಬರುವುದಕ್ಕೆ ಮುಂಚೆಯಿಂದಲೂ ಇಲ್ಲಿ ಜೈನಮುನಿಗಳ ಸಂಚಾರವಿತ್ತು ಎಂದು ಭುವನಕೀರ್ತಿಗಳು ಹೇಳುತ್ತಾರೆ.[೨೮] ಪ್ರಕೃತಿಯ ರಕ್ಷಣೆಗಾಗಿರುವ ಮುನಿಗಳು ಈ ತರಹದ ಬೆಟ್ಟಗುಡ್ಡಗಳನ್ನು ತಮ್ಮ ತಪೋಭೂಮಿಯಾಗಿ ಆಯ್ಕೆ ಮಾಡಿಕೊಂಡಿರಬಹುದು ಎಂಬುದು ಈ ನಿಸರ್ಗ ರಮಣೀಯ ಪ್ರದೇಶವನ್ನು ನೋಡಿದಾಗ ಅರಿವಾಗುತ್ತದೆ.

ಚಂದ್ರಪ್ರಭಾಗುಹೆಗೆ ಹೋಗಲು ಸರಿಯಾದ ಮೆಟ್ಟಿಲುಗಳು ಇರದೆ ಇರುವುದರಿಂದ ಬಂಡೆಕಲ್ಲುಗಳ ಮೇಲೆ ಹತ್ತಿ ಹೋಗಬೇಕು. ಒಂದು ಪ್ರಮುಖ ಜೈನ ಕ್ಷೇತ್ರವಾಗುವ ಎಲ್ಲ ಸಾಧ್ಯತೆಯೂ ಇರುವ ಈ ಬೆಟ್ಟಕ್ಕೆ ಹೋಗಲು ಮೆಟ್ಟಿಲುಗಳ ವ್ಯವಸ್ಥೆ ಆಗಬೇಕಾಗಿದೆ. ವರ್ಷಕ್ಕೊಮ್ಮೆ ಮಾತ್ರ ಇಲ್ಲಿ ಜೈನ ಸಮುದಾಯದವರಿಂದ ಪೂಜೆ ನಡೆಯುತ್ತದೆ. ಕನಕಗಿರಿಯಂತೆಯೇ ಇದು ಸಹ ಅಭಿವೃದ್ಧಿಯಾದರೆ ಚಾಮರಾಜನಗರ ಜೈನಕ್ಷೇತ್ರಗಳ ಭೂಪಟದಲ್ಲಿ ಅಗ್ರಸ್ಥಾನ ಪಡೆಯುವುದರಲ್ಲಿ ಸಂಶಯವಿಲ್ಲ.

## ಶಂಕರದೇವರ ಬೆಟ್ಟ, ಮಂಗಲ

ಚಾಮರಾಜನಗರದಿಂದ ೯ ಕಿ.ಮೀ. ದೂರದಲ್ಲಿ ಸಂತೇಮರಳ್ಳಿಗೆ ಹೋಗುವ ಮಾರ್ಗಮಧ್ಯದಲ್ಲಿ ಮಂಗಲ ಗ್ರಾಮದ ಹೊರವಲಯದಲ್ಲಿರುವುದೇ ಶಂಕರದೇವರ ಬೆಟ್ಟ. ಶ್ರೀ ಶಂಕರೇಶ್ವರ ಮತ್ತು ಶ್ರೀ ಗೌರಿ ಇಲ್ಲಿ ವಿರಾಜಿಸುತ್ತಿದ್ದಾರೆ. ಇದೊಂದು ಪ್ರಶಾಂತವಾದ ಹಾಗೂ ಪವಿತ್ರವಾದ ಪುಣ್ಯಕ್ಷೇತ್ರ. ಈ ಬೆಟ್ಟವು ಸುಮಾರು ೬೫೦x೬೫೦ ಅಡಿ ಎತ್ತರವಿದೆ. ಈ ಬೆಟ್ಟದ ಸುತ್ತಳತೆ ಸುಮಾರು ೨ ಮೈಲಿಗಳಷ್ಟಾಗಬಹುದು. ಈ ಬೆಟ್ಟವನ್ನು ಯಾವ ಕಡೆಯಿಂದ ನೋಡಿದರೂ ಸಹ ಭೂಗರ್ಭದಿಂದ ಅವಿರ್ಭವಿಸುವ ಬೃಹದಾಕಾರದ ಒಂದು ಲಿಂಗದಂತೆಯೇ ಕಾಣಿಸುತ್ತದೆ. ಸುತ್ತಲೂ ಸಾಮಾನ್ಯವಾಗಿ ಬಯಲು ಪ್ರದೇಶವಿದೆ. ಪಶ್ಚಿಮದ ಕಡೆ ಕೆರೆ, ಕೊಳ, ಶಿಲಾಮಂಟಪ, ವೀರಭದ್ರನಗುಡಿ, ಬಸವನಗುಡಿ, ಪುರಾತನ ಕಲ್ಲು ಮಠ, ಬಾವಿ, ಹೂದೋಟ, ಬಿಲ್ವ ಮರಗಳೂ ಇವೆ. ಹಾಗೆಯೇ ಹಳೆಯ ಕಾಲದ ನಾಲ್ಕಾರು ಗವಿಗಳಿವೆ. ಈಶಾನ್ಯದ ಕಡೆಯಲ್ಲಿ 'ಬರಿಕೊಂಡಯ್ಯನ ಗವಿ' ಎಂಬ ಒಬ್ಬ ಮಹಾಶಿವಶರಣನ ಗವಿಯಿದೆ.

ಬೆಟ್ಟದ ಮೇಲಕ್ಕೆ ಹತ್ತಲೂ ಉತ್ತರದ ಕಡೆಯಿಂದ ಸಾಮಾನ್ಯವಾದ ಹಂತಗಳಿವೆ. ಈ ದೇವಾಲಯದ ಬಗ್ಗೆ ಮೊದಲು ಹೆಚ್ಚಿನ ಗಮನ ಹರಿಸಿದವರು ಮೈಸೂರು ಮಹಾರಾಜರವರಾದ ಶ್ರೀಜಯಚಾಮರಾಜ

ಒಡೆಯರು ಮತ್ತು ಶ್ರೀಮತಿ ಮಹಾರಾಣಿಯವರಾದ ತ್ರಿಪುರ ಸುಂದರಮ್ಮಣಿಯವರು ಸಹ ಅನನ್ಯ ಭಕ್ತಿಯಿಂದ ಈ ದೇವಾಲಯಕ್ಕೆ ೧೯೫೧ರಲ್ಲಿ ವಿದ್ಯುಚ್ಛಕ್ತಿ ದೀಪ ಹಾಕಿಸಿಕೊಟ್ಟರು. ಬೆಟ್ಟದ ಮೇಲುಗಡೆಯ ದೇವಾಲಯವೂ ಪೂರ್ವಾಭಿಮುಖವಾಗಿದೆ. ಗರ್ಭಾಂಕಣದ ಮೇಲೆ ಗೋಪುರದ ಮೇಲ್ಭಾಗದಲ್ಲಿ ಮುಂದುಗಡೆ ದೊಡ್ಡದಾದ ಗಾರೆಯರ ಬಸವಣ್ಣ ಶೋಭಾಯಮಾನವಾಗಿದೆ. ಎರಡು ಅಂಕಣದ ಗರ್ಭಗುಡಿ, ಅದಕ್ಕೆ ಸೇರಿದಂತೆ ದೇವಾಲಯ ಮುಂದಕ್ಕೆ ಕೈಸಾಲೆ ಎಲ್ಲಾ ಸೇರಿ ಒಟ್ಟು ೧೪ ಅಂಕಣ ಇದೆ. ಈ ದೇವಾಲಯದ ಮುಂಭಾಗದಲ್ಲಿ ಸುಮಾರು ೧೨ ಅಡಿ ಎತ್ತರವಾದ ಒಂದು ದೀಪಸ್ತಂಭವಿದೆ. ಗರ್ಭಗುಡಿಯಲ್ಲಿ ಒಂದು ಅಡಿಯಷ್ಟು ಎತ್ತರವಾಗಿ ಶ್ರೀಶಂಕರೇಶ್ವರ ಉದ್ಭವಲಿಂಗ ಮೂರ್ತಿ ರಾರಾಜಿಸುತ್ತದೆ. ಗರ್ಭಾಂಕಣದ ಮುಂದೆ ಸುಮಾರು ೨ ಚದರ ಅಡಿ ಸ್ಥಳದಲ್ಲಿ ಒಂದು ಸುಂದರವಾದ ಕಲ್ಲು ಬಸವಮೂರ್ತಿಯನ್ನು ಪ್ರತಿಷ್ಠಾಪಿಸಲಾಗಿದೆ. ಈ ದೇವರಿಗೆ ಪ್ರತಿನಿತ್ಯವೂ ತಪ್ಪದೇ ಒಂದು ಬಾರಿ ಪೂಜೆ ನಡೆಯುತ್ತದೆ. ಆದರೆ ಪ್ರತಿ ಸೋಮವಾರ ಮತ್ತು ಶುಕ್ರವಾರ ವಿಶೇಷ ಪೂಜೆ ನಡೆಯುತ್ತದೆ.

ಈ ಬೆಟ್ಟದಲ್ಲಿ ಪ್ರತಿವರ್ಷವೂ ಗೌರಿ-ಗಣೇಶ ಹಬ್ಬವಾದ ೫ ಮತ್ತು ೬ನೇಯ ದಿವಸದಂದು ಜಾತ್ರೆಗಳು ನಡೆಯುತ್ತದೆ. ಈ ಸಂದರ್ಭದಲ್ಲಿ ಹುಲಿಯವಾಹನ ಹಾಗೂ ಬಸವ ವಾಹನಗಳ ಮೇಲೆ ಶ್ರೀ ಶಂಕರೇಶ್ವರ ಮಹಾಸ್ವಾಮಿಯ ಕೊಳಗವನ್ನಿಟ್ಟು ಮಂಗಲ ಗ್ರಾಮಗಳಲ್ಲಿ ವಿಜೃಂಭಣೆಯಿಂದ ಭಕ್ತಿಪೂರ್ವಕ ವಾಗಿ ಪುಷ್ಪಾಂದೋಳಿಕೋತ್ಸವವನ್ನು ಮಾಡುತ್ತಾರೆ.[೫೯]

## ಗೋಪಾಲಕೃಷ್ಣ ದೇವಾಲಯ, ಹರದನಹಳ್ಳಿ

ದ್ರಾವಿಡ ಶೈಲಿಯಲ್ಲಿ ನಿರ್ಮಾಣಗೊಂಡಿರುವ ಈ ದೇವಾಲಯವೂ ಮೈಸೂರು ಒಡೆಯರ ಆಳ್ವಿಕೆಯ ಕಾಲದಲ್ಲಿ ಅಂದರೆ ಕ್ರಿ.ಶ. ೧೬೮೪ ರಿಂದ ೧೭೦೪ರ ಅವಧಿಯಲ್ಲಿ ರಚನೆಗೊಂಡಿದೆ. ಸುವಿಶಾಲವಾದ ಪ್ರಾಕಾರವನ್ನು ಹೊಂದಿರುವ ಈ ದೇವಾಲಯದ ಹೊರಗಿನ ಅಂಕಣದ ಎಡ ಮತ್ತು ಬಲ ಪಾರ್ಶ್ವಗಳಲ್ಲಿ ಅಮ್ಮನವರ ಗುಡಿಗಳಿವೆ. ಗರ್ಭಗುಡಿಯ ಮುಂಭಾಗದಲ್ಲಿ ದ್ವಾರಪಾಲಕರಾದ ಜಯ-ವಿಜಯರ ಸುಂದರವಾದ ವಿಗ್ರಹಗಳಿವೆ. ದೇವಾಲಯದ ಒಳಭಾಗದಲ್ಲಿ ಶ್ರೀನಿವಾಸ ವಿಗ್ರಹವಿದೆ. ಮುಖ್ಯದೇವರಾದ ಗೋಪಾಲಕೃಷ್ಣ ಆಕರ್ಷಕವಾಗಿದ್ದಾನೆ. ಅಲ್ಲದೆ ರುಕ್ಮಿಣಿ, ಸತ್ಯಭಾಮ, ಶ್ರೀದೇವಿ, ಭೂದೇವಿ, ಚೆನ್ನಕೇಶವ, ವಿಶ್ವಕೇನ, ರಾಮಾನುಜಾಚಾರ್ಯ ಹಾಗೂ ಆಳ್ವಾರ್ ರರ ಮೂರ್ತಿಶಿಲ್ಪಗಳಿವೆ. ಗುಡಿಯ ಒಳಾಂಗಣದಲ್ಲಿ ಐದು ಕಂಬಗಳ ಮೇಲೆ ಗಣಪತಿಯನ್ನು, ಎರಡು ಕಂಬಗಳ ಮೇಲೆ ಲಿಂಗವನ್ನು, ಒಂದು ಕಂಬದ ಮೇಲೆ ಈಶ್ವರ ಪಾರ್ವತಿಯನ್ನು ಇತರೆ ಕಂಬಗಳ ಮೇಲೆ ಷಣ್ಮುಖ, ದಕ್ಷಿಣಾಮೂರ್ತಿ, ನಟರಾಜ, ಉಗ್ರನರಸಿಂಹ, ರಾಮ, ಸೀತೆ, ಲಕ್ಷ್ಮಣ, ಭರತ ಮತ್ತು ಕೊಳಲು ಗೋಪಾಲಕೃಷ್ಣನ ಆಕೃತಿಯನ್ನು ಕೆತ್ತಲ್ಪಟ್ಟಿರುವುದು ಈ ದೇವಾಲಯದ ವೈಶಿಷ್ಟ್ಯಕ್ಕೆ ಕಾರಣವಾಗಿದೆ.

ಶೈವ ಮತ್ತು ವೈಷ್ಣವ ಪರಂಪರೆಗಳ ಪ್ರೇರಕ ಶಕ್ತಿಯಾಗಿ ಗೋಪಾಲಕೃಷ್ಣ ಕೃಷ್ಣಶಿಲೆಯಿಂದ ನಿರ್ಮಿಸಲ್ಪಟ್ಟ ಸುಂದರವಾದ ವಿಗ್ರಹ, ಚೋಳಶೈಲಿಯ ವಿನ್ಯಾಸವನ್ನು ಹೊಂದಿರುವ ಇದು ಪಾರಿಜಾತದ ಹೂ ಬಳ್ಳಿಗಳಿಂದ ಸುತ್ತುವರಿಯಲ್ಪಟ್ಟಿದೆ. ಕೊಳಲನೂದುತ್ತಿರುವ ಗೋಪಾಲ ಕೃಷ್ಣನ ಸನಿಹದಲ್ಲಿ ಗೋಪಿಕಾ ಸ್ತ್ರೀಯರು, ಗೋವುಗಳು ಕಂಡುಬರುತ್ತವೆ. ಮಂದಸ್ಮಿತನಾಗಿ ನಿಂತ ಕೃಷ್ಣನ ಅಕ್ಕಪಕ್ಕಗಳ ಕೆಳಭಾಗದಲ್ಲಿ ರುಕ್ಮಿಣಿ ಸತ್ಯಭಾಮ ನಿಂತಿರುವುದು ಶಿಲ್ಪಕ್ಕೆ ಮೆರಗನ್ನು ತಂದು ಕೊಟ್ಟಿದೆ. ಗೋವಿನ ವಿವಿಧ ಮುಖಿಗಳ ಶಿಲ್ಪ, ಶಿಲ್ಪಿಯ ಕಲಾಸೌಂದರ್ಯ ಹಾಗೂ ಧಾರ್ಮಿಕ ಪ್ರಜ್ಞೆಗೆ ಸಾಕ್ಷಿಯಾಗಿದೆ.

ಗರ್ಭಗುಡಿಯ ಬಲಭಾಗದಲ್ಲಿ ಕಣಶಿಲೆಯಿಂದ ಮಾಡಿದ ರಾಮಾನುಜರ ವಿಗ್ರಹವಿದೆ. ಶೈವ ಮತ್ತು ವೈಷ್ಣವ ಧರ್ಮಗಳು ಪ್ರಬಲವಾಗಿರುವುದರಿಂದ ಈ ಮೂರ್ತಿ ಸ್ಥಾಪನೆ ಯಾಗಲೂ ಕಾರಣ. ಈ ದೇವಾಲಯವನ್ನು ಪೂಜೆ ಮಾಡಲು ತಮಿಳುನಾಡಿನಿಂದ ಬಂದ ಶ್ರೀ ವೈಷ್ಣವರ ಪ್ರಭಾವವು ಇದ್ದಂತೆ ಕಂಡುಬರುತ್ತದೆ. ರಾಮಾನುಜರ ಪಕ್ಕದಲ್ಲೇ ಪದ್ಮಾಸನ ಭಂಗಿಯಲ್ಲಿ ಕುಳಿತಿರುವ ಆಳ್ವಾರರನ್ನು ಕಣಶಿಲೆಯಿಂದ ನಿರ್ಮಿಸಲಾಗಿದೆ. ಅಂದು ರಾಮಾನುಜರೊಂದಿಗೆ ಇದ್ದ ಶ್ರೀವೈಷ್ಣವ ಮತಾವಲಂಬಿಗಳು ಕೂಡ ಪ್ರಬಲರಾಗಿದ್ದರೆಂಬುದಕ್ಕೆ ಇವು ನಿದರ್ಶನ.

ಹರದನಹಳ್ಳಿಯು ಹಲವು ಕಾರಣಗಳಿಂದ ತಾಲೂಕಿನಲ್ಲಿ ಐತಿಹಾಸಿಕ ಪರಂಪರೆಯುಳ್ಳ ಕ್ಷೇತ್ರ. ಅಲ್ಲಿನ ಹಿರಿಯರನ್ನು ಅನೇಕ ಕವಿಗಳು ತಮ್ಮ ಕಾವ್ಯಗಳಲ್ಲಿ ಕೊಂಡಾಡಿದ್ದಾರೆ. ಈ ಕ್ಷೇತ್ರದ ಇತಿಹಾಸವು ಕಲ್ಯಾಣದ ಶರಣರ ಕಾಲಕ್ಕಿಂತಲೂ ಸ್ವಲ್ಪ ಮುಂಚಿತವಾಗಿ ಆರಂಭವಾಗಿರಬೇಕೆಂಬುದು ಕೆಲವು ವಿದ್ವಾಂಸರ ಅಭಿಪ್ರಾಯ.[೨೦] ಈ ಕ್ಷೇತ್ರದ ಪವಿತ್ರತೆಯ ಬಗೆಗೆ ವಿರಕ್ತ ತೋಂಟದಾರ್ಯ ತಮ್ಮ ಸಿದ್ದೇಶ್ವರ ಪುರಾಣದಲ್ಲಿ ಸುದೀರ್ಘವಾಗಿ ವಿವರಿಸಿದ್ದಾರೆ. ಇಂತಹ ವೀರಶೈವ ಪರಂಪರೆಯುಳ್ಳ ಈ ಊರಿನ ದಿವ್ಯಲಿಂಗೇಶ್ವರ ದೇವಾಲಯದ ಮೇಲೆ ಮೈಸೂರಿನ ಚಿಕ್ಕದೇವರಾಜ ಒಡೆಯರು ಮತ್ತು ಶ್ರೀರಂಗಪಟ್ಟಣದ ಟಿಪ್ಪುಸುಲ್ತಾನ್ ಆಕ್ರಮಣ ನಡೆಸಿದರೆಂಬುದು ಈ ಊರಿನ ಜನಪದರ ಅಭಿಪ್ರಾಯ, ಇದಕ್ಕೆ ಪೂರಕವಾಗಿ ಅಂದಿನ ಸರ್ಕಾರದ ಪ್ರಾಚ್ಯವಸ್ತು ಸಂಶೋಧನಾಲಯದ ಪ್ರಸಿದ್ಧ ವಿದ್ವಾಂಸ ಅಧಿಕಾರಿಗಳಾದ ಹಯವದನರಾಯರು ಈ ರೀತಿ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ.[೨೧]

ಹರದನಹಳ್ಳಿಯಲ್ಲಿ ಗೋಸಲ ಗುರುಚೆನ್ನಬಸವೇಶ್ವರ ವೀರಶೈವಮಠ ಇತ್ತೆಂದೂ ೧೫ನೆಯ ಶತಮಾನ ದಲ್ಲಿ ಪ್ರಖ್ಯಾತರಾದ ತೋಂಟದ ಸಿದ್ಧಲಿಂಗೇಶ್ವರರು ಈ ಪೀಠದ ಅಧಿಪತಿಗಳಾಗಿದ್ದರೆಂದೂ, ಅವರಿಗೆ ಸಂಬಂಧಪಟ್ಟ ಮಠವಿತ್ತೆಂದೂ ಅಭಿಪ್ರಾಯಿಸುತ್ತಾ, ಅನಂತರ ಈ ಮಠವನ್ನು ಮೈಸೂರು ಅರಸು ಮನೆತನದ ಚಿಕ್ಕದೇವರಾಜ ಒಡೆಯರವರು ಕೆಡವಿ ಶ್ರೀಮಠದ ಕಲ್ಲು ಕಂಬಗಳನ್ನು ಬಳಸಿಕೊಂಡು ಗೋಪಾಲಕೃಷ್ಣ ದೇವಾಲಯವನ್ನು ಕಟ್ಟಿದರು ಎಂದು ಉಲ್ಲೇಖಿಸುತ್ತಾರೆ. ಇದಕ್ಕೆ ನಿದರ್ಶನವಾಗಿ ಇಂದಿಗೂ ಈ ಆಲಯದ ಕಂಬಗಳ ಮೇಲೆ ವೀರಶೈವರಿಗೆ ಅನೇಕ ದಾನದತ್ತಿಗಳು ಬಂದಿರುವ ಬಗ್ಗೆ ಶಾಸನಗಳ ಉಲ್ಲೇಖವಿದೆ.

ಪಾರಂಪರಿಕವೂ, ಪ್ರಸಿದ್ಧವೂ ಆಗಿದ್ದ ದೇವಸ್ಥಾನವನ್ನು ಅಳಿದ ಮತ್ತೊಂದು ದೇವಸ್ಥಾನವನ್ನು ನಿರ್ಮಾಣ ಮಾಡಿದ್ದೇಕೆ ಎಂಬುದರ ಬಗ್ಗೆ ಸ್ಪಷ್ಟವಾದ ವಿವರಗಳು ದೊರೆಯುವುದಿಲ್ಲ. ಧರ್ಮಗಳ ನಡುವೆ ಸಮನ್ವಯವನ್ನು ಸಾಧಿಸಬೇಕಾದ ದೊರೆಗಳು ರಾಜಧರ್ಮವನ್ನು ಮರೆತು ಒಂದು ಧರ್ಮಕ್ಕೆ ಸೇರಿದ ದೇವಾಲಯವನ್ನು ವಿರೂಪಗೊಳಿಸಿ ಅದೇ ಮೂಲ ಸಾಮಾಗ್ರಿಗಳನ್ನು ಬಳಸಿ ವೈಷ್ಣವ ಪಂಥದ ದೇವಾಲಯವನ್ನು ನಿರ್ಮಿಸಿದ್ದು ಆಶ್ಚರ್ಯವನ್ನುಂಟು ಮಾಡುತ್ತದೆ. ಪ್ರಸ್ತುತ ಐತಿಹಾಸಿಕ ಅಂಶಗಳ ಮೇಲೆ ಬೆಳಕು ಚೆಲ್ಲುವ, ಶೈವ ಮತ್ತು ವೈದಿಕ ಪರಂಪರೆಗಳೆರಡರ ಕೊಂಡಿಯಾಗಿರುವ ಈ ದೇವಾಲಯ ಅಳಿವಿನ ಅಂಚಿನಲ್ಲಿದೆ. ಮುಜರಾಯಿ ಇಲಾಖೆ ಮತ್ತು ಸ್ಥಳೀಯ ಜನರು ಈ ಬಗ್ಗೆ ಹೆಚ್ಚು ಗಮನಹರಿಸಬೇಕಾಗಿದೆ.

**ಚಾಮರಾಜೇಶ್ವರ ದೇವಸ್ಥಾನ, ಚಾಮರಾಜನಗರ**

ವಿಜಯನಗರ ಮತ್ತು ಮೈಸೂರು ಅರಸರ ಕಾಲದ ದೇವಾಲಯಗಳು, ಕಟ್ಟಡದ ಅವಶೇಷಗಳು, ಕೋಟೆಕೊತ್ತಲಗಳು ಮುಖ್ಯವಾಗಿ ಚಾಮರಾಜನಗರ ತಾಲೂಕಿನಲ್ಲಿವೆ. ಅವುಗಳಲ್ಲಿ ಚಾಮರಾಜ ದೇವಸ್ಥಾನವು ಒಂದು.

ಒಬ್ಬ ವ್ಯಕ್ತಿ ತನ್ನ ಹೆಸರಿಗೆ ಈಶ್ವರ ಎಂಬ ಪದವನ್ನೋ ಭಟ್ಟಾರಕ ಎಂಬ ಪದವನ್ನೊ ಸೇರಿಸಿ ಆ ಹೆಸರಿನಲ್ಲಿ ದೇವರನ್ನು ಪ್ರತಿಷ್ಠಾಪಿಸುವ ಸಂಗತಿ ಹಲವು ಶಾಸನಗಳಿಂದ ತಿಳಿದುಬರುತ್ತದೆ. ಅದಕ್ಕೆ ಕಾರಣ ಇಂತಹ ದೇವಸ್ಥಾನವನ್ನು ಕಟ್ಟಿಸಿದವನ ಹೆಸರು ದೇವರಿಗೆ ಬರುವುದೆಂದು. ಕಟ್ಟಿಸಿದವನು ಶಿವನೇ ಆಗಿ ಬಿಡುತ್ತಾನೆಂದು ಆ ಕಾಲದ ಜನರು ನಂಬಿದ್ದರು. ಈ ಸಂಪ್ರದಾಯವು ಮೈಸೂರು ಒಡೆಯರ ಕಾಲದವರೆಗೂ ಉಳಿದುಕೊಂಡು ಬಂದಿದ್ದು ಚಾಮರಾಜನಗರದಲ್ಲಿ ಚಾಮರಾಜ ಒಡೆಯರ ಹೆಸರಿನಲ್ಲಿ ನಿರ್ಮಾಣವಾದ 'ಚಾಮರಾಜೇಶ್ವರ ದೇವಸ್ಥಾನ'ವನ್ನು ನೋಡಬಹುದು.

ಈ ದೇವಾಲಯವನ್ನು ಮುಮ್ಮಡಿ ಕೃಷ್ಣರಾಜ ಒಡೆಯರು ಕ್ರಿ.ಶ. ೧೮೨೮ರಲ್ಲಿ ಕಟ್ಟಿಸಿದರು. ಇವರ ತಂದೆ ಚಾಮರಾಜೇಂದ್ರ ಒಡೆಯರು ಕ್ರಿ.ಶ. ೧೭೭೪ರಲ್ಲಿ ಚಾಮರಾಜನಗರದಲ್ಲಿ ಜನಿಸಿದರು. ಆಗ ಊರಿನ ಹೆಸರು ಅರಿಕುಠಾರ ಎಂದಿತ್ತು. ಈ ಗ್ರಾಮಕ್ಕೆ ತಾಲೂಕು ಕೇಂದ್ರ ಹೊಂಗನೂರಾಗಿತ್ತು. ತಮ್ಮ ತಂದೆಯ ನೆನಪಿಗಾಗಿ ಕೃಷ್ಣರಾಜ ಒಡೆಯರು ಊರಿನ ಹೆಸರನ್ನು ಚಾಮರಾಜನಗರವೆಂದು ಬದಲಾಯಿಸಿ ಇಲ್ಲಿ ಚಾಮರಾಜೇಶ್ವರ ದೇವಸ್ಥಾನವನ್ನು ಕಟ್ಟಿಸಿದರು.

ಈ ದೇವಾಲಯದ ಸುತ್ತಲೂ ಪ್ರಾಕಾರವಿದ್ದು, ಎತ್ತರವಾದ ಮಹಾದ್ವಾರದ ಗೋಪುರಗಳಿಗೆ ಚಿನ್ನದ ಐದು ಕಲಶಗಳಿವೆ. ೨೩೨ x ೧೯೫ ವಿಸ್ತಾರ ಪ್ರದೇಶದಲ್ಲಿರುವ ಈ ದೇವಸ್ಥಾನ ಊರಿನ ಪ್ರಮುಖ ಕೇಂದ್ರವಲ್ಲಿದೆ. ಅಂದಿನ ಒಡೆಯರು ಚಾಮರಾಜನಗರದಲ್ಲಿ ಒಂದು ವಿಷ್ಣು ದೇವಾಲಯವನ್ನು ನಿರ್ಮಾಣ ಮಾಡಬೇಕೆಂದು ಯೋಚಿಸಿ ಖ್ಯಾತ ಶಿಲ್ಪಿಗಳೊಂದಿಗೆ ಸಮಾಲೋಚಿಸಿ ದಾಗ ಈ ಸ್ಥಳದಲ್ಲಿ ದೇವಾಲಯ

ನಿರ್ಮಿಸುವುದೇ ಸೂಕ್ತವೆಂದು ಚರ್ಚೆಯಲ್ಲಿ ತೀರ್ಮಾನವಾಗಿ ಆಗಿನ ಅರಮನೆಯ ಜನನ ಮಂಟಪ ಪೂರ್ವದಲ್ಲಿ ದ್ರಾವಿಡ ಶೈವಾಗಮ ಶಾಸ್ತ್ರರೀತ್ಯಾ ಅನುಸಾರವಾಗಿ ೧೮೨೬ರಲ್ಲಿ ಹೊಸದಾಗಿ ಶಿವಾಲಯವನ್ನು ನಿರ್ಮಾಣ ಮಾಡಿದರು. ಶಿವ ಪ್ರತಿಷ್ಠಾಪನೆಗಾಗಿ ಕಾಶಿಯಿಂದ ತಂದ ಲಿಂಗವನ್ನು ಶೃಂಗೇರಿ ಸ್ವಾಮಿಗಳಲ್ಲಿ ಬಿನ್ನವಿಸಿದಾಗ ಆಗಿನ ಶ್ರೀಗಳು ಶೃಂಗೇರಿ ಮಠದಲ್ಲಿದ್ದ ರಕ್ತವರ್ಣದ ಅನಾದಿಯಾದ ನರ್ಮದ ಲಿಂಗವನ್ನು ಅನುಗ್ರಹಿಸಿ ಮಹಾರಾಜರ ಕೋರಿಕೆಯಂತೆ ರಾಜಕತ್ವ ಈಶ್ವರತ್ವಗಳ ಸಮ್ಮಿಲನದ ಕುರುಹಾಗಿ "ಚಾಮರಾಜೇಶ್ವರ" ಎಂಬ ನಾಮಧ್ಯೇಯದಿಂದ ಪ್ರತಿಷ್ಠಾಪಿಸುವಂತೆಯೂ ಮತ್ತು ಊರಿಗೂ ಚಾಮರಾಜನಗರ ಎಂದು ನಾಮಕರಣ ಮಾಡುವಂತೆಯೂ ಆಶೀರ್ವದಿಸಿರೆಂದು ದೇವಾಲಯದ ಕೈಫಿಡಿ ೧೮.೧೦.೧೯೬೧ಯಿಂದ ತಿಳಿದುಬರುತ್ತದೆ.[೨] ಹೀಗೆ ಗರ್ಭಗುಡಿಯಲ್ಲಿ ಚಾಮರಾಜರ ಹೆಸರಿನಲ್ಲಿ ಲಿಂಗ ಪ್ರತಿಷ್ಠಾಪಿತವಾದರೆ, ಅದರ ಎಡಭಾಗದಲ್ಲಿ ತಾಯಿ ಕೆಂಪನಂಜಾಂಬ ಅಮ್ಮನವರನ್ನು ಮತ್ತು ಬಲ ಭಾಗದಲ್ಲಿ ತಮ್ಮ ಕುಲದೇವತೆಯಾದ ಚಾಮುಂಡೇಶ್ವರಿ ವಿಗ್ರಹವಿದ್ದು ಅವುಗಳ ಬಗ್ಗೆ ಐತಿಹ್ಯಗಳಿದ್ದು, ಅವು ಇಂತಿವೆ.

ಈಶ್ವರ ಪ್ರತಿಷ್ಠಾಪನೆಯ ನಂತರ ಮಹಾರಜರಿಗೆ ದಿನವೂ ಸ್ವಪ್ನವಾಗುತ್ತಿದ್ದು. ಆ ಸ್ವಪ್ನದಲ್ಲಿ ಸುಂದರಿಯಾದ ಬಾಲಕಿಯೊಬ್ಬ ಕಾಣಿಸಿಕೊಂಡು ತಾನು ಮೈಸೂರಿನ ಕೊಳದ ಬಳಿ ತೊಟ್ಟಿಯಲ್ಲಿ ಜನಿಸಿರುವುದಾಗಿಯೂ ತನ್ನ ಕರೆದುಕೊಂಡು ಬರುವಂತೆ ಆಜ್ಞಾಪಿಸಿದಂತಾಗಿ, ಸ್ವಪ್ನ ವೃತ್ತಾಂತವನ್ನು ಪರೀಕ್ಷಿಸಲು ಸದರಿ ಕೊಳದ ಬಳಿ ನೋಡಲು ಬಿಲ್ವಪತ್ರೆಯ ಮರದಡಿಯಲ್ಲಿ ದೊರೆತ ಚತುರ್ಭುಜ ಮೂರ್ತಿಯನ್ನು ಹೊಂದಿದ ತಮ್ಮ ಮಾತೃಶ್ರೀಯಾದ ಕೆಂಪನಂಜಮ್ಮಣ್ಣಿಯವರು ಗೌರಿ ಪಂಚಾಕ್ಷರಿ ಯನ್ನು ಜಪಿಸಿ ಮುಕ್ತಿ ಹೊಂದಿದ ಕುರುಹಾಗಿ ಅವರ ಹೆಸರಿನಲ್ಲಿ 'ಕೆಂಪನಂಜಾಂಬ' ಎಂದು ಹೆಸರಿನಿಂದ ಆ ವಿಗ್ರಹವನ್ನು ಪ್ರತಿಷ್ಠಾಪಿಸಿದರೆಂದು ಅರಮನೆಯ ವಂಶರತ್ನಾಕರದಲ್ಲಿ ನಮೂದಿತವಾಗಿದೆ.[೩]

ಹಾಗೆಯೇ ಕಂಠೀರವ ನರಸರಾಜ ಒಡೆಯರ್ ಸೆರೆಮನೆಯಲ್ಲಿ ಇರುವ ಸಂದರ್ಭದಲ್ಲಿ ಪಚ್ಚೆಕಲ್ಲು, ಚಾಮುಂಡೇಶ್ವರಿ ಹಾಗೂ ಅಂಬೆಗಾಲಿನ ಕೃಷ್ಣ ಇವರನ್ನು ಪೂಜಿಸುತ್ತಿದ್ದರಂತೆ. ದೈವಕೃಪೆ ಹಾಗೂ ತಮ್ಮ ಸಾಹಸದಿಂದ ಕಲ್ಲಾವಣೆಯನ್ನು ತಮ್ಮ ತಲೆಯಿಂದ ಮೀಟಿ ಸೆರೆಮನೆಯಿಂದ ತಪ್ಪಿಸಿಕೊಂಡರಂತೆ. ಆ ಕಾರಣ ಸದರಿ ಚಾಮುಂಡಿ ವಿಗ್ರಹವನ್ನು ಧಾರವಾಡದಿಂದ ತಂದು ಪ್ರತಿಷ್ಠಾಪಿಸಿರುವುದಾಗಿ ತಿಳಿದುಬರುತ್ತದೆ.

ಇಲ್ಲಿಯ ದೇವರು ತ್ರಿಶೂಲ, ಶಂಖ, ಚಕ್ರ, ಧನುಂಬೇಡ, ಕೇಶ, ಬಾಣ, ವಜ್ರ ಹಸ್ತದಿಂದ ಕೂಡಿದ ಚಂಡಮುಂಡ, ಮಹಿಷಾಸುರ ಮರ್ದಿನಿ, ಸಿಂಹವಾಹಿನಿಯಾಗಿ ಜ್ವಾಲ ಪ್ರಭಾವಲಯದಿಂದ ಕೂಡಿದ್ದು ವಂಶಪಾರಂಪರ್ಯ ಅರ್ಚನಾ ಪದ್ಧತಿಗೆ ವಿಶೇಷ ಅಲಂಕಾರಗಳಿಗೆ ಹೆಸರುವಾಸಿಯಾಗಿದೆ. ಆಷಾಢಮಾಸದಲ್ಲಿ ವೈಭವದಿಂದ ಕೂಡಿ ಪ್ರತಿ ಶುಕ್ರವಾರ ಮತ್ತು ಮಂಗಳವಾರಗಳಲ್ಲಿ, ಅಮವಾಸ್ಯೆ ಮತ್ತು ಪೂರ್ಣಿಮೆ

ದಿನಗಳಲ್ಲಿ ಹೆಚ್ಚಿನ ಭಕ್ತರು ಆರಾಧ್ಯ ದೈವವಾಗಿ ಚಾಮರಾಜೇಂದ್ರ ಒಡೆಯರ್, ಶಂಗೇರಿಸ್ವಾಮಿಗಳು ಹಾಗೂ ಯದುಕುಲದ ಅರಸರನ್ನು ಭಕ್ತರು ಆರಾಧಿಸುತ್ತಾರೆ.

ಚಾಮರಾಜ ಒಡೆಯರು ಹುಟ್ಟಿದ ಅರಮನೆಯ ಒಂದು ಭಾಗ ಜನನ ಮಂಟಪ ಈಗಲೂ ಖಾಸಗಿ ಬಸ್ ನಿಲ್ದಾಣದ ಮುಂದಿದೆ. ಈ ಸ್ಮಾರಕ ಇಂದು ದುಸ್ಥಿತಿಯಲ್ಲಿದೆ. ಅಲ್ಲಿಯೇ ಅರಮನೆಯೂ ಇತ್ತೆಂದು ನಮಗೆ ತಿಳಿಸುವುದಕ್ಕೆ ಈಗ ಒಂದೆರಡು ಹೆಸರುಗಳು ಉಳಿದಿವೆ. ಅರಮನೆಯ ಚಮಾಲ್(ತೋಟ) ಇದ್ದ ಜಾಗದಲ್ಲಿ ಈಗ ಚಮಾಲ್ ಬೀದಿಯಿದೆ. ಖಾಸಗಿ ಬಸ್ ನಿಲ್ದಾಣ ಮತ್ತು ವೀರಭದ್ರೇಶ್ವರ ದೇವಸ್ಥಾನಗಳ ನಡುವಣ ಎರಡು ಅಡ್ಡ ಬೀದಿಗಳು ಹಿಂದೆ ನಗಾರಿ ಮತ್ತಿತರ ವಾದ್ಯಗಳನ್ನು ಇರಿಸಿದ್ದ ಸ್ಥಳದಲ್ಲಿ ಈಗ ನಗಾರಿ ಬೀದಿಯಿದೆ. ಇಲ್ಲಿ ಅರಮನೆ ಎಂದರೆ ಬಹುಶಃ ಮಹಾರಾಜರು ಇಲ್ಲಿಗೆ ಬಂದಾಗ ಉಳಿದುಕೊಳ್ಳಲಿಕ್ಕೆ ಇದ್ದ ಮನೆ ಹೊರತು ಮೈಸೂರಿನ ಅರಮನೆಯಂತೆ ವಿಶಾಲವಾದ ಭವನವಲ್ಲ. ಇಲ್ಲಿನ ಚಾಮರಾಜ ದೇವಸ್ಥಾನ ಹಿಂದೆಯೇ ಇತ್ತೆಂದು ಅದನ್ನು ಮಹಾರಾಜರು ಜೀರ್ಣೋದ್ಧಾರ ಮಾಡಿದರೆಂದು ಕೆಲವು ಹಿರಿಯರ ಅಭಿಪ್ರಾಯ.[೩೪]

ದೇವಸ್ಥಾನದ ಮಹಾದ್ವಾರ ಪೂರ್ವ ದಿಕ್ಕಿಗಿದೆ. ದಪ್ಪ ಬಾಗಿಲುಗಳಿಗೆ ಹಿತ್ತಾಳೆವಾಡ ಹಾಕಿದ್ದಾರೆ. ಐದು ಅಂತಸ್ತಿನ ಗೋಪುರವಿದೆ. ಅದರ ಮೇಲೆ ಐದು ಚಿನ್ನದ ರಂಗಿನ ಕಲಶಗಳಿವೆ. ಪೇಶ್ವೆಮಾರ್ಗದ ಎಡಭಾಗದಲ್ಲಿ ಗಣಪತಿ ಮತ್ತು ಬಲದಲ್ಲಿ ಚಾಮುಂಡೇಶ್ವರಿಯ ಕೆತ್ತನೆಗಳಿವೆ. ದೇವಸ್ಥಾನ ಪ್ರವೇಶ ಮಾಡಿದಾಗ ಈಶ್ವರನಿಗೆ ಮುಖ ಮಾಡಿ ಕುಳಿತಿರುವ ಬಸವನಿದ್ದಾನೆ. ಇದರ ಮುಂದೆ ಹಿತ್ತಾಳೆ ಕವಚ ಹಾಕಿದ ಧ್ವಜಸ್ತಂಭವಿದೆ.

ದೇವಸ್ಥಾನದ ಪ್ರಾಕಾರದ ದಕ್ಷಿಣದಲ್ಲಿ ೬೩ ಪುರಾತನ ಭಕ್ತರ ವಿಗ್ರಹಗಳಿವೆ. ಇವರು ತಮಿಳುನಾಡಿನಲ್ಲಿ ಶೈವಧರ್ಮವನ್ನು ಉದ್ದೀಪನಗೊಳಿಸಿದವರು ಹಾಗೂ ಕರ್ನಾಟಕದ ಶರಣರಿಗೆ ಪೂಜ್ಯರಾದವರು. ನಂಜನಗೂಡಿನ ಶ್ರೀಕಂಠೇಶ್ವರ ಮತ್ತು ಚಾಮರಾಜೇಶ್ವರ ದೇವಾಲಯದಲ್ಲಿ ಕ್ರಮವಾಗಿ ೬೩ ಪುರಾತನ ವಿಗ್ರಹಗಳಿವೆ.

ದೇವಸ್ಥಾನದ ಗರ್ಭಗುಡಿ, ಅಂತರಾಳ, ನವರಂಗ, ಮುಖಮಂಟಪ, ಮಹಾದ್ವಾರ ಇವುಗಳೆಲ್ಲವೂ ಪರಮೋಕ್ತವಾಗಿ ವಿನ್ಯಾಸಗೊಂಡಿವೆ, ಗರ್ಭಗುಡಿಯ ಮೇಲಿನ ಗೋಪುರ ಮತ್ತು ಮಹಾದ್ವಾರದ ಗೋಪುರದ ವಿನ್ಯಾಸ ಹೊಯ್ಸಳರ ಶೈಲಿಯನ್ನು ಅವಲಂಬಿಸಿದೆ. ದೇವಾಲಯದ ಸುತ್ತಲು ದೇವಕೋಷ್ಠಕಗಳು, ದೇವತಾ ಮೂರ್ತಿಗಳು ಶೈವಾಗಮೋಕ್ತವಾಗಿವೆ.

ಈ ದೇವಾಲಯದಲ್ಲಿ ಸೋಮವಾರ ಕಟ್ಟೆ, ಶುಕ್ರವಾರ ಕಟ್ಟೆ, ಚಿತ್ತಾ ನಕ್ಷತ್ರ, ಶ್ರವಣ ನಕ್ಷತ್ರ, ಉತ್ತರಭಾದ್ರ, ಪೂರ್ವಾಷಢ ನಕ್ಷತ್ರ, ಮಾರ್ಕಂಡೇಯೋತ್ಸವ, ದಕ್ಷಿಣಾಯಣ, ಉತ್ತರಾಯಣ ಪುಣ್ಯಕಾಲ,

ತಿರುನಾಳ ನವರಾತ್ರಿ, ಕೃತಿಕೋತ್ಸವ, ದೀಪಾವಳಿ, ಆರಿದ್ರೋತ್ಸವ, ಶಿವರಾತ್ರಿ, ಯುಗಾದಿ, ವೈಮಾಳಿಕೋತ್ಸವ, ಗಿರಿಜಾಕಲ್ಯಾಣ, ವಸಂತೋತ್ಸವ, ಧನುರ್ಮಾಸ, ಮಹಾರಾಜರ ವರ್ಧಂತಿಗಳು ಜರುಗುತ್ತವೆ.

ಚಾಮರಾಜೇಶ್ವರ ದೇವಾಲಯದ ಮತ್ತೊಂದು ವಿಶೇಷವೆಂದರೆ ಆಷಾಢಮಾಸದಲ್ಲಿ ಜಾತ್ರೆ ನಡೆಯುವುದು. ಸಾಮಾನ್ಯವಾಗಿ ಆಷಾಢ ಮಾಸವು ಮೂಲ ಮಾಸವೆಂದು ಶುಭಕಾರ್ಯಗಳು ನಿಷೇಧಿಸಲ್ಪಡುತ್ತವೆ. ಆದರೆ ಇದಕ್ಕೆ ಅಪವಾದವೆಂಬಂತೆ ಈ ಮಾಸದಲ್ಲಿ ಇಲ್ಲಿ ರಥೋತ್ಸವ ನಡೆಯುತ್ತದೆ. ಅದು ಆಷಾಢ ಮಾಸದ ಪೂರ್ವಾಷಾಢ ನಕ್ಷತ್ರದಲ್ಲಿ ಹುಣ್ಣಿಮೆಯಂದು ನಡೆಯುತ್ತದೆ. ಅದಕ್ಕೆ ಕಾರಣದ ದೇವಾಲಯದ ನಿರ್ಮಾಪಕರಾದ ಕೃಷ್ಣರಾಜರು ಆಷಾಢಮಾಸದ ಶ್ರವಣ ನಕ್ಷತ್ರದಲ್ಲಿ ಜನಿಸಿದರಾದ್ದರಿಂದಲೂ ಶ್ರವಣ ನಕ್ಷತ್ರದಲ್ಲಿ ತೀರ್ಥಸ್ನಾನ ಮಾಡುವ ದಿನಕ್ಕೆ ಒಂದೆರಡು ದಿನ ಮುಂಚೆ ರಥೋತ್ಸವ ಜರುಗಬೇಕಾಗಿರುವುದರಿಂದಲೂ ಆಷಾಢಮಾಸದಲ್ಲೇ ಚಾಮರಾಜೇಶ್ವರ ರಥ ನಡೆಯುತ್ತದೆ. ಇತ್ತೀಚಿನ ಸಂಪ್ರದಾಯವೆಂದರೆ ಈ ಜಾತ್ರೆಯೂ ಹೊಸದಾಗಿ ಮದುವೆಯಾದವರ ಜಾತ್ರೆ ಎಂಬುದಾಗಿ ಬಿಂಬಿತವಾಗಿದೆ. ಈ ಜಾತ್ರೆಯಲ್ಲಿ ಹೊಸದಾಗಿ ಮದುವೆಯಾದ ನವ ಜೋಡಿಗಳು ಆಗಮಿಸಿ ತೇರಿಗೆ ತಪ್ಪದೆ ಹಣ್ಣು ಜವನ ಎಸೆಯುತ್ತಾರೆ. ಇದು ನಮಗೆ ಹಣ್ಣಿನ ಫಲದಂತೆ ಹಾಗೂ ಜವನೆಯ ಪುಷ್ಪದಂತ ಮಕ್ಕಳನ್ನು ಕೊಡು ಎಂಬುದರ ಸಂಕೇತವಾಗಿದೆ.

ಚಾಮರಾಜೇಶ್ವರ ಜಾತ್ರೆಯೂ ಈ ತಾಲೂಕಿನ ದೊಡ್ಡ ಜಾತ್ರೆಯಾಗಿದ್ದು, ಸುಮಾರು ಹನ್ನೆರಡು ದಿನಗಳವರೆಗೂ ನಡೆಯುತ್ತದೆ. ಈ ದೇವಾಲಯವು ಮುಜರಾಯಿ ಇಲಾಖೆಗೆ ಸೇರಿರುವುದರಿಂದ ಊರಿನ ಜನರಿಗೆ ಖರ್ಚುವೆಚ್ಚಗಳೇನು ಬರುವುದಿಲ್ಲ. ಆದರೆ ಊರಿನ ಎಲ್ಲಾ ಕೋಮಿನ ಜನರು ಸೇರಿ ಮುಜರಾಯಿ ಅಧಿಕಾರಿಗಳ ನೇತೃತ್ವದಲ್ಲಿ ಸಭೆ ಸೇರಿ ತೀರ್ಮಾನ ತೆಗೆದುಕೊಂಡು ಅದರಂತೆ ಜಾತ್ರೆ ಆಚರಿಸುತ್ತಾರೆ.

ಇಲ್ಲಿ ಐದು ರಥಗಳಿದ್ದು ಉತ್ಸವದಲ್ಲಿ ಮೊದಲನೆಯ ರಥವಾಗಿ ಗಣಪತಿ ರಥ, ಎರಡನೆಯದಾಗಿ ಸುಬ್ರಮಣೇಶ್ವರ ರಥ, ಮೂರನೆಯದಾಗಿ ಮಹಾರಾಜರ ರಥ, ನಾಲ್ಕನೆಯದಾಗಿ ದೊಡ್ಡ ರಥ ಮತ್ತು ಐದನೆಯದಾಗಿ ಅಮ್ಮನವರ ರಥ ಹೀಗೆ ಒಂದಾದ ಮೇಲೆ ಒಂದರಂತೆ ಉತ್ಸವದಲ್ಲಿ ಐದು ರಥಗಳು ಸಾಗುತ್ತವೆ. ದೇವರ ಮೂರ್ತಿಯನ್ನು ದೊಡ್ಡ ರಥದ ಮೇಲಿಟ್ಟು, ಹೂ ಮತ್ತು ವಸ್ತ್ರಗಳಿಂದ ಅಲಂಕಾರ ಮಾಡಿರುತ್ತಾರೆ. ಈ ತೇರಿಗೆ ಹಣ್ಣು ಜವನ ಎಸೆಯುವುದೇ ಭಕ್ತರಿಗೆ ವಿಶೇಷ. ಬೆಳಿಗ್ಗೆ ೧೧.೩೦ಕ್ಕೆ ತೇರು ದೇವಾಲಯದಿಂದ ಹೊರಟು ಹಳೆ ಬಸ್‌ನಿಲ್ದಾಣದ ಮಾರ್ಗವಾಗಿ ಚಲಿಸಿ ૩.૩೦ರ ವೇಳೆಗೆ ದೇವಾಲಯದ ಒಂದು ಸುತ್ತು ಬರುತ್ತದೆ. ಅವಸರದಿಂದ ರಥಕ್ಕೆ ಗೊದಮ ಕೊಡುವವರು ಹಾಗೂ ನಗಾರಿ, ತಮಟೆ, ಮದ್ದಳೆ, ಕಹಳೆ, ನಂದಿಕಂಬ, ಗೋರವ ಕುಣಿತ, ವೀರಭದ್ರರ ಕುಣಿತ, ವಾದ್ಯಸಂಗೀತ ಇವೇ ಮೊದಲಾದವುಗಳ ಕಳೆ ಕಣ್ಣಿ ಕಟ್ಟುತ್ತದೆ. ಎಲ್ಲಾ ಸಮುದಾಯವರು ಕೈಜೋಡಿಸಿ ರಥಾ ಎಳೆಯುವ ಭಾರಿ ಹಗ್ಗ

ಮುಖ್ಯಮಂತ್ರಿ ಕೆಂಗಲ್ ಹನುಮಂತಯ್ಯನವರ ಕಾಲದಲ್ಲಿ ಬೆಂಗಳೂರಿನ ಕೇಂದ್ರ ಕಾರಾಗೃಹದ ಖೈದಿಗಳು ಹೆಣೆದು ಮಾಡಿದ್ದಾರೆ. ಹಾಗಾಗಿ ಈ ತೇರಿಗೆ ಅವರ ಕೊಡುಗೆಯು ಸಹ ಇದೆ.

ಹೀಗೆ ಸಾಮಾನ್ಯ ದಿನಗಳಲ್ಲಿ ಈ ದೇವಸ್ಥಾನದ ಒಳಗೆ ಹೋದಾಗ ಶಾಂತವಾತಾವರಣವಿರುತ್ತದೆ. ಭಕ್ತರ ಸಂಖ್ಯೆ ಬಹಳ ವಿರಳವಾಗಿ ಇಡೀ ದೇವಸ್ಥಾನವೇ ಬಣಗುಟ್ಟುತ್ತಿದೆಯೋ ಎಂದು ಅನಿಸುತ್ತದೆ. ಆದರೆ ನಲವತ್ತು ವರ್ಷಗಳ ಹಿಂದೆ ಹೀಗಿರಲಿಲ್ಲ. ಯಾವಾಗಲೂ ಜನರಿಂದ ತುಂಬಿರುತ್ತಿತ್ತು ಎಂಬುದು ವಕ್ತೃವೊಬ್ಬರ ಅಭಿಪ್ರಾಯ. ಅರ್ಚಕರು ಮಂತ್ರ ಪುಷ್ಪದವರು, ಶ್ರೀಪಾದದವರು, ವಾದ್ಯದವರು, ಪರಿಚಾರಕರು, ಬ್ರಾಹ್ಮಣರು ಮತ್ತು ಇತರೆ ಜಾತಿಯವರು ಸೇರಿ ಸುಮಾರು ೧೦೮ ಮಂದಿ ಸಿಬ್ಬಂದಿಯವರಿದ್ದರಂತೆ, ಅಲ್ಲದೆ ದೇವಾಲಯದಲ್ಲಿಯೇ ಸಂಸ್ಕೃತ ಮತ್ತು ಉಪನಿಷತ್ತುಗಳನ್ನು ಕಲಿಸುವ ಪಾಠಶಾಲೆಯಿದ್ದು, ಅದರಲ್ಲಿ ೨೦ ವಿದ್ಯಾರ್ಥಿಗಳಿದ್ದರಂತೆ. ಈ ಪಾಠಶಾಲೆಗೆ ಅಧ್ಯಕ್ಷರಾಗಿದ್ದವರಲ್ಲಿ ಹಿಂದಿ ಶಾಲೆಯನ್ನು ನಡೆಸುತ್ತಿದ್ದ ಚಕ್ರವರ್ತಿ ರಾಜಗೋಪಾಲಚಾರ್ಯರೂ ಒಬ್ಬರು. ಪಾಠಶಾಲೆ ವಿದ್ಯಾರ್ಥಿಗಳಿಗೆ ದೇವರ ನೈವೇದ್ಯಕ್ಕೆ ಮತ್ತು ಚಾಮರಾಜನಗರಕ್ಕೆ ಬರುವ ಯಾತ್ರಿಕರಿಗೆ(ಸತ್ಯಮಂಗಲಕ್ಕೆ ಹೋಗಿ ಬರುವವರೆಲ್ಲಾ ಇಲ್ಲಿ ತಂಗಲೇ ಬೇಕಾಗಿತ್ತು) ಊಟದ ವ್ಯವಸ್ಥೆಯನ್ನು ಶಿವಕೂಟ ಎಂಬಹೆಸರಿನಲ್ಲಿ ನಡೆಸುತ್ತಿದ್ದರಂತೆ. ದೇವಾಲಯದ ಈ ಎಲ್ಲಾ ಖರ್ಚುಗಳಿಗಾಗಿ ಮುಮ್ಮಡಿ ಕೃಷ್ಣರಾಜರು ೧೩ ಗ್ರಾಮಗಳನ್ನು ದತ್ತು ಬಿಟ್ಟಿದ್ದರು.

ದೇವಾಲಯಕ್ಕೆ ಆರ್ಥಿಕವಾಗಿ ಪೆಟ್ಟುಬಿದ್ದದ್ದು ಭೂ ಹಿಡುವಳಿಯ ಕಾಯ್ದೆಯಿಂದ. ಗ್ರಾಮಗಳಿಂದ ಬರುತ್ತಿದ್ದ ಆದಾಯ ನಿಂತು ಹೋಯಿತು. ಬದಲಿ ವ್ಯವಸ್ಥೆಯನ್ನು ಸೂಕ್ತವಾಗಿ ಮಾಡಲಾಗಲಿಲ್ಲ. ಅದರಿಂದ ಸಿಬ್ಬಂದಿಗೆ ಸಂಬಳಕೊಡಲು, ದೇವರಿಗೆ ನೈವೇದ್ಯ ಮಾಡಲು ಸಹ ತೊಂದರೆಯಾಯಿತು. ಇದರಿಂದಾಗಿ ದೇವಾಲಯದ ಕೆಲವು ನೌಕರರು ಬೇರೆ ಬೇರೆ ಕೆಲಸವನ್ನು ಹಿಡಿದರು. ಮತ್ತೆ ಕೆಲವರು ಉದ್ಯೋಗಕ್ಕಾಗಿ ಮೈಸೂರು, ಬೆಂಗಳೂರಿಗೆ ಹೋದರೆ ಕೆಲವರು ಮಾತ್ರ ತೀರ ಬಡತನದಲ್ಲೂ, ದುಸ್ಥಿತಿಯಲ್ಲೂ ದೇವರ ಸೇವೆ ಮಾಡಿಕೊಂಡು ಹೋಗುತ್ತಿದ್ದಾರೆ.[೨೯]

ಅಡಿಟಿಪ್ಪಣಿಗಳು

೧. ಕೃಷ್ಣಮೂರ್ತಿ ಎಂ.ಎಸ್., ಮೈಸೂರು ಪ್ರದೇಶದ ಪುರಾತತ್ವ, ಮೈಸೂರು ವಿಶ್ವವಿದ್ಯಾಲಯ, ಮೈಸೂರು, ೧೯೯೨, ಪು.೭೪-೭೯

೨. ಎಪಿಗ್ರಾಫಿಯಾ ಕರ್ನಾಟಿಕಾ ಸಂಪುಟ ೪, ಚಾಮರಾಜನಗರ ೧೮೪, ಹಳೇ ಆಲೂರು, ಪು.೧೧೧

೩. ಬಸವರಾಜ ಟಿ., ಚೋಳರ ವಾಸ್ತುಶಿಲ್ಪ, ಅನುರಾಧ ಪ್ರಕಾಶನ, ಮೈಸೂರು, ೨೦೦೬, ಪು.೫೨

೪. ಶರ್ಮ ಎ.ಕೆ., ಗಂಗಾ ರಾಷ್ಟ್ರಕೂಟರ ಯುದ್ಧಗಳು, ನಂದಾ ಪ್ರಿಂಟರ್ಸ್, ಬೆಂಗಳೂರು, ೧೯೮೬, ಪು.೧೨೧

೫. ನರಸಿಂಹಚಾರ್ಯ, ರಾಜೇಂದ್ರ ಚೋಳರ ಯುದ್ಧದ ವರ್ಣನೆಗಳು, ನರ್ಮದಾ ಪ್ರಿಂಟರ್ಸ್, ಮೈಸೂರು, ಪು.೮೨

೬. ರಂಗರಾಜು, ಪ್ರಾಧ್ಯಾಪಕರು, ಪ್ರಾಚೀನ ಇತಿಹಾಸ ಪುರಾತತ್ವ ವಿಭಾಗ, ಮೈಸೂರು ವಿಶ್ವವಿದ್ಯಾನಿಲಯ ಮೈಸೂರು ಇವರಿಂದ ಮಾಹಿತಿ

೭. ಎಪಿಗ್ರಾಫಿಯಾ ಕರ್ನಾಟಿಕಾ ಸಂಪುಟ ೪, ಚಾಮರಾಜನಗರ ೧೬೫, ಹೊಂಗನೂರು, ಪು.೧೦೧

೮. ಅದೇ, ಚಾಮರಾಜನಗರ ೩೫೫, ಮಲೆಯೂರು, ಪು.೨೩೭

೯. ಅದೇ, ಚಾಮರಾಜನಗರ ೨೫೫, ಅಮಚವಾಡಿ, ಪು.೧೫೩

೧೦. ಹಯವದನರಾವ್ ಸಿ., ಎಂ.ಎ.ಆರ್.ವರದಿ, ಚಾಮರಾಜನಗರ, ೧೯೩೦

೧೧. ಎಪಿಗ್ರಾಫಿಯಾ ಕರ್ನಾಟಿಕಾ ಸಂಪುಟ ೪, ಚಾಮರಾಜನಗರ ೧೬೭, ಪು.೧೯೭

೧೨. ಅದೇ, ಚಾಮರಾಜನಗರ ೦೨, ಅಮಚವಾಡಿ, ಪು.೪

೧೩. ರಾಮಕೃಷ್ಣ ಆರ್., ಚಾಮರಾಜನಗರ ತಾಲೂಕು ದರ್ಶನ, ಐ.ಬಿ.ಎಚ್.ಪ್ರಕಾಶನ, ಬೆಂಗಳೂರು, ೧೯೮೭, ಪು.೧೩೦

೧೪. ಅದೇ, ಪು.೨೨

೧೫. ಅದೇ, ಚಾಮರಾಜನಗರ ೨೨೨, ಹರಳಕೋಟೆ, ಪು.೧೩೫

೧೬. ನಾಗೇಂದ್ರ, ಉಪನ್ಯಾಸಕ, ರಾಮಸಮುದ್ರ ಇವರಿಂದ ಮಾಹಿತಿ

೧೭. ಬಸವರಾಜಶೆಟ್ಟಿ, ರಾಮಸಮುದ್ರ ಇವರಿಂದ ಮಾಹಿತಿ

೧೮. ಎಪಿಗ್ರಾಫಿಯಾ ಕರ್ನಾಟಿಕಾ ಸಂಪುಟ ೪, ಚಾಮರಾಜನಗರ ೮೯, ಉಮ್ಮತ್ತೂರು, ಪು.೫೧

೧೯. ಅದೇ, ಚಾಮರಾಜನಗರ ೯೫, ಉಮ್ಮತ್ತೂರು ಪು.೮೩

೨೦. ಶೇಷಗಿರಿ ದೇವಸ್ಥಾನದ ಪೂಜಾರಿಯಿಂದ ತಿಳಿದುಬಂದ ಮಾಹಿತಿ

೨೧. ಶ್ರೀಕೃಷ್ಣನು ಅರ್ಜುನನಿಂದ ಆಂಜನೇಯನಿಂದ ಪ್ರತಿಷ್ಠಾಪನೆ ಮಾಡಿಸಿದನೆಂಬುದು ಇಲ್ಲಿನ ಜನಪದರ ಪ್ರತೀತಿ

೨೨. ಎಪಿಗ್ರಾಫಿಯಾ ಕರ್ನಾಟಿಕಾ ಸಂಪುಟ ೪, ಚಾಮರಾಜನಗರ ೧೫೪, ಗಂಗವಾಡಿ, ಪು.೯೬

೨೩. ಅದೇ, ಚಾಮರಾಜನಗರ ೨೨೪, ಹರಳಕೋಟೆ ಪು.೧೩೭

೨೪. ಅದೇ, ಚಾಮರಾಜನಗರ ೦೧, ಚಾಮರಾಜನಗರ ಪು.೧

೨೫. ಅದೇ, ಚಾಮರಾಜನಗರ ೨೪೬, ಚನ್ನಪನಪುರ, ಪು.೧೫೧

೨೬. ಮಹದೇವಪ್ಪ, ಕಮರವಾಡಿ ಗ್ರಾಮದ ವಕ್ತೃಗಳಿಂದ ಪಡೆದ ಮಾಹಿತಿ

೨೭. ಕ್ಷೇತ್ರಕಾರ್ಯ ಸಂದರ್ಭದಲ್ಲಿ ಖುದ್ದಾಗಿ ಬೆಟ್ಟ ವೀಕ್ಷಣೆ ಮಾಡಿ ಅಲ್ಲಿನ ಸ್ಥಳೀಯರಿಂದ ಪಡೆದ ಮಾಹಿತಿ

೨೮. ಪ್ರಸ್ತುತ ಮಲೆಯೂರಿನ ಕನಕಗಿರಿಬೆಟ್ಟದ ಶ್ರೀಭುವನಕೀರ್ತಿ ಸ್ವಾಮಿಗಳಿಂದ ತಿಳಿದುಬಂದ ಮಾಹಿತಿ

೨೯. ಶಂಕರಪ್ಪ, ದೇವಸ್ಥಾನದ ಪೂಜಾರಿ, ಸಂದರ್ಶನದಿಂದ ತಿಳಿದುಬಂದ ಮಾಹಿತಿ

೩೦. ಸ್ಥಳೀಯ ಹಿರಿಯ ವಕ್ತೃ ಒಬ್ಬರಿಂದ ತಿಳಿದುಬಂದ ಮಾಹಿತಿ

೩೧. ಹಯವದನರಾವ್, ಮೈಸೂರು ಗೆಜೆಟಿಯರ್ ವರದಿಯಲ್ಲಿ ದಾಖಲಾಗಿರುವ ವಿವರಗಳು

೩೨. ಚಾಮರಾಜೇಶ್ವರ ದೇವಾಲಯದ ಮ್ಯಾನುಯಲ್‌ನಲ್ಲಿ ದಾಖಲಾಗಿರುವ ವಿವರಗಳು

೩೩. ಅದೇ,

೩೪. ಅದೇ,

೩೫. ಕ್ಷೇತ್ರಕಾರ್ಯದಿಂದ ತಿಳಿದುಬಂದಮಾಹಿತಿ

೩೬. ದೇವಸ್ಥಾನದ ಕೈಪಿಡಿಯಿಂದ ತಿಳಿದುಬಂದ ಮಾಹಿತಿ

೩೭. ಚಾಮರಾಜೇಶ್ವರ ದೇವಾಲಯದಿಂದ ತಿಳಿದುಬಂದ ಮಾಹಿತಿ

ಮಾನವನು ಸಂಘಜೀವಿ, ಆತನು ಎಂದಿಗೂ ತಾನೊಬ್ಬನೇ ಇರಲು ಸಾಧ್ಯವಿಲ್ಲ. ಅದರಂತೆಯೇ ಆತ ತನ್ನ ಜೀವನವನ್ನು ರೂಪಿಸಿಕೊಳ್ಳಲು ಒಂದು ಸೂಕ್ತ ವಿಧಾನವನ್ನು ಗುರುತಿಸಿಕೊಂಡು ಬದುಕುತ್ತಾನೆ. ಪುರಾತನ ಅಂದರೆ ಸಿಂಧೂ ನಾಗರಿಕತೆಯಿಂದಲೂ ಮನುಷ್ಯ ಸಂಘಟಿತನಾಗಿ ಬದುಕುತ್ತಾ ಬಂದಿರುವುದನ್ನು ಕಾಣಬಹುದು. ಪ್ರಸ್ತುತದಲ್ಲೂ ಕೂಡ ಆತ ಅದನ್ನೆ ಮುಂದುವರಿಸಿಕೊಂಡು ಬರುತ್ತಿದ್ದಾನೆ. ಆದರೆ ಅಲ್ಲಲ್ಲಿ ತನಗೆ ಒಪ್ಪಿತವಾಗುವ ಕೆಲವು ಮಾರ್ಪಾಡುಗಳನ್ನು ಮಾಡಿಕೊಂಡು ತನ್ನ ಜೀವನ ಕಲೆಯನ್ನು ಸುಧಾರಿಸಿಕೊಂಡು ಸಾಗುತ್ತಿದ್ದಾನೆ.

ಮಾನವ ತನ್ನ ಅಸ್ತಿತ್ವವನ್ನು ಗುರುತಿಸಿಕೊಳ್ಳಲು ಹಲವಾರು ತನ್ನದೇ ಆದಂತಹ ವ್ಯವಸ್ಥೆಗಳನ್ನು ಮಾಡಿಕೊಂಡಿದ್ದಾನೆ. ಅದರಲ್ಲಿ ಸಾಮಾಜಿಕ ವ್ಯವಸ್ಥೆಯೂ ಕೂಡ ಒಂದು. ಮೊದಲೇ ತಿಳಿಸಿದಂತೆ ಮಾನವ ಸಂಘಜೀವಿ, ಸಂಘಟಿತವಾಗಿ ತನ್ನ ಸಾಮರ್ಥ್ಯ ಅಸ್ತಿತ್ವ, ನೆಲೆ-ಬೆಲೆಗಳನ್ನು ಕಂಡುಕೊಳ್ಳುತ್ತಾ ಬಂದಿದ್ದಾನೆ. ತನ್ನ ಬದುಕಿಗೆ ಬೇಕಾದಂತಹ ಎಲ್ಲಾ ರೀತಿಯ ವ್ಯವಸ್ಥೆಯನ್ನು ಅಂದರೆ ಆತನಿಗೆ ಬೇಕಾದ ಮೂಲಭೂತವಾದ ಅವಶ್ಯಕ, ಪೂರಕವಾಗುವಂತಹ ಎಲ್ಲಾ ಸೌಕರ್ಯಗಳನ್ನು ಪಡೆಯಲಿಚ್ಛಿಸುತ್ತಾ ತಾನು ತನ್ನ ಕುಟುಂಬ, ತನ್ನ ಕೇರಿ, ಸಮುದಾಯ, ಊರು, ಗ್ರಾಮ, ರಾಜ್ಯ, ದೇಶ ಹೀಗ ತನ್ನ ಪ್ರಭುದ್ಧತೆಯನ್ನು ಎಲ್ಲಾ ಕಡೆ ಸಾಧಿಸುವುದರ ಜೊತೆಗೆ ತನ್ನ ಇರುವಿಕೆಯನ್ನು ಎಲ್ಲೆಡೆಯು ಪಸರಿಸುವಂತಹ ಕೆಲಸವನ್ನು ಮಾಡುತ್ತಾ ಬಂದಿದ್ದಾನೆ.

ಹೀಗೆ ಪ್ರಾಚೀನ ಕಾಲದಿಂದ ಇಂದಿನವರೆಗೂ ಮಾನವ ತನ್ನ ಜೀವನ ವಿಧಾನವನ್ನು ರೂಪಿಸಿಕೊಳ್ಳಲು, ತಾನು ವಾಸಮಾಡಲು ವಸತಿ ವ್ಯವಸ್ಥೆಯನ್ನು, ಬದುಕಲು ಆಹಾರ ಪದ್ಧತಿಯನ್ನು, ಆಹಾರಕ್ಕಾಗಿ ಕಸುಬನ್ನು, ತನ್ನ ಉನ್ನತೀಕರಣಕ್ಕಾಗಿ ಉಡುಗೆ-ತೊಡುಗೆಗಳ ವ್ಯವಸ್ಥೆಯನ್ನು ತನ್ನ ಅಸ್ತಿತ್ವಕ್ಕೆ ದಕ್ಕೆ ಉಂಟಾಗದಂತೆ ಆಡಳಿತ ವ್ಯವಸ್ಥೆಯನ್ನು ಜೊತೆಗೆ ಕೌಟುಂಬಿಕ ವ್ಯವಸ್ಥೆಯನ್ನು ರೂಪಿಸಿಕೊಂಡು ಸಂಸ್ಕೃತಿಯ ಚೌಕಟ್ಟಿನೊಳಗೆ ಜೀವಿಸಿದಂತಹ ನಿದರ್ಶನಗಳು ನಮಗೆ ಸಮಾಜಶಾಸ್ತ್ರ ಮತ್ತು ಮಾನವಶಾಸ್ತ್ರಗಳಲ್ಲಿ ಸಿಗುತ್ತವೆ.

ಯಾವುದೇ ಒಂದು ಸಂಸ್ಕೃತಿಯನ್ನು ಅಧ್ಯಯನ ಮಾಡಲು ಮುಂದಾದಾಗ ಅಲ್ಲಿನ ಪರಿಸರ, ಜನ ಸಮುದಾಯದ ಪರಿಕಲ್ಪನೆ, ಅವರು ವಾಸಮಾಡುವ ಸ್ಥಳದ ಮಾಹಿತಿ ಹೀಗೆ ಹಲವಾರು ವಿಷಯ ಗಳನ್ನು ನಾವು ಅರ್ಥೈಸಿಕೊಳ್ಳಬೇಕಾಗುತ್ತದೆ. ಜೊತೆಗೆ ಶಿಕ್ಷಿತರೋ, ಸುಸಂಸ್ಕೃತರೋ ಎಂಬಂತಹ ಮಾಹಿತಿಯೂ ಕೂಡ ನಮಗೆ ಮುಖ್ಯವಾಗುತ್ತದೆ. ಆತನ ಜೀವನ ವ್ಯವಸ್ಥೆ ಮತ್ತು ವಿಧಾನ, ಸಾಮಾಜಿಕ ವ್ಯವಸ್ಥೆಗಳನ್ನು ನೋಡುತ್ತಾ ಹೋದಂತಹ ಸಂದರ್ಭದಲ್ಲಿ ನಮ್ಮ ಸಂಸ್ಕೃತಿಯು ಇರುವಿಕೆಯನ್ನು ಅರಿಯಬಹುದಾಗಿದೆ.

ಈ ಬಗೆಯ ಸಂಸ್ಕೃತಿಯುಳ್ಳ ಒಂದು ತಾಲೂಕು ಅಥವಾ ಗ್ರಾಮಮಟ್ಟದಲ್ಲಿ ನೆಲೆನಿಂತ ಜನ ಸಮುದಾಯ ತಮ್ಮ ದಿನನಿತ್ಯದ ಜೀವನ ಕ್ರಮಕ್ಕೆ ಮೂಲಭೂತವಾದ ಅವಶ್ಯಕತೆಗಳನ್ನು ತಮ್ಮ ಪರಿಧಿಯ, ಅಳತೆಯ ಚೌಕಟ್ಟಿನಲ್ಲಿ ಅಳವಡಿಸಿಕೊಂಡು ರೂಪಿಸಿಕೊಂಡಿರುತ್ತಾರೆ. ದೊಡ್ಡ ದೊಡ್ಡ ನಗರ ಪ್ರದೇಶಗಳಲ್ಲಂತೂ ಒಂದು ಪರಂಪರೆಗೆ ರೀತಿ, ನೀತಿ, ನಂಬಿಕೆ, ಸಂಪ್ರದಾಯಕ್ಕೆ ಕಟ್ಟು ಬೀಳದೆ ಸ್ವತಂತ್ರ್ಯವಾಗಿ ಬದುಕುವುದು ಸರ್ವೆ ಸಾಮಾನ್ಯ. ಆದರೆ ಆರ್ಥಿಕವಾಗಿ ಹಿಂದುಳಿದ ಚಾಮರಾಜನಗರದಂತಹ ಗಡಿ ತಾಲೂಕಿನಲ್ಲಿ ಈ ಸ್ವತಂತ್ರ ತೀರಾ ಕಡಿಮೆ ಎನ್ನಬಹುದು.

ತನ್ನದೇ ಆದ ಗ್ರಾಮೀಣ ಸಂಸ್ಕೃತಿಯ ಚೌಕಟ್ಟಿನೊಳಗೆ ಹೆಣೆದ ಸಾಮಾಜಿಕ ವ್ಯವಸ್ಥೆಗೆ ಚಾಮರಾಜ ನಗರ ತಾಲೂಕು ಹೊರತಾಗಿಲ್ಲ. ಭೌಗೋಳಿಕವಾಗಿ, ಸಾಮಾಜಿಕವಾಗಿ, ಆರ್ಥಿಕವಾಗಿ, ನೈತಿಕವಾಗಿ, ರಾಜಕೀಯವಾಗಿ ವೈವಿಧ್ಯತೆಯನ್ನು ಪಡೆದುಕೊಂಡು ವಿಭಿನ್ನ ಜಾತಿ, ಜನಾಂಗ, ಆಚಾರ, ವಿಚಾರ, ನಂಬಿಕೆ, ಉಡುಗೆ-ತೊಡುಗೆಗಳಲ್ಲಿ, ವಸತಿ ವ್ಯವಸ್ಥೆಯಲ್ಲಿ ಏಕತೆಯನ್ನು ಮೆರೆದಿರುವ ತಾಲೂಕು ಎಂದರೆ ಚಾಮರಾಜ ನಗರ ತಾಲೂಕೆಂದೇ ಹೇಳಬಹುದು. ಈ ನಿಟ್ಟಿನಲ್ಲಿ ಗಡಿ ಭಾಗದಲ್ಲಿರುವ ಚಾಮರಾಜನಗರ ತಾಲೂಕು ಸಾಮಾಜಿಕವಾಗಿ ತನ್ನದೇ ಆದ ಒಂದು ಶಿಸ್ತುಬದ್ಧ ರೀತಿ-ನೀತಿಗಳನ್ನು, ಸಾಂಪ್ರದಾಯಿಕ ಚೌಕಟ್ಟನ್ನು ಹಾಕಿಕೊಂಡು ಸಂಸ್ಕೃತಿಯ ಇರುವಿಕೆಯನ್ನು ತೋರುತ್ತದೆ.

ಒಂದು ನಿರ್ದಿಷ್ಟ ವ್ಯಾಪ್ತಿಯ ಪರಿಸರವನ್ನು ಹೊಂದಿದ ತಾಲೂಕು ಪ್ರದೇಶವೊಂದರ ಸಾಮಾಜಿಕ ಅಧ್ಯಯನವೊಂದನ್ನು ಸೂಕ್ಷ್ಮವಾಗಿ ಮಾಡಿದರೆ, ಅದರಿಂದ ದೊರಕುವ ಪ್ರತಿಫಲಿತಗಳು ಒಂದು ರಾಜ್ಯದ ಪೂರ್ಣಸಮಾಜವೊಂದರ ಪ್ರತಿನಿಧಿಯಾಗಿ ನಿಲ್ಲುತ್ತವೆ. ಈ ಕಾರಣದಿಂದ ಚಾಮರಾಜನಗರ ತಾಲೂಕನ್ನು ಸಾಮಾಜಿಕ ಅಧ್ಯಯನಕ್ಕೆ ಒಳಪಡಿಸಲಾಗಿದೆ.

ಚಾಮರಾಜನಗರ ತಾಲೂಕಿನ ಸಾಮಾಜಿಕ ಅಧ್ಯಯನಕ್ಕೆ ಹಲವಾರು ಅಂಶಗಳು ಪೂರಕವಾಗುತ್ತವೆ. ಇಲ್ಲಿ ದೊರೆಯುವ ಚಾರಿತ್ರಿಕ ಆಧಾರಗಳಾದ ಶಾಸನಗಳು, ಸಾಹಿತ್ಯ, ಜಾತಿಪದ್ಧತಿ, ಜನಜೀವನ, ಆಚಾರ-ವಿಚಾರ, ಊಟೋಪಚಾರ, ಉಡುಗೆ-ತೊಡುಗೆ, ಹಬ್ಬ-ಹರಿದಿನಗಳು, ಸಂಪ್ರದಾಯ, ಆಚರಣೆ, ನಂಬಿಕೆ, ವೃತ್ತಿಗಳು, ಆರ್ಥಿಕ ವಿಚಾರಗಳು, ಜಾನಪದ ಮತ್ತು ಭಾಷಿಕ ವಿಚಾರಗಳು - ಇತ್ಯಾದಿಗಳು. ಇವುಗಳಲ್ಲದೆ ಸಮಾಜ ನಿರಂತರ ಪರಿವರ್ತನಾಶೀಲವಾದುದು. ನಿಧಾನಗತಿಯಲ್ಲಿ ಬದಲಾವಣೆಗೊಳ್ಳುತ್ತಿರುವುದು ಅದರ ಮುಖ್ಯಗುಣವಾಗಿದೆ. ಈ ಪರಿವರ್ತನೆಗೆ ವೈಜ್ಞಾನಿಕ ಬೆಳವಣಿಗೆ ಶಿಕ್ಷಣ, ಸಾರಿಗೆ-ಸಂಪರ್ಕ, ವೈಚಾರಿಕ ಹಾಗೂ ವೈಜ್ಞಾನಿಕ ಪ್ರಗತಿಗಳು ಪ್ರಮುಖ ಕಾರಣಗಳಾಗಿವೆ. ಈ ಅಧ್ಯಾಯದಲ್ಲಿ ಮುಖ್ಯವಾಗಿ ಕುಟುಂಬ ವ್ಯವಸ್ಥೆ, ಊಟೋಪಚಾರ, ಉಡುಗೆ-ತೊಡುಗೆ, ಬಾಂಧವ್ಯ, ಜಾತಿವ್ಯವಸ್ಥೆ ಮತ್ತು ಪ್ರತಿಯೊಂದು ಜಾತಿಯ ಬದುಕಿನ ಎಲ್ಲಾ ಮುಖಗಳ ವಿವರಗಳನ್ನು ಅಧ್ಯಯನ ಮಾಡಲಾಗಿದೆ.

**ಸಾಮಾಜಿಕ ವ್ಯವಸ್ಥೆ**

ಒಂದು ಪ್ರದೇಶದ ಇತಿಹಾಸ ಮತ್ತು ಸಾಮಾಜಿಕ ವ್ಯವಸ್ಥೆಯನ್ನು ತಿಳಿದುಕೊಳ್ಳಲು ನಮಗೆ ದೊರೆಯುವ ಪ್ರಮುಖ ಆಧಾರಗಳೆಂದರೆ ಶಾಸನಗಳು. ಇವು ಆಯಾಯ ಪ್ರದೇಶದ ಅಭಿವೃದ್ಧಿಗಾಗಿ ನೀಡಿರುವ ದಾನ-ದತ್ತಿ ಆ ಕಾಲದ ಸಮಾಜವನ್ನು ಕಲ್ಪಿಸಿಕೊಳ್ಳಲು ಮತ್ತ ವಿಶ್ಲೇಷಿಸಲು ಪ್ರಮುಖ ಪಾತ್ರವನ್ನು ವಹಿಸುತ್ತವೆ.

ಚಾಮರಾಜನಗರ ತಾಲೂಕು ಇತಿಹಾಸ ಪ್ರಸಿದ್ಧವಾಗಿದೆ. ಈ ತಾಲೂಕಿನಾದ್ಯಂತ ಅಗ್ರಹಾರ, ಧರ್ಮಶಾಲೆ, ಧರ್ಮಛತ್ರ, ಅರವಟ್ಟಿಗೆ, ಕಾಲುವೆ, ಕೆರೆಗಳು, ಬಾವಿಗಳು ಮತ್ತು ದೇವಾಲಯಗಳನ್ನು ಇಂದಿಗೂ ಕಾಣಬಹುದು. ಸಾರ್ವಜನಿಕರಿಗೆ ಉಪಯೋಗವಾಗುವಂತಹ ಅಸಂಖ್ಯಾತ ಕೆಲಸಗಳನ್ನು ಇಲ್ಲಿಯ ಪೂರ್ವಿಕರು ಮಾಡಿರುವುದನ್ನು ಇಲ್ಲಿಯ ಶಾಸನಗಳು ನಿರೂಪಿಸುತ್ತವೆ. ಗಂಗರ ಕಾಲದಿಂದ ಆದಿಯಾಗಿ ಮೈಸೂರು ಒಡೆಯರವರೆಗೆ ಈ ತಾಲೂಕಿನಲ್ಲಿ ಸು.೪೧೦ ಶಾಸನಗಳು ದೊರಕಿವೆ. ವ್ಯಕ್ತಿ ಹಾಗೂ ಸಂಸ್ಥೆಗಳಿಗೆ ಬೇರೆ ಬೇರೆ ಕಾರಣಗಳಿಗಾಗಿ ನೀಡಲಾದ ದಾನ ವಿಷಯವೇ ಇಲ್ಲಿಯ ಶಾಸನಗಳ ಮೂಲ ದ್ರವ್ಯ. ಆದರೂ ಅವುಗಳ ಕಾರಣಗಳ ವೈವಿಧ್ಯ ಬೆರಗನ್ನುಂಟು ಮಾಡುತ್ತವೆ. ಈ ಅಂಶಗಳು ಸಹ ಅಂದಿನ ಸಮಾಜದ ಸ್ಥಿತಿ-ಗತಿ ರಚನೆಯಲ್ಲಿ ಪ್ರಮುಖವಾಗಿವೆ.

೧೦ನೇ ಶತಮಾನಕ್ಕೆ ಸೇರಿದ ಚಾಮರಾಜನಗರದ ಶಾಸನವು ಬಾಗಳಿ ಊರಿನ ಭುಜಂಗೇಶ್ವರ ದೇವಾಲಯದ ಅರ್ಚಕ ಕೊಜಿಭಟಾರಕನಿಗೆ ಕೊಟ್ಟ ದತ್ತಿಯನ್ನು ಉಲ್ಲೇಖಿಸುತ್ತದೆ. ಈತನು ನೀರ್ಗುದದ ಗೊರವನೆಂದು(ಶೈವಗುರು) ಈ ಶಾಸನ ತಿಳಿಸುತ್ತದೆ.[೧] ಮೊದಲು ಪರರ ವಶದಲ್ಲಿದ್ದ ಭೂಮಿಯನ್ನು ಆಗ ವಿಮುಕ್ತಗೊಳಿಸಿ ಅದನ್ನು ಪ್ರತಿಗ್ರಹಿಗೆ ಕೊಟ್ಟು ದೇವಾಲಯದ ಆಡಳಿತ ಕಾರ್ಯವನ್ನು ನಿರ್ವಹಿಸಲು ನೇಮಿಸಲಾಯಿತು. ಈ ಗೊರವ ದೇವಾಲಯದ ಆಡಳಿತಕಾರ್ಯವನ್ನು ನಿರ್ವಹಿಸುವುದು ಮಾತ್ರವಲ್ಲದೆ, ಹತ್ತು ಮಂದಿ ಪಾತ್ರದವರ (ದೇವಡಿತಿಯರು) ಯೋಗಕ್ಷೇಮದ ಜವಾಬ್ದಾರಿಯನ್ನು ನಿರ್ವಹಿಸಬೇಕಾಗಿತ್ತೆಂದು ವಿವರಿಸುತ್ತದೆ. ಈ ಶಾಸನದಿಂದ ಅಂದಿನ ಕಾಲದಲ್ಲಿ ಶೈವ ದೇವಾಲಯಗಳನ್ನು ಶೈವರ, ವಿಷ್ಣು ದೇವಾಲಯಗಳನ್ನು ವೈಷ್ಣವರ ಆಡಳಿತಕ್ಕೆ ಸೀಮಿತವಾಗಿದ್ದವೆಂದು ತಿಳಿಯುತ್ತದೆ. ಅಲ್ಲದೆ ಇಂದಿನ ದೇವಾಲಯಗಳ ವ್ಯವಸ್ಥೆಯನ್ನು ನೋಡಿಕೊಳ್ಳುತ್ತಿದ್ದ ಪರಿಚಾರಕ ವರ್ಗ ಅಂದಿನ ಧಾರ್ಮಿಕ ಕೇಂದ್ರ ಗಳಲ್ಲಿದ್ದರೆಂದು ತಿಳಿಯುತ್ತದೆ.

ಚಾಮರಾಜನಗರ ಸಿಂಗನಪುರ ಶಾಸನವು ನಂಬಿಯರನ್ನು,(ಅರ್ಚಕ) ಒಬ್ಬ ಸೇವಕನನ್ನು, ಒಬ್ಬ ಕರಣಿಕನನ್ನು, ಇಬ್ಬರು ವಾದ್ಯಗಾರರನ್ನು, ಒಬ್ಬ ಧ್ವಜ ಹೊರುವವನನ್ನು, ವಾದ್ಯ ನುಡಿಸುವವನನ್ನು ಒಬ್ಬ ಹಾಡುಗಾರರನ್ನು, ನಾಲ್ವರು ಪಾತ್ರದವರನ್ನು, ಅಲ್ಲದೆ ಹಸವಡೆಯದವನಿಗೆ ಮತ್ತು ಅಂಘರಿಕರನ್ನು

ಘೋಷಿಸಲು ಭೂಮಿಯನ್ನು ದತ್ತಿಬಿಟ್ಟ ವಿಚಾರವನ್ನು ತಿಳಿಸುತ್ತದೆ.[೨] ಈ ದಾನ ಶಾಸನ ಅಂದು ತಾಲೂಕಿನಲ್ಲಿ ವೃತ್ತಿಗನುಗುಣವಾಗಿದ್ದ ಶ್ರೇಣೀಕೃತ ವ್ಯವಸ್ಥೆಯನ್ನು ನಿರೂಪಿಸುತ್ತದೆ.

ಚಾಮರಾಜನಗರ ತಾಲೂಕಿನ ಜನ ಹಿಂದಿನ ಕಾಲದಿಂದಲೂ ಬೇರೆ ಬೇರೆ ಧರ್ಮಕ್ಕೆ ಸೇರಿದವರಾಗಿದ್ದರೂ ಸಾಮರಸ್ಯದಿಂದ ಬಾಳುತ್ತಿದ್ದರು ಎಂಬುದಕ್ಕೆ ಹಳೇಆಲೂರಿನ ಶಾಸನ ನಿದರ್ಶನವಾಗಿದೆ.[೩] ಇದರಲ್ಲಿ ಅಂದಿನ ವೇಳ, ಕೋವ, ಕಣಿಂದ, ನಲ್ಗೊಡೆಯ ಮುಂತಾದ ವಿವಿಧ ವರ್ಗದ ಜನರು ಚಂದ್ರನಾಥ ಬಸದಿಯ ಜೀರ್ಣೋದ್ಧಾರ ಮಾಡಿದ ಉಲ್ಲೇಖವಿದೆ. ಇಲ್ಲಿ ಕೋವರೆಂದರೆ ಕುಂಬಾರರು, ಕುಣಿಂದರು ನರ್ತಕರು, ನಲ್ಗೊಡೆಯರು ಕೃಷಿಕರು, ಇದು ಒಂದು ದತ್ತಿ ಶಾಸನವಾಗಿದೆ. ಇದರ ಸ್ವಾರಸ್ಯವೆಂದರೆ ಶಿವ ಮತ್ತು ವಿಷ್ಣು ದೇವಾಲಯದ ಸ್ಥಾನಪತಿಗಳು ಈ ದತ್ತಿಗೆ ಸಾಕ್ಷಿಗಳಾಗಿದ್ದು, ಅದರ ರಕ್ಷಣೆಯ ಹೊಣೆಗಾರಿಕೆಯೂ ಅವರದ್ದೇ ಆಗಿರುತ್ತದೆ.

ಕ್ರಿ.ಶ. ೧೫೪೦ರ ಹೊಂಡರಬಾಳು ಶಾಸನವು ಈ ಪ್ರದೇಶದಲ್ಲಿ ಉಂಟಾದ ತೀವ್ರ ಕ್ಷಾಮದ ಚಿತ್ರಣವನ್ನು ನೀಡುತ್ತದೆ.[೪] ಈ ಕಾಲದಲ್ಲಿ ಪ್ರಾಯಶಃ ಒಂದು ಹಣಕ್ಕೆ ಏಳು ಮಣ ಧಾನ ಸಿಗುತ್ತಿತ್ತೆಂದು ತೋರುತ್ತದೆ. ಹಣಕ್ಕೆ ಏಳು ಮಾರು, ಮನುಷ್ಯ ಮನುಷ್ಯರ ತಿಂದರು ಎಂಬ ಪುಟ್ಟ ಮಾತಿನಲ್ಲಿರುವ ಬರದ ತೀವ್ರತೆಯು ನಮ್ಮ ಮನಸ್ಸನ್ನು ತಟ್ಟುತ್ತದೆ.

ಕ್ರಿ.ಶ. ೧೭ನೆಯ ಶತಮಾನಕ್ಕೆ ಸೇರಿದ ಯಳಂದೂರು ಶಾಸನ ಕುತೂಹಲಕರವಾಗಿದ್ದು, ಬಿಸಿತುಪ್ಪದಲ್ಲಿ ಕೈಯನ್ನು ಅದ್ದಿ ಆ ಮೂಲಕ ಕಠಿಣ ಪರೀಕ್ಷೆಯಲ್ಲಿ ಜಯಶಾಲಿಗಳಾದವರ ವಿಷಯವನ್ನು ನಿರೂಪಿಸುತ್ತದೆ.[೫] ನಾವಿದರು, ಅಗಸರು ಆದಚಾಮ, ಅರಿಸಮಾನ, ಹೊನ್ನ, ಧೂಮ ಮತ್ತು ಚಂಡ ಇವರು ಕುಂಬಾರರಿಗೆ ಕಾಲುಗುರು ಮೇಲುಕಟ್ಟುಗಳ ಹಕ್ಕು ಇಲ್ಲವೆಂದು ಹೇಳಿದರು. ನಂತರ ಕುಂಬಾರ ಸೆಟ್ಟಿಗಳು ಮೇಲೆ ಹೇಳಿದ ಕಠಿಣ ಪರೀಕ್ಷೆಯಲ್ಲಿ ಜಯಗಳಿಸಿ ಅದಕ್ಕೆ ತಾವು ಅರ್ಹರೆಂಬುದನ್ನು ರುಜುವಾತುಪಡಿಸಿದರು. ಈ ಪರೀಕ್ಷೆಯನ್ನು ಹರದನಹಳ್ಳಿಯ ದಿವ್ಯಲಿಂಗೇಶ್ವರ ಸಮಕ್ಷಮದಲ್ಲಿ ನೆರವೇರಿಸಲಾಯಿತು. ಈ ಶಾಸನವು ಮುಂದುವರಿದು ಜನಗಳು ಜಾತಿ ತೆರಿಗೆಯನ್ನು ಕೊಡಬೇಕೆಂದು ತಿಳಿಸುತ್ತದೆ. ಅಲ್ಲದೆ ಹೆಣ್ಣು ಬದುಕು ತಪ್ಪಿದಾಗ ಈ ತೆರಿಗೆಯಿಂದ ವಿನಾಯಿತಿ ತೋರಿಸಿದುದಲ್ಲದೆ ಆಕೆಯ ಜೀವಿತಕ್ಕಾಗಿಯೂ ಹಣ ನೀಡಲೇರ್ಪಡಿಸಿದಂತೆ ತೋರುತ್ತದೆ. ಈ ಶಾಸನದಲ್ಲಿ ಉಕ್ತವಾಗಿರುವ ದಿವ್ಯ ಪ್ರಸಂಗವೂ ಅನುಕೂಲೆಯಾದವಳು, ಅಳು ಮೊರೆಯಾದವಳು, ದುರಾಚಾರದಲ್ಲಿ ಆಸಕ್ತಿಯುಳ್ಳವಳು ಇಂತಹವರು ಹತ್ತು ಮಕ್ಕಳನ್ನು ಹಡೆದಿದ್ದರೂ ತ್ಯಜಿಸಬೇಕೆಂದು ಕವಿ ಅಭಿಪ್ರಾಯಪಡುತ್ತಾನೆ.[೬]

ಹಾಗೆಯೇ ಮೃದುಪಾದ, ತುಂಬು ಎದೆ, ಚಕ್ರದಂತನಾಭಿ, ಜಂಘೆ, ಅಧರಗಳು ಕೆಂಪುವರ್ಣವುಳ್ಳವಳು, ಕಪ್ಪನೆಯ ಹುಬ್ಬು, ತೂಕವಾದ ನಡಿಗೆ, ಸಮಯವರಿತು ಮೃದು ವಾಕ್ಯನ್ನಾಡುವವಳು ಮೊದಲಾದ ಗುಣಗಳನುಳ್ಳ ಸ್ತ್ರೀಯರಿಂದ ಪುರುಷನು ಕೀರ್ತಿವಂತನಾಗುವನು ಎಂದಿದ್ದಾನೆ.[೭]

ಒಟ್ಟಿನಲ್ಲಿ ಪೂಜ್ಯಪಾದ ಚರಿತ್ರೆಯಲ್ಲಿ ಅಭಿವ್ಯಕ್ತಗೊಂಡಿರುವ ಈ ಅಂಶಗಳಿಂದ ಅಂದಿನ ಸಮಾಜದ ವೈವಾಹಿಕ ವಿಚಾರಗಳು ಮನದಟ್ಟಾಗುತ್ತವೆ. ಹಾಗೆಯೇ ದುಷ್ಟ ಮತ್ತು ಶಿಷ್ಟ ಸ್ತ್ರೀಯರ ಲಕ್ಷಣದ ಬಗ್ಗೆ ಸುದೀರ್ಘವಾಗಿ ವಿವರಿಸುವ ಕವಿ ಪುರುಷರ ಬಗ್ಗೆ ಚಕಾರವೆತ್ತದೇ ಇರುವುದು ಅಂದಿನ ಪುರುಷ ಪ್ರಧಾನ ವ್ಯವಸ್ಥೆಗೆ ಕನ್ನಡಿ ಹಿಡಿದಂತಿದೆ.

ಪೂಜ್ಯಪಾದ ಚರಿತ್ರೆಯ ಹತ್ತನೆಯ ಸಂಧಿಯಲ್ಲಿ ಅಂದು-ಆಚರಣೆಯಲ್ಲಿದ್ದ ವರ್ಣಾಶ್ರಮ ಪದ್ಧತಿಯ ವಿವರಗಳಿವೆ. ಸ್ವತಃ ಪೂಜ್ಯಪಾದನು ಸಹ ಅದನ್ನು ಅನುಸರಿಸುವಲ್ಲಿ ಹಿಂದೆ ಬಿದ್ದಿರಲಿಲ್ಲ. ಜನ ಪೂಜೆಯನ್ನು ಮುಗಿಸಿ ತನ್ನ ವಾಸಸ್ಥಾನಕ್ಕೆ ಹಿಂದಿರುಗುವಾಗ ಅಶುಚಿಯಾದವರು ಎದುರಾದರೆ ಪುನಃ ಪ್ರಾಯಶ್ಚಿತ್ತ ಮಾಡಿಕೊಳ್ಳಬೇಕಾಗಿತ್ತು. ಅಗಸ, ಬಡಿಗ ಮೊದಲಾದವರು ಎದುರಿಗೆ ಬಂದರೆ ಒಂದು ಮಾರು ದೂರದ ಅಂತರ ವಿರಿಸಿಕೊಳ್ಳುತ್ತಿದ್ದನು. ಚಂಡಾಲನು ಎದುರಾದರೆ ಮೂರುನಾಲ್ಕು ಮಾರು, ಮಧ್ಯ, ಮಾಂಸದ ಅಂಗಡಿಗಳನ್ನು ಕಂಡರೆ ಮೂರು ಮಾರು, ಹೆಣವನ್ನು ನೋಡಿದಾಗ ಆರು ಮಾರು ಅಂತರ ದೂರದಲ್ಲಿರುತ್ತಿದ್ದನು.[೧೦] ಇವು 'ಅಹಿಂಸಾಹಿ ಪರಮೋದೈವಃ' - ಎಂಬ ತತ್ವ ಸಿದ್ಧಾಂತಗಳಿಗೆ ಬದ್ಧವಾದ ಜೈನಧರ್ಮದ ಕಾಲದಲ್ಲಿಯೂ ವರ್ಣಶ್ರಮಧರ್ಮದ ಪದ್ಧತಿ ಆಚರಣೆಯಲ್ಲಿದಕ್ಕೆ ನಿದರ್ಶನಗಳಾಗಿವೆ.

ಹಳೆಯದನ್ನು ತಿರಸ್ಕರಿಸಿ ಹೊಸದನ್ನು ಸೃಷ್ಟಿಸುವ ಕವಿಯನ್ನು ಕ್ರಾಂತಿಕಾರಿಯೆಂದು ಪರಿಗಣಿಸುತ್ತಾರೆ. ಜೈನಧರ್ಮದಲ್ಲಿ ಹೆಣ್ಣಿಗೆ ಗಂಡಿನೊಡನೆ ಸಮಾನ ಸ್ಥಾನವಿಲ್ಲ. ಮೋಕ್ಷ ಪಡೆಯಬೇಕಾದರೆ ಹೆಣ್ಣು ಮರುಜನ್ಮದಲ್ಲಿ ಗಂಡಾಗಿ ಹುಟ್ಟಬೇಕು. ಆದ್ದರಿಂದ ಜೈನ ಸಾಹಿತ್ಯದಲ್ಲಿ ಹೆಣ್ಣು ಕನಸುಗಳನ್ನು ಕಂಡು ಮಕ್ಕಳನ್ನು ಪಡೆಯುವುದಕ್ಕೆ, ವ್ರತಗಳನ್ನು ಆಚರಿಸುವುದಕ್ಕೆ ಮಾತ್ರ ಸೀಮಿತಗೊಂಡಿದ್ದಾಳೆ. ಇಂತಹ ಪರಿಸರದಲ್ಲಿ ಶ್ರುತಕೀರ್ತಿ ಹೆಣ್ಣನ್ನು ಕಥಾನಾಯಕಿಯನ್ನಾಗಿ ಮಾಡಿಕೊಂಡು ಕಾವ್ಯ ಬರೆದುದ್ದೇ, ಕ್ರಾಂತಿಕಾರಕ ವಿಷಯವಾಗುತ್ತದೆ. ವಸ್ತುವಿನ ದೃಷ್ಟಿಯಿಂದ ವಿಜಯಕುಮಾರಿ ಚರಿತೆ ಜೈನ ಸಾಹಿತ್ಯಕ್ಕೆ ಹೊಸ ಆಯಾಮವನ್ನು ತಂದುಕೊಟ್ಟ ಕೃತಿ. ಹೆಣ್ಣಾಗಿ ವಿಜಯಕುಮಾರಿಯ ಪ್ರತಿಭಟನೆ, ದಿಟ್ಟತನ, ವೈಚಾರಿಕತೆ, ಜೈನ ಸಾಹಿತ್ಯದ ಆವರಣದಲ್ಲಿ ವಿರಳವಾಗಿವೆ. ಅಲ್ಲದೆ ಈ ಕೃತಿಯಲ್ಲಿ ಸಮಕಾಲೀನ ಸಾಮಾಜಿಕ ವ್ಯವಸ್ಥೆ, ಜನ-ಜೀವನ ಮೊದಲಾದ ಅಂಶ ಮೂಡಿಬಂದಿದ್ದು, ಅಂದಿನ ಸಾಮಾಜಿಕ ವ್ಯವಸ್ಥೆಗೆ ಕನ್ನಡಿ ಹಿಡಿದಂತಿದೆ.

ಈ ಕೃತಿಯಲ್ಲಿ ಬರುವ ಬಲ್ಲಾಳ ರಾಯನು ಜಾತಿಸಂಕರವನ್ನುಂಟು ಮಾಡದೆ ಹೊಯ್ಸಳವಾಡನ್ನು ಆಳುತ್ತಿದ್ದನು ಎಂದು ಹೇಳುವ ಈ ಕೆಳಗಿನ ಪದ್ಯಗಳು, ಆ ಕಾಲದಲ್ಲಿ ಪ್ರಚಲಿತವಿದ್ದ ಜಾತಿವ್ಯವಸ್ಥೆಗೆ ನಿದರ್ಶನಗಳಾಗಿವೆ.

ಅಸಗೆ ಸಾಯಿದ ಕುಂಭಕಾ ಬಡಗಿಗಳು| ಕೃಷಿಕಜೀವಿಗಳು ಮುಂತಾದ
ಬೆಸದವರುಗಳು ಮಹಾಕೀಳು ಜಾತಿಯ| ಪಸರಿಸಿ ಕೋಂಟೆಯುಹೊ ಗೆ[೧೧]

ಊರ ಹೊದ್ದದೆ ಹೊಲೆ ಮಾದಿಗ ಮೊದಲಾದ| ಕ್ರೂರ ಕರ್ಮಿಗಳಾದವರು
ದೂರದೊಳಗೆಯಿರುತಿಹರವರೆಸಗಿದ| ಭೂರಿಪಾಪದ ಫಲವೆಂತೊ[೧೨]
ಹೊಲೆ ಮಾದಿಗ ಮೊದಲಾದ ದುಷ್ಕಲಜರ| ನೆಳಲಸೋಂಕರು ಮುಟ್ಟಿದೊಡೆ
ಜಲದೊಳು ಮುಳುಗುವ ಸತ್ಕುಲಜರ ಕಂಡು| ತಿಳಿಯದೆ ಮರುಳಾದೆಯಕಟ್ಟ[೧೩]

ಜೈನಧರ್ಮ ಪ್ರಬಲವಾಗಿದ್ದ ಅಂದಿನ ಸಮಾಜದಲ್ಲಿ ಕೆಳವರ್ಗದವರ ಸ್ಥಿತಿ ಎಷ್ಟು ಚಿಂತಾಜನಕವಾಗಿತ್ತು ಎಂಬುದನ್ನು ಮೇಲಿನ ಪದ್ಯಗಳು ಉಲ್ಲೇಖಿಸುತ್ತವೆ. ಶೋಷಣೆಯ ಪರಿ ಎಷ್ಟು ಅಮಾಯಕವಾಗಿತ್ತೆಂದರೆ ಹೊಲೆ ಮಾದಿಗರನ್ನು ಸ್ಪರ್ಶಿಸುವುದಾಗಿರಲಿ, ಉಚ್ಚ ಕುಲದವರಿಗೆ ಅವರ ನೆರಳು ಸೋಕಿದರೂ ದೊಡ್ಡ ಅಪರಾಧವಾಗುತ್ತಿತ್ತು. ಉಚ್ಚ-ನೀಚ ಭೇದಗಳನ್ನು ತೊಡೆದು, ಕೆಳವರ್ಗದವರನ್ನು ಸಮಾನವಾಗಿ ಕಾಣುವುದು ಕೂಡ ದೋಷವಾಗಿ ಕಾಣುತ್ತಿತ್ತು. ಅದಕ್ಕೆ ಕಾರಣ ಅಂದಿನ ಸಮಾಜದಲ್ಲಿ ಪ್ರಮುಖರಾಗಿದ್ದ ವೈದಿಕ ಮತ್ತು ಜೈನ ಧರ್ಮೀಯರು ಅಥವಾ ಸಂಪ್ರದಾಯವಾದಿಗಳು. ಈ ಸಾಮಾಜಿಕ ಮೌಲ್ಯಗಳು ಕಾಲದಿಂದ ಕಾಲಕ್ಕೆ ಬದಲಾವಣೆ ಹೊಂದಿರುವುದನ್ನು ಇಂದು ಗುರುತಿಸಬಹುದು.

ಬೆಲೆ-ಬಾಳುವ ವಸ್ತುಗಳನ್ನು ಅಡವು ಇಟ್ಟು ಹಣವನ್ನು ಪಡೆಯುವುದು ನಮ್ಮ ಸಮಾಜದಲ್ಲಿ ಇಂದಿಗೂ ರೂಢಿಯಲ್ಲಿದೆ. ಆದರೆ ವಿಜಯಕುಮಾರಿ ಚರಿತ್ರೆಯಲ್ಲಿ ಮನುಷ್ಯರನ್ನು ಅಡವು ಇಡುತ್ತಿದ್ದುದಕ್ಕೆ ನಿದರ್ಶನವಿದೆ. ಪದ್ಮಾವತಿಯ ಗಂಡ ವ್ಯಾಪಾರಕ್ಕೆಂದು ಬೇರೆ ಊರಿಗೆ ಹೋಗಿದ್ದ ಸಮಯದಲ್ಲಿ ಮನೆಗೆ ಬಂದ ಮುನಿಗಳನ್ನು ಸತ್ಕರಿಸಲು ಪದ್ಮಾವತಿಯ ಬಳಿ ಹಣವಿರಲಿಲ್ಲ. ಆಗ ಆಕೆ ದೇವಿಸೆಟ್ಟಿಯ ಬಳಿ ತನ್ನ ಸ್ವಂತ ಮಗಳನ್ನು ಅಡವು ಇಟ್ಟು ಹಣ ಪಡೆಯುತ್ತಾಳೆ.[೧೪] ಇಂದು ಅಂದಿನ ಸಮಾಜದ ಒಂದು ಅಮಾನವೀಯ ಪದ್ಧತಿ.

ವಿಜಯಕುಮಾರಿ ಚರಿತೆಯಲ್ಲಿ ಅಂದು ಪ್ರಚತಲಿವಿದ್ದ ಶಿಕ್ಷಣ ಪದ್ಧತಿಯ ಅಂಶಗಳಿವೆ. ಅಂದು ಸ್ತ್ರೀಯರ ಶಿಕ್ಷಣಕ್ಕೆ ಸ್ವಲ್ಪವೂ ಪ್ರೋತ್ಸಾಹವಿರಲಿಲ್ಲ. ವಿರಳವಾಗಿ ವಿಜಯಕುಮಾರಿಯಂತಹ ಹುಡುಗಿಗೆ ಬಾಲ್ಯಶಿಕ್ಷಣ ದೊರೆಯುತ್ತದೆ. ಹೆಣ್ಣು ತಾನು ಬಯಸಿದಷ್ಟು ಶಿಕ್ಷಣ ಪಡೆಯುವ ಹಾಗಿರಲಿಲ್ಲ. ಋತುಮತಿಯಾದ ಕೂಡಲೇ ಆಕೆಯ ಶಿಕ್ಷಣ ಅಲ್ಲಿಗೆ ಮುಕ್ತಾಯವಾಗುತ್ತಿತ್ತು. ಕಥಾನಾಯಕಿ ವಿಜಯಕುಮಾರಿ ಯೌವನಕ್ಕೆ ಕಾಲಿಟ್ಟಾಗ ಆಕೆಯ ಗುರು ನಿರ್ದಾಕ್ಷ್ಯಣ್ಯವಾಗಿ ಆಕೆಗೆ ಹೀಗೆ ಹೇಳುತ್ತಾನೆ.

ಮಾವಿನ ಪೂವುಮಂಜಿಗೆ ಕೆಡುವಂದದಿ| ಭಾವಕಿಯರ ನೋಟ ವಿಷಕೆ
ತೀವಿದ ವ್ರತಕೆಡುವುದು ಯತಿಜನಕಮ್ಮ| ಕೋವಿದೆ ನೀಬರಬೇಡ[೧೫]

ವಿದ್ಯ ಕಲಿಯಬೇಕೆಂಬ ಉತ್ಕಟ ಹಂಬಲ ಹೊಂದಿದ ಬಾಲಕಿ ವಿಜಯಕುಮಾರಿಗೆ ಇದರಿಂದ ಅಪಾರ ದುಃಖವಾಗುತ್ತದೆ. ಆಗ ಆಕೆಯ ಗುರು ಆ ಕಾಲದಲ್ಲಿದ್ದ ಶಿಷ್ಯಾಚಾರ ಪದ್ಧತಿಯನ್ನು ಹೀಗೆ ವಿವರಿಸುತ್ತಾನೆ.

ಅಕ್ಕನಾಗಲೀ ತಂಗಿಯಾಗಲೀ ತನ್ನಯ| ಮಕ್ಕಳಾಗಲಿ ನೆ ದಾಗ
ಪಕ್ಕದೊಳಿರಬಾರದು ಯತಿಯವರೊಳು| ನಕ್ಕುನುಡಿಯಬಾರದಮ್ಮ
ಏಕಾಂತವಾಸದೊಳಗೆ ನಾವಿದ್ದಾಗ ಏಕಾಕಿಯಾಗಿ ನೀ ಬರಲು
ಆ ಕಾಲದೊಳಗೆ ಮಾತಾಡಿಸಬಾರದಾ| ಲೋಕಿಸಬಾರದು ಮಗಳೆ[೧೬]

ಈ ಮೇಲಿನ ಪದ್ಯಗಳಲ್ಲಿ ಅಭಿವ್ಯಕ್ತಿಗೊಂಡಿರುವ ಅಂಶಗಳು ಅಂದಿನ ಕಾಲದ ಗುರುಕುಲದ ಮುಖ್ಯಸ್ಥರಾದ ಯತಿಗಳ ಆಚಾರಗಳಿಗೆ ಅನ್ವಯಿಸಿದರೂ, ಸ್ತ್ರೀ ಕುಲದ, ಶೋಷಣೆಗೂ ಕಾರಣವಾಗುತ್ತವೆ ಹಾಗೂ ಅಂದಿನ ಸಮಾಜದ ಮೌಢ್ಯ ಆಚರಣೆಗಳನ್ನು ಪ್ರತಿನಿಧಿಸುತ್ತವೆ.

ವಿಜಯಕುಮಾರಿ ಚರಿತೆಯೂ ಅಂದಿನ ಸಮಾಜದಲ್ಲಿದ್ದ ಅಮಾನವೀಯವಾದ ವರ್ಣ ಮತ್ತು ಲಿಂಗ ಶೋಷಣೆಗಳನ್ನು ಎತ್ತಿ ಹಿಡಿಯುವುದರೊಂದಿಗೆ ಅಂದಿನ ಸಮಾಜದಲ್ಲಿ ಹೆಣ್ಣಿನ ಬಗ್ಗೆ ಇದ್ದ ವಿಶೇಷ ಕಳಕಳಿಯೂ ವ್ಯಕ್ತವಾಗಿದೆ. ಉಳಿದ ಸಮಕಾಲಿನ ಕೃತಿಗಳಂತೆ ಕವಿ ಇಲ್ಲಿ ಹೆಣ್ಣಿನ ಅಂಗಾಂಗಗಳ ವರ್ಣನೆಗೆ ತೊಡಗದೆ ಬಾಲ್ಯ, ಯೌವ್ವನ, ಮುಪ್ಪು - ಈ ಹಂತಗಳಲ್ಲಿ ಅವಳಿಗೆ ಎದುರಾಗುವ ಹಲವು ಸಮಸ್ಯೆಗಳ ಕಡೆಗೆ ದೃಷ್ಟಿ ಹರಿಸಿದ್ದಾನೆ.

ಹೊಟ್ಟೆಯೊಳಿರುವಾಗ ದುಃಖವಲ್ಲವೆ ನೃಪ| ಪುಟ್ಟುವೇಳೆಯೊಳಾಗ ದುಃಖ
ಪುಟ್ಟಿದಾಕ್ಷಣ ನೋಡಿ ಹೆಣ್ಣೆಂದಾಗಯ್ಯಾ|ಪುಟ್ಟುವುದಲೆ ದುಃಖ ನೃಪತಿ
ಯವ್ವನದಳೆದಾಗ ಕಂಡ ಕಂಡರಿಗೆಲ್ಲ| ಕವ್ವರೆಗಳ ಪುಟ್ಟಿಸುವುದು
ಜವ್ವನದೊಳು ಬಾಳುವುದು ನೃಪತಿಕೇಳು| ಅವ್ವಯಸುಖದ ಕೆಡಿಪುದು[೧೭]

ಹೊಟ್ಟೆಯಲ್ಲಿರುವಾಗ ಪ್ರಶ್ನೆಯಿಲ್ಲ. ಹುಟ್ಟಿದಾಗ ಅಯ್ಯೋ ಹೆಣ್ಣೆ ಎಂಬ ಉದ್ಗಾರ, ಬಾಲ್ಯದಲ್ಲಿ ಈ ರೀತಿಯ ಕಷ್ಟವಾದರೆ ಯೌವನಕ್ಕೆ ಕಾಲಿಟ್ಟ ಕೂಡಲೆ ಕಂಡ ಕಂಡವರಿಗೆಲ್ಲ ಈಕೆಯ ಮೇಲೆ ದೃಷ್ಟಿ. ಹೀಗೆ ಹೆಣ್ಣಿನ ಬದುಕಿನ ಕಷ್ಟಗಳನ್ನೆಲ್ಲಾ ಮಾರ್ಮಿಕವಾಗಿ ಚಿತ್ರಿಸಿದ್ದಾನೆ. ಮತ್ತೆ ಕವಿ ಜೈನಧರ್ಮದಲ್ಲಿ ಅವಕಾಶವಿಲ್ಲದಿದ್ದರೂ ಮೋಕ್ಷಕ್ಕೆ ಸಲ್ಲುವಾಗ ಹೆಣ್ಣು-ಗಂಡುಗಳು ಸಮಾನರು ಎಂಬ ಅಂಶವನ್ನು ಕವಿ ಪ್ರತಿಪಾದಿಸುತ್ತಾನೆ.

ಮಲೆಯೂರಿನ ದೇವಚಂದ್ರನು ರಾಜಾವಳೀ ಕಥೆಯಲ್ಲಿ ಲಿಖಿತ ಚರಿತ್ರೆಯ ಪುಟಗಳಲ್ಲಿ ಎಲ್ಲೂ ಸಿಗದ ಹೊಲೆಯ, ಮಾದಿಗ, ಕುರುಬ, ಉಪ್ಪಲಿಗ, ತೊರೆಯ, ಮಡಿವಾಳ, ವಡ್ಡ ಕೆಲಸಿಗ ಮೊದಲಾದ ನಿರ್ಲಕ್ಷಿತ ಹಲವಾರು ಜನ ಸಮುದಾಯಗಳ ಜೀವನ, ಸಂಸ್ಕೃತಿ, ರಾಜಕೀಯ, ಜಾನಪದ ಮೊದಲಾದ ವಿಷಯಗಳ ಬಗ್ಗೆ ಬರೆದಿದ್ದಾನೆ. ಇದಲ್ಲದೆ ಮಧ್ಯಕಾಲೀನ ಅನೇಕ ಸಾಂಸ್ಕೃತಿಕ ಪಂಥಗಳ ಬಗ್ಗೆ, ಧರ್ಮಗಳ ಬಗ್ಗೆ, ಕೀಳು ಜಾತಿಗಳ ಬಗ್ಗೆ ಕುತೂಹಲಕರ ದಾಖಲಾತಿ ಹಾಗೂ ವಿಶ್ಲೇಷಣೆ ಇಲ್ಲಿದ್ದು ವಸಾಹತು

ಪೂರ್ವ ಕನ್ನಡದ ಯಾವ ಕೃತಿಯಲ್ಲೂ ಕಾಣದಿರುವ ಇಂಥ ವಿವರಗಳು ಈ ಪ್ರಾಂತ್ಯದ ಸಾಮಾಜಿಕ ಅಧ್ಯಯನಕ್ಕೆ ತುಂಬಾ ಉಪಯುಕ್ತ ಮಾಹಿತಿಗಳಾಗಿವೆ.[೧೮]

ವೈದಿಕ ಧರ್ಮದ ಚಾತುರ್ವರ್ಣ ಪದ್ಧತಿಯನ್ನು ಮಂಡಿಸುತ್ತಾ ''ಇಂತು ಮನುಷ್ಯ ಜಾತಿಯೊಂದೆ ಯೊದೊಡಮವರವರ ವೃತ್ತಿಭೇದದಿಂ ಬ್ರಾಹ್ಮಣಾದಿಗಳಿಗೆ ಪದಿನೆಂಟು ಜಾತಿಗಳುಮವರವರ ವೃತಿಯಿಂದಲೆ ಭೇದಂಗಲಾಗಿಪ್ಪವು'' - ಎಂದು ಪರಂಪಾರಗತ ವಿವರ ಕೊಡುತ್ತಾನೆ.[೧೯] ಆರನೆಯ ಅಧಿಕಾರದಲ್ಲಿ ೭೯೦ ಜಾತಿಗಳು ಅನೇಕ ಒಳಭೇದಗಳು ಹುಟ್ಟಿದವು ಎನ್ನುತ್ತಾನೆ.[೨೦] ಈ ಸಂಖ್ಯೆ ಉತ್ಪ್ರೇಕ್ಷೆಯಾದರೂ ಅಂದು ಈ ಪ್ರಾಂತ್ಯದಲ್ಲಿ ವರ್ಣಾಶ್ರಮಧರ್ಮ ಪ್ರಬಲವಾಗಿತ್ತೆಂಬುದಕ್ಕೆ ಅವನ ಈ ಹೇಳಿಕೆಗಳು ನಿದರ್ಶನವಾಗಿವೆ. ಅಲ್ಲದೆ ಅವನು ಹೆಸರಿಸಿರುವ ಹಲವು ಪ್ರಧಾನ ಜಾತಿಗಳು ಇಂದು ಸಹ ಚಾಮರಾಜನಗರ ತಾಲೂಕಿನಲ್ಲಿ ಅಸ್ತಿತ್ವದಲ್ಲಿವೆ.

ಊಳಿಗಮಾನ್ಯ ಪ್ರಭುಗಳು ಜನಸಾಮಾನ್ಯರನ್ನು ತುಂಬ ನಿರ್ದಯವಾಗಿ, ಅಮಾನವೀಯವಾಗಿ ನಡೆಸಿಕೊಳ್ಳುತ್ತಾ ಅವರ ಮೇಲೆ ಹೇರುತ್ತಿದ್ದ ವಿಪರೀತ ಕಂದಾಯದ ಹೊರೆಯ ನಗ್ನ ಚಿತ್ರ ರಾಜಾವಳೀ ಕಥೆಯಲ್ಲಿ ಉಲ್ಲೇಖಗೊಂಡಿದೆ. ''ಚಿಕ್ಕದೇವರಾಯ ನಿಂದಿತ್ತಲು ಪ್ರಜೆಗಳ್ಗೆ ತೆರಿಗೆ ಹೆಚ್ಚಿದವು. ಅವಾವೆಂದೊಡೆ ಎರೆಹೊಲದ ಕಂದಾಯ, ಕೆಚ್ಚಿ, ಆದು ಹೊರೆಕೊಟ್ಟಿಗೆ, ಹಿತ್ತಲು, ತೋಟ, ಬಂಜಲ ಭೂಮಿ, ಚೌಳುಮಣ್ಣು, ಹಟ್ಟಿ ಕಂದಾಯ, ದೀಪಾವಳಿ-ಯುಗಾದಿ ಬೇಡಿಗೆ, ಹುಲ್ಲಸರತಿ, ಸಂಬಳ ಸರತಿ, ಉಪ್ಪಿನ ಕಾವಲಿ, ಹಡಪ ಕಮ್ಮಟ, ಕುಲುಮೆ, ಮಗ್ಗ ಚರ್ಮ ತೆರಿಗೆ, ಜೀತಸುಂಕ, ಕಂಬಳ ತೆರಿಗೆ, ಶೇಂದಿ ಗುತ್ತಿಗೆ, ಸಾರಾಯಿ, ಹೊಗೆಸೊಪ್ಪು, ಗಂಧದ ಮಣೆ ಮೊದಲಾದ ತೆರಿಗೆಗಳಲ್ಲದೆ, ಬಾಯಿ ತಪ್ಪು, ಕೈತಪ್ಪು, ಇರುಳ ತಪ್ಪು, ಮೊದಲಾಗಿ ಸಂತವಳಿ, ಉಟ್ಟವಳಿ, ಕಟ್ಟುವಳಿ, ಪತ್ತುವಳಿಯೆಂದಾದಿಯಾಗಿ ಅನೇಕ ತೆರಿಗೆಯಾಗಲು'' - ಎಂದು ಅಂದಿನ ತೆರಿಗೆಯ ವಿಧಗಳನ್ನು ಪಟ್ಟಿ ಮಾಡುತ್ತಾನೆ.[೨೧] ಈ ಭಯಂಕರ ರೀತಿಯ ತೆರಿಗೆಗಳ ಭಾರವನ್ನು ರೈತರು ತಾಳಲಾರದೆ ದಂಗೆ ಎದ್ದ ವಿವರಗಳು ಇವೆ.

ಮೀರಸಾಬಿ ಎಂಬ ಸರ್ವಾಧಿಕಾರಿ ಮೂವರು ರೈತರ ಮೇಲೆ ಇಲ್ಲ ಸಲ್ಲದ ಆರೋಪ ಕಲ್ಪಿಸಿ ಆ ಮೂವರಿಗೆ ಕಂಠಪಾಶವನ್ನಿರಿಸಿಕೊಂಡು ರಾಜ್ಯದ ಎಲ್ಲಾ ಗ್ರಾಮಗಳಿಗೆ ತೆರಿಗೆ ಹೆಚ್ಚಿಸುತ್ತಾನೆ. ಇದರಿಂದ ಬೇಸತ್ತ ಕೆಲವು ರೈತರು ದೇಶಾಂತರ ಹೋದರೆ ಮತ್ತೆ ಕೆಲವರು ಜಲಪಾತಗಳಿಗೆ ಬಿದ್ದು ಸತ್ತು ಹೋಗುತ್ತಾರೆ.[೨೨] ಇದರಿಂದ ಅಂದಿನ ಫ್ಯೂಡಲ್ ಸಮಾಜದ ಜನರ ಜೀವನ ಎಷ್ಟೊಂದು ಭೀಕರವಾಗಿತ್ತು ಎಂಬುದು ಮನದಟ್ಟಾಗುತ್ತದೆ. ಅಂದಿನ ಶೋಷಕ ದೊರೆ ಮತ್ತು ಅಧಿಕಾರಿಗಳಲ್ಲಿದ್ದ ನೀಚ ಕ್ರೌರ್ಯವನ್ನು ಕಣ್ಣಾರೆ ಕಂಡಿದ್ದ ದೇವಚಂದ್ರ "ಸರ್ವಜನರು ಸುಖದಿಂದ" ಬಾಳುವಂತೆ ಆಡಳಿತ ನಡೆಸಬಲ್ಲರೆಂಬ ನಿರೀಕ್ಷೆಯಿಂದ ಬ್ರಿಟಿಷರ ಕಂಪನಿ ಆಡಳಿತವನ್ನು ಸ್ವಾಗತಿಸುತ್ತಾನೆ, ಆದರೆ ಬ್ರಿಟಿಷರ ಮಹಾಹತುಶಾಹಿಯ ನಿರ್ದಯ ಸುಲಿಗೆಯು

ಕತೆ ಓದಿರುವ ನಮಗೆ ದೇವಚಂದ್ರನ ಅಭಿಪ್ರಾಯವನ್ನು ಒಪ್ಪಲು ಸಾಧ್ಯವಿಲ್ಲ. ಎನಿಸಿದರೂ, ಅಂದಿನ ದೇಶಿಯ ರಾಜರು ಜನ ಸಾಮಾನ್ಯರ ಮೇಲೆ ನಡೆಸುತ್ತಿದ್ದ ಹಿಂಸೆ, ಕಾರ್ಯ ಮೊದಲಾದ ಅಮಾನವೀಯ ಅಂಶಗಳನ್ನು ಅಲ್ಲಗಳೆಯುವಂತಿಲ್ಲ.

ಹಾಗೆಯೇ ತನ್ನ ಕೃತಿಯಲ್ಲಿ ಅಭಿವ್ಯಕ್ತಗೊಂಡಿರುವ ಸುಲ್ತಾನ ಹಾಳುಭೂಮಿಗೆ ಬಂಜರು ಕಂದಾಯ ಹೆಚ್ಚಿಸಿದ್ದು. ಗೌಡ ಗುತ್ತಿಗೆ ಕಲ್ಪಿಸಿದ್ದು, ಗಂಡಸರಿಗೆ ಗುಡಗಿ ಚೆಲ್ಲಣ, ಹೆಂಗಸರಿಗೆ ರವಕೆ ಧರಿಸುವಿಕೆಯನ್ನು ಕಡ್ಡಾಯಗೊಳಿಸಿದ್ದು[೨೬] ಪರಭಾಷೆಯನ್ನು ಬಳಕೆಯಲ್ಲಿ ತರುವಂತೆ ನಿಗದಿಮಾಡಿದ್ದು, ಹಣಕ್ಕೆ ಪರ್ಯಾಯವಾಗಿ ಆಹಾರ ಧಾನ್ಯಗಳನ್ನು ವಿನಿಮಯ ಮಾಧ್ಯಮವನ್ನಾಗಿಸಿದ್ದು ಮುಂತಾದ ಅನೇಕ ಹೊಸ ಸಂಗತಿಯನ್ನು ಕವಿ ಹೇಳುತ್ತಾನೆ. ಅದರಲ್ಲೂ ಒಡೆಯರ ಕಾಲಕ್ಕೆ ಸಂಬಂಧಿಸಿದಂತೆ ಅನೇಕ ಹೊಸ ವಿಚಾರಗಳ ವಿವರಗಳನ್ನು ಕೊಡುತ್ತಾನೆ. ಒಟ್ಟಿನಲ್ಲಿ ದೇವಚಂದ್ರನ ಕೃತಿಯಲ್ಲಿ ಉಲ್ಲೇಖಗೊಂಡಿರುವ ಈ ಹಲವು ಅಂಶಗಳು ಅಂದಿನ ಕಾಲದ ಸಾಮಾಜಿಕ ವ್ಯವಸ್ಥೆಗೆ ಕನ್ನಡಿ ಹಿಡಿಯುತ್ತವೆ.[೨೭]

'ರಾಜಾವಳೀ ಕಥಾಸಾರ'ದ ದಶಮಾಧಿಕಾರದಲ್ಲಿ ಉಲ್ಲೇಖಗೊಂಡಿರುವ ಸಂಗತಿಗಳಿಂದ ದೇವಚಂದ್ರನಲ್ಲಿರುವ ಸ್ತ್ರೀ ಸಂವೇದನೆಯ ಗುಣಗಳನ್ನು ಮನಗಾಣಬಹುದು. ಅಲ್ಲದೆ ಅದು ಅಂದಿನ ಸಮಾಜದಲ್ಲಿ ಸ್ತ್ರೀಯರ ಶೋಷಣೆಯ ಪರಿಯನ್ನು ಉಲ್ಲೇಖಿಸುತ್ತವೆ. ಸ್ತ್ರೀಯರಲ್ಲಿ ಉತ್ತಮ ಆದರ್ಶ ಸ್ತ್ರೀಯರು (ಯಶಸ್ವತಿ, ಸೀತೆ) ಕುಲಟಸ್ತ್ರೀಯರು (ಭೂತಮತಿಯ ಪತ್ನಿಯಜ್ಞೆ, ಗಾರ್ಗ್ಯೋಪಾಧ್ಯನ ಪತ್ನಿ) ಎಂದು ಅಂದು ಚಾಲ್ತಿಯಲ್ಲಿದ್ದ ಎರಡು ಸ್ತ್ರೀವರ್ಗಗಳನ್ನು ಗುರುತಿಸಿ ಅವರಲ್ಲಿ ಉತ್ತಮ ಸ್ತ್ರೀಯರು, ಮನುವಿನ ಪಂಜರದ ಪಕ್ಷಿಗಳು, ಸ್ವತಂತ್ರರಲ್ಲ, ಗಂಡಿನ ಮುಕ್ತಿ ಬೇಟೆಯಲ್ಲಿ ದಿವ್ಯಮೃಗವಾಗುತ್ತಾರೆ ಅಷ್ಟೇ ಎಂದಿದ್ದಾನೆ.[೨೮]

ರಾಜಾವಳಿ ಕಥಾಸಾರದಲ್ಲಿ ಉಲ್ಲೇಖಗೊಂಡಿರುವ ಭೋಗಾವತಿ ಎಂಬ ವಿಧವೆಯ ವಿವಾಹ ವೃತ್ತಾಂತವೂ ಅಪೂರ್ವವಾಗಿದೆ. ಆಕೆ ನಮ್ಮ ಸಮಾಜ ಅಂದು ಹಾಕಿದ ಸಂಕೋಲೆಗಳನ್ನು ಕಡಿದು ಹಾಕಿ ತನ್ನ ಸಂಬಂಧಿ ಪ್ರಿಯಕರನೊಂದಿಗೆ ದೇಶಾಂತರ ಹೋಗಿ ಹೊಸ ಸಂಸಾರ ಹೂಡಿ ಮಕ್ಕಳನ್ನು ಪಡೆದು ಸುಖವಾಗಿದ್ದುದನ್ನು ವಿವರಿಸುತ್ತಾನೆ. ಹಾಗೆಯೇ ತನ್ನ ಮಗನ ಸೂಳೆಗಾರಿಕೆಗೆ ಕಾರಣಳಾದಳೆಂದು ಆರೋಪಿಸಿದ ರಾಜನೊಬ್ಬ ಆ ಹೆಣ್ಣಿನ ಯೋನಿಗೆ ಕಾದ ಕಬ್ಬಿಣದ ಹಾರೆಯನ್ನು ಹಾಕಿಸುವ ಘಟನೆ ಹಾಗೂ ಮತ್ತೊಬ್ಬ ಸ್ತ್ರೀ ರಾಜನ ಕುದುರೆ ಬರುವ ದಾರಿಯಲ್ಲಿ ಮೂತ್ರ ವಿಸರ್ಜನೆ ಮಾಡಿದ್ದರಿಂದ ಅವಳ ಮೇಲೆ ಕುದುರೆ ಹತ್ತಿಸಿ ಸಾಯಿಸುವಂತ ಎರಡು ಅಮಾನವೀಯ ಘಟನೆಗಳು ಇಲ್ಲಿ ಧ್ವನಿತವಾಗಿವೆ.[೨೯]

ಒಟ್ಟಿನಲ್ಲಿ ಪುರುಷ ಪ್ರಧಾನವಾದ ಅಂದಿನ ಕಾಲದಲ್ಲಿ ಗಡಿ ಪ್ರದೇಶವಾದ ಈ ಪ್ರಾಂತ್ಯದಲ್ಲಿ ಸ್ತ್ರೀಯರ ಮೇಲಿನ ದೌರ್ಜನ್ಯ, ಶೋಷಣೆ, ಅವರ ಸ್ಥಾನಮಾನ ಮೊದಲಾದ ಅಂಶಗಳ ಮೇಲೆ ಈ ಕೃತಿ

ಬೆಳಕು ಚೆಲ್ಲುತ್ತದೆ. ಅಲ್ಲದೆ ದೇವಚಂದ್ರನ ಸ್ತ್ರೀ ಸಂವೇದನೆಯ ಮನೋಭಾವ ಕೂಡ ಇಲ್ಲಿ ಅಭಿವ್ಯಕ್ತಿಗೊಂಡಿರುವುದನ್ನು ಕಾಣಬಹುದು.

ಎಂ.ಎಸ್. ಪುಟ್ಟಣ್ಣನವರು ಕ್ರಿ.ಶ.೧೯೦೫ರಲ್ಲಿ ಚಾಮರಾಜನಗರದಲ್ಲಿ ಅಮಲ್ದಾರರಾಗಿದ್ದರು, ಅವರ ಮಹತ್ವದ ಸಾಹಿತಿಕ ರಚನೆಗಳಲ್ಲೊಂದಾದ 'ಮಾಡಿದುಣ್ಣೋ ಮಹಾರಾಯ' - ೧೯೧೫ರಲ್ಲಿ ರಚನೆಯಾಯಿತು. ಅಂದಿನ ಚಾಮರಾಜನಗರದ ಐತಿಹಾಸಿಕ ಅಂಶಗಳಿಂದ ಪ್ರಭಾವಿತರಾಗಿರುವ ಈ ಕಾದಂಬರಿ ಅಂದಿನ ಮೈಸೂರು ಚರಿತ್ರೆಯ ಮೇಲೆ ಬೆಳಕು ಚೆಲ್ಲುತ್ತದೆ. ಅದರಲ್ಲೂ ಪ್ರಮುಖವಾಗಿ ಅಂದು ಚಾಮರಾಜನಗರ ಪ್ರಾಂತ್ಯದಲ್ಲಿದ್ದ ಜಾತಿ ಸಂಘರ್ಷಗಳು ಅದಕ್ಕೆ ಪೋಷಕವಾದ ಅಧಿಕಾರ ಶಾಹಿಗಳು ಮತ್ತು ಅಂದಿನ ಸಮಾಜದಲ್ಲಿ ಅದರಲ್ಲೂ ಒಂದು ಶ್ರೀಮಂತ ಕುಟುಂಬವೊಂದರಲ್ಲಿ ಒಂದು ಹೆಣ್ಣು ಕುಟುಂಬದ ಒಳಗೆ ಮತ್ತು ಹೊರಗೆ ಹೇಗೆ ಶೋಷಣೆಗೆ ಒಳಗಾಗಿ ಸಮಾಜದ ಕ್ರೌರ್ಯಕ್ಕೆ ಬಲಿಯಾಗುತ್ತಾಳೆ ಎಂಬುದು ಸಹಜವಾಗಿ ಅಭಿವ್ಯಕ್ತವಾಗಿದೆ.

ತನ್ನ ಗೋಸುಂಬೆತನದ ವ್ಯಕ್ತಿತ್ವದಿಂದ ಅಂದಿನ ಮಹಾರಾಜ ಕೃಷ್ಣರಾಜ ಒಡೆಯರ ಕೃಪಾಕಟಾಕ್ಷಕ್ಕೆ ಒಳಗಾಗಿದ್ದ ಅಮೀಲನೂ ರಾಮಣರಾಯನ ಭ್ರಷ್ಟಚಾರ ಮತ್ತು ಸುಲಿಗೆಯ ವರ್ತನೆಗಳಿಂದ ಅಂದು ಚಾಮರಾಜನಗರದಲ್ಲಿ ಬಲಿಷ್ಠರಾಗಿದ್ದ ಎರಡು ಕೋಮುಗಳ ನಡುವೆ ಜಾತಿ ಸಂಘರ್ಷ ಉಂಟಾಗುತ್ತದೆ. ಅಮೀಲನಾದ ಈತನ ಹೆಂಡತಿಗಿದ್ದ ಹಣದ ವ್ಯಾಮೋಹದಿಂದ ಅಂದು ಆ ಸೀಮೆಯಲ್ಲಿದ್ದ ಮೇಲು ಸಕ್ಕರೆಯವರು ಮತ್ತು ಪರಿವಾರದವರು ಎಂಬ ಎರಡು ಜಾತಿಯ ಒಕ್ಕಲಿಗರಿಂದ ಲಂಚ ಪಡೆದು ಅವರ ನಡುವೆ ಇದ್ದ ಮದುವೆ ಗಂಡು-ಹೆಣ್ಣಿನ ಮೆರವಣಿಗೆಯ ವಿವಾದವನ್ನು ಬಗೆಹರಿಸದೆ ಅವರ ನಡುವೆ ಜಾತಿಯ ಘರ್ಷಣೆ ಸಂಭವಿಸಲು ಕಾರಣನಾಗುತ್ತಾನೆ. ಈ ಸಂಗತಿಯು ಅಂದಿನ ರಾಜತ್ವದ ಅಪ್ರಬುದ್ಧತೆ ಹಾಗೂ ಅವರ ಕೈಗೊಂಬೆಯಂತಿದ್ದ ಅಮೀಲ ಮೊದಲಾದ ಅಧಿಕಾರಿಗಳ ಭ್ರಷ್ಟಾಚಾರ ಮತ್ತು ಸ್ವಾರ್ಥ ನಡಾವಳಿ, ವಿನಾಃ ಕಾರಣ ಹುಟ್ಟಿಕೊಳ್ಳುವ ಜಾತಿ ಸಂಘರ್ಷ, ಅಮಾಯಕರ ಶೋಷಣೆ ಮೊದಲಾದ ಅಂಶಗಳ ಬಗ್ಗೆ ಕನ್ನಡಿ ಹಿಡಿದಂತಿದೆ.

ಈ ಕಾದಂಬರಿಯಲ್ಲಿ ಅಭಿವ್ಯಕ್ತಗೊಂಡಿರುವ ಮತ್ತೊಂದು ಅಪೂರ್ವ ಸಂಗತಿಯೆಂದರೆ ಈ ಪ್ರಾಂತ್ಯದ ಅಂದಿನ ಸಮಾಜದಲ್ಲಿ ಆಚರಣೆಯಲ್ಲಿದ್ದ ಮಾಯ, ಮಾಟ, ಮಂತ್ರ ಮೊದಲಾದ ನಂಬಿಕೆಗಳು ಮತ್ತು ಆ ನೆಪದಲ್ಲಿ ನಡೆಯುವ ಸ್ತ್ರೀಯ ಶೋಷಣೆಯ ಚಿತ್ರ ನೆನೆದರೆ ಇಂದಿಗೂ ದಿಗ್ಭ್ರಾಂತಗೊಳಿಸುತ್ತದೆ. ಈ ಪ್ರಸಂಗ ನಡೆಯುವುದು ಸಹ ಮುಮ್ಮಡಿ ಕೃಷ್ಣರಾಜ ಒಡೆಯರ ಕಾಲದಲ್ಲಿ ಅವರ ಕೃಪೆಗೆ ಪಾತ್ರನಾಗಿದ್ದ ಸದಾಶಿವ ದೀಕ್ಷಿತನ ಮನೆಯಲ್ಲಿ ಇವನ ಹಿರಿಯ ಹೆಂಡತಿಯ ಮಗ ಮಹದೇವನ ಹೆಂಡತಿಯೇ ಸಾಧ್ವಿ

ಸೀತೆ. ದೇವಾಲಯದ ಬಳಿಯೇ ಇದ್ದ ಅರುಂದಮ್ಮನ ಸಮಾಧಿಗೆ ನಿತ್ಯ ಪೂಜೆಗೆಂದು ಹೋಗಿ ಬರುತ್ತಿದ್ದ ಸೀತೆಯ ಮೇಲೆ ಪೂಜಾರಿಯ ವಕ್ರದೃಷ್ಟಿ ಬಿತ್ತು. ಅದಕ್ಕೆ ದೂಪ ಹಾಕುವಂತೆ ಶಕುನಿ ಬುದ್ಧಿಯ ನಾರಪ್ಪಯ್ಯನ ಮಾತುಗಳು ಅವನ ಕೆಟ್ಟ ಆಸೆಗೆ ಒತ್ತಾಸೆಯಾದವು. ಆದರೆ ಪೂಜಾರಿಯ ಯಾವ ಆಮಿಷಕ್ಕೂ ಸೀತೆ ಒಳಗಾಗದೆ ಇದ್ದುದು ಅವನ ಮನಸ್ಸಿನಲ್ಲಿದ್ದ ಕಾಮಕ್ಕೆ ಕ್ರೋಧವನ್ನೂ ಬೆರೆಸಿತು. ಕಡೆಗೆ ಸೀತೆಯ ಮೇಲೆ ಮಾಟಮಂತ್ರಗಳ ಪ್ರಯೋಗ ನಡೆಯಿತು. ಸೀತೆ ಹಲವು ದಿನಗಳು ಮಾತುಕತೆ ಇಲ್ಲದೆ ಮಲಗಿದಳು. ಯಾವ ಔಷಧಿಗೂ ಅವಳ ವ್ಯಾಧಿ ತಹಬಂದಿಗೆ ಬರಲಿಲ್ಲ. ಕೊನೆಗೊಂದು ದಿನ ಕಣ್ಣುಮುಚ್ಚಿದಳು. ಆದರೆ ಆಯಸ್ಸು ಮುಗಿದಿರಲಿಲ್ಲ. ಶವಕ್ಕೆ ಅಗ್ನಿಸಂಸ್ಕಾರವಾದ ಮೇಲೆ ಹಸಿಕಟ್ಟಿಗೆ ನಿಧಾನವಾಗಿ ಹತ್ತಿಕೊಳ್ಳುವುದೆಂದು ಬಂಧುಗಳು ಮನೆಗೆ ಹೋದರು. ಆ ಕಾಲದಲ್ಲಿ ಸ್ಮಶಾನದ ಸಮೀಪದಲ್ಲೇ ಕೊಯಮತ್ತೂರು ಪ್ರಾಂತ್ಯಕ್ಕೆ ಹೋಗುವ ಹಾದಿಯಲ್ಲಿ ಭಟಜಿಯೊಬ್ಬನು ಆತನ ಗೆಳೆಯನೊಂದಿಗೆ ಬರುತ್ತಿದ್ದನು. ಭಟಜಿ ಮಂತ್ರವಿದ್ಯೆಯಲ್ಲಿ ನುರಿತವನು. ಚಿತೆಯ ಮೇಲಿದ್ದ ಕಳೇಬರಹಕ್ಕೆ ಪ್ರಾಣವಿದೆ ಎಂದರಿತು ಭಟಜಿ ಮಾಟ ಪರಿಹಾರಕ ಶಕ್ತಿಗೆ ಒಳಗಾದ ಮಂತ್ರಗಳನ್ನು ಜಪಿಸಿ ಸೀತೆಯನ್ನು ಮೇಲೇಳುವಂತೆ ಮಾಡಿದನು. ಮಂತ್ರಶಕ್ತಿಯನ್ನು ಅರಿತಿದ್ದ ಭಟಜಿ ಅದನ್ನು ಬೆಂಕಿಯಲ್ಲಿ ಹಾಕಿಸಿ ಅಪ್ಪಾಜಿಯ ಹಲ್ಲುಗಳನ್ನೆಲ್ಲ ಉದುರಿಸಿ ಮುಂದೆ ಯಾರಿಗೂ ಅವನಿಂದ ಕೇಡಾಗಬಹುದಾದ ಅವಕಾಶವನ್ನು ತಪ್ಪಿಸಿದನು. ಸೀತೆಯನ್ನು ಕಂಡ ಮನೆಯ ಜನಕ್ಕೆ ಆನಂದಭಾಷ್ಪ ಸುರಿಯಿತು. ಕಳ್ಳರ ಕೂಟದ ಕಿರಿಯ ಸದಸ್ಯನಾದ ಅಮಾಸೆ ಸರ್ಕಾರದವರ ಕೈಗೆ ಸಿಕ್ಕಿದ ಮೇಲೆ ಗುಟ್ಟೆಲ್ಲಾ ಬಯಲಾಯಿತು. ಅಮಾಸೆಯೊಬ್ಬನ ಹೊರತು ಇಡೀ ಗುಂಪು ಸೆರೆಮನೆಗೆ ಹೋಗಬೇಕಾಯಿತು. ಉಪಾದ್ರಿಗೂ ಪೂಜಾರಿಗೂ ತಕ್ಕ ಶಿಕ್ಷೆಯಾಯಿತು.

ಒಟ್ಟಿನಲ್ಲಿ ಮಾಡಿದುಣ್ಣೋ ಮಾಹಾರಾಯ, ಕಾದಂಬರಿಯಲ್ಲಿ ಬರುವ ಈ ಎರಡು ಪ್ರಸಂಗಗಳು ಚಾಮರಾಜನಗರದ ಪ್ರಾಂತ್ಯದವು. ಮೊದಲನೆಯದು ಪಟ್ಟಣದಲ್ಲಿ ನಡೆದರೆ ಎರಡನೆಯದು ಸಂಜವಾಡಿಯಲ್ಲಿ ನಡೆಯುತ್ತದೆ. ಲಂಚಕೋರರು ಅವರಿಂದುಂಟಾಗುವ ಪ್ರಮಾದಗಳು; ಗ್ರಾಮಗಳಲ್ಲಿನ ಕಕ್ಷಿಗಳು, ಅದರ ದೋಷಗಳು; ಮೈಸೂರು ಮುಮ್ಮಡಿ ಕೃಷ್ಣರಾಜ ಪ್ರಭುವಿನ ಆಸ್ಥಾನ, ಅವರ ಮಹತ್ತರವಾದ ಔದಾರ್ಯ; ಆಸ್ಥಾನದ ನಕಲಿ; ಹೇಳಿದ್ದನೆಲ್ಲಾ ನಂಬುವ ಗ್ರಾಮವಾಸಿಗಳು; ಪತಿವ್ರತಾ ಚರಿತ್ರೆ; ಸಹಗಮನ; ಗ್ರಾಮಗಳ ಕೊಳಚೆ; ಅತ್ತೆ-ಸೊಸೆಯರ ಪರಸ್ಪರ ಕಿರುಕುಳ; ಪಾತಿವ್ರತ್ಯವನ್ನು ಭಂಗ ಮಾಡಲು ನಡೆಸಿದ ಅತಿಹೇಯವಾದ ಪ್ರಯತ್ನ; ಸ್ಮಶಾನದಲ್ಲಿ ನಡೆದ ಅತಿ ಭಯಂಕರವಾದ ವಿಷಯ; ಒಬ್ಬ ಮಹಾಮಂತ್ರವಾದಿ ಮಾಡಿ ಅದ್ಭುತ ಕಾರ್ಯ ಮತ್ತು ಅವನ ಪಾರಮಾರ್ಥಿಕತೆ ಮೊದಲಾದ ಅಂಶಗಳು ಈ ಕಾದಂಬರಿಯ ನೀತಿಯ ಸಾರಾಂಶಗಳಾಗಿದ್ದು ಇದಕ್ಕೆ ಪೂರಕವಾಗಿ ಈ ಜಿಲ್ಲೆಯ ಕೊಳ್ಳೇಗಾಲ ತಾಲೂಕು ಮಾಟ-ಮಂತ್ರ ವಿದ್ಯೆಯಲ್ಲಿ ಇಂದಿಗೂ ಕರ್ನಾಟಕದಲ್ಲಿ ಜನಪ್ರಿಯವಾಗಿದೆ. ಈ ಅಂಶಗಳೆಲ್ಲವೂ ತಾಲೂಕಿನ ಅಂದಿನ ಸಮಾಜದ ಸಾಂಸ್ಕೃತಿಕ ಚರಿತ್ರೆಯ ಪ್ರತಿಬಿಂಬವಾಗಿದೆ ಎನ್ನಬಹುದು.

## ಸಮಕಾಲೀನ ಕಾಲಘಟ್ಟದ ಸಾಮಾಜಿಕ ಅಧ್ಯಯನ

ಜಾಗತೀಕರಣ, ಔದ್ಯೋಗೀಕರಣ ಮತ್ತು ಖಾಸಗೀಕರಣದ ಇಂದಿನ ಪ್ರಪಂಚ ಹೊಸ ಹೊಸ ಅನ್ವೇಷಣೆಗಳಿಂದ, ಅವಿಷ್ಕಾರಗಳಿಂದ, ಸಂಶೋಧನೆಗಳಿಂದ ನಿರಂತರವಾಗಿ ಬದಲಾವಣೆ ಹೊಂದುತ್ತಿದೆ. ಗಡಿ ಪ್ರದೇಶವಾದ ಚಾಮರಾಜನಗರ ತಾಲೂಕು ಸಹ ಈ ಬದಲಾವಣೆಯನ್ನು ಪಡೆದುಕೊಳ್ಳುತ್ತಿದೆ. ಎಲ್ಲಾ ವಲಯಗಳಲ್ಲೂ ಅಭಿವೃದ್ಧಿಯ ಪಥದಲ್ಲಿರುವ ಈ ತಾಲೂಕು ಹಳೆಯ ಸಂಪ್ರದಾಯ, ನಂಬಿಕೆ, ಆಚರಣೆ, ರೂಢಿಯೊಂದಿಗೆ ಹೊಸನಾಗರೀಕತೆಯ ಪ್ರಪಂಚಕ್ಕೆ ಹೊರಳುತ್ತಿದೆ. ವರ್ಷವರ್ಷಕ್ಕೂ ಇಲ್ಲಿನ ವಿದ್ಯಾವಂತರ ಸಂಖ್ಯೆ ಹೆಚ್ಚಾಗುತ್ತಿದೆ. ಜನ ನಾಗರೀಕರಾಗುತ್ತಿದ್ದಾರೆ. ಗಡಿಯ ಸೋಲಿಗರಾದಿಯಾಗಿ ಈ ಪ್ರದೇಶದ ಜನರ ಮೂಢನಂಬಿಕೆ, ಅಜ್ಞಾನ ಮತ್ತು ಅಂಧ ಧಾರ್ಮಿಕ ಆಚರಣೆಗಳು ಕಡಿಮೆಯಾಗುತ್ತಿದ್ದು, ಜನ ರಾಜಕೀಯ ಮತ್ತು ಧಾರ್ಮಿಕವಾಗಿ ಇಂದು ಹೆಚ್ಚು ಜಾಗೃತರಾಗಿದ್ದಾರೆ.

ಆಚಾರ-ವಿಚಾರಗಳಲ್ಲಿ, ಉಡುಗೆ-ತೊಡುಗೆ-ಅಡುಗೆಗಳಲ್ಲಿ, ಗೃಹ ವಸತಿಗಳಲ್ಲಿ ಧಾರ್ಮಿಕ ಮತ್ತು ಸಾಮಾಜಿಕ ಬದುಕಿನಲ್ಲಿ, ಬೇಸಾಯ ಮಾಡುವ ವಿಧಾನಗಳಲ್ಲಿ ಬದಲಾವಣೆಯನ್ನು ಹೊಂದುತ್ತಿದ್ದಾರೆ. ಹೆಚ್ಚು ಜನ ಶಿಕ್ಷಣ ಪಡೆದುಕೊಂಡಿರುವುದರಿಂದ ದ್ವೇಷ, ಹೊಟ್ಟೆಕಿಚ್ಚು, ಮತ್ಸರ ಮುಂತಾದವುಗಳನ್ನು ಬಿಟ್ಟು ಪ್ರೀತಿ, ಅನುಕಂಪ, ಸಹಕಾರ, ಸೌಹಾರ್ದತೆ, ಸೋದರತ್ವ ಎಲ್ಲಾ ಸಮೂಹಗಳಲ್ಲೂ ಕಂಡುಬಂದು ಯಾವುದೇ ವಿಧವಾದ ಜನಾಂಗೀಯ ಕಲಹಗಳಿಗೆ ಎಡೆಯಿಲ್ಲದೆ ಸಾಮರಸ್ಯದ ಜೀವನ ನಡೆಸುತ್ತಿದ್ದಾರೆ.

ನಗರ ಪ್ರದೇಶಗಳಲ್ಲಿ ಕೆಲಸದ ಅವಕಾಶಗಳು ಹೆಚ್ಚಿರುವುದರಿಂದ ಹಳ್ಳಿಗಳಿಂದ ಯುವಕರು ಹಾಗೂ ಮಧ್ಯಮ ವಯಸ್ಕರನ್ನು ಆಕರ್ಷಿಸಿ ಅವರು ಹಳ್ಳಿಗಳನ್ನು ತೊರೆಯುವಂತೆ ಮಾಡಿವೆ. ಹಿಂದೆ ಊರು ಬಿಟ್ಟು ಹೊರಗೆ ಯಾವುದೇ ಕೆಲಸಕ್ಕೆ ಹೋಗದ ಜನ ಇಂದು ಸಣ್ಣ ಕೆಲಸಕ್ಕೂ ರಾಜ್ಯ-ಹೊರರಾಜ್ಯ ಅಂತರರಾಷ್ಟ್ರೀಯ ಮಟ್ಟಕ್ಕೂ ಉದ್ಯೋಗಕ್ಕಾಗಿ ಹೊರಡುತ್ತಿದ್ದಾರೆ.

ಇತ್ತೀಚೆಗೆ ಹೊಸಮಾದರಿಯ ಮನೆಗಳನ್ನು ಕಟ್ಟುವ ಪ್ರವೃತ್ತಿ ಕಂಡುಬರುತ್ತಿದೆ. ಆಹಾರ ಸೇವನೆಯಲ್ಲಿ ಹೆಚ್ಚಾಗಿ ಗೋಧಿ, ಅಕ್ಕಿ ಬಳಸುತ್ತಿದ್ದಾರೆ. ಮಕ್ಕಳ ಭವಿಷ್ಯ ದೃಷ್ಟಿಯಿಂದ ಉತ್ತಮ ಶಿಕ್ಷಣ ಕೊಡಿಸುವುದು, ಎಲ್.ಐ.ಸಿ.ಪಾಲಿಸಿ ಮಾಡಿಸುವುದು, ಅವರ ಜನ್ಮ ದಿನಕ್ಕೆ ಕೇಕ್ ಕತ್ತರಿಸುವುದು, ಪ್ರಾಪ್ತ ವಯಸ್ಸಿನಲ್ಲಿ ಮದುವೆ ಮಾಡುವುದು ಇವೆಲ್ಲ ಜನರ ಬದುಕಿನ ರೀತಿಯ ಬದಲಾವಣೆಗೆ ನಿದರ್ಶನಗಳಾಗಿವೆ.

ಗ್ರಾಮಗಳಲ್ಲಿ ಅಂಚೆ ಕಛೇರಿ, ಬ್ಯಾಂಕ್, ಹೆರಿಗೆ ಆಸ್ಪತ್ರೆ, ಪಶುಚಿಕಿತ್ಸಾ ಕೇಂದ್ರ, ಅಂಗನವಾಡಿ, ಇಂಗ್ಲೀಷ್ ಕಾನ್ವೆಂಟ್, ಉರ್ದುಶಾಲೆ, ಸಹಕಾರ ಸಂಘಗಳು, ಸ್ತ್ರೀಶಕ್ತಿ ಸಂಘಗಳು ಸ್ಥಾಪನೆಯಾಗಿದ್ದು ಇವೆಲ್ಲವೂ ಗ್ರಾಮೀಣಾಭಿವೃದ್ಧಿಗೆ ಪೂರಕವಾಗಿವೆ. ಇತ್ತೀಚೆಗೆ ಅರಣ್ಯ ಆಧಾರಿತ, ಕೈಗಾರಿಕೆಗಳು, ಕೆಮಿಕಲ್ಸ್, ಗ್ಲಾಸ್, ಸಿರಾಮಿಕ್ಸ್, ಎಲೆಕ್ಟ್ರಾನಿಕ್, ಆಟೋಮೊಬೈಲ್ ಇತ್ಯಾದಿ ಕೈಗಾರಿಕೆಗಳು ಸ್ಥಾಪನೆಯಾಗಿವೆ. ಶಿಕ್ಷಣದಲ್ಲಿ

ಇಂಜಿನಿಯರಿಂಗ್ ಕಾಲೇಜು, ಮೈಸೂರು ವಿಶ್ವವಿದ್ಯಾನಿಲಯದ ಶಾಖೆ, ಸಾರಿಗೆಯಲ್ಲಿ ಡಿಪೋ, ರೈಲ್ವೆ ಮೀಟರ್ ಗೇಜ್ ನಿಂದ ಬ್ರಾಡ್ ಗೇಜ್ ವ್ಯವಸ್ಥೆ-ಇವೆಲ್ಲವೂ ತಾಲೂಕಿನ ನಾಗಾಲೋಕದ ಅಭಿವೃದ್ಧಿ ಸಂಕೇತಗಳಾಗಿವೆ.

ತಾಲೂಕಿನ ಈ ವೈಜ್ಞಾನಿಕ ಪ್ರಗತಿಗಳು ರೈತನನ್ನು ಕೃಷಿಯಿಂದ ವಿಮುಖರನ್ನಾಗಿ ಮಾಡಿಲ್ಲ. ಪ್ರಸ್ತುತ ಬಹುಪಾಲು ಜನ ಕೃಷಿಕರಾಗಿಯೇ ಮುಂದುವರಿದಿದ್ದಾರೆ. ವ್ಯವಸಾಯ ಅಭಿವೃದ್ಧಿಯಲ್ಲಿ ಮರದಗಾಡಿ ಬದಲು ಟೈರಿನ ಗಾಡಿ, ಪವರ್, ಟಿಲ್ಲರ್, ಟ್ರಾಕ್ಟರ್ ಹಾಗೂ ವೈವಿಧ್ಯಮಯವಾದ ಕೃಷಿಪರಿಕರಗಳನ್ನು ಬಳಸಿ ಇಲ್ಲಿನ ರೈತರು ರಾಜ್ಯಕ್ಕೆ ಮಾದರಿಯಾಗಿದ್ದಾರೆ. ಇಲ್ಲಿ ಬೆಳೆಯುವ ತೆಂಗು, ಅರಿಶಿನ, ರೇಷ್ಮೆ, ತರಕಾರಿ ಬೆಳೆಗಳು ಪಕ್ಕದ ತಮಿಳುನಾಡಿನ ಈರೋಡ್ ಗೆ ಸರಬರಾಜಾಗುತ್ತಿವೆ. ಪ್ರತಿವರ್ಷವೂ ಕೃಷಿಯಲ್ಲಿ ಸಾಧನೆ ಮಾಡುವ ಪ್ರಗತಿಪರ ರೈತರು ಈ ತಾಲೂಕಿನಲ್ಲಿದ್ದಾರೆ. ಸ್ಥಳೀಯ ಬೀಜೋತ್ಪಾದನೆಯಲ್ಲಿ ಮಾದರಿಯಾಗಿರುವ ದಿವಗಂತ ರೈತಮುಖಂಡ ಎಂ.ಡಿ.ನಂಜುಂಡಸ್ವಾಮಿಯವರ 'ಅಮೃತಭೂಮಿ' - ಈ ತಾಲೂಕಿನಲ್ಲಿದೆ. ಹೀಗೆ ಎಲ್ಲಾ ವಲಯಗಳಲ್ಲಿಯೂ ಪ್ರಸ್ತುತಾ ಚಾಮರಾಜನಗರ ತಾಲೂಕು ಪರಿವರ್ತನೆಯ ಹಾದಿಯ್ಲಲಿದೆ, ಈ ತಾಲೂಕಿನ ಸಾಮಾಜಿಕ ಜೀವನವನ್ನು ಕುಟುಂಬ ವ್ಯವಸ್ಥೆ, ಜಾತಿವ್ಯವಸ್ಥೆ, ಔದ್ಯೋಗಿಕ ವ್ಯವಸ್ಥೆ ಮತ್ತು ಆಡಳಿತ ವ್ಯವಸ್ಥೆ ಎಂದು ಈ ಕ್ರಮದಲ್ಲಿ ಗುರುತಿಸಲು ಪ್ರಯತ್ನಿಸಲಾಗಿದೆ.

**ಕೌಟುಂಬಿಕ ವ್ಯವಸ್ಥೆ**

ಸಮಾಜದ ಒಂದು ಮುಖ್ಯ ಘಟಕವೆಂದರೆ ಕುಟುಂಬ. ಅದು ತನ್ನ ಸದಸ್ಯರಿಗೆ ಭೌತಿಕ, ದೈಹಿಕ ಮತ್ತು ನೈತಿಕ ಆಧಾರ ಒದಗಿಸುವ ಸಂಸ್ಥೆಯಾಗಿದೆ. ಅಲ್ಲದೆ ತನ್ನ ಸದಸ್ಯರ ಸರ್ವತೋಮುಖ ಬೆಳವಣಿಗೆ ಕುಟುಂಬದ ಪ್ರಮುಖ ಕರ್ತವ್ಯವಾಗಿದೆ. ಸಾಮಾಜಿಕ ವಿಜ್ಞಾನಿಗಳಾದ ಮೆಕೈವರ್ ಮತ್ತ ಪೇಜ್ ರವರ ಪ್ರಕಾರ ಕುಟುಂಬ ಎಂದರೆ ''ಲೈಂಗಿಕ ಸಂಬಂಧದಿಂದ ಸ್ಪಷ್ಟಪಡಿಸಲ್ಪಟ್ಟ, ಸಾಕಷ್ಟು ಖಚಿತವಾದ, ಮಕ್ಕಳನ್ನು ಪಡೆಯಲು, ಪೋಷಿಸಲು ಅವಕಾಶ ಮಾಡಿಕೊಡುವಂತಹ ಒಂದು ಸಾಮಾಜಿಕ ವ್ಯವಸ್ಥೆ'' ಎಂದು ವ್ಯಾಖ್ಯಾನಿಸಿದ್ದಾರೆ.[೨] ಒಟ್ಟಿನಲ್ಲಿ ಕುಟುಂಬವು ಸಮಾಜದ ಮೂಲಭೂತ ಮತ್ತು ಶಕ್ತಿಶಾಲಿಯಾದ ಘಟಕವಾಗಿದೆ.

ಕುಟುಂಬಗಳನ್ನು ಅವುಗಳ ಲಕ್ಷಣ-ಸ್ವರೂಪಗಳ ಆಧಾರದ ಮೇಲೆ ಹಲವು ವಿಧಗಳಾಗಿ ವಿಂಗಡಿಸಿ ದ್ದಾರೆ. ಕುಟುಂಬದ ಜವಾಬ್ದಾರಿಯೂ ತಂದೆ ಅಥವಾ ಪುರುಷರಿಂದ ನಿರ್ವಹಿಸಲ್ಪಟ್ಟಿದ್ದರೆ ಅದು ಪಿತೃ ಪ್ರಧಾನ ಕುಟುಂಬವೆನಿಸುತ್ತದೆ. ತಾಯಿ ಅಥವಾ ಮಹಿಳೆಯರಿಂದ ನಿರ್ವಹಿಸಲ್ಪಟ್ಟರೆ ಅದು ಮಾತೃ ಪ್ರಧಾನ ಕುಟುಂಬ ಪದ್ಧತಿಯೆನಿಸಿಕೊಳ್ಳುತ್ತದೆ. ಚಾಮರಾಜನಗರ ತಾಲೂಕಿನಲ್ಲಿ ಪಿತೃ ಪ್ರಧಾನ ಕುಟುಂಬ ಪದ್ಧತಿಯೇ

ಪ್ರಧಾನವಾಗಿದೆ(ಕೆಲವು ಬುಡಕಟ್ಟು ಜನಾಂಗ ಹೊರತುಪಡಿಸಿ). ಹಾಗೆಯೇ ಕುಟುಂಬ ಸದಸ್ಯರ ತಲೆಮಾರಿನ ಆಧಾರದ ಮೇಲೆ ಅವಿಭಕ್ತ ಕುಟುಂಬ, ವಿಭಕ್ತ ಕುಟುಂಬಗಳೆಂದು ವಿಂಗಡಿಸಿಕೊಳ್ಳಬಹುದು. ಅವಿಭಕ್ತ ಕುಟುಂಬದವರು ಕನಿಷ್ಠ ಮೂರು ತಲೆಮಾರಿನವರು ಒಂದೇ ಮನೆಯಲ್ಲಿ ವಾಸಿಸುತ್ತಾರೆ. ಅಲ್ಲದೆ ಕುಟುಂಬದ ಸದಸ್ಯರು ಹೆಚ್ಚಿನ ಸಂಖ್ಯೆಯಲ್ಲಿರುತ್ತಾರೆ. ವಿಭಕ್ತ ಕುಟುಂಬದವರು ಗರಿಷ್ಠ ಎರಡು ತಲೆಮಾರಿನವರು ವಾಸಿಸುತ್ತಾರೆ. ಅಂದರೆ ಅಪ್ಪ ಅಮ್ಮ ಮಕ್ಕಳು ಇರುತ್ತಾರೆ. ಸ್ವಾತಂತ್ರ್ಯಾನಂತರ ಗ್ರಾಮೀಣ ಕುಟುಂಬಗಳು ಪರಿಸ್ಥಿತಿಗಳಿಗೆ ಅನುಗುಣವಾಗಿ ಬದಲಾಗುತ್ತ ನಡೆದಿವೆ. ಪಾಶ್ಚಾತ್ಯ ಸಂಸ್ಕೃತಿ, ಜಾಗತೀಕರಣ ಪ್ರಭಾವದಿಂದ "ಸಣ್ಣ ಕುಟುಂಬಗಳು ಸುಖೀ ಕುಟುಂಬಗಳು" ಎಂಬ ಭಾವನೆ ಜನರಲ್ಲಿ ಮೂಡಿ ಅವಿಭಕ್ತ ಕುಟುಂಬಗಳು ಗ್ರಾಮೀಣಮಟ್ಟದಲ್ಲಲ್ಲದೆ ಬುಡಕಟ್ಟು ಜನಾಂಗದವರಲ್ಲೂ ಕಡಿಮೆಯಾಗುತ್ತಿವೆ.

ಅವಿಭಕ್ತ ಕುಟುಂಬ ಜೀವನ ವ್ಯವಸ್ಥೆ ಭಾರತೀಯ ಕುಟುಂಬ ಜೀವನದ ಆದರ್ಶವಾಗಿತ್ತು. ಇಂದು ಅದರ ಶಿಥಿಲತೆಗೆ ಹಲವು ಕಾರಣಗಳು ಇದ್ದು ಅವುಗಳಲ್ಲಿ ಪಾಶ್ಚಾತ್ಯ ನಾಗರೀಕತೆಯಿಂದ ನಾವು ಪ್ರಭಾವಿತರಾಗಿರುವುದು. ಕುಟುಂಬದ ಕಲಹ, ದಾಂಪತ್ಯ ಸಮಸ್ಯೆ, ದಾರಿತಪ್ಪಿದ ಮಕ್ಕಳು ಮುಂತಾದ ಅನಿಷ್ಟಗಳು ಒಂದು ಕಡೆಯಾದರೆ, ಪಾಶ್ಚಾತ್ಯ ಜೀವನ ಶೈಲಿಯಿಂದ ದಾರಿ ತಪ್ಪಿ ನಡೆಯುತ್ತಿರುವಾಗ ನಾವು ಅದರಿಂದ ಪ್ರಭಾವಿತರಾಗದೆ ನಮ್ಮ ಅವಿಭಕ್ತ ಕುಟುಂಬ ವ್ಯವಸ್ಥೆಯನ್ನು ಬಲಪಡಿಸಿಕೊಳ್ಳುವುದು ಬಲು ತ್ರಾಸದಾಯಕ ಕೆಲಸವಾಗಿದೆ.

ಪ್ರಸ್ತುತ ಚಾಮರಾಜನಗರ ತಾಲೂಕಿನ ಎಲ್ಲಾ ಜಾತಿ-ಜನಾಂಗವನ್ನು ಸಮೀಕ್ಷಿಸಿದಾಗ ಅವಿಭಕ್ತ ಕುಟುಂಬಗಳಿಗಿಂತ ವಿಭಕ್ತ ಕುಟುಂಭಗಳ ಸಂಖ್ಯೆಯೇ ಹೆಚ್ಚಿನದಾಗಿದೆ. ಬ್ರಾಹ್ಮಣ, ಲಿಂಗಾಯಿತ, ಉಪ್ಪಾರ, ನಾಯಕ, ಮುಸ್ಲಿಂ ಮೊದಲಾದ ಜನಾಂಗದವರಲ್ಲಿ ವಿಭಕ್ತ ಕುಟುಂಬಗಳು ಹೆಚ್ಚಿದ್ದರೆ, ವಿಶ್ವಕರ್ಮ, ಕ್ಷೌರಿಕರು, ಮೇದರು, ಜಾಡಮಾಲಿಗಳು, ಸೋಲಿಗ, ಬಡಗಿ ಇತ್ಯಾದಿ ಜನಾಂಗಗಳಲ್ಲಿ ಇಂದು ಸಹ ಅವಿಭಕ್ತ ಕುಟುಂಬಗಳನ್ನು ಹೆಚ್ಚಿನ ಸಂಖ್ಯೆಯಲ್ಲಿ ನೋಡಬಹುದು.

ಇಲ್ಲಿಯ ಕುಟುಂಬ ವ್ಯವಸ್ಥೆಯು ವೈಯಕ್ತಿಕ ನೆಲೆಗಟ್ಟಿನಿಂದ ಕೂಡಿದೆ. ನಗರ ಮತ್ತು ಗ್ರಾಮೀಣ ಜನರ ದಿನನಿತ್ಯದ ಬದುಕಿಗೆ ಬೇಕಾಗಿರುವ ಊಟ, ಉಡುಗೆ, ತೊಡುಗೆ, ಕೌಟುಂಬಿಕ ಬಾಂಧವ್ಯ, ಆಸ್ತಿ ಹಂಚಿಕೆ ವಿಧಾನಗಳನ್ನು ಇಲ್ಲಿ ಗಮನಿಸಲಾಗಿದೆ. ಇಡೀ ಚಾಮರಾಜನಗರ ತಾಲೂಕಿನ ಪಟ್ಟಣ ಮತ್ತು ಗ್ರಾಮಾಂತರ ಪ್ರದೇಶಗಳ ಕುಟುಂಬಗಳ ಸದಸ್ಯರಲ್ಲಿ ಒಂದೇ ರೀತಿಯ ಊಟೋಪಚಾರದ ಅಭಿರುಚಿ ಮತ್ತು ಉಡುಗೆ-ತೊಡಗೆಗಳ ಹವ್ಯಾಸ ಇರುವುದಿಲ್ಲ. ಈ ಹಿನ್ನೆಲೆಯಲ್ಲಿ ಚಾಮರಾಜನಗರ ತಾಲೂಕಿನ ಕುಟುಂಬ ಮಟ್ಟದಲ್ಲಿ ಕಂಡುಬರುವ ಊಟೋಪಚಾರ, ಉಡುಗೆ-ತೊಡುಗೆಗಳನ್ನು ಸಂಕ್ಷಿಪ್ತವಾಗಿ ಪರಿಚಯಿಸಲಾಗಿದೆ.

**ಊಟೋಪಚಾರ**

ಅಪ್ಪಟ ಜನಪದ ಸಂಸ್ಕೃತಿಯ ನೆಲೆಗಟ್ಟಿನಲ್ಲಿ ನಿಂತ ಈ ತಾಲೂಕಿನ ಊಟೋಪಚಾರ ಪದ್ಧತಿಯಲ್ಲಿ ವೈವಿಧ್ಯತೆಯನ್ನು ಕಾಣಬಹುದು. ಇವರ ಊಟೋಪಚಾರಗಳನ್ನು ಎರಡು ವಿಧಗಳಾಗಿ ವಿಂಗಡಿಸಬಹುದಾಗಿದ್ದು ಅವುಗಳೆಂದರೆ ಸಸ್ಯಹಾರಿ ಊಟಗಳು ಮತ್ತು ಮಾಂಸಹಾರಿ ಊಟಗಳು. ಅಲ್ಲದೆ ವಿಶೇಷ ದಿನಗಳ ಊಟೋಪಚಾರಗಳು ಬೇರೆಯಾಗಿರುತ್ತವೆ.

**ಸಸ್ಯಹಾರಿ ಊಟಗಳು**

ಚಾಮರಾಜನಗರ ತಾಲೂಕು ಎಲ್ಲಾ ಜನಾಂಗದವರು ಸಸ್ಯಹಾರ ಊಟವನ್ನು ಮಾಡುವವರಾಗಿದ್ದಾರೆ. ಇಲ್ಲಿ ಬಡವರು ಮತ್ತು ಶ್ರೀಮಂತರು ಎಂಬ ಎರಡು ವರ್ಗದ ಜನರು ಕಾಣಬರುತ್ತಾರೆ. ಆರ್ಥಿಕವಾಗಿ ಸದೃಢವಾಗಿರುವ ಶ್ರೀಮಂತ ಕುಟುಂಬದವರು ಸಾಂಪ್ರದಾಯಿಕ ಆಹಾರ ಪದ್ಧತಿಯೊಂದಿಗೆ ಆಧುನಿಕ ಆಹಾರ ಪದ್ಧತಿಯನ್ನು ರೂಡಿಸಿಕೊಂಡಿದ್ದಾರೆ. ದೋಸೆ, ಇಡ್ಲಿ, ವಡೆ, ರಾಗಿರೊಟ್ಟಿ, ಅಕ್ಕಿರೊಟ್ಟಿ, ಉಪ್ಪಿಟ್ಟು ಮುಂತಾದವುಗಳ ಜೊತೆಗೆ ಚಿತ್ರಾನ್ನ, ಪುಳಿವಗರೆ, ವಾಂಗೀಬಾತ್, ಕೇಸರಿಬಾತ್, ಟೋಮೊಟೋ ಬಾತ್, ತರಕಾರಿಬಾತ್, ಪೊಂಗಲ್, ಪರೋಟ ಮುಂತಾದವು ಬೆಳಗಿನ ತಿಂಡಿ ಉಪಚಾರವಾಗಿವೆ. ಆದರೆ ಬಡವರು, ತರಕಾರಿಬಾತ್, ಪೊಂಗಲ್, ಪರೋಟ ಮುಂತಾದವು ಬೆಳಗಿನ ತಿಂಡಿ ಉಪಹಾರವಾಗಿವೆ. ಆದರೆ ಬಡವರು, ಕಾರ್ಮಿಕರ ಮನೆಯಲ್ಲಿ ತಂಗಳನ್ನ, ಮುದ್ದೆ, ಉಪ್ಪೆಸರಿನಕಾರ, ಮಜ್ಜಿಗೆ, ಜೊತೆಯಲ್ಲಿ ರಾಗಿಮುದ್ದೆ, ಅನ್ನದ ಊಟವೂ ಇರುತ್ತದೆ. ಮಧ್ಯಾಹ್ನ ಹಾಗೂ ರಾತ್ರಿಯ ವೇಳೆಯಲ್ಲಿ ಊಟಕ್ಕೆ ಸಾಮಾನ್ಯವಾಗಿ ರಾಗಿ ಮುದ್ದೆ, ಅನ್ನದ ಜೊತೆಗೆ ಹುರುಳಿಕಟ್ಟು, ಬೇಳೆಕಟ್ಟು, ಅವರೆಕಾಳುಸಾರು, ತಡಗುಣಿ, ಅಲಸಂದೆಕಾಳು ಸಾರು ವಿವಿಧ ಬಗೆಯ ತರಕಾರಿಗಳಾದ ಬೀನಿಸ್, ಗೆಡ್ಡೆಕೋಸು, ಎಲೆಕೋಸು, ಬದನೆಕಾಯಿ, ಹೀರೇಕಾಯಿ, ನುಗ್ಗೇಕಾಯಿ, ಕುಂಬಳಕಾಯಿ, ಕ್ಯಾರೆಟ್, ಸೀಮೆಬದನೆಕಾಯಿ ಮುಂತಾದ ತರಕಾರಿಗಳನ್ನು ಹಾಕಿ ಸಾರನ್ನು ಸಿದ್ಧಪಡಿಸುತ್ತಾರೆ.

ಅಲ್ಲದೆ ನುಗ್ಗೆ ಸೊಪ್ಪು, ಕೀರೆಸೊಪ್ಪು, ಬಸಳೆಸೊಪ್ಪು, ಸಬ್ಬಸಿಗೆ, ಅರಿವೆ ಮೊದಲಾದ ಹಲವು ಬೆರಕೆಸೊಪ್ಪುಗಳನ್ನು ಹಾಕಿ ಉಪ್ಪುಸಾರು, ಮರಸೊಪ್ಪು ಸಾರು ಮಾಡುತ್ತಾರೆ. ಜೊತೆಗೆ ತರಕಾರಿ ಫಲ್ಯ, ಬದಿರುಕಳ್ಳು, ಬಾಳೆದಿಂಡು, ಉಳಿಮಜ್ಜಿಗೆ, ತಿಳಿಸಾರು ಸಹ ಪ್ರಮುಖ ಸಾರುಗಳಾಗಿವೆ. ಶ್ರೀಮಂತರು ಬ್ರಾಹ್ಮಣರು ವೈಶ್ಯರ ಮನೆಯಲ್ಲಿ ಹಪ್ಪಳ ಸಂಡಿಗೆ, ನಾನಾ ರೀತಿಯ ಉಪ್ಪಿನಕಾಯಿಗಳು ಬಹಳ ಪ್ರಸಿದ್ಧವಾಗಿವೆ.

ವಿಶೇಷ ದಿನಗಳಲ್ಲಿ, ಅದರಲ್ಲೂ ಹಿಂದೂ ಸಂಪ್ರದಾಯದ ಹಬ್ಬಗಳೆಂದು, ಇಲ್ಲಿನ ಜಾತ್ರೆ ಉತ್ಸವಗಳೆಂದು, ಮದುವೆ ಮೊದಲಾದ ಶುಭಕಾರ್ಯಗಳೆಂದು ಮನೆಯ ಊಟವು ವೈವಿಧ್ಯಮವಾಗಿರುತ್ತದೆ.

ಒಬ್ಬಟ್ಟು(ಹೋಳಿಗೆ), ಕಜ್ಜಾಯ, ರವೆವುಂಡೆ, ಕೊಬ್ಬರಿ ಮಿಠಾಯಿ, ಲಾಡು, ಚೋಂದಿ, ಚಿರೋಟಿ, ವಡೆ, ಪಾಯಸ, ಚಿತ್ರಾನ್ನ, ಪುಳಿವಗರೆ, ಗೀರೈಸ್, ಹಪ್ಪಳ-ಸಂಡಿಗೆ, ಲಿಂಗಾಯತರಲ್ಲಿ ಬಾಳೆಕಾಯಿ ಅಥವಾ ಅಲಸಿನಕಾಯಿ ಹುಳಿ, ಶಾವಿಗೆ ಕೀರು ಮುಂತಾದವು ವಿಶೇಷ ತಿಂಡಿಗಳಾಗಿರುತ್ತವೆ.

ಹೊಲ-ಗದ್ದೆಗಳಲ್ಲಿ ದುಡಿಯುವವರು, ಶ್ರಮದಾಯಕವಾಗಿ ಕಾರ್ಯ ನಿರ್ವಹಿಸುವವರು, ಹಳೆಯ ತಲೆಮಾರಿನವರು ಆಧುನಿಕ ಪದ್ಧತಿಯ ಊಟಗಳನ್ನು ಬಯಸುವುದಿಲ್ಲ. ಬದಲಾಗಿ ರಾಗಿಯ ಮುದ್ದೆ ಹೆಚ್ಚು ಇಷ್ಟಪಡುತ್ತಾರೆ. ಇದು ತೋಳಿಗೆ ಬಲ-ದೇಹಕ್ಕೆ ಆರೋಗ್ಯಕ್ಕೆ ಹೆಚ್ಚಿನ ದುಡಿಮೆಗೆ ಸಹಾಯಕ ಎಂಬುದು ಅವರ ಭಾವನೆ. ಹಾಗೆಯೇ ಪಾನೀಯಗಳಲ್ಲಿ ಕಾಫಿ, ಟೀ, ಹಾಲು ಪ್ರಮುಖವಾಗಿದ್ದು, ಎಲ್ಲಾ ಜನಾಂಗಗಳ ಮನೆಗಳನ್ನು ಇವು ಹೊಕ್ಕಿವೆ. ಮನೆಗಳಲ್ಲಿ ಕುಡಿದು ಸಾಕಾಗದಿರುವವರು ಹೋಟೆಲ್ಲುಗಳಲ್ಲಿ ತಮ್ಮ ಬಯಕೆಯನ್ನು ತೃಪ್ತಿಪಡಿಸಿಕೊಳ್ಳುತ್ತಾರೆ. ಇವುಗಳ ಜೊತೆಗೆ ಬೇಸಿಗೆ ಕಾಲದಲ್ಲಿ ಬೆಲ್ಲದ ಪಾನಕ, ಸಕ್ಕರೆಯ ಷರಬತ್ತು, ಎಳನೀರು ಪಾನೀಯಗಳಾಗಿವೆ, ಇತ್ತೀಚೆಗೆ ಕೋಕೋ ಕೊಲಾ, ಮಿರಿಂಡಾ, ತಮ್ಸ್‌ಪ್ ಇತ್ಯಾದಿ ಪಾನೀಯಗಳು, ಐಸ್ ಕ್ರೀಂಗಳು ಹಳ್ಳಿಯ ಬೇಕರಿಗಳನ್ನು ತಲುಪಿವೆ.

### ಮಾಂಸಹಾರಿ ಊಟಗಳು

ಚಾಮರಾಜನಗರ ತಾಲೂಕಿನ ಬ್ರಾಹ್ಮಣ ಮತ್ತು ಲಿಂಗಾಯಿತ ವರ್ಗಗಳನ್ನು ಹೊರತುಪಡಿಸಿದರೆ ಉಳಿದೆಲ್ಲಾ ಜನಾಂಗದವರಿಗೂ ಮಾಂಸಹಾರ ಪ್ರಿಯವಾದ ಊಟ. ಇದನ್ನು ಬಾಡೂಟ, ಖಾರದ ಊಟ, ವಿಶೇಷ ಊಟ ಎಂತಲೂ ಕರೆಯುತ್ತಾರೆ. ಉಪ್ಪಲಿಗರು, ನಾಯಕರಾದಿಯಾಗಿ ಎಲ್ಲರೂ ಕುರಿ, ಕೋಳಿ, ಮೇಕೆ, ಮೀನು ಮತ್ತೆ ಕೆಲವರು ಹಂದಿ ಮತ್ತು ದನದ ಮಾಂಸವನ್ನು ಸೇವಿಸುತ್ತಾರೆ. ಹಳ್ಳಿಗಳಲ್ಲಿ ಮನೆಯ ಒಂದು ಮೂಲೆಯಲ್ಲಿ ಕೃತಕ ಒಲೆಯೊಂದನ್ನು ನಿರ್ಮಿಸಿ, ಈ ಅಡುಗೆಯನ್ನು ಮಾಡುತ್ತಾರೆ. ಹಬ್ಬ-ಹರಿದಿನ ಮಾರನೆಯ ದಿನ, ಆಪ್ತರು-ನೆಂಟರು ಬಂದ ಸಂದರ್ಭದಲ್ಲಿ ಹಾಗೂ ತಮಗೆ ಬೇಕೆನಿಸಿದ ಸಂದರ್ಭದಲ್ಲಿ ಮಾಂಸದೂಟ ಮಾಡುತ್ತಾರೆ. ಬಂದನೆಂಟರಿಷ್ಟರನ್ನು ಗರಿಷ್ಟಮಟ್ಟದಲ್ಲಿ ಸತ್ಕರಿಸುವುದೆಂದರೆ ಅವರಿಗೆ ಮಾಂಸಹಾರ ಊಟವನ್ನು ಏರ್ಪಡಿಸುವುದು ಎಂಬುದು ಇವರ ನಂಬಿಕೆಯಾಗಿದೆ. ಕೆಲವರು ಮಂಗಳವಾರ, ಮತ್ತೆ ಕೆಲವರು ಶನಿವಾರ ಮಾಂಸಸೇವನೆ ಮಾಡುವುದಿಲ್ಲ. ಮಾಂಸದೂಟ ಮಾಡಿದ ಮೇಲೆ ಸ್ನಾನ ಮಾಡಬೇಕೆಂಬ ನಂಬಿಕೆ ಇಂದು ಕಡಿಮೆಯಾಗಿದೆ.

### ಉಡುಗೆ-ತೊಡುಗೆಗಳು

ಆದಿಮಾನವ ಪ್ರಾಕೃತಿಕ ವಿಕೋಪಗಳಾದ ಮಳೆ, ಗಾಳಿ, ಚಳಿಗಳಿಂದ ರಕ್ಷಣೆ ಪಡೆಯಲು ಎಲೆ, ತೊಗಟೆ, ಚರ್ಮಗಳಿಂದ ತಯಾರಿಸಿದ ನಾರು ಮಡಿಗಳನ್ನು ಧರಿಸುತ್ತಿದ್ದ. ಕಾಲಕ್ರಮೇಣ ಆಧುನಿಕತೆ ಬೆಳೆದಂತೆ ಬಟ್ಟೆ ನೇಯುವುದನ್ನು ಕಲಿತು ಅಂದ-ಚಂದದ ಉಡುಗೆಯನ್ನು ತೊಡಲು ತೊಡಗಿದ. ಇತ್ತೀಚಿನ

ದಿನಗಳಲ್ಲಂತೂ ಉಡುಗೆ ಭೋಗದ ವಸ್ತುವಾಗಿದೆ. ಗಡಿ ತಾಲೂಕಿನ ಚಾಮರಾಜನಗರದ ಜನಸಾಮಾನ್ಯರ ಉಡುಗೆ-ತೊಡುಗೆಗಳು ಹಳೆ ಮೈಸೂರು ಪ್ರಾಂತ್ಯದ ಉಡುಗೆಗಳಿಗಿಂತ ಭಿನ್ನವಾಗಿಲ್ಲ. ಮನೆಯೊಳಗೆ ಗೃಹಕೃತ್ಯಗಳಲ್ಲಿ ತೊಡಗಿರುವ ಹಾಗೂ ಹೊರಗೆ ದುಡಿಯುವ ಮಹಿಳೆಯರೂ ಹತ್ತಿ, ನೈಲೆಕ್ಸ್ ವಾಯಿಲ್ ಇತ್ಯಾದಿ ಸೀರೆಗಳನ್ನು ಉಡುತ್ತಾರೆ. ಬೆಲೆಬಾಳುವ ರೇಷ್ಮೆ ಸೀರೆಗಳನ್ನು ಮದುವೆ, ಮುಂಜಿ ಹಬ್ಬದಿನಗಳಲ್ಲಿ ಧರಿಸುತ್ತಾರೆ.

ಬದಲಾಗುತ್ತಿರುವ ಜೀವನ ಶೈಲಿಯ ಸೆಳೆತಕ್ಕೆ ಇಲ್ಲಿನ ಮಹಿಳೆಯರು ಹೊರತಾಗಿಲ್ಲ. ಬಹುಪಾಲು ಎಲ್ಲರ ಮನೆಯಲ್ಲಿ ಚೂಡಿದಾರ ಮತ್ತ ನೈಟಿಗಳು ಪ್ರಭಾವಶಾಲಿಯಾಗಿವೆ. ಬ್ರಾಹ್ಮಣ ಸ್ತ್ರೀಯರು ಕಚ್ಚೆ ಹಾಕಿ ಸೀರೆಯನ್ನು ಉಡುತ್ತಾರೆ. ರವಿಕೆ ತೊಡುವ ಸಂಪ್ರದಾಯ ಎಲ್ಲಾ ಸ್ತ್ರೀಯರಲ್ಲಿದ್ದರು ಈ ತಾಲೂಕಿನಲ್ಲಿ ತಮಿಳುನಾಡಿನಿಂದ ಬಂದು ವಾಸವಾಗಿರುವ ವಯಸ್ಸಾದ ತಮಿಳು ಸ್ತ್ರೀಯರು, ಜಾಡಮಾಲಿಗಳು, ಮಾದಿಗ, ಮೇದ ಇತರ ಕೆಲವು ಜನಾಂಗದ ವಯಸ್ಸಾದ ಸ್ತ್ರೀಯರು ರವಿಕೆ ತೊಡುವುದಿಲ್ಲ.

ಸಾಮಾನ್ಯವಾಗಿ ಗಂಡಸರು ಅರ್ಧ ತೋಳಿನ ಅಂಗಿ, ತುಂಬು ತೋಳಿನ ಅಂಗಿ, ಮಂಡಿ ಮೇಲಿನವರೆಗೆ ಚಡ್ಡಿ, ಬಿಳಿ ಪಂಚೆ, ಬಣ್ಣದ ಲುಂಗಿ ಧರಿಸುತ್ತಾರೆ. ಹಿಂದೆ ಓದು ಬರಹ ಬರುವವರು ಮಾತ್ರ ಪ್ಯಾಂಟ್ ಧರಿಸುತ್ತಿದ್ದರು. ಇಂದ ಪ್ಯಾಂಟ್ ಧರಿಸುವವರ ಸಂಖ್ಯೆ ಹೆಚ್ಚಾಗಿದ್ದು, ಅದರಲ್ಲೂ ಯುವಕವರು ಜೀನ್ಸ್ ಪ್ಯಾಂಟಿಗೆ ಮಾರುಹೋಗಿದ್ದಾರೆ. ಹೊಲ-ಗದ್ದೆಗಳಲ್ಲಿ ದುಡಿಯುವ ಗಂಡಸರು ಬನಿಯನ್ ಮತ್ತು ನಿಕ್ಕರ್ ಧರಿಸುತ್ತಾರೆ. ವ್ಯಾಪಾರಸ್ಥರು ತುಂಬು ತೋಳಿನ ಅಂಗಿ, ಪಂಚೆ, ಲಿಂಗಿ ಧರಿಸಿದರೆ, ಪುರೋಹಿತ ವರ್ಗದವರು ಬಿಳಿ ಕಚ್ಚೆ, ಪಂಚೆ ಮತ್ತು ಮೈಮೇಲೆ ಬಿಳಿ ಅಥವಾ ಕೆಂಪಿನ(ಕಾವಿ) ಬಣ್ಣದ ಅಡ್ಡ ವಸ್ತ್ರಧರಿಸುತ್ತಾರೆ. ವಿದ್ಯಾರ್ಥಿಗಳು ತಮ್ಮ ಶಾಲೆ-ಕಾಲೇಜುಗಳು ನಿಗದಿಪಡಿಸಿದ ಸಮವಸ್ತ್ರದ ಉಡುಪುಗಳು ಹಾಗೂ ವೈವಿಧ್ಯಮಯವಾದ ಫ್ಯಾಷನ್ ಉಡುಪುಗಳನ್ನು ಧರಿಸುತ್ತಾರೆ.

ಆದಿಮಾನವ ಮರದ, ಲೋಹದ, ಶಿಲೆಯ ಆಭರಣಗಳನ್ನು ಧರಿಸಿ ಆನಂದಪಡುತ್ತಿದ್ದ. ಆಧುನಿಕ ಕಾಲದಲ್ಲಿ ಆಭರಣಗಳು ಶ್ರೀಮಂತಿಕೆಯ ಪ್ರತೀಕವಾಗಿವೆ. ವೈವಿಧ್ಯಮಯವಾದ ಆಭರಣಗಳನ್ನು ಬಡತನ ಸಿರಿತನ ಭೇದವಿಲ್ಲದೆ ಎಲ್ಲರೂ ತಂತಮ್ಮ ಅಭಿರುಚಿಗೆ ತಕ್ಕಂತೆ ಧರಿಸುತ್ತಾರೆ. ಮದುವೆಯಂತಹ ಸಂದರ್ಭಗಳಲ್ಲಿ ಅವರವರ ಆರ್ಥಿಕತೆಗನುಸಾರ ಚಿನ್ನದ ಒಡವೆಗಳನ್ನು ಕೊಂಡುಕೊಳ್ಳುವುದು ಸಾಮಾನ್ಯ, ಹಾಗೆಯೇ ಮಹಿಳೆಯರು ಧರಿಸುವ ಓಲೆ, ಬಳೆ, ಕತ್ತಿನಸರ, ಮೂಗುತಿ, ಬೆಳ್ಳಿಯ ಕಾಲುಂಗುರ ಮತ್ತು ತಾಳಿ ಇವು ಪ್ರಮುಖವೂ, ಅನಿವಾರ್ಯವೂ ಆದ ಆಭರಣಗಳು, ಇವುಗಳಲ್ಲದೆ ಓಲೆ, ಜುಮುಕಿ, ಮಾಟಿ, ಕಿವಿರಿಂಗುಗಳು, ಮುತ್ತಿನಸರ, ನೆಕ್ ಲೆಸ್, ಜಡೆಬಂಧಿ, ಜಡೆಸಾಗರ, ಬೈತಲೆಬೊಟ್ಟುಗಳು, ಸೊಂಟದ ಡಾಬು, ತೋಳುಬಂಧಿಗಳು, ಹರಳು ಉಂಗುರಗಳು, ಕಡಗ ಕೈಚೇನು, ಕಾಲ್ಗಡಗಳು, ಬೆಳ್ಳಿಯ ಗೆಜ್ಜೆಗಳು

ಹಾಗೂ ಉಡುಗೆರೆ ಹೊಂದಿಕೊಳ್ಳುವ ಕೃತಕ ಆಭರಣಗಳು ಹಾಗೂ ಇನ್ನೂ ಹೆಸರಿಗೆ ನಿಲುಕದ ಹತ್ತಾರು ವೈವಿಧ್ಯಮಯವಾದ ಆಭರಣಗಳನ್ನು ತೊಡುತ್ತಾರೆ.

ಕೊರಳ ಚೈನು, ಕೈಬೆರಳುಂಗುರ, ಬೆಳ್ಳಿಯ ಉಡುದಾರ, ವಾಚಿನ ಚೈನು, ಸಾಮಾನ್ಯವಾಗಿ ಗಂಡಸರ ತೊಡುಗೆಗಳಾಗಿವೆ. ಇತ್ತೀಚೆಗೆ ಕೊರಳ ಚೈನಿಗೆ ತಮ್ಮ ಇಷ್ಟ ದೇವರ ಚಿತ್ರವಿರುವ ಡಾಲರ್ ಹಾಕಿಸಿಕೊಳ್ಳುವ ಆಚರಣೆಗಳು ರೂಢಿಗೆ ಬಂದಿವೆ. ಇಂದು ಗಂಡಸರು ಕೈ ಕಡಗ ಧರಿಸುತ್ತಿದ್ದ ಸಂಪ್ರದಾಯ ಕಡಿಮೆಯಾಗಿದ್ದು ಅದರ ಸ್ಥಾನದಲ್ಲಿ 'ಬ್ರೇಸ್ ಲೇಟ್' ಹಾಕಿಸಿಕೊಳ್ಳುವ ಪದ್ಧತಿ ರೂಢಿಗೆ ಬಂದಿದೆ. ಇದು ಶ್ರೀಮಂತರ ದ್ಯೋತಕವಾಗಿದೆ. ಚಿಕ್ಕ ವಯಸ್ಸಿನ ಗಂಡುಮಕ್ಕಳಿಗೆ ಕಿವಿಚುಚ್ಚಿ ಕಿವಿಯ ಆಭರಣ ತೊಡಿಸುತ್ತಾರೆ. ಅಲ್ಲದೆ ಬೆರಳುಗಳಿಗೆ ಉಂಗುರ ಮತ್ತು ನಡುವಿಗೆ ಬೆಳ್ಳಿಯ ಉಡುದಾರ ಹಾಕುತ್ತಾರೆ. ಹೆಣ್ಣು ಮಕ್ಕಳಿಗೆ ಕಿವಿ ಮತ್ತು ಮೂಗು ಚುಚ್ಚುವುದು ಕಡ್ಡಾಯ. ಅವುಗಳನ್ನು ಚುಚ್ಚಿ ಆಭರಣ ಹಾಕುತ್ತಾರೆ.

ಇವುಗಳಲ್ಲದೆ ಹೆಂಗಸರು ಹಣೆ, ಕೆನ್ನೆ, ಇತ್ಯಾದಿಗಳಿಗೆ ಕುಂಕುಮ ಅರಿಶಿನ ಹಚ್ಚಿಕೊಳ್ಳುತ್ತಾರೆ. ಬ್ರಾಹ್ಮಣರಲ್ಲಿ ಶೈವ-ವೈಷ್ಣವ ಪಂಥಗಳಿಗನುಗುಣವಾಗಿ ನಾಮ, ವಿಭೂತಿ, ಮುದ್ರೆ, ಗಂದಾಕ್ಷತೆಯನ್ನು ಪುರುಷರು ಧರಿಸುತ್ತಾರೆ. ಲಿಂಗಾಯತ ಗಂಡಸರು ಮತ್ತು ಹೆಂಗಸರು ವಯಸ್ಸಿನ ತಾರತಮ್ಯವಿಲ್ಲದೆ ವಿಭೂತಿಯನ್ನು ಧರಿಸುವುದು ಸಾಮಾನ್ಯ. ವಿಧವೆಯರಿಗೆ ವಿಭೂತಿಯೇ ಆಭರಣ ಈ ಲಾಂಛನಗಳನ್ನು ಧರಿಸದೆ ಮನೆಯಿಂದ ಹೊರಹೋಗುವುದೇ ಅಶುಭ ಎನ್ನುವ ನಂಬಿಕೆ ಇವರಲ್ಲಿದ್ದಂತೆ ಕಂಡುಬರುತ್ತದೆ. ಇವರನ್ನು ಹೊರತುಪಡಿಸಿ ಉಳಿದವರೆಲ್ಲರಿಗೂ ಅರಿಶಿನ ಮತ್ತು ಕುಂಕುಮವನ್ನು ಧಾರಾಳವಾಗಿ ಬಳಸುತ್ತಾರೆ. ಆಧುನಿಕತೆಯ ಪ್ರಭಾವಕ್ಕೆ ಒಳಗಾಗಿರುವ ಹೆಂಗಸರು ಕೃತಕವಾದ ಹಣೆಬೊಟ್ಟುಗಳನ್ನು ಧರಿಸುತ್ತಾರೆ. ಅಷ್ಟೇ ಅಲ್ಲದೆ ಕಣ್ಣಿಗೆ ಕಾಡಿಗೆ ಮುಖಕ್ಕೆ ಸ್ನೋ, ಪೌಡರ್ , ಕೈ-ಕಾಲುಗಳಿಗೆ ಮೆಹಂದಿ, ಉಗುರುಗಳಿಗೆ ಉಗುರುಬಣ್ಣ ಹಚ್ಚಿಕೊಳ್ಳುತ್ತಾರೆ. ಒಟ್ಟಾರೆ ತಾಲೂಕಿನ ಸರ್ವಜನಾಂಗದವರೂ ಸೌಂದರ್ಯ ವರ್ಧಕಗಳ ಆಕರ್ಷಣೆಗೆ ಒಳಗಾಗಿರುವುದನ್ನು ಕಾಣಬಹುದು.

**ಜಾತಿವ್ಯವಸ್ಥೆ**

ಆರ್ಯರು ಭಾರತಕ್ಕೆ ಬರುವ ಮುನ್ನವೇ ಸಿಂಧು ನದಿಯ ತೀರದಲ್ಲಿ ವಾಸಮಾಡುತ್ತಿದ್ದ ಜನರಲ್ಲಿ ಬಗೆಬಗೆಯ ಕಸುಬುಗಳ ಆಧಾರದ ಮೇಲೆ ಕುಲಗಳ ಅಥವಾ ಶ್ರೇಣಿಗಳ ವಿಭಾಗಗಳಿದ್ದವೆಂಬುದು ಹರಪ್ಪ ಮೊಹೆಂಜೋದಾರೋ ಸಂಶೋಧನೆಗಳಿಂದ ವ್ಯಕ್ತವಾಗಿದೆ. ಈ ಸಂಶೋಧಕರ ಪ್ರಕಾರ ಪಂಡಿತರು ಯೋಧರು, ವ್ಯಾಪಾರಿಗಳು, ಕುಶಲ ಕಲೆಗಾರರು, ಅಂದರೆ ಗಾರೆಯವರು, ನೇಯ್ಗೆಯವರು ಅಕ್ಕಸಾಲಿಗರು ಮುಂತಾದವರು, ಉಳಿದ ಕೆಲಸಗಳನ್ನು ಮಾಡುತ್ತಿದ್ದ ಚಮ್ಮಾರರು, ಮೇದರು, ರೈತರು, ಬೆಸ್ತರು ಮೊದಲಾದ ಪಂಗಡಕ್ಕೆ ಸೇರಿದವರು ಇದ್ದರಂತೆ.[೨೮]

ಋಗ್ವೇದದಲ್ಲಿಯೂ ಜಾತಿಯ ಸ್ವರೂಪದ ಬಗೆಗೆ ಉಲ್ಲೇಖಗಳು ದೊರೆಯುತ್ತವೆ. ''ವರ್ಣಾಶ್ರಮ ವ್ಯವಸ್ಥೆಯಲ್ಲಿ ನಾಲ್ಕು ವರ್ಣಗಳನ್ನೇ ಜಾತಿಗಳೆಂದು ಕರೆದು ಬ್ರಾಹ್ಮಣರು ದೇವರ ಬಾಯಿಂದ, ಕ್ಷತ್ರಿಯರು ಭುಜದಿಂದ, ವೈಶ್ಯರು ತೊಡೆಯಿಂದ, ಶೂದ್ರರು ಪಾದದಿಂದ ಬಂದವರೆಂದು ಋಗ್ವೇದ ಹೇಳುತ್ತದೆ.'' ಇಲ್ಲಿ ಮೊದಲ ಮೂರು ವರ್ಣಗಳಿಗಿಂತ ನಾಲ್ಕನೆಯ ವರ್ಣ ಅತ್ಯಂತ ಕೀಳಾದುದು ಎಂದು ಪರಿಗಣಿಸಲ್ಪಡುತ್ತಿತ್ತು.

ಹೀಗೆ ನಮ್ಮ ದೇಶದಲ್ಲಿ ಜಾತಿ ಪದ್ಧತಿ ಬೆಳೆದದ್ದು ಕಸುಬುಗಳ ಆಧಾರದ ಮೇಲೆ, ಸಮಾಜದ ಬೇಡಿಕೆಗಳು ಹೆಚ್ಚಾಗುತ್ತಾ ಆಗುತ್ತಾ ಹೆಚ್ಚು ಹೆಚ್ಚು ಕಸುಬುಗಳ ಅಗತ್ಯ ಕಂಡುಬಂದು ಜಾತಿಗಳ ಸಂಖ್ಯೆ ಕ್ರಮೇಣ ಹೆಚ್ಚಾಗುತ್ತಾ ಬಂದಿತು. ಅನಂತರ ನಾಗರೀಕತೆ ಬೆಳೆದಂತೆ, ಜನಜೀವನ ಹೆಚ್ಚು ಸಂಕೀರ್ಣವಾದಂತೆ ಜಾತಿಗಳ ಸಂಖ್ಯೆ ಹೆಚ್ಚಾಯಿತು. ಕೌಟಿಲ್ಯನ ಅರ್ಥಶಾಸ್ತ್ರದಲ್ಲಿ ಅನೇಕ ಕಸುಬುಗಳ ಜಾತಿಗಳ ಹೆಸರು ಬರುತ್ತದೆ. ಹುಟ್ಟಿದಾಗಿನಿಂದ ಯಾವುದೇ ಒಂದು ಕಸುಬನ್ನು ಮಾಡುವ ಕುಟುಂಬದ ವ್ಯಕ್ತಿಗೆ ಬೇರೆ ಕಸುಬು ಮಾಡುವುದು ಬಹುಶಃ ಸಾಧ್ಯವಾಗುತ್ತಿರಲಿಲ್ಲ. ಇತರ ಜಾತಿಯ ಕಸುಬುಗಳನ್ನು ಕಲಿಯುವುದಕ್ಕೆ ವ್ಯವದಾನವೂ ಅವನಲ್ಲಿ ಇರಲಿಲ್ಲ. ಹಾಗಾಗಿ ಕಸುಬುಗಳನ್ನು ಆಶ್ರಯಿಸಿ ಬೆಳೆದ ಜಾತಿಗಳು ಮೊದಲಿನಿಂದಲೂ ಪರಸ್ಪರ ಪ್ರತ್ಯೇಕವಾಗಿಯೇ ಇದ್ದವು. ಕ್ರಮೇಣ ಪ್ರತಿಯೊಂದು ಜಾತಿಯೂ ತನ್ನ ಕಸುಬಿಗೆ ಅನುಗುಣವಾಗಿ ಆಚಾರ ವ್ಯವಹಾರಗಳನ್ನು, ಜೀವನ ರೀತಿಗಳನ್ನು ಬೆಳೆಸಿಕೊಂಡದ್ದರಿಂದ ಜಾತಿ-ಜಾತಿಗಳ ನಡುವೆ ಈ ಪ್ರತ್ಯೇಕವಾದ ಮನೋಭಾವ ಬೆಳೆಯತೊಡಗಿತು.

ಚಾತುರ್ವರ್ಣ ಪದ್ಧತಿಯನ್ನು ಜಾತಿ-ಪದ್ಧತಿಗೆ ಅಳವಡಿಸಿಕೊಂಡಿದ್ದು ಭಾರತದ ಸಾಮಾಜಿಕ ಇತಿಹಾಸದ ಒಂದು ವೈಶಿಷ್ಟ್ಯ. ಹೀಗೆ ಅಳವಡಿಸಿಕೊಳ್ಳುವಾಗ ಚಾತುರ್ವರ್ಣದ ತಿರುಳಾದ ಗುಣ, ಕರ್ಮದ ಆಧಾರಗಳನ್ನು ಬಿಟ್ಟು ಕೇವಲ ಈ ಚಾತುರ್ವರ್ಣದ ಹೆಸರುಗಳನ್ನು ಮಾತ್ರ ಬಳಸಿಕೊಳ್ಳಲಾಯಿತು. ಯಜ್ಞಾಯಾಗಾದಿ ಕಾರ್ಯಗಳಲ್ಲಿ ಪೌರೋಹಿತ್ಯ ಮಾಡುವವರು ಬ್ರಾಹ್ಮಣರೆಂಧು ಪರಿಣಿತರಾದರು. ರಾಜ್ಯಾಡಳಿತ ಮತ್ತು ತತ್ಸಂಬಂಧವಾದ ಕಾರ್ಯಮಾಡುವವರು ಕ್ಷತ್ರಿಯದಾರರು, ವ್ಯಾಪಾರ, ಕೃಷಿಗಳ ಮೂಲಕ ಐಶ್ವರ್ಯ ಸಂಪಾದನೆ ಮಾಡುವವರು ವೈಶ್ಯರೆನಿಸಿಕೊಂಡರು. ವ್ಯವಸಾಯ, ವ್ಯಾಪಾರಕ್ಕೆ ಸಹಾಯಕವಾದ ಉಪಕಸುಬುಗಳನ್ನು, ಸೇವಾವೃತ್ತಿಯನ್ನು ಮಾಡುವವರು ಶೂದ್ರರಾದರು. ಹೀಗೆ ಸಹಸ್ರಾರು ಜಾತಿಭೇದಗಳಿಂದ ಕೂಡಿದ ಇಡೀ ಸಮಾಜ ೪ ವರ್ಗಗಳಾಗಿ ವಿಭಜಿತವಾಯಿತು. ಇಲ್ಲಿ ವರ್ಣಧರ್ಮದ ತಿರುಳನ್ನು ಬಿಟ್ಟು ಅದರ ಹೆಸರುಗಳನ್ನು ಮಾತ್ರ ಬಳಸಿಕೊಳ್ಳಲಾಯಿತು.

ಇಂದೂ ಸಹ ಭಾರತೀಯರ ಬದುಕಿನಲ್ಲಿ ಜಾತಿವ್ಯವಸ್ಥೆ ಎಂಬುದು ಆಳವಾಗಿ ಬೇರೂರಿ ಹಾಸುಹೊಕ್ಕಾಗಿದೆ. ಹಾಗೂ ಇಲ್ಲಿನ ಧರ್ಮದ ಕಟ್ಟುಪಾಡುಗಳಿಗಿಂತಲೂ ಜಾತಿಯ ಕಟ್ಟುಪಾಡುಗಳು ಹೆಚ್ಚು ಬಿಗಿಯಾಗಿರುವುದನ್ನು ಕಾಣುತ್ತೇವೆ. ತುಂಬಾ ಸಂಕೀರ್ಣವಾದ ಈ ಜಾತಿವ್ಯವಸ್ಥೆ ಎಂಬುದು ಹೇಗೆ

ಹುಟ್ಟಿಕೊಂಡಿತೆಂಬುದರ ಬಗೆಗೆ ಸಾಕಷ್ಟು ಚರ್ಚೆಗಳು, ಸಂವಾದಗಳು ನಡೆದಿದ್ದರೂ ಮೊದಲು ಧನಿ ಎತ್ತಿದವರು ಭಗವಾನ್ ಬುದ್ಧ.[10] ಆತನ ಜಾತಿ ವಿರೋಧಿ ಧೋರಣೆಯಿಂದ ಜಾತಿಪದ್ಧತಿಯು ಒಮ್ಮೆ ಹಿಮ್ಮೆಟ್ಟಿದಂತಾದರೂ ಮುಂದೆ ಅದು ಪ್ರಬಲವಾಗುತ್ತಾ ಹೋಯಿತು. ಕರ್ನಾಟಕದಲ್ಲಿ ಬಸವಣ್ಣ, ಮಹಾರಾಷ್ಟ್ರದಲ್ಲಿ ಜ್ಞಾನೇಶ್ವರ ಮತ್ತು ನಾಮದೇವ, ಗುಜರಾತಿನಲ್ಲಿ ನರ್ಸಿಮೆಹ್ತ, ಬಂಗಾಳದಲ್ಲಿ ಚೈತನ್ಯ, ಉತ್ತರ ಪ್ರದೇಶದಲ್ಲಿ ಕಬೀರ ಮೊದಲಾದವರೆಲ್ಲರೂ ಜಾತಿಪದ್ಧತಿಯನ್ನು ಹೊಡೆದೋಡಿಸಲು ಹೋರಾಡಿದ್ದಾರೆ. ಆದರೆ ಬಹುತೇಕವಾಗಿ ಇವರ ಪ್ರಯತ್ನಗಳೆಲ್ಲಾ ವಿಫಲವಾಗಿವೆ. ಮಾತ್ರವಲ್ಲ, ಅನೇಕರ ಹೋರಾಟಗಳು ಹೊಸಜಾತಿಯ ಸೃಷ್ಟಿಗೂ ಕಾರಣವಾಗಿವೆ.

ಕಳೆದ ಶತಮಾನದಲ್ಲಿ ಇಂಗ್ಲಿಷ್ ವಿದ್ಯಾಭ್ಯಾಸ ಪಡೆದ ರಾಜರಾಮ್ ಮೋಹನರಾಯ, ದಯಾನಂದ ಸರಸ್ವತಿ, ವಿವೇಕಾನಂದ ಮೊದಲಾದ ಆಧುನಿಕರು ಜಾತಿಪದ್ಧತಿಯು ನಾಶವಾಗುವ ಕನಸು ಕಂಡಿದ್ದರು. ಪ್ರಜಾಪ್ರಭುತ್ವವು ಒಂದು ಮಹಾನ್ ಸಂಘಟನೆಯಾಗಿ ಬೆಳೆದು ಜಾತಿ ಪದ್ಧತಿಯ ಬೇರುಗಳನ್ನು ಸಡಿಲಗೊಳಿಸುತ್ತದೆ ಎಂದೂ ಹಲವರು ಭಾವಿಸಿದ್ದುಂಟು. ಆದರೆ ಇಂಥ ಊಹೆಗಳೆಲ್ಲಾ ಸುಳ್ಳಾಗಿ ಜಾತಿ ಪದ್ಧತಿಯು ಇಂದಿಗೂ ಪೆಡಂಭೂತವಾಗಿ ಉಳಿದುಕೊಂಡು ಬಂದಿದೆ. ಹಾಗೂ ನಮ್ಮ ದೇಶದ ಒಂದು ಪ್ರಮುಖ ಸಮಸ್ಯೆಯಾಗಿಯೇ ಉಳಿದುಕೊಂಡು ಬಂದಿದೆ.

ಆದರೂ ಶತ ಶತಮಾನಗಳಿಮದ ಮೇಲ್ವರ್ಗದವರ ಶೋಷಣೆಗೆ ಒಳಗಾಗಿದ್ದ ಕೆಳವರ್ಗದವರ ಜೀವನ ಶೈಲಿಯು ಇಂದಿನ ಸರ್ಕಾರಗಳ ಆರ್ಥಿಕ ಸವಲತ್ತುಗಳ ಸವಲತ್ತುಗಳಿಂದ ಸ್ವಲ್ಪಮಟ್ಟಿಗೆ ಸುಧಾರಣೆಯಾಗಿದೆ. ಈ ಹಿನ್ನೆಲೆಯಲ್ಲಿ ಚಾಮರಾಜನಗರ ತಾಲೂಕಿನಲ್ಲಿ ಅಸ್ತಿತ್ವದಲ್ಲಿರುವ ಜಾತಿ ವ್ಯವಸ್ಥೆಯನ್ನು ಪರಿಶೀಲಿಸಬೇಕಾಗಿದೆ.

### ಲಿಂಗಾಯಿತರು ಅಥವಾ ವೀರಶೈವ

ಚಾಮರಾಜನಗರ ತಾಲೂಕಿನಲ್ಲಿ ವೀರಶೈವರು ಅಥವಾ ಲಿಂಗಾಯಿತರು ಗಣನೀಯ ಪ್ರಮಾಣ ದಲ್ಲಿದ್ದಾರೆ. ಅವರು ಪ್ರಮುಖವಾಗಿ ಬೇಸಾಯಗಾರರಾಗಿದ್ದಾರೆ. ವಾಣಿಜ್ಯ ವ್ಯವಹಾರಗಳಲ್ಲೂ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ಅವರನ್ನು ಲಿಂಗಾಯಿತರು, ಲಿಂಗವಂತರು, ಶಿವಚಾರದವರು ಎಂಬ ಹೆಸರೂಗಳಿಂದಲೂ ಕರೆಯಲಾಗುತ್ತದೆ.

ಇವರು ಪಟ್ಟಣ ಆದಿಯಾಗಿ ಸಾಮಾನ್ಯವಾಗಿ ತಾಲೂಕಿನ ಎಲ್ಲಾ ಗ್ರಾಮಗಳಲ್ಲೂ ನೆಲೆಸಿದ್ದಾರೆ. ಇವರಲ್ಲಿ ಲಿಂಗಾಯಿತ ಶೆಟ್ಟರು, ಬಳೆಗಾರ ಶೆಟ್ಟರು, ಬಣಜಿಗರು, ಸಾಧು ಒಕ್ಕಲಿನವರು, ತಮ್ಮಡಿಗಳು (ಶಿವಾರ್ಚಕರು), ಅಯ್ನೋರು, ಜಂಗಮರು ಮತ್ತು ಆರಾಧ್ಯರು ಮೊದಲಾದ ಉಪಜಾತಿಗಳನ್ನು ಕಾಣುತ್ತೇವೆ. ನೆರೆಯ ಹಾಸನ ಮತ್ತು ಮಂಡ್ಯ ಜಿಲ್ಲೆಗಳಲ್ಲಿ 'ಗೌಡರು' ಎಂದರೆ 'ಒಕ್ಕಲಿಗ' ಜನಾಂಗವೆಂದೇ ಪ್ರಸಿದ್ಧಿ. ಆದರೆ ಚಾಮರಾಜನಗರ ತಾಲೂಕಿನಲ್ಲಿ 'ಗೌಡರು' ಎಂದರೆ 'ಲಿಂಗಾಯತರು' - ಎಂದೇ ಅರ್ಥ. ಅಲ್ಲದೆ

ಇವರಲ್ಲಿ ಜಂಗಮರು, ಪಂಚಸಾಲಿಗಳು ಅಥವಾ ಪಂಚಾಚಾರ್ಯರು, ಬಣಜಿಗರು, ಸಾದರು, ಗೌಡರು ಮತ್ತು ನೊಣಬರು ಎಂಬ ವಿಭಾಗಗಳಿವೆ. ಜಂಗಮರು ಪುರೋಹಿತ ವರ್ಗದವರಾಗಿದ್ದು ಆ ಸಮುದಾಯದಲ್ಲಿ ಶ್ರೇಷ್ಠರೆನಿಸಿದ್ದಾರೆ. ಪಂಚಪೀಠ ಪರಂಪರೆಯೆಂದು ಕರೆಯಲಾಗುವ ಐದು ಪುರಾತನ ಮಠ ಪರಂಪರೆಗೆ ಸೇರಿದವರು ಪಂಚಮಸಾಲಿಗಳೆನಿಸಿದ್ದಾರೆ. ಬಣಜಿಗ ಲಿಂಗಾಯಿತರು ಸಾಂಪ್ರದಾಯಿಕ ವ್ಯಾಪಾರದಲ್ಲಿ ತೊಡಗಿದ್ದಾರೆ. ಗೌಡರು ಹಾಗೂ ನೊಣಬರು ಮುಂತಾದವರೆಲ್ಲ ಕೃಷಿಕರು, ಕೂಲಿಕಾರರು ಆಗಿ ತಮ್ಮ ಬದುಕನ್ನು ರೂಪಿಸಿಕೊಂಡಿದ್ದಾರೆ. ಇವರಲ್ಲಿ ಪಂಚಾಚಾರ್ಯ ಮತ್ತು ವೀರಶೈವರೆಂಬ ಒಳಪಂಗಡಗಳು ಏನೇ ಇದ್ದರೂ ಇವರ ಆಚಾರ-ವಿಚಾರಗಳು ಬಹುತೇಕ ಸಮಾನವಾಗಿವೆ.

ಇವರು ಮೂಲತಃ ಶಿವೋಪಾಸಕರು. ಇಷ್ಟಲಿಂಗ ಶಿವನ ಪ್ರತಿರೂಪವೆಂದು ಭಾವಿಸಿ ತಮ್ಮ ದೇಹದಲ್ಲಿ ಧರಿಸಿರುವ ಇವರು ಶರಣಸತಿ-ಲಿಂಗಪತಿ ತತ್ವ ಸಿದ್ಧಾಂತಕ್ಕೆ ಅಂಟಿಕೊಂಡವರು. ಹಾಗೂ ಬಸವಣ್ಣನವರ ಕಾಯಕ ನಿಷ್ಠೆ ಮೂಲಕ ಭಗವಂತನನ್ನು ಕಾಣಲು ಹೊರಟವರು. ಬಸವಣ್ಣನವರ ತತ್ವ ಸಿದ್ಧಾಂತಗಳನ್ನು ಪಾಲಿಸುವ ಇವರು ಇಷ್ಟಲಿಂಗಾರಾಧಕರು. ಇವರ ಆಚರಣೆಗಳಲ್ಲಿ ಅಷ್ಟಾವರಣ, ಪಂಚಾಚಾರ ಮತ್ತು ಷಟಸ್ಥಲಗಳು ಮುಖ್ಯವಾಗಿ ಕಂಡುಬರುತ್ತವೆ. ನೆರೆಯ ಮಹದೇಶ್ವರ ಬೆಟ್ಟ, ಕೊಂಗಳ್ಳಿ ಮಲ್ಲಪ್ಪನ ಬೆಟ್ಟ, ಹೆಗಡದೇವನಕೋಟೆ ತಾಲೂಕಿನ ಭೀಮನಕೊಲ್ಲಿ ಮಹದೇಶ್ವರ ದೇವಸ್ಥಾನ, ನಂಜನಗೂಡಿನ ನಂಜುಂಡೇಶ್ವರ, ಮುಡುಕುತೊರೆ ಮಲ್ಲಿಕಾರ್ಜುನ, ಚೆನ್ನಪ್ಪನಪುರದ ಗುಡ್ಡದ ವೀರಭದ್ರೇಶ್ವರ ಮೊದಲಾದ ದೇವಸ್ಥಾನಗಳು ಇವರ ಮನೆ ದೇವರುಗಳಾಗಿದ್ದು ಆ ದೇವಸ್ಥಾನಗಳನ್ನು ಯಾತ್ರಸ್ಥಳಗಳಂತೆ ಪರಿಭಾವಿಸಿ ದರ್ಶನಕ್ಕೆ ಹೋಗಿಬರುತ್ತಾರೆ. ಅಲ್ಲದೆ ನಂಜನಗೂಡು ತಾಲೂಕಿನ ಶ್ರೀ ಗುರುಮಲ್ಲೇಶ್ವರ ಮಠ, ಸುತ್ತೂರು ಮಠ, ಮಲ್ಲನಮೂಲೆಯ ಮಠ, ಸೋಮಹಳ್ಳಿ ಮಠ ಮತ್ತು ತುಮಕೂರಿನ ಸಿದ್ಧಗಂಗಾಮಠ ಮೊದಲಾದವುಗಳಿಗೆ ತೆರಳಿ ಧಾರ್ಮಿಕ ಚಟುವಟಿಕೆಗಳಲ್ಲಿ ಭಾಗವಹಿಸುತ್ತಾರೆ. ಅಲ್ಲಿಯ ಮಠಾಧೀಶರನ್ನು ತಮ್ಮ ಧರ್ಮಗುರುಗಳೆಂದು ಸ್ವೀಕರಿಸಿದ್ದಾರೆ. ಜಂಗಮರ ಸೇವೆಯಲ್ಲಿ ಅಪಾರ ನಿಷ್ಠೆಯುಳ್ಳ ಇವರು ಮನೆಯಲ್ಲಿ ನಡೆಯುವ ಎಲ್ಲಾ ಶುಭ ಅಥವಾ ಅಶುಭ ಕಾರ್ಯಗಳನ್ನು ಇವರ ಉಪಸ್ಥಿತಿಯಲ್ಲಿಯೇ ನಡೆಸುತ್ತಾರೆ ಹಾಗೂ ಇವರ ಪಾದಪೂಜೆ ಮಾಡುವ ಪರಿಪಾಠವೂ ವೀರಶೈವರಲ್ಲಿದೆ.

ವೀರಶೈವರ ಆಚಾರ-ವಿಚಾರಗಳು, ಊಟೋಪಚಾರಗಳು, ಧಾರ್ಮಿಕ ಮತ್ತು ಸಾಮಾಜಿಕ ಆಚರಣೆ ಗಳು, ವೈದಿಕರಿಗಿಂತ ಭಿನ್ನವಾಗಿರುವುದನ್ನು ಕಾಣಬಹುದು. ವೀರಶೈವ ಜೀವನ ಕ್ರಮದಲ್ಲಿ ಪ್ರತಿಯೊಂದು ಕುಟುಂಬದಲ್ಲೂ, ಹುಟ್ಟಿನಿಂದ ಸಾಯುವವರೆಗಿನ ಆಚರಣೆಯಲ್ಲಿ ಸ್ಥಳೀಯ ಗುರುಗಳ ಸಂಪರ್ಕ ಅಥವಾ ಒಡನಾಟ ಇದ್ದೇ ಇರುತ್ತದೆ. ವೀರಶೈವರಲ್ಲಿ ಮಗು ಹುಟ್ಟಿದ ಹದಿಮೂರನೆಯ ದಿವಸಕ್ಕೆ ಸೂತಕ ಕಳೆದು, ಶಿವಮಂತ್ರವನ್ನು ಕಿವಿಯಲ್ಲಿ ಜಪಿಸಿ, ಇಷ್ಟಲಿಂಗವನ್ನು ಕೊರಳಿಗೆ ಕಟ್ಟುವ ಸಂಪ್ರದಾಯವಿದೆ. ಕೆಲವು ಸಲ

ಮದುವೆಯ ಸಂದರ್ಭದಲ್ಲಿ ಅಥವಾ ಅದಕ್ಕೆ ಮುಂಚಿತವಾಗಿ ಲಿಂಗದೀಕ್ಷೆ ಕೊಡುವ ಪರಿಪಾಠ ಬೆಳೆದು ಬಂದಿದೆ. ಗಂಡಿನ ವಿಚಾರದಲ್ಲಿ ಮಡಿವಂತಿಕೆಯನ್ನು ಹೇರದ ಈ ಸಮಾಜ ಹೆಣ್ಣಿನ ವಿಚಾರದಲ್ಲಿ 'ಮುಟ್ಟಿನಂತಹ' ಸಂದರ್ಭದಲ್ಲಿ ದೇವಾಲಯಗಳಿಗೆ ಹೋಗುವುದು, ಶುಭ ಕಾರ್ಯಗಳಲ್ಲಿ ಭಾಗವಹಿಸುವುದಕ್ಕೆ ಮಡಿವಂತಿಕೆಯನ್ನು ಹೇರಿದೆ. ಆದರೆ ಬದಲಾಗುತ್ತಿರುವ ಜೀವನ ಶೈಲಿಯ ಈ ದಿನಗಳಲ್ಲಿ ಈ ಸಂಪ್ರದಾಯ ಗಳು ಶಿಥಿಲವಾಗಿವೆ.

ವೀರಶೈವರಲ್ಲಿ ವಿವಾಹದ ಆಚರಣೆಗಳು ಶ್ರೀಮಂತ ಸಂಸ್ಕೃತಿಯ ಸಂಪ್ರದಾಯಗಳಾಗಿ ಆಚರಣೆಗೊಳ್ಳುತ್ತಿವೆ. ಮದುವೆಯ ಸಂದರ್ಭದಲ್ಲಿ ವೈದಿಕರ ಹೋಮಾಚರಣೆಯ ಬದಲಿಗೆ ಪಂಚ ಕಳಶಗಳನ್ನು ಪೂಜಿಸುವುದು ಹಾಗೂ ಈ ಸಂದರ್ಭದಲ್ಲಿ ವೀರಭದ್ರನ ಒಕ್ಕಲಿನವರು ದೇವಸ್ಥಾನದಿಂದ ವೀರಭದ್ರನ ಹಲಗೆಯನ್ನು ತಂದು ಪೂಜಿಸುವುದು ರೂಢಿಯಲ್ಲಿದೆ. ಹಿಂದೂ ವಿವಾಹ ಪದ್ಧತಿಯಲ್ಲಿರುವಂತೆ ಸೋದರತ್ತೆಯ ಮಗಳು ಅಥವಾ ಸ್ವಂತ ಅಕ್ಕನ ಮಗಳನ್ನು ಮದುವೆಯಾಗುವ ಪದ್ಧತಿ ಲಿಂಗಾಯತರಲ್ಲಿದೆ. ಕೆಲವರು ದೂರದ ಹೊಸ ಸಂಬಂಧಗಳಲ್ಲಿ ವಿವಾಹ ಮಾಡುತ್ತಾರೆ. ಎರಡು ಕಡೆಯವರು ಒಪ್ಪಿ ಶಾಸ್ತ್ರ ಜಾತಕಗಳು ಸರಿಹೊಂದಿ ಬಂದರೆ ಪರಸ್ಪರ ಒಪ್ಪಿಗೆ ಅಥವಾ 'ಒಪ್ಪೀಳ್ಯೆ' ಮಾಡುತ್ತಾರೆ. ಅಯ್ನೋರುಗಳ ಪೌರೋಹಿತ್ಯದಲ್ಲಿ ಸಾಮಾನ್ಯವಾಗಿ ವಿವಾಹ ಕಾರ್ಯಗಳು ನಡೆಯುತ್ತವೆ. ಈ ಸಮುದಾಯದಲ್ಲಿ ವಿಧವೆ-ವಿವಾಹಗಳು, ಬಾಲ್ಯವಿವಾಹಗಳು ತೀರಾ ಅಪರೂಪ.

ಸಾವಿನ ಆಚರಣೆಗಳು ಇವರಲ್ಲಿ ಬಹಳ ವಿಶೇಷತೆಯಿಂದ ಕೂಡಿವೆ. ಸತ್ತವರನ್ನು ಹೂಳುವಾಗ ಅವರ ಬಾಯಲ್ಲಿ ಇಷ್ಟಲಿಂಗವನ್ನಿಟ್ಟು ಹೂಳುವುದು ರೂಢಿ. ವಯಸ್ಸಾದವರು ಹಾಗೂ ಶಿವದೀಕ್ಷೆ ಪಡೆದವರಿಗೆ ಕ್ರಿಯಾಸಮಾಧಿ ಮಾಡುವ ಪದ್ಧತಿಯುಂಟು. ಸಹಜ ಸಾವನ್ನು ಹೊರತುಪಡಿಸಿ ಅಸಹಜ ಸಾವಿನ ಪ್ರಕರಣಗಳಲ್ಲಿ ಸುಡುವ ಸಂದರ್ಭಗಳು ಇವೆ. ಮಠ-ಮಾನ್ಯಗಳಲ್ಲಿ ಧರ್ಮಗುರುಗಳು ಲಿಂಗೈಕ್ಯರಾದರೆ, ಮಠದ ಒಳಗಡೆಯೇ ಶವಸಂಸ್ಕಾರ ಮಾಡುವ ಸಂಪ್ರದಾಯವಿದೆ. ಇದನ್ನು 'ಗದ್ದಿಗೆ' ಎಂದು ಕರೆಯುತ್ತಾರೆ. ಈ ಗದ್ದಿಗೆಗಳಿಗೆ ಪ್ರತಿನಿತ್ಯ ಮತ್ತು ವಿಶೇಷ ದಿನಗಳಲ್ಲಿ ಪೂಜಾ ಕಾರ್ಯಗಳು ಮಠಗಳಲ್ಲಿ ನಡೆಯುತ್ತವೆ.

ಲಿಂಗಾಯಿತ ಸಮುದಾಯದವರು ಶಿವನಿಗೆ ಸಂಬಂಧಿಸಿದ ಎಲ್ಲಾ ಹಬ್ಬಗಳನ್ನು ಆಚರಿಸುತ್ತಾರೆ. ಯುಗಾದಿ, ಬಸವಜಯಂತಿ, ಮಹಾಶಿವರಾತ್ರಿ, ದೀಪಾವಳಿ-ಸಂಕ್ರಾಂತಿ, ಗೌರಿ-ಗಣೇಶ, ವಿಜಯದಶಮಿ, ನಾಗರಪಂಚಮಿ, ಷಷ್ಠಿ ಹಬ್ಬಗಳನ್ನು ಸಾಮಾನ್ಯವಾಗಿ ಆಚರಿಸುತ್ತಾರೆ. ಇಲ್ಲಿ ಮಡೆ ಉಯ್ಯುವ ಪದ್ಧತಿಯಿದೆ. ಮತ್ತೆ ಕೆಲವೆಡೆ ದೇವರಿಗೆ ಪೂಜೆ ಪುರಸ್ಕಾರಗಳನ್ನು ಸಲ್ಲಿಸುತ್ತಾರೆ. ಇವರಿಗೆ ಸೋಮವಾರ, ಶುಕ್ರವಾರಗಳು ಪವಿತ್ರವಾದ ಶುಭ ದಿವಸಗಳಾಗಿವೆ

## ಬ್ರಾಹ್ಮಣರು

ಚಾಮರಾಜನಗರ ತಾಲೂಕಿನಲ್ಲಿರುವ ಮತ್ತೊಂದು ಪ್ರಮುಖ ಜನ ಸಮುದಾಯ ಬ್ರಾಹ್ಮಣರದ್ದು. ಚಾಮರಾಜನಗರ ಪಟ್ಟಣದಲ್ಲಿ ಇವರ ವಾಸ್ತವ್ಯ ಅಧಿಕ ಸಂಖ್ಯೆಯಲ್ಲಿದೆ. ಉಳಿದಂತೆ ತಾಲೂಕಿನ ಪ್ರಮುಖ ಊರುಗಳಲ್ಲಿ, ಹೋಬಳಿ ಕೇಂದ್ರಗಳಲ್ಲಿ ಇವರು ಕಂಡುಬರುತ್ತಾರೆ. ಒಂದೇ ಒಂದು ಬ್ರಾಹ್ಮಣ ಕುಟುಂಬ ಗಳಿಲ್ಲದ ಊರುಗಳು ಚಾಮರಾಜನಗರ ತಾಲೂಕಿನಲ್ಲಿ ಅಧಿಕ ಸಂಖ್ಯೆಯಲ್ಲಿವೆ(ಮಲೆಯೂರು, ಹೊಂಗನೂರು, ಹೊಮ್ಮ, ಮೋಳೆ). ಪ್ರಾಚೀನ ಕಾಲದಲ್ಲಿ ವಿದ್ಯೆಯನ್ನು ಏಕಸ್ವಾಮ್ಯದಲ್ಲಿಟ್ಟುಕೊಂಡಿದ್ದ ಇವರು ಸಮಾಜವನ್ನು ತಮ್ಮ ಹಿಡಿತದಲ್ಲಿಟ್ಟುಕೊಂಡಿದ್ದವರು. ಪ್ರಸ್ತುತ ಸಂದರ್ಭದಲ್ಲೂ ಇವರ ಸಾಮಾಜಿಕ ಸ್ಥಾನಮಾನಗಳಿಗೆ ಯಾವ ಭಂಗವೂ ಬಂದಂತೆ ಕಾಣುವುದಿಲ್ಲ. ಇಂದು ಹೆಚ್ಚಿನ ಬ್ರಾಹ್ಮಣರು ಉನ್ನತ ವಿದ್ಯಾಭ್ಯಾಸ ಪಡೆದು ಸಾಂಪ್ರದಾಯಿಕ ಪೌರೋಹಿತ್ಯ ಕೆಲಸ ಬಿಟ್ಟು ನಗರ ಪ್ರದೇಶಗಳ ಕಡೆ ವಲಸೆ ಹೋಗುತ್ತಿದ್ದಾರೆ. ಹಾಗೆಯೇ ಕೆಲವು ಕುಟುಂಬಗಳು ಕಾಲಾಂತರದಿಂದಲೂ ಈ ತಾಲೂಕಿನಲ್ಲಿ ನೆಲೆನಿಂತು ಊರಿನ ಧಾರ್ಮಿಕ ಆಚರಣೆಗಳನ್ನು ನಡೆಸಿಕೊಂಡು ಹೋಗುತ್ತಿದ್ದಾರೆ.

ಸಾಮಾನ್ಯವಾಗಿ ಎಲ್ಲಾ ಜಾತಿಗಳಲ್ಲೂ ಕಂಡುಬರುವ ಹಾಗೆ ಇವರಲ್ಲಿ 'ಗೋತ್ರ' ಹೆಚ್ಚಿನ ಮಡಿವಂತಿಕೆಯ ವಿಚಾರವಾಗಿದೆ. ಒಂದೇ ಗೋತ್ರದವರಲ್ಲಿ ವಿವಾಹ ಸಂಬಂಧಗಳು ಇಲ್ಲ. ಕಾರಣ ಒಂದೇ ಗೋತ್ರದವರು ದಾಯಾದಿಗಳೆಂಬ ಭಾವನೆ ಬಲವಾಗಿದೆ. 'ಮುಂಜಿ'ಯನ್ನು ಮಗುವಿನ ಎಂಟುವರ್ಷ ವಯಸ್ಸಿನಿಂದ ಹದಿನಾರು ವರ್ಷ ವಯಸ್ಸಿನವರೆಗೆ ನೆರವೇರಿಸುತ್ತಾರೆ. ಈ ಸಂಸ್ಕಾರಗಳು ಮುಗಿದ ಮೇಲೆ ವ್ಯಕ್ತಿ 'ದ್ವಿಜ'ನಾಗುತ್ತಾನೆ.

ಬ್ರಾಹ್ಮಣರಲ್ಲಿ ಸ್ಮಾರ್ತರು ಶಿವನನ್ನು, ಶ್ರೀ ವೈಷ್ಣವರು ವಿಷ್ಣುವನ್ನು ಆರಾಧಿಸುತ್ತಾ ಬಂದಿದ್ದಾರೆ. ಸಾಮಾನ್ಯವಾಗಿ ಶಿವನನ್ನು ಪೂಜಿಸುವ ಸ್ಮಾರ್ತರು ವೀರಶೈವರಂತೆ ಗೌರಿ-ಗಣಪತಿ, ಯುಗಾದಿ, ಶಿವರಾತ್ರಿ ಹಬ್ಬಗಳನ್ನು ಆಚರಿಸುವುದರ ಜೊತೆಗೆ ಶಂಕರಜಯಂತಿಯನ್ನು ಆಚರಿಸುತ್ತಾರೆ. ಉಳಿದಂತೆ ವೈಷ್ಣವಾಲಂಬಿಗಳಾದ ಐಯ್ಯಂಗಾರರು ಹಿಂದೂ ಧರ್ಮದ ಪ್ರಮುಖ ಹಬ್ಬಗಳೊಂದಿಗೆ ಮಾಧ್ವಜಯಂತಿ, ರಾಘವೇಂದ್ರಸ್ವಾಮಿಗಳವರ ಆರಾಧನೆ ಹಾಗೂ ಕಾರ್ತಿಕ ಮಾಸದ ಆಚರಣೆ ಮತ್ತು ಗೋಕುಲಾಷ್ಟಮಿಗಳನ್ನು ಸಂಭ್ರಮದಿಂದ ಆಚರಿಸುತ್ತಾ ಬಂದಿದ್ದಾರೆ. ಹಾಗೆಯೇ ರಾಮನವಮಿ ಹಬ್ಬವನ್ನು ವಿಜೃಂಭಣೆಯಿಂದ ಆಚರಿಸುತ್ತಾರೆ. ಈ ತಾಲೂಕಿನ ಬಹುಸಂಖ್ಯಾತ ಬ್ರಾಹ್ಮಣ ಸಮುದಾಯದವರು ವಂಶಪಾರಂಪರ್ಯವಾಗಿ ನಡೆಸಿಕೊಂಡು ಬಂದಿರುವ ಪೌರೋಹಿತ್ಯ, ಜ್ಯೋತಿಷ್ಯ ಹೇಳುವಿಕೆಯನ್ನು ಜೀವನೋಪಾಯದ ವೃತ್ತಿಯನ್ನಾಗಿ ಮಾಡಿಕೊಂಡಿದ್ದಾರೆ. ಅಲ್ಲದೆ ಕೆಲವರು ವಿರಳವಾಗಿ ವ್ಯವಸಾಯದ ಕಸುಬನ್ನು ನಿರ್ವಹಿಸುತ್ತಿದ್ದಾರೆ.

## ಜೈನರು

ಇವರು ಚಾಮರಾಜನಗರ ತಾಲೂಕಿನ ಪ್ರಾಚೀನ ಜನ ಸಮುದಾಯ. ಶಾಸನಗಳಲ್ಲಿ ಉಲ್ಲೇಖ ಗೊಂಡಿರುವಂತೆ ಜೈನಧರ್ಮ ಈ ತಾಲೂಕಿನಲ್ಲಿ ಹತ್ತನೆ ಶತಮಾನದಲ್ಲೆ ಪ್ರಜ್ವಲಮಾನವಾಗಿತ್ತು. ಹಿಂದೆ ಈ ತಾಲೂಕು ಜೈನ ಕೇಂದ್ರವಾಗಿತ್ತು. ಇಲ್ಲಿನ ಮಲೆಯೂರು, ಉಮ್ಮತ್ತೂರು, ಕುದೇರು, ಹರವೆ, ತೆರಕಣಾಂಬಿ, ಕೆಲಸಿಪುರ, ಮುಕ್ಕಡಹಳ್ಳಿ, ಕುಲಗಾಣ ಮೊದಲಾದ ಹಳ್ಳಿಗಳಲ್ಲಿ ಮತ್ತು ಚಾಮರಾಜನಗರ ಪಟ್ಟಣದಲ್ಲಿ ನೆಲೆಸಿದ್ದು ಶಾಸ್ತ್ರ-ಸಾಹಿತ್ಯ, ಕಲೆಗೆ ತಮ್ಮದೆ ಆದ ವಿಶಿಷ್ಟ ಕೊಡುಗೆಯನ್ನು ನೀಡಿದ್ದಾರೆ. ಇವರಲ್ಲಿ ಶ್ವೇತಾಂಬರ ಮತ್ತು ದಿಗಂಬರ ಎಂಬ ಎರಡು ಪಂಗಡಗಳಿದ್ದು, ಈ ತಾಲೂಕಿನಲ್ಲಿ ದಿಗಂಬರ ಪಂಥದವರು ಹೆಚ್ಚಾಗಿ ವಾಸವಾಗಿದ್ದಾರೆ. ಇತ್ತೀಚೆಗೆ ಶಿಕ್ಷಣ ಉದ್ಯೋಗಕ್ಕಾಗಿ ಬಹುಮಂದಿ ಜೈನರು ಬೇರೆ ಕಡೆಗೆ ಹೊಲಸೆ ಹೋಗುತ್ತಿದ್ದಾರೆ. ಉಳಿದಮಂದಿ ಜ್ಯೋತಿಷ್ಯ ಹೇಳುವುದು, ಬಸದಿ ಪೂಜೆ ಮಾಡುವುದು ಮೊದಲಾದ ಕೆಲಸಗಳನ್ನು ನಿರ್ವಹಿಸುತ್ತಾ ಜೀವನ ಸಾಗಿಸುತ್ತಿದ್ದಾರೆ.

ಜನನ, ಮದುವೆ, ಸಂಸ್ಕಾರಗಳು ಇವರಲ್ಲಿ ಸಾಮಾನ್ಯವಾಗಿ ಹಿಂದೂ ಸಂಪ್ರದಾಯದಂತೆ ನಡೆಯುತ್ತವೆ. ಊಟೋಪಾಚಾರಗಳಲ್ಲಿ ತನ್ನದೇ ಆದ ವೈಶಿಷ್ಟತೆಯನ್ನು ಕಾಪಾಡಿಕೊಂಡು ಬಂದಿದ್ದಾರೆ. ರಾತ್ರಿಯಾದ ಮೇಲೆ ಆಹಾರ ಸೇವನೆ ಇರಲಿಲ್ಲ. ಪಾಪ, ಪುಣ್ಯ, ನರಕ, ಸ್ವರ್ಗ, ಪುನರ್ಜನ್ಮ, ಮೋಕ್ಷ ಮುಂತಾದವುಗಳನ್ನು ನಂಬುತ್ತಾರೆ. ಪೂಜೆ, ಧ್ಯಾನ, ಉಪವಾಸ, ಸಂಯಮ ಹಾಗೂ ತಪಸ್ಸುಗಳನ್ನು ಇಂದಿಗೂ ಆಚರಣೆಯಲ್ಲಿಟ್ಟುಕೊಂಡಿದ್ದಾರೆ. ಕಾಯಾ, ವಾಚಾ, ಮನಸಾ, ಅಹಿಂಸೆ ಮೊದಲಾದ ಮಹಾವ್ರತಗಳನ್ನು ಆಚರಿಸುತ್ತಾರೆ. ಇವರು ಯಾವ ರೀತಿಯ ಕ್ರಿಮಿ, ಕೀಟಾದಿ ಜೀವಿಗಳಿಗೂ ಹಿಂಸೆ ಮಾಡುವುದಿಲ್ಲ. ತಾವು ಆಚರಿಸುವ ಹಬ್ಬಗಳ ಜೊತೆಗೆ ಹಿಂದೂಗಳು ಆಚರಿಸುವ ಹಲವು ಹಬ್ಬಗಳನ್ನು ಇವರು ಸಹ ವಿಜೃಂಭಣೆಯಿಂದ ಆಚರಿಸುತ್ತಾರೆ.

## ಉಪ್ಪಾರರು

ಉಪ್ಪಾರ, ಉಪ್ಪಲಿಗ, ಉಪವೀರ ಎಂಬ ಪರ್ಯಾಯ ನಾಮಗಳಿಂದ ಸಂಭೋಧಿಸಲ್ಪಡುವ ಉಪಾರರು ದಕ್ಷಿಣ ಭಾರತದ ಪ್ರಮುಖ ಜನಾಂಗಗಳಲ್ಲಿ ಒಂದಾಗಿದ್ದಾರೆ. ಇವರು ತಾವು ಸಗರ ವಂಶದವರೆಂದು, ಭಗೀರಥನು ತಮಗೆ ಮೂಲ ಪುರುಷನೆಂದು ಅನಾದಿಕಾಲದಿಂದಲೂ ಶ್ರದ್ಧೆಯಿಂದ ನಂಬಿಕೊಂಡು ಬಂದಿದ್ದಾರೆ. ಉಪ್ಪಾರರ ಮೂಲ ಕಸುಬು ಉಪ್ಪು ತಯಾರಿಸುವುದೇ ಆಗಿತ್ತು. ಉಪ್ಪಲಿಗ ಎಂಬ ಶಬ್ದವನ್ನು ಪರಿಶೀಲಿಸಿದರೆ ಅಲ್ಲಿರುವ ಉಪ್ಪಲಿ ಎಂಬ ಶಬ್ದಕ್ಕೆ ಚೌಳುಮಣ್ಣು ಎಂಬ ಅರ್ಥವಿದೆ. ಉಪ್ಪಲಿ+ಇಗ = ಉಪ್ಪಲಿಗ = ಚೌಳುಮಣ್ಣಿನಿಂದ ಉಪ್ಪು ತಯಾರಿಸುವವನು ಎಂಬರ್ಥ ಬರುತ್ತದೆ.

ಮೇಲುಸಕ್ಕರೆ ಶೆಟ್ಟರು, ಉಪ್ಪಲಿಗ ಶೆಟ್ಟರು, ಸಾಗರವಂಶದವರು, ಕೆರೆಯ ಬದಿಯವರೆಂದೂ ಗುರುತಿಸಿಕೊಳ್ಳುವ ಜನರು ಚಾಮರಾಜನಗರ ತಾಲೂಕಿನಲ್ಲಿ ಅಧಿಕ ಸಂಖ್ಯೆಯಲ್ಲಿದ್ದಾರೆ. ತಾಲೂಕಿನ ನಾಗವಳ್ಳಿ, ಹಂಡ್ರಕಳ್ಳಿ ಮೋಳೆ, ಮಂಗಲ, ಟಗರಪುರ ಮೋಳೆ, ತೊಳಗನಕಟ್ಟೆ, ದೊಡ್ಡ ಮೋಳೆ, ಜಾಲಹಳ್ಳಿ ಹುಂಡಿ, ಚೆನ್ನೀಪುರದ ಮೋಳೆ ಮೊದಲಾದ ಗ್ರಾಮಗಳಲ್ಲಿ ಪ್ರಬಲರಾಗಿರುವ ಇವರು ಮೂಲತಃ ಶೈವಭಕ್ತರು. ತಮ್ಮ ಕುಲದ ಹಿರಿಮೆಯನ್ನು ಪರಿಚಯಿಸಿಕೊಳ್ಳುವ ಸಂದರ್ಭದಲ್ಲಿ ಶಿವನ ಕೃಪಾಕಟಾಕ್ಷದಿಂದ ಬಂದವರೆಂದು ಹೇಳಿಕೊಳ್ಳುತ್ತಾರೆ.[೩೧] ಮತ್ತೆ ಕೆಲವರು ತಾವು 'ಭಗೀರಥ'ನ ವಂಶಸ್ಥರೆಂದೂ ಹೇಳಿಕೊಳ್ಳುವುದುಂಟು. ಅಪಾರವಾದ ಧಾರ್ಮಿಕ ಶ್ರದ್ಧೆಯುಳ್ಳ ಇವರು ಬಿಳಿಗಿರಿ ರಂಗಸ್ವಾಮಿ, ತಿರುಪತಿ ವೆಂಕಟರಮಣ, ಮಲೆಮಹದೇಶ್ವರ, ಸಿದ್ದಾಪ್ಪಾಜಿಯ ಪರಮಭಕ್ತರು, ಇವರ ಹೆಸರಿನಲ್ಲಿ ಗುಡ್ಡರನ್ನು ಬಿಡುವುದು ಇವರಲ್ಲಿ ಸಾಮಾನ್ಯ. ಇವರು ದೊಡ್ಡತಾಯಮ್ಮ, ಮಾರಮ್ಮನ ಹಬ್ಬವನ್ನು ವಿಶೇಷವಾಗಿ ಆಚರಿಸುತ್ತಾರೆ. ತಾಲೂಕಿನ ಎಲ್ಲಾ ವರ್ಗದ ಜನರ ಧಾರ್ಮಿಕ ಭಾವನೆಗಳಿಗೂ ಬೆಲೆಕೊಡುತ್ತಾ ಬಂದಿರುವ ಇವರ ಸಮನ್ವಯ ದೃಷ್ಟಿ ಮೆಚ್ಚುವಂಥದ್ದು. ಅಲ್ಲದೆ ಯುಗಾದಿ, ಶಿವರಾತ್ರಿ ಮತ್ತು ಗೌರಿ ಮೊದಲಾದ ಹಿಂದೂ ಹಬ್ಬಗಳನ್ನು ವಿಶೇಷವಾಗಿ ಆಚರಿಸುತ್ತಾರೆ.

ಮೂಲತಃ ವ್ಯಾಪಾರಸ್ಥರಾದ ಇವರು ಹಿಂದೆ ಉಪ್ಪು ತಯಾರಿಕೆ ವೃತ್ತಿಯಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದರು. ಆದರೆ ಇಂದು ಉಪ್ಪಾರರು ವ್ಯವಸಾಯ, ಕಟ್ಟಡ ಕೆಲಸ, ಕೂಲಿಕೆಲಸ, ಬೇಟೆಯಾಡುವುದು ಮುಂತಾದ ಕೃಷಿಪೂರಕ ವೃತ್ತಿಯಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ಇವರಲ್ಲಿ ಬಹುತೇಕ ಮಂದಿ ಅನಕ್ಷರಸ್ಥರಾಗಿರುವುದಲ್ಲದೆ ಆರ್ಥಿಕವಾಗಿ ಬಹಳ ಹಿಂದುಳಿದಿದ್ದಾರೆ.

ಇವರಲ್ಲಿ ಬಾಲ್ಯವಿವಾಹ ಪದ್ಧತಿ ರೂಢಿಯಲ್ಲಿದ್ದು, ಬಹಳ ಜನ ಚಿಕ್ಕಂದಿನಲ್ಲಿಯೇ ಮದುವೆ ಮಾಡುತ್ತಾರೆ. ವಿದ್ಯಾಂಕುರ ಹಾಗೂ ಭಾರತೀಯ ಜ್ಞಾನ ವಿಜ್ಞಾನ ಸಂಸ್ಥೆ ಜಂಟಿಯಾಗಿ ತಾಲೂಕಿನ ಹತ್ತು ಗ್ರಾಮಗಳ ಸಮೀಕ್ಷೆ ನಡೆಸಿ ನೀಡಿರುವ ವರದಿ ಪ್ರಕಾರ ಚಾಮರಾಜನಗರಾದ್ಯಂತ ಕಳೆದ ಐದು ವರ್ಷದ ಅವಧಿಯಲ್ಲಿ ೩೫೫ ಬಾಲ್ಯ ವಿವಾಹಗಳು ನಡೆದಿವೆ.[೩೨] ಅಲ್ಲದೆ ಇವರ ಮದುವೆ ಸಂಪ್ರದಾಯಗಳು ಬೇರೆ ವರ್ಗದವರಿಗಿಂತ ಭಿನ್ನವಾಗಿವೆ. ಅಂದರೆ ಬೇರೆ ವರ್ಗದವರ ಮದುವೆ ಹೆಣ್ಣಿನ ಮನೆಯಲ್ಲಿ ನಡೆದರೆ ಈ ವರ್ಗದವರಲ್ಲಿ ಮಾತ್ರ ಮದುವೆ ಗಂಡಿನ ಮನೆಯಲ್ಲಿ ನಡೆಯುತ್ತದೆ. ಇಲ್ಲಿ ಸ್ವತಃ ಗಂಡೇ ಹೆಣ್ಣಿಗೆ ವಧುದಕ್ಷಿಣೆ ಕೊಟ್ಟು ಮದುವೆ ಮಾಡಿಕೊಳ್ಳುವುದು ರೂಢಿಯಲ್ಲಿದೆ.[೩೩] ಇತ್ತೀಚಿನ ದಿನಗಳಲ್ಲಿ ಈ ಸಂಪ್ರದಾಯವು ಸ್ವಲ್ಪಮಟ್ಟಿಗೆ ಬದಲಾಗುತ್ತಾ ಬಂದಿದೆ. ಸಾಂಪ್ರದಾಯಿಕ ಮದುವೆಯನ್ನು ಬಯಸುವ ಇವರು ತಮ್ಮ ವರ್ಗದಲ್ಲಿಯೇ ವಿವಾಹ ಸಂಬಂಧ ಬೆಳೆಸಲು ಇಚ್ಛಿಸುವರು. ವಿಧವಾ ವಿವಾಹ, ಕೂಡಾವಳಿ ಪದ್ಧತಿಯನ್ನು ಇವರು ಪ್ರೋತ್ಸಾಹಿಸುವುದಿಲ್ಲ. ಇವರಲ್ಲಿ ಜಾತಿಸಂಘ ಅಥವಾ ನ್ಯಾಯ ಪಂಚಾಯಿತಿ

ಇದ್ದು ಕೇರಿಯ ಯಜಮಾನ ಅದರ ಮುಖ್ಯಸ್ಥನಾಗಿರುತ್ತಾನೆ. ವಿವಾದಗಳು ಸಂಭವಿಸಿದ ಸಂದರ್ಭದಲ್ಲಿ ಐದು ಜನ ಉಪ್ಪಾರ ಹಿರಿಯರನ್ನು ಒಳಗೊಂಡಂತೆ ಈ ಯಜಮಾನನನ್ನು ಆರಿಸಿರುತ್ತಾರೆ. ಈ ನ್ಯಾಯಪೀಠ ಬಲಿಷ್ಠವಾಗಿದ್ದು ಊರಿನ ಅಥವಾ ತನ್ನ ಕೇರಿಯ ನ್ಯಾಯ ತೀರ್ಮಾನವನ್ನು ಮಾಡುತ್ತಾ ಬಂದಿದೆ. ಇವರು ತೆಗೆದುಕೊಳ್ಳುವ ತೀರ್ಮಾನವು ಅಂತಿಮವಾಗಿದ್ದು ಇದಕ್ಕೆ ಕೇರಿಯ ಎಲ್ಲರೂ ಬದ್ಧರಾಗಿರುತ್ತಾರೆ.[೬೪]

## ನಾಯಕರು ಅಥವಾ ಪರಿವಾರದವರು

ನಾಯಕ ಸಮುದಾಯಕ್ಕೆ ತನ್ನದೇ ಆದ ಭವ್ಯ ಪರಂಪರೆ ಸಂಸ್ಕೃತಿ ಹಾಗೂ ಇತಿಹಾಸವಿದೆ. ಪಾಳೆಗಾರರಾಗಿ, ರಾಜರಾಗಿ, ಬಾಳಿ ಬದುಕಿ ನಾಡಿನ ಉದ್ದಗಲಕ್ಕೂ ತಮ್ಮ ಪ್ರಭುತ್ವ ಹರಡಿದ್ದಾರೆ. ಧರ್ಮ, ಶೌರ್ಯ, ಸಾಹಸ, ಪರಾಕ್ರಮಗಳಿಗೆ ಹೆಸರಾದ ವೀರರು, ಶೂರರು, ಈ ಸಮುದಾಯದಲ್ಲಿದ್ದಾರೆ. ವಿಭಿನ್ನ ಪ್ರದೇಶಗಳಲ್ಲಿ ವಿಭಿನ್ನ ಹೆಸರುಗಳಿಂದ ಕರೆಸಿಕೊಳ್ಳುವ ಈ ಸಮುದಾಯ ಮೂಲದಲ್ಲಿ ಬೇಡರು, ನಾಯಕರು ಎಂದೇ ಪ್ರಖ್ಯಾತರಾಗಿದ್ದರು, ಅನಂತರ ಗಂಗಾಮತಸ್ಥರು, ರಾಜಪರಿವಾರದವರು, ಪಾಳೆಯಪಟ್ಟಿನವರು, ವಾಲ್ಮೀಕಿನಾಯಕ, ವಾಲ್ಮೀಕಿ ಮಕ್ಕಳು, ಕನ್ನಯ್ಯನಕುಲ, ತಳವಾರ, ದೊರೆಮಕ್ಕಳು, ಪರಿವಾರ, ಕ್ಷತ್ರಿಯ, ಗುರಿಕಾರ, ಬೆಸ್ತರು ಹೀಗೆ ಹಲವು ಹೆಸರುಗಳಿಂದ ಕರೆಯಲ್ಪಡುವ ಒಂದೇ ಸಮುದಾಯದವರಾಗಿದ್ದಾರೆ. ಈ ಜನಸಮುದಾಯ ಸಾಮಾಜಿಕ ಹಾಗೂ ಆರ್ಥಿಕವಾಗಿ ಅತ್ಯಂತ ಹಿಂದುಳಿದಿದ್ದು ಭಾರತ ಮತ್ತು ಕರ್ನಾಟಕ ಸರ್ಕಾರಗಳು ಕ್ರಮವಾಗಿ ಎಸ್.ಟಿ ಮತ್ತು ಬಿ.ಟಿ.ಸವಲತ್ತುಗಳನ್ನು ನೀಡಿದೆ.

ಚಾಮರಾಜನಗರ ತಾಲೂಕಿನಲ್ಲಿ ನಾಯಕ ಜನ ಸಮುದಾಯವೂ ಹರದನಹಳ್ಳಿ, ಕೊತ್ತಲವಾಡಿ, ಹೊಂಗನೂರು, ಗೂಳಿಪುರ, ಮಸಣಾಪುರ, ನಾಗವಳ್ಳಿ, ಅರಕಲವಾಡಿ, ಚಂದಕವಾಡಿ, ಉಮ್ಮತ್ತೂರು, ಆಲೂರು, ಕನ್ನೇಗಾಲ ಮತ್ತು ಚಾಮರಾಜನಗರ ಪಟ್ಟಣ ಮೊದಲಾದ ಊರುಗಳಲ್ಲಿ ಪ್ರಬಲವಾಗಿದ್ದು, ಸಾಮಾಜಿಕ, ಆರ್ಥಿಕ, ಶೈಕ್ಷಣಿಕ, ರಾಜಕೀಯ ಹಾಗೂ ಸಾಂಸ್ಕೃತಿಕವಾಗಿ ಮುಂದುವರೆದಂತೆ ಕಂಡುಬರುತ್ತಾರೆ. ಇವರಲ್ಲಿ ಬಹುಸಂಖ್ಯಾತರು ತಮ್ಮ ಜೀವನೋಪಾಯಕ್ಕಾಗಿ ವ್ಯವಸಾಯವನ್ನು ಅವಲಂಬಿಸಿದ್ದು, ಜೊತೆಗೆ ವ್ಯಾಪಾರ, ಕೂಲಿ ಕೆಲಸ, ಬೇಟೆ, ಮರಳು ತೆಗೆಯುವ ಮತ್ತು ಮೀನುಗಾರಿಕೆಯನ್ನು ಅವಲಂಬಿಸಿದ್ದಾರೆ. ಇವರು ಪಶುಸಂಗೋಪನೆ ಕೈಗೊಂಡಿದ್ದು, ಹಸು, ಎಮ್ಮೆ, ಕುರಿ, ಮೇಕೆ, ಕೋಳಿಗಳನ್ನು ಹೆಚ್ಚಾಗಿ ಸಾಕುತ್ತಾರೆ. ಇವರಲ್ಲಿ ಅವಿಭಕ್ತ ಕುಟುಂಬ ಪದ್ಧತಿ ಹೆಚ್ಚಾಗಿ ಕಂಡುಬರುತ್ತದೆ. ಇತ್ತೀಚಿನ ದಿನಗಳಲ್ಲಿ ಯುವ ಪೀಳಿಗೆ ವಿಭಕ್ತಕುಟುಂಬ ಪದ್ಧತಿ ಅನುಸರಿಸುತ್ತಿರುವುದು ಸಾಮಾನ್ಯವಾಗಿದೆ. ಪ್ರಸ್ತುತದಲ್ಲಿ ತಾಲೂಕಿನ ನಾಯಕ ಜನಾಂಗ ಶೈಕ್ಷಣಿಕವಾಗಿ ಮುಂದುವರೆದಿರುವುದನ್ನು ಕಾಣಬಹುದು.

ಈ ಸಮುದಾಯದವರೆಲ್ಲರೂ ಒಂದೇ ಜಾತಿಯಲ್ಲಿ ಗುರುತಿಸಿಕೊಂಡರು. ಅವರವರ ಬಣಗಳಲ್ಲಿ ವ್ಯತ್ಯಾಸವಿರುವುದನ್ನು ಕಾಣಬಹುದು. ಇವರಲ್ಲಿ ಕುಲಪದ್ಧತಿಯು ಪ್ರಮುಖವಾಗಿದ್ದು, ಹಾಲುಕುಲ ಅಥವಾ

ನಾಗರಕುಲ, ಮುಳ್ಳುಕುಲ, ದಾನಕುಲ ಹೀಗೆ ಕುಲಪದ್ಧತಿಗೆ ಪ್ರಾಶಸ್ತ್ಯವನ್ನು ನೀಡುವರು. ಈ ವ್ಯತ್ಯಾಸಗಳು ಮದುವೆಯ ಸಂದರ್ಭದಲ್ಲಿ ಪ್ರಮುಖವಾದ ಪಾತ್ರವಹಿಸುತ್ತದೆ. ಸಾಮಾನ್ಯವಾಗಿ ಇವರಲ್ಲಿ ಮದುವೆಯೂ ಗಂಡಿನ ಮನೆಯಲ್ಲಿ ನಡೆಯುತ್ತದೆ. ಈ ಸಂದರ್ಭದಲ್ಲಿ ಮನೆ ದೇವರ ಸಂಬಂಧವನ್ನು ನೋಡಿ ಮದುವೆ ನಿರ್ಣಯಿಸುತ್ತಾರೆ. ಒಂದೇ ಮನೆದೇವರಾದ ಮನೆಯಲ್ಲಿ ಸಂಬಂಧ ಬೆಳೆಸುವ ಪರಿಪಾಟ ಇವರಲಿಲ್ಲ. ಬಾಲ್ಯವಿವಾಹ ಪದ್ಧತಿ ಇದ್ದರೂ ಬದಲಾಗುತ್ತಿರುವ ಜೀವನಶೈಲಿಯಿಂದಾಗಿ ಅವರ ಪ್ರಮಾಣ ಕಡಿಮೆಯಾಗುತ್ತದೆ. ಆದರೆ ಇವರಲ್ಲಿ ಕೂಡಾವಳಿಗೆ ಮುಕ್ತ ಅವಕಾಶವಿದೆ.[೬೬]

ಈ ಸಮುದಾಯದವರಲ್ಲಿ ನ್ಯಾಯ ಪಂಚಾಯಿತಿ ಅಥವಾ ಸಂಘಗಳು ಬಲವಾಗಿದ್ದು, ಒಂದೆಡೆ ಕುಳಿತು ಚರ್ಚಿಸಿ ನ್ಯಾಯ ತೀರ್ಮಾನಗಳನ್ನು ಕೊಡುವ ಸಂದರ್ಭಗಳು ಹೆಚ್ಚಿರುತ್ತವೆ. ಕ್ಲಿಷ್ಟ ಸಮಸ್ಯೆಗಳು ಎದುರಾದಾಗ ಗಡಿಮನೆಗೆ ಸೇರಿದ ಎಲ್ಲಾ ಕಟ್ಟೆಮನೆ ಯಜಮಾನರುಗಳು ಸೇರಿ ಒಂದೆಡೆ ಕುಳಿತು ಚರ್ಚಿಸಿ ಹಿರಿಯರ ಸಮ್ಮುಖದಲ್ಲಿ ನ್ಯಾಯ ತೀರ್ಮಾನಗಳನ್ನು ಮಾಡುತ್ತಾರೆ.

ಮಲೆಯ ಮಹದೇಶ್ವರ ಇವರ ಆರಾಧ್ಯದೈವ ಜೊತೆಗೆ ನಂಜನಗೂಡಿನ ನಂಜುಂಡೇಶ್ವರ, ತಿರುಪತಿಯ ವೆಂಕಟರಮಣ, ಬಿಳಿಗಿರಿ ರಂಗನಾಥ, ಮಂಟೇಸ್ವಾಮಿ, ಸಿದ್ದಪ್ಪಾಜಿ ಇವರ ಆರಾಧ್ಯ ದೈವಗಳು, ಅಲ್ಲದೆ ಚೌಡೇಶ್ವರಿ ಮತ್ತು ಮಾರಮ್ಮ ಮೊದಲಾದ ಜನಪದ ದೈವಗಳಿಗೂ ಭಕ್ತಿಶ್ರದ್ಧೆಗಳಿಂದ ನಡೆದುಕೊಳ್ಳುತ್ತಾರೆ. ಇವರಲ್ಲಿ ದೇವರಿಗೆ ಗುಡ್ಡರನ್ನು, ದಾಸರನ್ನು ಬಿಡುವ ಸಂಪ್ರದಾಯವಿದೆ. ಮಂಟೇಸ್ವಾಮಿ, ಸಿದ್ದಪ್ಪಾಜಿ ಹಾಗೂ ರಾಚಪ್ಪಾಜಿ ಊರಿನ ಕೆಲವು ವ್ಯಕ್ತಿಗಳ ಮೇಲೆ ಆವಾಹನೆಗೊಳ್ಳುವರೆಂಬ ನಂಬಿಕೆ ಇವರಲ್ಲಿದೆ. ಆ ದಿನ ವಿಶೇಷವಾದ ಭಯ-ಭಕ್ತಿಯಿಂದ ನಡೆದುಕೊಳ್ಳುತ್ತಾರೆ.

ಈ ಜನಾಂಗದವರು ದೇವರ ಗುಡ್ಡರು, ವಿವಾಹಿತರು, ಅವಿವಾಹಿತರು ಮತ್ತು ಆತ್ಮಹತ್ಯೆಗೆ ಒಳಗಾದವರ ಶವಸಂಸ್ಕಾರವನ್ನು ವಯೋಧರ್ಮಕ್ಕೆ ಅನುಗುಣವಾಗಿ ನಡೆಸುವರು. ತೊನ್ನು, ಕುಷ್ಟ, ಗರ್ಭಿಣಿಯರು, ಬಾಣಂತಿಯರು ಮತ್ತು ಆತ್ಮಹತ್ಯೆ ಮಾಡಿಕೊಂಡವರನ್ನು ಸುಡುವ ಪದ್ಧತಿ ಇದೆ. ಸಣ್ಣಮಕ್ಕಳು ಅಥವಾ ಹಸುಳೆ ಮಕ್ಕಳು ಸತ್ತರೆ ಅಂತಹವರನ್ನು ಹುತ್ತಕ್ಕೆ ಹಾಕಿ ಮುಚ್ಚುತ್ತಾರೆ. ಸತ್ತ ಹನ್ನೊಂದನೆಯ ದಿನಕ್ಕೆ ತಿಥಿಯನ್ನು ಮಾಡುತ್ತಾರೆ. ತಿಥಿಯ ದಿನ ಹಾಲು ಬೆಣ್ಣೆ ಹಾಗೂ ನೆಂಟರಿಷ್ಟರು ತಂದ ತಿಂಡಿಗಳನ್ನು ಸ್ಮಶಾನಕ್ಕೆ ತೆಗೆದುಕೊಂಡು ಹೋಗಿ ಸತ್ತ ವ್ಯಕ್ತಿಗಾಗಿ ತೋಡಿರುವ ಗುಂಡಿಯ ಹತ್ತಿರ ಇಟ್ಟು ಪೂಜೆ ಸಲ್ಲಿಸುವುದು, ಪೂಜೆ ಮುಗಿದ ನಂತರ ಸಮಾಧಿಯ ಮೇಲೆ ಎಡೆಯಾಗಿ ಇಟ್ಟ ತಿಂಡಿ ತಿನಿಸುಗಳನ್ನು ಕಾಗೆ ಎಂಜಲು ಮಾಡುವುದನ್ನು ಕಾಗೆ ಎರಗುವುದು ಎನ್ನುವರು.

ಈ ತಾಲೂಕಿನ ನಾಯಕ ಜನಾಂಗದವರಲ್ಲಿ ಇನ್ನೊಂದು ರೀತಿಯ ತಿಥಿಯನ್ನು ಮಾಡುವುದು ರೂಢಿಯಲ್ಲಿದೆ. ಅದರಲ್ಲೂ ದಾಸಯ್ಯ ಜೋಗಿ ಹಾಗೂ ದೇವರ ಗುಡ್ಡರ ಕುಲದವರು ತಮ್ಮದೇ ರೀತಿಯಲ್ಲಿ

ತಿಥಿಯನ್ನು ಆಚರಣೆ ಮಾಡುತ್ತಾರೆ. ಅವರು ತಿಥಿಯ ದಿನ ರಾತ್ರಿ ಮಾಂಸದ ಅಡುಗೆ ಮಾಡಿಕೊಂಡು ಮೊದಲಿಗೆ ಮನೆಯಲ್ಲಿ ಪೂಜೆ ಸಲ್ಲಿಸುತ್ತಾರೆ. ಅನಂತರ ಊಟವನ್ನು ಸ್ಮಶಾನಕ್ಕೆ ತೆಗೆದುಕೊಂಡು ಹೋಗಿ ಅಲ್ಲಿ ವ್ಯಕ್ತಿಯ ಸಮಾಧಿಯ ಮೇಲೆ ನಾಲ್ಕು ಮೂಲೆಗೂ ಕಡ್ಡಿನೆಟ್ಟು ಮಧ್ಯೆ ಊಟವನ್ನಿಟ್ಟು ಆ ಕುಲಕ್ಕೆ ಸೇರಿದ ಎಲ್ಲಾ ಗಂಡಸರು ಊಟ ಮಾಡುತ್ತಾರೆ. ಇದು ಮಧ್ಯರಾತ್ರಿಯಲ್ಲಿ ಜರುಗುತ್ತದೆ. ಅಲ್ಲಿಗೆ ಹೋದ ಪ್ರತಿಯೊಬ್ಬರು ಸಂತೃಪ್ತಿಯಿಂದ ತಿನ್ನಬೇಕು. ಯಾರಿಗಾದರೂ ಕಡಿಮೆಯಾದರೆ ಸತ್ತ ವ್ಯಕ್ತಿ ಭೂತವಾಗಿ ಬರುತ್ತಾರೆ ಎಂಬ ನಂಬಿಕೆ ಇದೆ. ಈ ರೀತಿ ನಾಯಕರಲ್ಲಿ ಶವ ಸಂಸ್ಕಾರ ಮತ್ತು ತಿಥಿಯು ಇತರರಿಗಿಂತ ಭಿನ್ನವಾಗಿರುವುದನ್ನು ಕಾಣಬಹುದು.[೩೬]

**ಆದಿ ಕರ್ನಾಟಕದವರು**

ಹರಿಜನರು, ಹೊಲೆಯರು, ಪಂಚಮರು, ದಲಿತರು, ಅಂತ್ಯಜರು, ಬಲಗೈನವರು ಧರೆಗೆ ದೊಡ್ಡವರು ಎಂಬ ಇತ್ಯಾದಿ ಹೆಸರುಗಳಿಂದ ಕರೆಯಲ್ಪಡುವ ಇವರು ಚಾಮರಾಜನಗರ ತಾಲೂಕಿನಲ್ಲಿ ಬಹುಪ್ರಾಚೀನ ಕಾಲದಿಂದಲೂ ವಾಸವಾಗಿದ್ದಾರೆ. ಪ್ರಸ್ತುತ ತಾಲೂಕಿನ ಹೊಂಗನೂರು, ನಾಗವಳ್ಳೀ ಮಾದಾಪುರ, ಮಸಣಾಪುರ, ಮಂಗಲ, ರಾಮಸಮುದ್ರ ಸಿದ್ಧಯ್ಯನಪುರ ಮತ್ತು ಚಾಮರಾಜನಗರ ಪಟ್ಟಣದಲ್ಲಿ ಈ ಜನಾಂಗ ಪ್ರಬಲರಾಗಿದ್ದಾರೆ. ಇವರಲ್ಲಿ ಅನೇಕ ಒಳಪಂಗಡಗಳಿದ್ದು ಕುಲಪದ್ಧತಿಯಲ್ಲಿ ಬಣ್ಣಕ್ಕೆ ಹೆಚ್ಚಿನ ಮಹತ್ವ ಕೊಡುತ್ತಾರೆ. ಹನ್ನೊಂದು ಬಣ್ಣ, ಹನ್ನೆರಡು ಬಣ್ಣ, ಹದಿನಾರು, ಹದಿನೆಂಟು ಬಣ್ಣದವರೆಂದು ಹೇಳಿಕೊಳ್ಳುತ್ತಾರೆ. ಮದುವೆಯ ಸಂದರ್ಭದಲ್ಲಿ ವಧುವಿನ ಮನೆಗೆ ತೆಗೆದುಕೊಂಡು ಹೋಗುವ ವಸ್ತುಗಳ ಮೇಲೆ ಇವರ ಬಣ್ಣ ಸಂಖ್ಯೆಯು ತಿಳಿಯುತ್ತದೆ.[೩೭] ಇವರ ಆರ್ಥಿಕ ಸ್ಥಿತಿ ಅಷ್ಟೇನೂ ಉತ್ತಮವಾಗಿಲ್ಲ. ಇವರಲ್ಲಿ ಹೆಚ್ಚಿನ ಜನರು ಕೂಲಿ ಕೆಲಸ ಮಾಡಿ ಜೀವನ ನಡೆಸುತ್ತಿದ್ದಾರೆ. ವ್ಯವಸಾಯ ಮಾಡುವವರು ಇದ್ದಾರೆ. ಹಿಂದೆ ನೆರೆಯ ತಮಿಳುನಾಡಿನ ಗಡಿ ಪ್ರಾಂತ್ಯಗಳನ್ನು ಒಳಗೊಂಡಂತೆ ಅಸ್ಪೃಶ್ಯಕುಲಗಳಿಗೆ ಭೂಮಿ ಒಡೆತನದ ಹಕ್ಕಿರಲಿಲ್ಲ.[೩೮] ಆದರೆ ಮೈಸೂರು ಭಾಗದಲ್ಲಿ (ಇಂದಿನ ಚಾಮರಾಜನಗರ ಸೇರಿ) ಹೊಲೆಯ ಮತ್ತು ಮಾದಿಗ ಕುಲಗಳೆರಡಕ್ಕೂ ಭೂ ಒಡೆತನದ ಹಕ್ಕಿತ್ತಂತೆ. ಈ ಭಾಗದಲ್ಲಿ ಬೆಂಗಳೂರು ಕಡೆಯ ದಲಿತ ತಾನು ವವ್ಯಸಾಯ ಮಾಡುವ ಭೂಮಿಗೆ ವಾರ್ಷಿಕ ೨೭೯ ರೂ.ಗಳ ಭೂಕಂದಾಯ ಕಟ್ಟಿರುವ ಬಗ್ಗೆ ದಾಖಲೆಗಳಿವೆ.[೩೯] ಇತ್ತೀಚೆಗೆ ಇವರಲ್ಲಿ ವಿದ್ಯಾವಂತರ ಸಂಖ್ಯೆ ಹೆಚ್ಚಾಗುತ್ತಿದ್ದು, ಸರ್ಕಾರಿ ಕೆಲಸಕ್ಕೆ ಸೇರುವವರು ಹೆಚ್ಚಾಗುತ್ತಿರುವುದು ಆಶಾದಾಯಕ ಬೆಳವಣಿಗೆಯಾಗಿದೆ.

ಇವರಲ್ಲಿ ಬಾಲ್ಯವಿವಾಹಗಳು ಕಂಡುಬರುತ್ತದೆ. ಆದರೆ ವಿಧವಾ ವಿವಾಹಗಳಿಗೆ ಅವಕಾಶವಿಲ್ಲ. ಕೆಲವೊಮ್ಮೆ ಕೂಡಿಕೆ ವಿವಾಹಗಳು ಜರುಗುತ್ತವೆ. ಸಾಮಾನ್ಯವಾಗಿ ಇವರಲ್ಲಿ ಸಂಬಂಧಿಕರಲ್ಲಿಯೇ ವಿವಾಹಗಳು ನಡೆಯುತ್ತವೆ. ಹೊಸ ಸಂಬಂಧಗಳಲ್ಲಿ ವಿವಾಹಗಳು ಜರುಗುವುದು ಅಪರೂಪ. ವಧುದಕ್ಷಿಣ ಪದ್ಧತಿ ಇವರಲ್ಲಿಲ್ಲ. ಆದರೆ ಅನಂತಕೃಷ್ಣ ಅಯ್ಯರ್ ಬೇರೆ ಎಲ್ಲೂ ಕಂಡುಬರದ ಆದಿ ಕರ್ನಾಟಕ ಜನವರ್ಗದಲ್ಲಿದ್ದ

'ಕನ್ಯಾಶುಲ್ಕ' ಅಥವಾ 'ತೆರ' ಪದ್ಧತಿಯನ್ನು ತಮ್ಮ 'ಮೈಸೂರ್ ಟ್ರೈಬ್ಸ್ ಮತ್ತು ಕ್ಯಾಸ್ಟ್'ನಲ್ಲಿ ಪ್ರಸ್ತಾಪಿಸಿದ್ದಾರೆ. ಆ ಪ್ರಕಾರ ಮೈಸೂರು ಪ್ರಾಂತ್ಯದ ಆದಿಕರ್ನಾಟಕದ ಯುವಕನೊಬ್ಬ ಕನ್ಯೆಗೆ ೧ ರೂಪಾಯಿ ಎಂಟಾಣೆಯಿಂದ ಹಿಡಿದು ಆರು ರೂಪಾಯಿಗಳವರೆಗೆ ಪ್ರತ್ಯೇಕ ಕನ್ಯಾಶುಲ್ಕ ನೀಡಬೇಕಿತಂತೆ. ಮದುವೆ ಖರ್ಚಿನಲ್ಲಿ ಮೂರನೇ ಎರಡರಷ್ಟನ್ನು ತಾನೇ ಭರಿಸಬೇಕು. ಜೊತೆಗೆ 'ತೆರ' ಹಣದ ಅರ್ಧಭಾಗವನ್ನು 'ವೀಳ್ಯದ ಶಾಸ್ತ್ರ' ನಡೆಸುವ ಸಂದರ್ಭದಲ್ಲಿ ಮುಂಗಡವಾಗಿ ನೀಡಬೇಕಾಗಿತಂತೆ.[೨೦] ಆದರೆ ಪ್ರಸ್ತುತ ಇವರಲ್ಲಿ ವರದಕ್ಷಿಣೆ ಪದ್ಧತಿ ಚಾಲ್ತಿಯಲ್ಲಿದೆ. ಮದುವೆಗಳು ಹೆಚ್ಚಾಗಿ ಅವರವರ ಮನೆಯ ಮುಂದೆ ಅಥವಾ ದೇವಾಲಯಗಳಲ್ಲಿ ಜರುಗುತ್ತವೆ.[೨೧] ೧೯೧೧ರ ಮೈಸೂರು ಪ್ರಾಂತ್ಯದ ಜನಗಣತಿಯ ಪ್ರಕಾರ ಈ ಭಾಗದ ಆದಿಕರ್ನಾಟಕ ಜನಾಂಗದವರಲ್ಲಿ ಅನಿವಾರ್ಯ ಕಾರಣಗಳ ಹಿನ್ನೆಲೆಯಲ್ಲಿ ವಿವಾಹವಾಗದೆ ಉಳಿಯುವ ಕನ್ಯೆಯನ್ನು 'ಬಸವಿ' ಬಿಡುವ ಪದ್ಧತಿ ಇರುವುದರ ಬಗ್ಗೆ ಗಮನಸೆಳೆಯುತ್ತದೆ. ಆ ಪ್ರಕಾರ ಆದಿ ಕರ್ನಾಟಕದವರಲ್ಲಿ ಹೆಣ್ಣು ಋತುಮತಿಯಾಗುವುದಕ್ಕಿಂತ ಮುಂಚೆ ಅಥವಾ ಋತುಮತಿಯಾದ ಮೇಲೆ ವಿವಾಹ ಮಾಡುವ ಪದ್ಧತಿ ಇತ್ತಂತೆ. ಒಂದು ವೇಳೆ ಹುಡುಗಿಗೆ ಸರಿಯಾದ ಜೋಡಿಸಿಗದೆ ಹೋಗದ ಪಕ್ಷದಲ್ಲಿ ಆ ಕನ್ಯೆಯನ್ನು ಹೊಂಗೆಮರ, ಬೇವು ಅಥವಾ ಎಕ್ಕೆಯ ಗಿಡಕ್ಕೆ ಮದುವೆ ಮಾಡಿಸಿ ಬಸವಿಯನ್ನಾಗಿಸಿ ಬಿಳಿಗಿರಿರಂಗ ಅಥವಾ ಸಿದ್ಧಾಪ್ಪಾಜಿಯ ಗದ್ದುಗೆಗೆ ಅರ್ಪಿಸಲಾಗುತ್ತಿತ್ತಂತೆ.[೨೨]

ನೂರಾರು ವರ್ಷಗಳ ಹಿಂದೆ ಈ ಪ್ರಾಂತ್ಯದಲ್ಲಿ 'ಬಸವಿ' ಬಿಡುವ ಆಚರಣೆ ಈ ಭಾಗದಲ್ಲಿ ಚಾಲ್ತಿಯಲಿತ್ತೆಂಬುದಕ್ಕೆ ಇದು ನಿದರ್ಶನವಾಗಿದೆ. ಸಮುದಾಯದ ಹೆಣ್ಣು ಮಕ್ಕಳು ಹಾಡುತ್ತಾರೆ. ಊರಿನ ಜಾತ್ರೆ ಉತ್ಸವಗಳಲ್ಲಿ ಮದುವೆ ಒಸಗೆ ಸಮಾರಂಭಗಳಲ್ಲಿ ವಾದ್ಯವನ್ನು ನುಡಿಸುತ್ತಾರೆ. ತಾಯಿತಿ, ಯಂತ್ರ-ಮಂತ್ರವನ್ನು ನಂಬುತ್ತಾರೆ. ಹಾಗೆಯೇ ಜನಪದ ವೈದ್ಯ ಔಷಧಿಯಲ್ಲಿ ಹೆಚ್ಚಿನ ಒಲವು ಇಟ್ಟುಕೊಂಡಿದ್ದಾರೆ. ಅಲ್ಲದೆ ಊರ ಜನರ ಮದುವೆ ಕಾಲದಲ್ಲಿ ಚಪ್ಪರ ಹಾಕುವುದು, ಸೌದೆ ಹೊಡೆಯುವುದು, ಸಾವಿನ ಸಂದರ್ಭದಲ್ಲಿ ಸುಡುಗಾಡಿಗೆ ಹೆಣ ಒಯ್ಯಲು ಬೇಕಾದ ಚಟ್ಟ ಸಿದ್ಧಪಡಿಸುವುದು ಹೂಳುವುದಕ್ಕೆ ಸಮಾದಿ ಗುಂಡಿ ತೆಗೆಯುವುದು, ಶುಭದಿನವಿರಲಿ, ಅಶುಭ ದಿನವಿರಲಿ ಡೋಲು ಬಡೆಯುವುದು ಮೊದಲಾದ ಕೆಲಸಗಳನ್ನು ಊರಿನ ಎಲ್ಲಾ ಸಮುದಾಯದವರಿಗೂ ಮಾಡಿಕೊಡುತ್ತಾರೆ. ಗೌರಿ-ಗಣೇಶ, ದೀಪಾವಳಿ, ಸಂಕ್ರಾಂತಿ, ಯುಗಾದಿ ಮೊದಲಾದ ಎಲ್ಲಾ ಹಿಂದೂ ಸಾಂಪ್ರದಾಯಿಕ ಹಬ್ಬಗಳನ್ನು ಇವರು ಭಯಭಕ್ತಿಯಿಂದ ಆಚರಿಸುತ್ತಾರೆ.

## ಮಾದಿಗರು

ಪಂಚಮರು, ಆದಿಜಾಂಬವರು, ಚಮ್ಮಾರರು, ಎಡಗೈಸವರು, ಝಾಡಮಾಲಿಗಳು ಮೊದಲಾದ ಹೆಸರುಗಳಿಂದ ಕರೆಯಲ್ಪಡುವ ಇವರು ಚಾಮರಾಜನಗರ ತಾಲೂಕಿನ ಮಸಣಾಪುರ, ಆಲೂರು,

ಹೊಂಗನೂರು, ಮಾದಾಪುರ, ಹರದನಹಳ್ಳಿ, ರಾಮಸಮುದ್ರ, ವೆಂಕಟಯ್ಯನಛತ್ರ ಮತ್ತು ಚಾಮರಾಜನಗರ ಪಟ್ಟಣದಲ್ಲಿ ಅಧಿಕ ಸಂಖ್ಯೆಯಲ್ಲಿದ್ದಾರೆ. ಚರ್ಮಕೈಗಾರಿಕೆಯನ್ನು ಮುಖ್ಯ ಕಸುಬಾಗುಳ್ಳ ಇವರು ಜೊತೆಗೆ ಪೌರ ಕಾರ್ಮಿಕರಾಗಿ ಬೀದಿ ಗುಡಿಸುವ, ಚರಂಡಿ ಸ್ವಚ್ಛಗೊಳಿಸುವ ಮತ್ತು ಕೂಲಿ ಮಾಡುವ ಕೆಲಸಗಳಲ್ಲಿ ನಿರತರಾಗಿದ್ದಾರೆ. ಅಲ್ಲದೆ ಊರಿನ ದನಕರುಗಳು ಸತ್ತರೆ ಅವುಗಳನ್ನು ತಂದು ಅವುಗಳ ಚರ್ಮ ಸುಲಿದು, ಅದನ್ನು ಪಾದರಕ್ಷೆ ಮಾಡುವ ಕೆಲಸವನ್ನು ಮಾಡುತ್ತಾರೆ. ಕೆಲವರು ಅದರ ಮಾಂಸವನ್ನು ಆಹಾರವಾಗಿಯೂ ಬಳಸುತ್ತಾರೆ.

ಈ ಜನಾಂಗದ ಹೆಚ್ಚಿನ ಜನರಿಗೆ ಜಮೀನಾಗಲೀ, ವ್ಯಾಪಾರ ವಹಿವಾಟುಗಳಾಗಲೀ ಇಲ್ಲ. ಜೀವನೋಪಾಯಕ್ಕಾಗಿ ರಸ್ತೆಯ ಬದಿಯ ಮರದಡಿ ಅಥವಾ ಪೆಟ್ಟಿಗೆ ಅಂಗಡಿಗಳಲ್ಲಿ ನಮ್ಮ ಸಾಂಪ್ರದಾಯಿಕ ಕಸುಬಾದ ಪಾದರಕ್ಕೆ ಹೊಲೆಯುವ ಕೆಲಸ ನಿರ್ವಹಿಸುತ್ತಾರೆ. ಅಲ್ಲದೆ ಕೆಲವರು ಕೂಲಿ ಮಾಡಿ ಜೀವನ ಸಾಗಿಸುತ್ತಾರೆ. ಊರಿನ ಗ್ರಾಮ ಪಂಚಾಯಿತಿಗಳಲ್ಲಿ, ನಗರ ಪುರಸಭೆ, ಮಹಾನಗರ ಪಾಲಿಕೆಗಳಲ್ಲಿ ಹೆಚ್ಚಿನ ಮಂದಿ ಪೌರಕಾರ್ಮಿಕರಾಗಿ ದುಡಿಯುತ್ತಿದ್ದಾರೆ. ಇವರು ಆರ್ಥಿಕವಾಗಿ ಇಂದೂ ಸಹ ದುಸ್ಥಿತಿಯಲ್ಲಿದ್ದಾರೆ. ವೈವಾಹಿಕ ವಿಚಾರಗಳಲ್ಲಿ ಬಾಲ್ಯ ವಿವಾಹ, ವಿಧವಾ ವಿವಾಹ ಮತ್ತು ಕೂಡಿಕೆ ವಿವಾಹಗಳಿಗೆ ಇವರಲ್ಲಿ ಪ್ರೋತ್ಸಾಹವಿಲ್ಲ. ವಧುದಕ್ಷಿಣ ಪದ್ಧತಿ ಇವರಲಿಲ್ಲ. ಆದರೆ ವಸ್ತುರೂಪದಲ್ಲಿ ವರದಕ್ಷಿಣೆ ಚಾಲ್ತಿಯಲ್ಲಿದೆ. ಬಹುತೇಕ ವಿವಾಹಗಳು ಸಂಬಂಧಿಕರಲ್ಲಿಯೇ ನಡೆಯುತ್ತವೆ. ಇವರು ಪೂರ್ವಿಕರು ಪಕ್ಕದ ತಮಿಳುನಾಡು ಮತ್ತು ಆಂಧ್ರ ಕಡೆಯಿಂದ ಬಂದವರಾಗಿದ್ದರಿಂದ ಇವರಿಗೆ ಕನ್ನಡ ಭಾಷೆಯಲ್ಲದೆ ತಮಿಳು, ತೆಲುಗು, ಮಲೆಯಾಳಂ ಭಾಷೆಗಳು ಬರುತ್ತವೆ.

ತಿರುಪತಿ ತಿಮ್ಮಪ್ಪ, ತಮಿಳುನಾಡಿನ ಬನ್ನಾರಿ ಅಮ್ಮ, ಸಿದ್ದಾಪ್ಪಾಜಿ, ರಾಚಾಪ್ಪಾಜಿ, ದೊಡ್ಡಮ್ಮತಾಯಿ, ಮೊದಲಾದವರು ಇವರ ಪ್ರಮುಖ ಆರಾಧ್ಯ ದೈವಗಳು. ಅಲ್ಲದೆ ಸ್ಥಳೀಯ 'ಪಟ್ಟದಲ್ಲಮ್ಮ' ಮಾರಿ ದೇವತೆಯು ಇವರ ಆರಾಧ್ಯದೇವಿ. ಇವರಲ್ಲಿ ಗುಡ್ಡ ಮತ್ತು ದಾಸರನ್ನು ಬಿಡುವ ಪದ್ಧತಿ ಪರಂಪರೆಯಾಗಿ ಬೆಳೆದು ಬಂದಿದೆ. ಮದುವೆ, ಜನನ, ಹುಟ್ಟು, ಸಾವು, ಸೂತಕ, ಮೊದಲಾದ ಎಲ್ಲಾ ಸಾಂಪ್ರದಾಯಿಕ ಆಚರಣೆಗಳನ್ನು ಇವರು ಕಟ್ಟುನಿಟ್ಟಾಗಿ ಆಚರಿಸುತ್ತಾರೆ. ಸತ್ತವರನ್ನು ಸುಡುವ ಪದ್ಧತಿ ಇವರಲ್ಲಿದೆ. ಮಾಂಸಹಾರ ಮತ್ತು ಸಸ್ಯಹಾರಗಳೆರಡನ್ನು ಸೇವಿಸುವ ಇವರಲ್ಲಿ ಮಾಂಸಹಾರ ಪ್ರಿಯರೇ ಹೆಚ್ಚು. ಅಲ್ಲದೆ ಎಣ್ಣು ಮತ್ತು ಗಂಡು ಆದಿಯಾಗಿ ಬಹುಪಾಲು ಜನ ಮಧ್ಯಪಾನ ಮಾಡುತ್ತಾರೆ. ಜಗಳ ಹೊಡೆದಾಟ ಮೊದಲಾದ ಸಮಸ್ಯೆಗಳಿಗೆ ಸಂಬಂಧಿಸಿದಂತೆ ಇವರದೇ ನ್ಯಾಯ ಪಂಚಾಯಿತಿ ಇದ್ದು ಅದನ್ನು ಬಗೆಹರಿಸಿಕೊಳ್ಳುತ್ತಾರೆ. ಯಜಮಾನನನ್ನು ಹತ್ತರ ಮನುಷ್ಯ ಎಂದು ಕರೆಯುವ ಇವರು ಅವನು ಕೊಡುವ ತೀರ್ಪಿಗೆ ಬದ್ಧರಾಗಿರುತ್ತಾರೆ. ಇವರ ಉಡುಗೆ-ತೊಡುಗೆಗಳು ಬಹುಪಾಲು ಹರಿಜನರನ್ನೆ ಹೋಲುತ್ತವೆ ಹಾಗೂ ಅವರ ಆರ್ಥಿಕ ಸಾಮಾರ್ಥ್ಯವನ್ನು ಅವಲಂಬಿಸಿವೆ."[1]

## ಮುಸ್ಲಿಂರು

ಚಾಮರಾಜನಗರ ತಾಲೂಕಿನಲ್ಲಿ ಮುಸ್ಲಿಂರು ಅಪಾರ ಸಂಖ್ಯೆಯಲ್ಲಿದ್ದಾರೆ. ಚಾಮರಾಜನಗರ ಮಾತ್ರವಲ್ಲದೆ ಹರದನಹಳ್ಳಿ, ನಾಗವಳ್ಳಿ, ಆಲೂರು, ಮಂಗಲ, ಮಂಗಲದ ಹೊಸೂರು, ಚಂದಕವಾಡಿ, ಹೆಬ್ಬಸೂರು, ಕಾಗಲವಾಡಿ, ಹೊಂಗನೂರು, ಇರಸವಾಡಿ, ಅಮಚವಾಡಿ, ಕಿಂಗಸೂರು ಮೊದಲಾದ ಗ್ರಾಮಗಳಲ್ಲಿ ಮುಸ್ಲಿಂರಿದ್ದಾರೆ. ಇವರಲ್ಲಿ ಬಹುಪಾಲು ಜನ ವ್ಯಾಪಾರವನ್ನು ತಮ್ಮ ವೃತ್ತಿಯನ್ನಾಗಿ ಅವಲಂಬಿಸಿದ್ದಾರೆ. ರೇಷ್ಮೆನೂಲು ತೆಗೆಯುವ ಉದ್ಯಮ ಮತ್ತು ಇತ್ತೀಚೆಗೆ ಗ್ರಾನೈಟ್ ಉದ್ಯಮಗಳಲ್ಲೂ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ಅಲ್ಲದೆ ವ್ಯವಸಾಯ, ಕೂಲಿ, ಕಂಬಳ ಮಾಡಿ ಬದುಕುವವರು ಇದ್ದಾರೆ. ಇವರಲ್ಲಿ ಸಾಕಷ್ಟು ಒಳಪಂಗಡದವರಿದ್ದು 'ಸುನ್ನಿ' ಪಂಗಡಕ್ಕೆ ಸೇರಿದವರು ಇಲ್ಲಿ ಹೆಚ್ಚಾಗಿದ್ದಾರೆ. ಈ ಧರ್ಮದಲ್ಲಿ ಐದು ಮೂಲಭೂತ ಧಾರ್ಮಿಕ ಕ್ರಿಯೆಗಳುಂಟು ಆ ಸಂಸ್ಕಾರಗಳೆಂದರೆ ೧. ಜನ್ಮ, ೨. ಖತ್ನ (ಸುನ್ನತ್), ೩. ಬಿಸ್ಮಿಲ್ಲಾ (ಪ್ರಾರಂಭ), ೪. ನಿಕಾಹ(ವಿವಾಹ), ೫. ಮೃತ್ಯು(ವಫಾತ್). ಚಾಮರಾಜನಗರ ತಾಲೂಕಿನ ಮುಸ್ಲಿಮರು ಆಧುನಿಕತೆಯ ಪ್ರಭಾವಕ್ಕೆ ಒಳಗಾಗಿದ್ದರು ಧರ್ಮದ ಈ ನೀತಿ ನಿಯಮಗಳನ್ನು ಚಾಚು ತಪ್ಪದೆ ಪಾಲಿಸುತ್ತಿದ್ದಾರೆ.

ಇವರ ಧಾರ್ಮಿಕ ಕ್ರಿಯೆಗಳಲ್ಲಿ ಮೊದಲನೆಯದು ಜನ್ಮ ಅಥವಾ ಹುಟ್ಟು. ಮಗು ಹುಟ್ಟಿದಾಕ್ಷಣ ಅದರ ಹೊಕ್ಕಳನ್ನು ಕತ್ತರಿಸಿ, ಮಗುವಿನ ಶರೀರವನ್ನು ಚೆನ್ನಾಗಿ ತೊಳೆದು ಆನಂತರ ಒಂದು ಬಟ್ಟೆಯಲ್ಲಿ ಸುತ್ತಿ ಹೊರಗಡೆ ಕುಳಿತಿರುವ ಗಂಡಸರ ಮಧ್ಯ ತಂದಿಡುತ್ತಾರೆ. ಆ ಊರಿನ ಪ್ರಧಾನ ಮೌಲ್ವಿ ಅಥವಾ ಬೇರೆ ಯಾರಾದರೊಬ್ಬರು ಮಗುವಿನ ಬಲಕಿವಿಯಲ್ಲಿ 'ಅಜಾಂ' ಮತ್ತು ಎಡಗಡೆ ಕಿವಿಯಲ್ಲಿ 'ಇಕಾಮತ್'ನ ಮಂತ್ರವನ್ನು ಉಚ್ಚರಿಸುತ್ತಾರೆ. 'ಇಕಾಮತ್'ನ ಅರ್ಥ ಸಾಮಾಜಿಗಾಗಿ ನಿಂತುಕೊಳ್ಳುವುದ. 'ಇಕಾಮತ್' ಹೇಳುವ ಕೆಲಸವನ್ನು ಮುಖಂಡನ ಹಿಂದೆ ನಿಂತುಕೊಂಡಿರುವ ಅನುಯಾಯಿ ಮಾಡುತ್ತಾನೆ. 'ಅಜಾಂ'- ಇದು ಎಚ್ಚರಿಕೆಯನ್ನು ಕೊಡುವುದು. ಕಿವಿಯಲ್ಲಿ ಧರ್ಮದ ಸಮಾಚಾರ ಅಥವಾ ಸುದ್ಧಿಯನ್ನು ಹೇಳುವುದು. ಪ್ರಾರ್ಥನೆಗೆ ಕರೆಯುವಿಕೆ, ನಮಾಜಿನ ಸುಳಿಯನ್ನು ಗಟ್ಟಿಯಾಗಿ ಹೇಳುವರು. ಆ ಮಂತ್ರದ ಸಾರವೆಂದರೆ, ಅಲ್ಲಾ ಸರ್ವಶ್ರೇಷ್ಠನಾದವನು. ಆ ಒಬ್ಬ ಅಲ್ಲಾಹನ ಹೊರತು ಇನ್ನಾರೂ ಪೂಜ್ಯರಿಲ್ಲ ಎಂಬುದೇ ಈ ಅರಬೀ ಮಂತ್ರದ ಒಟ್ಟು ಅರ್ಥವಾಗಿದೆ.[୨୨]

ಈ ಜನಾಂಗದಲ್ಲಿ ಮಗು ಹುಟ್ಟಿದ ಏಳನೆಯ ದಿನ ಅದರ ಕೇಶ ಮುಂಡನೆ ಮತ್ತು ನಾಮಕರಣದ ಕಾರ್ಯ ನಡೆಯುತ್ತದೆ. ಈ ಕಾರ್ಯಕ್ಕೆ 'ಅಕೀಕಾ' - ಎನ್ನುವರು. ಮಗುವಿನ ಜನ್ಮದ ಮೊದಲ ವಾರದಲ್ಲಿ ಒಂದು ಮೇಕೆಯನ್ನು ಬಲಿಕೊಡುತ್ತಾರೆ. ಈ ಮೇಕೆ ಒಂದು ವರ್ಷಕ್ಕಿಂತ ಕಡಿಮೆ ವಯಸ್ಸಿನದಾಗಬಾರದು ಹಾಗೂ ಅದಕ್ಕೆ ಯಾವುದೇ ರೀತಿಯ ರೋಗ ರುಜ್ಜಿನ ಹಾಗೂ ಶಾರೀರಿಕಾ ದೋಷವಾಗಲಿ ಇರಬಾರದು.

ಬಹುಶಃ ಹಜರತ್ ಇಬ್ರಾಹಿಮರ ಬಲಿದಾನ ಧರ್ಮದ ಸ್ಮರಣೆಗಾಗಿ ಈ ಬಲಿದಾನ ನಡೆಸಲಾಗುತ್ತದೆ. ಗಂಡು ಶಿಶುವಾದರೆ ಹುಟ್ಟಿದ ಏಳನೆಯ ದಿನಕ್ಕೆ ಒಂದು ಮೇಕೆಯನ್ನು ಭಗವಂತನ ಹೆಸರಿನಲ್ಲಿ ಬಲಿದಾನ ಮಾಡಬೇಕು. ಯಾವುದಾದರೊಂದು ಕಾರಣದಿಂದ ಅದನ್ನು ಮಾಡಲು ಸಾಧ್ಯವಾಗದಿದ್ದರೆ ಮುಂದೆ ಏಳು ವರ್ಷಗಳು ಯಾವುದಾದರೊಂದು ದಿನ ಇದನ್ನು ಮಾಡಬಹುದು. ಹೀಗೆ ಮಗುವಿನ ಜನನದೊಂದಿಗೆ ಮುಸ್ಲಿಂರಲ್ಲಿ ಧಾರ್ಮಿಕ ಕ್ರಿಯೆಗಳು ಪ್ರಾರಂಭವಾಗುತ್ತವೆ.

'ಖತ್ನ ಅಥವಾ ಸುನ್ನತ್' ಮುಸ್ಲಿಂ ಧರ್ಮದಲ್ಲಿ ಸಾಮಾನ್ಯವಾಗಿ ಮಗುವಿನ ಏಳನೆಯ ವರ್ಷದಿಂದ ಹನ್ನೆರಡನೆಯ ವರ್ಷದೊಳಗೆ ಈ 'ಖತ್ನಾ' ಧಾರ್ಮಿಕ ಕ್ರಿಯೆ ನಡೆಯುತ್ತದೆ. ವಾಡಿಕೆಯ ರೂಢಿಯಲ್ಲಿರುವಂತೆ ಗಂಡು ಮಗುವಿನ ಜನನೇಂದ್ರಿಯದ ತುದಿಯ ಭಾಗದ ಚರ್ಮವನ್ನು ಕತ್ತರಿಸುವ ಸಂಸ್ಕಾರಕ್ಕೆ 'ಖತ್ನಾ' ಅಥವಾ 'ಸುನ್ನತ್ ' ಎಂದು ಕರೆಯುವರು. ಈ ಸಂಸ್ಕಾರ ನಡೆದ ಅನಂತರವೇ ಮುಸ್ಲಿಂ ಧರ್ಮದ ದೀಕ್ಷೆ ಪೂರ್ಣವಾಗುವುದು. ಇದರ ನಂತರ ವಿದ್ಯಾಭ್ಯಾಸ ಪ್ರಾರಂಭ. ಮುಸ್ಲಿಂರಲ್ಲಿ ಮಗು ಹುಟ್ಟಿದ ನಾಲ್ಕು ವರ್ಷ ನಾಲ್ಕು ತಿಂಗಳು, ನಾಲ್ಕು ದಿನಗಳಾದ ಬಳಿಕ ವಿದ್ಯಾಭಾಸಕ್ಕೆ ವ್ಯವಸ್ಥೆ ಮಾಡುತ್ತಾರೆ. ಇವರಲ್ಲಿ ಅಕ್ಷರಾಭ್ಯಾಸ ಬಿಸ್ಮಿಲ್ಲಾಹಿರ್ ರ್ರಹ್ಮಾನ್ ಮಾರ್ಹೀಮ್' ಎಂಬ ವಾಕ್ಯದೊಡನೆ ಆರಂಭವಾಗುತ್ತದೆ.

ಮುಸ್ಲಿಂರಲ್ಲೂ ಜ್ಞಾನಾರ್ಜನೆ ಅಥವಾ ಶಿಕ್ಷಣಕ್ಕೆ ಹೆಚ್ಚಿನ ಒತ್ತು ನೀಡಲಾಗುತ್ತದೆ. ಶಿಕ್ಷಣ ಪಡೆಯುವುದು ಪ್ರತಿಯೊಬ್ಬ ಮುಸ್ಲಿಂನ ಕರ್ತವ್ಯ ಇವರ ಮೂಲದಲ್ಲಿರುವ ಕಲ್ಪನೆಯ ಪ್ರಕಾರ ಪ್ರತಿಯೊಬ್ಬ ಮುಸ್ಲಿಂನು ಕನಿಷ್ಠ ಪಕ್ಷ ಇತರರ ಸಹಾಯವಿಲ್ಲದೆ 'ಕುರಾನ್ ' ಓದಲು ಸಮರ್ಥನಾಗಬೇಕೆಂಬುದೇ ಅವರ ಉದ್ದೇಶ. ಒಬ್ಬ ಹುಡುಗ ಕುರಾನ್ ಓದಿದನೆಂದರೆ ಅವನ ಜೀವನದಲ್ಲಿ ಒಂದು ಅತ್ಯಂತ ಮಹತ್ವಪೂರ್ಣ ಸಾಧನೆ ಎಂದರ್ಥ. ಆದರೆ ಈ ತಾಲೂಕಿನ ಮುಸ್ಲಿಂರು ಶಿಕ್ಷಣಕ್ಕೆ ಕೊಡುತ್ತಿರುವ ಪ್ರಾಶ್ಯಸ್ತ್ಯ ಕಡಿಮೆ. ಅದಕ್ಕೆ ಕಾರಣ ಈ ಜನಾಂಗದ ಹೆಚ್ಚಿನ ಜನ ಆರ್ಥಿಕವಾಗಿ ದುರ್ಬಲರಾಗಿರುವುದೇ ಎಂಬುದು ಕ್ಷೇತ್ರಕಾರ್ಯದಿಂದ ತಿಳಿದುಬಂದ ಮಾಹಿತಿಯಾಗಿದೆ.

'ವಿವಾಹ ಅಥವಾ ನಿಕಾಹ': 'ನಿಕಾಹ' - ಶಬ್ದದ ಮೂಲ ಅರ್ಥ ಶರೀರ ಸಂಬಂಧ ಅಥವಾ ಸಂಭೋಗ. ಇವರ ವಿವಾಹದಲ್ಲಿ ಧಾರ್ಮಿಕ ಮಹತ್ವ ಎಷ್ಟರ ಮಟ್ಟಿಗೆ ಇದೆಯೋ ಅಷ್ಟೇ ಮಹತ್ವ ಸಾಮಾಜಿಕವಾಗಿಯೂ ಇದೆ. ಇವರಲ್ಲಿ ವಿವಾಹಕ್ಕೆ ಪುರುಷರಂತೆಯೇ ಸ್ತ್ರೀಯರ ಒಪ್ಪಿಗೆಯು ಅನಿವಾರ್ಯ. ನಿಮ್ಮಿಬ್ಬರ ಈ ವಿವಾಹ ನಿಮಗೆ ಒಪ್ಪಿಗೆಯೇ? ಎಂದು ಕಾಜಿಯು, ಇಬ್ಬರು ಸಾಕ್ಷಿದಾರರ ಮುಂದೆ ವಧುವರರಿಗೆ ಮೂರು ಸಲ ಕೇಳುತ್ತಾರೆ. ಅವರು ಸಮ್ಮತಿಸಿದರೆ ಮಾತ್ರ ಮದುವೆ ಕಾರ್ಯ ನೆರವೇರಿದಂತೆ. ವಿವಾಹವಾದ ಸ್ತ್ರೀಗೆ ಯಾವುದೇ ರೀತಿಯ ತೊಂದರೆಯು ಆಗಬಾರದೆಂಬ ಉದ್ದೇಶದಿಂದ ವಿವಾಹವಾದ ಪುರುಷನು ಸ್ತ್ರೀಗೆ ಕೊಡುವ ಧನವನ್ನು 'ಮಹರ್' ಎಂದು ಕರೆಯುತ್ತಾರೆ. ಈ 'ಮಹರ್ 'ನ್ನು ಪತಿಯ ಆರ್ಥಿಕ ಸ್ಥಿತಿಗನುಸಾರವಾಗಿ ಗೊತ್ತುಮಾಡುತ್ತಾರೆ.

ಮುಸ್ಲಿಂರಲ್ಲೂ ಸಹ ಹೆಣ್ಣಿನ ಮನೆಯಲ್ಲಿಯೇ ವಿವಾಹ ಕಾರ್ಯನೆರವೇರುತ್ತದೆ. ಮುಸ್ಲಿಮರಲ್ಲಿ ಒಬ್ಬ ಪುರುಷನಿಗೆ ಒಟ್ಟಿಗೆ ನಾಲ್ಕು ಸ್ತ್ರೀಯರನ್ನು ಮದುವೆ ಮಾಡಿಕೊಳ್ಳುವ ಅವಕಾಶವಿದೆ. ಆದರೆ ರಕ್ತಸಂಬಂಧದ ಮದುವೆಗಳಾದ ಅಕ್ಕನ ಮಗಳನ್ನು, ಸೋದರ ಮಾವನ ಮಗಳನ್ನು ಇವರಲ್ಲಿ ಮದುವೆ ಮಾಡಿಕೊಳ್ಳುವಂತಿಲ್ಲ. ವರದಕ್ಷಿಣೆ ಪದ್ಧತಿ ಚಾಲ್ತಿಯಲ್ಲಿದೆ. ಇವರಲ್ಲಿ ವಿವಾಹ ವಿಚ್ಛೇದನ ಅತಿ ಸುಲಭ. ವಿವಾಹ ವಿಚ್ಛೇದನಕ್ಕೆ 'ತಲಾಕ್' ಎಂದು ಕರೆಯುತ್ತಾರೆ. ವಿವಾಹವಾದ ಮೇಲೆ ಪತಿ-ಪತ್ನಿಯರು ಒಟ್ಟಾಗಿರುವುದು ನಾನಾ ಕಾರಣಗಳಿಂದ ಸಾಧ್ಯವಾಗಿದ್ದರೆ ವಿವಾಹ ವಿಚ್ಛೇದನಕ್ಕೆ ಅವಕಾಶವಿರಬೇಕೆಂಬ ತತ್ವವನ್ನು ಇಸ್ಲಾಂ ಧರ್ಮ ಸ್ವೀಕರಿಸಿ, ಕ್ಷುಲ್ಲಕವಾದ ಕಾರಣದಿಂದ ವಿವಾಹ ವಿಚ್ಛೇದನ ಪ್ರವೃತ್ತಿ ಹೆಚ್ಚಾಗಬಾರದೆಂಬ ಉದ್ದೇಶದಿಂದ ಇಸ್ಲಾಂ ಧರ್ಮವು ವಿವಾಹ ವಿಚ್ಛೇದನಕ್ಕೆ ಅತ್ಯಂತ ಅನಿವಾರ್ಯ ಪರಿಸ್ಥಿತಿಯಲ್ಲಿ ಮಾತ್ರ ಅನುಮತಿಯನ್ನಿತ್ತಿದೆ.

ತಮ್ಮ ಧರ್ಮದ ಪ್ರಮುಖ ಹಬ್ಬಗಳಾದ ರಂಜಾನ್, ಮೊಹರಂ, ಈದ್ ಮಿಲಾದ್ ಹಬ್ಬಗಳನ್ನು ವಿಜೃಂಭಣೆಯಿಂದ ಆಚರಿಸುತ್ತಾರೆ. ವಿಗ್ರಹಾರಾಧನೆಯನ್ನು ಈ ಧರ್ಮ ತೀವ್ರವಾಗಿ ಖಂಡಿಸಿದರು ಇಲ್ಲಿನ ಮುಸ್ಲಿಂರು ಎಲ್ಲ ಧರ್ಮಿಯರೊಂದಿಗೆ ಬೆರೆತು ಬದುಕುವ ಹೃದಯ ಸಂಪನ್ನತೆ ಈ ತಾಲೂಕಿನ ಮುಸ್ಲಿಂರಲ್ಲಿದೆ. ಇದಕ್ಕೆ ನಿದರ್ಶನವಾಗಿ ಹಿಂದೂಗಳ ಗೌರಿ-ಗಣೇಶ, ಉಗಾದಿ, ದೀಪಾವಳೀ ಮತ್ತು ತಾಲೂಕಿನ ಕೆಲವು ಗ್ರಾಮಗಳಲ್ಲಿ ನಡೆಯುವ ಮಾರಿಹಬ್ಬಗಳಲ್ಲಿ ಇವರು ಸಕ್ರಿಯವಾಗಿ, ಪಾಲ್ಗೊಂಡು ಸಹಬಾಳ್ವೆಯಿಂದ ನಡೆಯುವುದನ್ನು ಕಾಣಬಹುದಾಗಿದೆ.ಮುಸ್ಲಿಂರಲ್ಲಿ ಸಾಮಾನ್ಯವಾಗಿ ಸತ್ತವರನ್ನು ಹೂಳುವ ಪದ್ಧತಿಯಿದೆ. ಸಾವು ಸಮೀಪಿಸಿದ ವ್ಯಕ್ತಿಯ ತಲೆಯ ಬಳಿ ಕುಳಿತು ಕುರಾನ್ ಶರೀಯತ್ ನ ಸ್ವಲ್ಪಭಾಗ ಓದುತ್ತಾರೆ. ಹಾಗೆ ಮರಣವನ್ನಪ್ಪಿದವರ ಬಾಯಿಗೆ ಸಕ್ಕರೆ ನೀರನ್ನು ಅಥವಾ ಮೆಕ್ಕಾದಿಂದ ತಂದಿರುವ ಪವಿತ್ರ ಬಾವಿಯ ನೀರನ್ನು ಬಿಡಲಾಗುವುದು. ಸಂಬಂಧಿಕರು ಮೃತ ವ್ಯಕ್ತಿಯ ಶವಸಂಸ್ಕಾರವನ್ನು ಮಾಡುವಾಗ ದೇಹದ ಮೇಲೆ ಮಣ್ಣನ್ನು ಹಾಕುವುದಿಲ್ಲ. ಬದಲಾಗಿ ಕಲ್ಲು ಅಥವಾ ಮರದ ತುಂಡು ಬಳಸುವ ಪದ್ಧತಿ ಇದೆ. ಹೆಣ ಮನೆಯಲ್ಲಿರುವಾಗ ಉಪ್ಪು, ಗೋದಿ ಅಥವಾ ಅಕ್ಕಿಯನ್ನು ದಾನ ಕೊಡಬೇಕೆಂಬ ನಿಯಮವಿದೆ. ಸತ್ತ ವ್ಯಕ್ತಿಯ ಕುಟುಂಬದವರು ದಾನಕೊಡುವಷ್ಟು ಶಕ್ತರಾಗಿಲ್ಲದಿದ್ದರೆ ಮಸಿದೀಯ ವತಿಯಿಂದಲೇ ಈ ದಾನ ಕೊಡಲಾಗುತ್ತದೆ.

ಹೆಣವನ್ನು ಪಶ್ಚಿಮ ದಿಕ್ಕಿಗೆ ಮುಖಮಾಡಿ ಮಲಗಿಸುವುದು ಮುಸ್ಲಿಂರ ಸಂಪ್ರದಾಯ, ಹೆಣವನ್ನು ಹೂಳುವ ಸ್ಮಶಾನ(ಖಬರ್‌ಸ್ಥಾನ್) ಇವರಿಗೆ ತುಂಬಾ ಪವಿತ್ರವಾದ ಹಾಗೂ ಪ್ರಮುಖವಾದ ಸ್ಥಳ. ಬಕ್ರೀದ್, ಮೊಹರಂ, ಷಬನಂತಹ ಪ್ರಮುಖ ಹಬ್ಬಗಳ ಸಂದರ್ಭದಲ್ಲಿ ಮಸೀದಿಯ ಪ್ರಾರ್ಥನೆ ಮುಗಿದ ಮೇಲೆ ಸ್ಮಶಾನಕ್ಕೆ ಹೋಗಿ ತಮ್ಮ ಪೂರ್ವಜರನ್ನು ಪ್ರಾರ್ಥಿಸುತ್ತಾರೆ. ಇದು ಸತ್ತವರ ಆತ್ಮಗಳಿಗೆ ಸದ್ಗತಿ ಕೋರುವ ಒಂದು ವಿಧಾನ. ಇದನ್ನು ಅವರ ಧಾರ್ಮಿಕ ಪರಿಭಾಷೆಯಲ್ಲಿ 'ಫತೇಹ' ಎಂದು ಇಂದಿಗೂ ಸಹ

ಆಚರಿಸುತ್ತಾರೆ.[೪೬] ಹೀಗೆ ಈ ತಾಲೂಕಿನ ಮುಸ್ಲಿಂರ ಸಂಸ್ಕೃತಿಯ ಆಚರಣೆಯಲ್ಲಿ ಹಿಂದೂ ಸಂಸ್ಕೃತಿ ಮತ್ತು ಇತರೆ ಜನಾಂಗದ ಸಂಸ್ಕೃತಿಗಳಲ್ಲಿಲ್ಲದ ಭಿನ್ನವಾದ ಧಾರ್ಮಿಕ, ಸಾಮಾಜಿಕ ಆಚರಣೆಗಳನ್ನು ಕಾಣಬಹುದು.

## ಕ್ರೈಸ್ತರು

ಚಾಮರಾಜನಗರ ತಾಲೂಕಿನಲ್ಲಿ ಕ್ರೈಸ್ತರು ೧೮ನೇ ಶತಮಾನದ ಆರಂಭ ಭಾಗದಿಂದಲೂ ಇದ್ದ ಬಗ್ಗೆ ದಾಖಲೆಗಳಿವೆ.[೪೭] ತಾಲೂಕಿನ ಬೋಗಾಪುರ, ಮಾದಾಪುರ, ಕೆಸ್ತೂರು, ಕಿರುಗಸೂರು, ಮೂಡ್ನಾಕೂಡು, ಕೆರಹಳ್ಳಿ, ಹೆಗ್ಗವಾಡಿ, ನಾಗುವಳ್ಳಿ, ಹಂಡರಕಳ್ಳಿ, ದೊಡ್ಡರಾಯಪೇಟೆ, ಉಗಣೇದಹುಂಡಿ, ದೇಸವಳ್ಳಿ, ಸಂತೆಮರಳ್ಳಿ, ಎಂ.ಹೊಸೂರು, ಮಂಗಲ ಗ್ರಾಮಗಳಲ್ಲಿ ಇವರು ಪ್ರಬಲರಾಗಿದ್ದಾರೆ. ಈ ಸಮುದಾಯದಲ್ಲಿ ಕಂಡಬರುವ ಕ್ಯಾಥೋಲಿಕ್ ಮತ್ತು ಪ್ರಾಟೆಸ್ಟೆಂಟ್ ಎರಡು ಪಂಥದವರು ಈ ತಾಲೂಕಿನಲ್ಲಿದ್ದಾರೆ. ಈ ಪ್ರಾಂತ್ಯದಲ್ಲಿ ಕ್ರೈಸ್ತಧರ್ಮದ ಆಗಮನ ಮತ್ತು ಬೆಳವಣಿಗೆ ಬಗೆಗೆ ಧಾರ್ಮಿಕ ಅಧ್ಯಾಯದಲ್ಲಿ ವಿಸ್ತೃತವಾಗಿ ಪ್ರಸ್ತಾಪಿಸಲಾಗಿದೆ.

ಕ್ರೈಸ್ತ ಸಮುದಾಯದವರಲ್ಲಿ ನಡೆಯುವ ವಿವಾಹ ಪದ್ಧತಿ ಭಿನ್ನವಾಗಿದೆ. ಹುಡುಗ-ಹುಡುಗಿಯ ಮನೆಯವರು ಒಪ್ಪಿದ ನಂತರ ಮೂರು ವಾರಗಳು ಚರ್ಚಿನಲ್ಲಿ ಮದುವೆಯ ಬಗ್ಗೆ ಪ್ರಸಾರ ಮಾಡಲಾಗುವುದು. ಈ ಮದುವೆಯ ಬಗ್ಗೆ ಆಕ್ಷೇಪಗಳೇನೂ ಕಂಡುಬರದಿದ್ದರೆ ಮೂರು ತಿಂಗಳ ನಂತರ ಚರ್ಚಿನಲ್ಲಿ ಮದುವೆ ಕಾರ್ಯ ನೆರವೇರಿಸಲಾಗುತ್ತದೆ. ಚರ್ಚಿನ ಪಾದ್ರಿಯಿಂದ ವಧು-ವರರ ಪ್ರಾರ್ಥನ ಮಂತ್ರಗಳನ್ನು ಕಲಿಯಬೇಕು. ಅಲ್ಲಿಯೇ ಉಂಗುರಗಳ ವಿನಿಮಯವಾಗುತ್ತದೆ. ವಧುವರರು ತಮ್ಮ ಒಪ್ಪಿಗೆಯನ್ನು ಸಾಕ್ಷಿಗಳು ಕೇಳುವಂತೆ ಉಚ್ಚರಿಸಿದ ಮೇಲೆ ಮುಂದಿನ ವಿವಾಹ ಕಾರ್ಯಗಳೆಲ್ಲಾ ಮನೆಯಲ್ಲಿ ನಡೆಯುತ್ತವೆ. ಧಾರೆ ಸೀರೆ ಉಡಿಸುವುದು, ಹಸೆಮೇಲೆ ಕೂರಿಸುವುದು, ತಾಳಿಕಟ್ಟುವುದು, ಉಡುಗೊರೆ, ಮನೆ ತುಂಬಿಸಿಕೊಳ್ಳುವುದು ಮೊದಲಾದ ಎಲ್ಲಾ ಶಾಸ್ತ್ರಗಳು ಹಿಂದೂ ಸಂಪ್ರದಾಯದಂತೆ ಇವರಲ್ಲಿಯೂ ನಡೆಯುತ್ತವೆ. ಮದುವೆಯ ದಿನ ಸಸ್ಯಹಾರ ಮತ್ತು ಮಾಂಸಾಹಾರ ಎರಡು ಬಗೆಯ ಭೋಜನ ಪದ್ಧತಿ ಇರುತ್ತದೆ. ಮದುವೆಯ ಸಂದರ್ಭದಲ್ಲಿ ಬ್ಯಾಂಡ್ ಸೆಟ್‌ಗಳ ಬಳಕೆ ಸಾಮಾನ್ಯವಾಗಿ ಇರುತ್ತದೆ. ಈ ಧರ್ಮೀಯರಲ್ಲಿ ವಿವಾಹ ವಿಚ್ಛೇದನ ಪದ್ಧತಿಯು ಅಷ್ಟು ಸುಲಭವಾಗಿರುವುದಿಲ್ಲ. ಇದಕ್ಕೆ ಚರ್ಚಿನ ಒಪ್ಪಿಗೆ ಅನಿವಾರ್ಯವಾಗಿದೆ.[೪೮]

ಕ್ರೈಸ್ತ ಧರ್ಮೀಯರು ಪ್ರಮುಖವಾಗಿ ಕ್ರಿಸ್‌ಮಸ್, ಗುಡ್‌ಫ್ರೈಡೆ ಮತ್ತು ಮೇರಿಯಮ್ಮನ ಹಬ್ಬಗಳನ್ನು ವಿಶೇಷವಾಗಿ ಆಚರಿಸುತ್ತಾರೆ. ಕ್ರಿಸ್‌ಮಸ್ ಹಬ್ಬದಲ್ಲಿ ಮನೆಮನೆ ಎದುರು ನಕ್ಷತ್ರಗಳು ತೂಗಿ ಬೀಳುತ್ತವೆ. ಕೆಲವರ ಮನೆಯಲ್ಲಿ ಏಸುವಿನ ಜನ್ಮದ ಸಂಕೇತವಾದ ಸಣ್ಣ ಕೊಟ್ಟಿಗೆ ನಿರ್ಮಿಸಿ ಅದರಲ್ಲಿ ಏಸು, ಮೇರಿ, ಜೋಸೆಫರ ವಿಗ್ರಹವಿರಿಸಿ ಅಲಂಕಾರ ಮಾಡುತ್ತಾರೆ. ಕೆಲವರ ಮನೆಗಳಲ್ಲಿ ಕ್ರಿಸ್ ಮಸ್ ಟ್ರೀ ಕೂಡಾ ಇರಿಸುವುದುಂಟು. ಶುಭಾಶಯ ಪತ್ರಗಳ ವಿನಿಮಯ, ಮಾಡಿದ ತಿಂಡಿ-ತಿನಿಸುಗಳ ಪರಸ್ಪರ ಹಂಚಿಕೊಳ್ಳುವಿಕೆ,

ಮಧ್ಯರಾತ್ರಿಯಲ್ಲಿ ಚರ್ಚ್‌ನಲ್ಲಿ ನಡೆಯುವ ಪೂಜೆಯಲ್ಲಿ ಭಾಗವಹಿಸುವುದು ಇದೆಲ್ಲಾ ಈ ತಾಲೂಕಿನ ಕ್ರೈಸ್ತರ ಕ್ರಿಸ್‌ಮಸ್ ಹಬ್ಬದ ವಿಶೇಷ ಆಚರಣೆಗಳಾಗಿವೆ.

ಏಸು ಶಿಲುಬೆ ಏರಿದ ಶುಭ ಶುಕ್ರವಾರದ ಹಿಂದಿನ ೪೦ ದಿನಗಳನ್ನು ಇವರು ತಪಸ್ಸಿನ ಕಾಲವೆಂದು ಕರೆದು ಆ ದಿನಗಳಲ್ಲಿ ಉಪವಾಸ, ದೇವರ ಪ್ರಾರ್ಥನೆಗಳಲ್ಲಿ ಕಳೆಯುವುದಲ್ಲದೆ, ಮನರಂಜನೆ, ಸಂತೋಷಕೂಟ, ಮದುವೆಯಂತ ಶುಭಕಾರ್ಯಗಳನ್ನು ಆ ದಿನಗಳಲ್ಲಿ ಮಾಡುವುದಿಲ್ಲ. ಏಸು ಸಮಾಧಿ ಯಿಂದ ಎದ್ದು ಬಂದುದನ್ನು 'ಈಸ್ಟರ್' ಭಾನುವಾರದಂದು ಸಂಭ್ರಮದಿಂದ ಆಚರಿಸುತ್ತಾರೆ.

ಸೆಪ್ಟೆಂಬರ್ ತಿಂಗಳಲ್ಲಿ ಬರುವ ಮೇರಿಯಮ್ಮನ ಹಬ್ಬ ಕ್ರೈಸ್ತರಿಗೆ ಮತ್ತೊಂದು ದೊಡ್ಡ ಹಬ್ಬ. ಇದನ್ನು ಸುಗ್ಗಿ ಹಬ್ಬವೆಂದು ಸಹ ಕರೆಯುತ್ತಾರೆ. ಅಂದು ಹೊಸದಾಗಿ ಬಂದ ಭತ್ತದ ಫಸಲನ್ನು, ಕಬ್ಬಿನ ಜೆಲ್ಲೆಯನ್ನು ಮೆರವಣಿಗೆಯ ಮೂಲಕ ಊರಿನ ಚರ್ಚಿಗೆ ತರುತ್ತಾರೆ. ಅಲ್ಲಿ ಪಾದ್ರಿ ಅದನ್ನು ಮಂತ್ರಿಸಿ ಜನರಿಗೆ ಹಂಚುತ್ತಾನೆ. ಅಂದು ಕ್ರೈಸ್ತರ ಮನೆಯಲ್ಲಿ ಮಾಂಸದ ಊಟ ಮಾಡುವುದಿಲ್ಲ. ಏಳು ವಿಧದ ತರಕಾರಿ ಫಲ್ಯಗಳನ್ನು ಮಾಡುವುದು ಅಂದಿನ ವಿಶೇಷ. ಹೊಸ ಫಸಲನ್ನು ನೀಡಿದ ದೇವರಿಗೆ ವಂದನೆ ಸಲ್ಲಿಸುವುದೇ ಈ ಹಬ್ಬ. ಇದು ಹಿಂದೂಗಳ ಸಂಕ್ರಾಂತಿ ಹಬ್ಬಕ್ಕೆ ಸಾಮ್ಯವಾಗಿದೆ.

ಕ್ರೈಸ್ತರಲ್ಲಿ ಸತ್ತವ್ಯಕ್ತಿಗಳ ಹೆಣವನ್ನು ಹೂಳುವ ಪದ್ಧತಿಯಿದೆ. ಸಾವು ಸಮೀಪಿಸುತ್ತಿದೆ ಎನ್ನುವಾಗ ಪಾದ್ರಿಯನ್ನು ಕರೆಸಿ ಕೊನೆಯುಸಿರೆಲೆಯುತ್ತಿರುವ ವ್ಯಕ್ತಿಗೆ ಅಂತ್ಯಾಭ್ಯಂಜನ ಎಂಬ ಸಂಸ್ಕಾರವನ್ನು ಕೊಡಿಸಲಾಗುತ್ತದೆ. ಆ ವ್ಯಕ್ತಿ ತಾನು ಮಾಡಿದ ಎಲ್ಲಾ ಪಾಪಗಳಿಂದ ಕ್ಷಮಿಸಲ್ಪಟ್ಟವನಾಗಿ ದೇವರ ಸನ್ನಿಧಿಗೆ ತೆರಳಲು ಅನುಕೂಲವಾಗಲೆಂಬುದೇ ಈ ವಿಧಿಯ ಉದ್ದೇಶ. ಇನ್ನು ಸತ್ತ ವ್ಯಕ್ತಿಯ ಸಮಾಧಿಗೆ ಹೋಗಿ ಒಂದು ಹಿಡಿ ಮಣ್ಣನ್ನು ಹಾಕುವ ಕಾರ್ಯವನ್ನು ಕ್ರಿಸ್ತರು ತಪ್ಪದೇ ಮಾಡುತ್ತಾರೆ. ಇವರಲ್ಲಿರುವ ಮತ್ತೊಂದು ಪದ್ಧತಿಯೆಂದರೆ ಯಾರಾದರೂ ಸತ್ತಾಗ ಚರ್ಚ್‌ಗಳಲ್ಲಿ ಪ್ರತ್ಯೇಕವಾಗಿರುವ ಗಂಟೆಗಳನ್ನು ಬಾರಿಸುವುದುಂಟು. (ಇದು ದಿನ ನಿತ್ಯದ ಪೂಜಾ ಸಂದರ್ಭದಲ್ಲಿ ಬಾರಿಸುವ ಗಂಟೆಗಿಂತ ಭಿನ್ನವಾಗಿರುತ್ತದೆ) ಈ ಗಂಟೆ ಬಾರಿಸಿದಾಗ ಯಾರೋ ವಿಧಿವಶರಾಗಿದ್ದಾರೆಂದು ತಿಳಿಯುತ್ತಾರೆ. ಶವಸಂಸ್ಕಾರ ನಂತರ ಶ್ರಾದ್ಧಕಾರ್ಯವನ್ನು ಇವರು ೩, ೭ ಹಾಗೂ ೧ ವರ್ಷದ ಕಾರ್ಯವೆಂದು ಮಾಡುವುದುಂಟು ಎಂದು ವಕ್ತೃಗಳಿಂದ ತಿಳಿದುಬರುತ್ತದೆ.[೪೪]

೧೯೭೫ರಲ್ಲಿ ತಾಲೂಕಿನ ರಾಮಸಮುದ್ರದಲ್ಲಿ ಸ್ಥಾಪಿತವಾಗಿರುವ "ಕ್ರಿಸ್ತರಾಜ ಬಾಲಂ ಪಟ್ಟಣಂ" ಎಂಬ ಉಚಿತ ವಿದ್ಯಾರ್ಥಿನಿಲಯ, ೧೯೪೦ರಲ್ಲಿ ಚಾಮರಾಜನಗರ ಪಟ್ಟಣದಲ್ಲಿ ಸ್ಥಾಪಿತವಾಗಿರುವ "ಸೆಂಟ್ ಜೋಸೆಫ್ ಕಾನ್ವೆಂಟ್" ಮತ್ತು ೧೯೪೧ರಲ್ಲಿ ನೆರೆಯ ತಮಿಳುನಾಡಿನ ತಾಳವಾಡಿಯ ತಿಗಣಾರೆಯಲ್ಲಿ ಮತ್ತು ತಾಲೂಕಿನ ವೆಂಕಟಯ್ಯನ ಛತ್ರದಲ್ಲಿ ಸ್ಥಾಪನೆಗೊಂಡಿರುವ ಅಸೀಸ್ ಕುಷ್ಠರೋಗ ಕೇಂದ್ರಗಳನ್ನು ಸ್ಥಾಪಿಸುವ ಮೂಲಕ ಕ್ರೈಸ್ತಧರ್ಮಿಯರು ಚಾಮರಾಜನಗರ ತಾಲೂಕಿನಲ್ಲಿ ಶೈಕ್ಷಣಿಕ ಮತ್ತು ಆರೋಗ್ಯ

ಸೇವೆಯಲ್ಲಿ ಅದ್ಭುತ ಸಾಧನೆ ಮಾಡಿದ್ದಾರೆ. ನಾಡಿನ ಇತರೆಡೆಗಳಂತೆ ಈ ಗಡಿ ತಾಲೂಕಿನ ಆರೋಗ್ಯ ಮತ್ತು ಶಿಕ್ಷಣ ಕ್ಷೇತ್ರದಲ್ಲಿ ಕ್ರೈಸ್ತರ ಸಾಧನೆ ಅವಿಸ್ಮರಣೀಯವಾದುದು.

**ಹದಿನೆಂಟು ಪಣದವರು, ಆಯುಗಾರರು**

ಚಾಮರಾಜನಗರ ತಾಲೂಕಿನ ಸಾಂಸ್ಕೃತಿಕ ಬದುಕಿನ ಚಿತ್ರಣವನ್ನು ಈ ಮೇಲೆ ಹೇಳಿರುವ ಜಾತಿ-ಧರ್ಮಗಳ ಹಿನ್ನೆಲೆಯಲ್ಲಿ ಕಟ್ಟಿಕೊಡಲಾಗಿದೆ. ಈ ಜಾತಿ ಸಮುದಾಯಗಳಲ್ಲದೆ ತಾಲೂಕಿನಲ್ಲಿ ಗಾಣಿಗರು, ವಡ್ಡರು, ಈಡಿಗರು, ಅಗಸರು, ವಿಶ್ವಕರ್ಮರು, ಕ್ಷೌರಿಕರು, ದೇವಾಂಗರು, ಕುಂಬಾರರು ಮತ್ತು ತಮಿಳರು ಮೊದಲಾದವರೆಲ್ಲಾ ತಮ್ಮ ತಮ್ಮ ವೃತ್ತಿಯನ್ನಾಧರಿಸಿ ಈ ತಾಲೂಕಿನಲ್ಲಿ ನೆಲೆಗೊಂಡಿದ್ದಾರೆ. ತಾಲೂಕಿನಲ್ಲಿ ತಮಿಳು ಭಾಷೆಯ ಜನರೆ ಸುಮಾರು ೪೦ ಸಾವಿರದಷ್ಟಿದ್ದಾರೆ. ಅಲ್ಲದೆ ಈ ತಾಲೂಕಿನ ಸಾಂಸ್ಕೃತಿಕ ಇತಿಹಾಸ ಬರೆಯುವಲ್ಲಿ ಅವರ ಪಾತ್ರವೂ ಪ್ರಮುಖವಾದುದು.

ಭಾರತೀಯ ಸಮಾಜವನ್ನು ಅಧ್ಯಯನ ಮಾಡಿದಾಗ ಜಾತಿ-ವ್ಯವಸ್ಥೆ ಮತ್ತು ಜಾತಿ ಆಧಾರಿತ ಕಸುಬು ಸಾಮಾನ್ಯವಾಗಿ ಕಂಡುಬರುವ ವಿಚಾರವಾಗಿದೆ. ಚಾಮರಾಜನಗರ ತಾಲೂಕು ಇದಕ್ಕೆ ಹೊರತಲ್ಲ. ಈ ತಾಲೂಕಿನಲ್ಲಿಯೂ ಇತರೆಡೆಗಳಂತೆ ಜಾತಿವ್ಯವಸ್ಥೆ ಬಲಿಷ್ಟವಾಗಿದ್ದು, ಶ್ರೇಣಿಕೃತ ಸಮಾಜವನ್ನು ಕಾಣಬಹುದು. ಇದಕ್ಕೆ ಹಿಂದಿನಿಂದ ವಿಧಿಸಿದ ಕಟ್ಟುಪಾಡುಗಳು ಒಂದರ್ಥದಲ್ಲಿ ಕಾರಣರಾದರೆ ಮತ್ತೊಂದು ರೀತಿಯಲ್ಲಿ ತಮಗೆ ಬೇಕಾದಂತಹ ಸೇವೆ-ಸವಲತ್ತುಗಳನ್ನು ಪಡೆಯುವ ಉದ್ದೇಶವಿರಬಹುದು. ನಾವು ವರ್ಗರಹಿತ ಸಮಾಜವನ್ನು ಕಾಣಲು ಸಾಧ್ಯವಿಲ್ಲ. ಒಂದಲ್ಲ ಒಂದು ರೀತಿಯಲ್ಲಿ ಸಾಮಾಜಿಕ ಸ್ತರ ವಿನ್ಯಾಸಗಳು ಇದ್ದೆ ಇರುತ್ತವೆ. ಅಷ್ಟೇ ಇಲ್ಲದೆ ಇಲ್ಲಿ ಪ್ರತಿಯೊಂದು ಜಾತಿಯವರೂ ತಾವು ಸಾಮಾಜಿಕವಾಗಿ ಮೇಲ್ಮಟ್ಟದವರೆಂದು ಗುರುತಿಸಿಕೊಳ್ಳಲು ಬಯಸುತ್ತಾರೆ. ಆದರೂ ಈ ವ್ಯವಸ್ಥೆಗೆ ಪ್ರತಿಯೊಂದು ವರ್ಗದ ಜನರು ಹೊಂದಿಕೊಂಡು ಹೋಗುತ್ತಿರುವುದು ವಾಸ್ತವಾಂಶ. ಅವರ ಈ ಸಮನ್ವಯ ಭಾವನೆಯಿಂದಲೇ ಈ ತಾಲೂಕಿನ ಸಂಸ್ಕೃತಿ ಶ್ರೀಮಂತವಾಗಿದೆ ಎನ್ನಬಹುದು.

**ತಾಲೂಕಿನ ಬುಡಕಟ್ಟು ಜನಾಂಗ**

ಬೆಟ್ಟಗುಡ್ಡಗಳಲ್ಲಿ ಜೀವಿಸುತ್ತಾ ತಮ್ಮದೇ ಆದ ಜೀವನೋಪಾಯ ಮಾರ್ಗ ಕಂಡುಕೊಂಡು ಅತಿ ಕೆಳಸ್ತರದ ಜೀವನ ನಡೆಸುತ್ತಿರುವ ಬುಡಕಟ್ಟು ಜನರನ್ನು ಮೂಲ ನಿವಾಸಿಗಳು, ಆದಿವಾಸಿಗಳು ಪರಿಶಿಷ್ಟ ಪಂಗಡದವರು, ಗಿರಿಜನರು ಮುಂತಾದ ಹಲವಾರು ಹೆಸರುಗಳಿಂದ ಕರೆಯುತ್ತೇವೆ. ಈ ಬುಡಕಟ್ಟು ಜನರಲ್ಲಿ ವಿಭಿನ್ನ ಭಾಷೆ, ಧರ್ಮ, ಸಂಸ್ಕೃತಿ, ಸಂಪ್ರದಾಯ, ವೃತ್ತಿ, ಉಡುಗೆ, ಊಟೋಪಚಾರ ಮತ್ತು ಆಚಾರಗಳನ್ನು ಕಾಣಬಹುದು. ಇವರನ್ನು ನಮ್ಮ ಸಂವಿಧಾನದ ೩೪೨ನೆಯ ವಿಧಿ ಪ್ರಕಾರ ಪರಿಶಿಷ್ಟ ಪಂಗಡದವರೆಂದು ಕರೆಯಲಾಗಿದೆ.

ಚಾಮರಾಜನಗರ ತಾಲೂಕಿನ ಪುಣಜನೂರಿನ ಗ್ರಾಮಪಂಚಾಯಿತಿಯ ವ್ಯಾಪ್ತಿಯಲ್ಲಿ ಲಂಬಾಣಿ, ಬಡಗ ಮತ್ತು ಸೋಲಿಗ ಜನಾಂಗಗಳು ವಾಸವಾಗಿದ್ದಾರೆ. ತಾಲೂಕಿನ ಕೋಳಿಪಾಳ್ಯ, ಬೆಜ್ಜಲಪಾಳ್ಯ, ವೀರಯ್ಯನಪುರ, ಬೂದಿಪಡಗ, ರಂಗಸಂದ್ರ ಮತ್ತು ದೊಡ್ಡ ಮೋಳೆ ಮೊದಲಾದ ಗ್ರಾಮಗಳಲ್ಲಿ ಸುಮಾರು ೫೦೦ ಕುಟುಂಬಗಳು ವಾಸವಾಗಿದ್ದರೆ, ಪುಣಜನೂರಿನಲ್ಲಿ ೭೦ ಬಡಗಾಸ್ ಕುಟುಂಬಗಳು ವಾಸವಾಗಿದ್ದಾರೆ. ಹಾಗೆಯೇ ಗೋಡೆ ಮಡುವಿನ ದೊಡ್ಡಿ, ಹೊಸಪೋಡು, ಶ್ರೀನಿವಾಸಪುರ ಕಾಲೋನಿ, ಮುನೇಶ್ವರ ಕಾಲೋನಿ, ಬೇಡಗುಳಿ, ಕಾಡಿಗೇರಿ ಎಸ್ಟೇಟ್, ಬೇಡಗುಳಿ ಎಸ್ಟೇಟ್, ಮಾರಿಗುಡಿ ಪೋಡು ಮೊದಲಾದ ಗ್ರಾಮಗಳಲ್ಲಿ ಸುಮಾರು ೨೦೦ ಸೋಲಿಗ ಕುಟುಂಬಗಳು ವಾಸವಾಗಿದ್ದಾರೆ.[೫೦]

ಲಂಬಾಣಿ ಸಮುದಾಯವನ್ನು ನಾವು ಒಂದೊಂದು ಜಾತಿ ಸಮುದಾಯದಲ್ಲಿ ಗುರುತಿಸಿಕೊಂಡಿದ್ದರು ಸಹ ಮೂಲತಃ ಅವರುಗಳೂ ಬುಡಕಟ್ಟು ಜನಾಂಗಕ್ಕೆ ಸೇರಿದವರಾಗಿರುವುದರಿಂದ ಅವರುಗಳನ್ನು ಸಹ ಇಲ್ಲಿ ಅಧ್ಯಯನಕ್ಕೆ ಅಳವಡಿಸಿಕೊಳ್ಳಲಾಗಿದೆ.

**ಸೋಲಿಗರು**

ಇವರು ದಕ್ಷಿಣ ಭಾರತದ ಹಳೆಯ ಮೂಲ ನಿವಾಸಿಗಳು. ಇವರ ಬೆಳವಣಿಗೆಯ ಘಟ್ಟಗಳನ್ನು ಗುರುತಿಸುವ ಪ್ರಯತ್ನ ಇದ್ದರೂ ವಿಶ್ಲೇಷಣೆ ಅಷ್ಟು ಸುಲಭವಲ್ಲ. ಆಧುನಿಕ ರಾಜಕೀಯ ವ್ಯವಸ್ಥೆಯ ಮೂಲವೆಂದೇ ಹೇಳಲಾಗುವ ಇವರ ರಾಜಕೀಯ ವ್ಯವಸ್ಥೆ, ಸಾಮಾಜಿಕ ಕಟ್ಟುಪಾಡು, ಧಾರ್ಮಿಕ ಜೀವನ ಜನಾಂಗೀಯ ಒಳವ್ಯವಸ್ಥೆ ಮುಂತಾದ ಅನನ್ಯ ಅಂಶಗಳಿಂದ ಇವರ ಸಂಸ್ಕೃತಿಯು ಶ್ರೀಮಂತವಾಗಿದೆ.

ಸೋಲಿಗರು ಕಾಡಿನಲ್ಲಿ ಇದ್ದವರು. ಅವರ ಪುರಾಣಗಳು ಕಾಡಿನಿಂದ ಆರಂಭವಾಗಿ ಕಾಡಿನಲ್ಲಿಯೇ ಅಂತ್ಯವಾಗುತ್ತವೆ. ಇವರು ನಾಡಿನಲ್ಲಿ ಇದ್ದವರು ಎಂಬುದಕ್ಕೆ ಯಾವುದೇ ಲಿಖಿತ ಆಧಾರಗಳಿಲ್ಲ. ಪ್ರತಿಯೊಂದು ಆದಿವಾಸಿ ಪಂಗಡವೂ ತಮ್ಮದೇ ವಿಶಿಷ್ಟ ಸಂಸ್ಕೃತಿಯನ್ನು ಹೊಂದಿರುತ್ತದೆ. ಬುಡಕಟ್ಟು ಜನಾಂಗಗಳ ವೇಷಭೂಷಣ, ರೂಢಿ, ಸಂಪ್ರದಾಯಗಳು, ಜನನ, ಸಂಸ್ಕಾರ, ಮದುವೆಯಲ್ಲಿರುವ ಆಚರಣೆಗಳು, ಅಂತ್ಯಸಂಸ್ಕಾರ, ನ್ಯಾಯವಿಧಾನ, ನೈತಿಕ ನಿಯಮಗಳು ನಂಬಿಕೆ ಅಚಾರ ವಿಚಾರಗಳ ವಿಧಿ ವಿಧಾನಗಳಲ್ಲಿ ಏಕ ರೂಪತೆ ಇರುತ್ತದೆ. ಇವರು ಮೂರ್ತಿ ಪೂಜಕರು, ನಿಸರ್ಗಾರಾಧಕರು. ಸರ್ವಚೇತನ ವಾದಿಗಳು. ಲಾಂಛನವಾದಿಗಳು, ಭೂತ-ಪ್ರೇತ, ಮಾಟ-ಮಂತ್ರಗಳ ಬಗೆಗೆ ನಂಬಿಕೆಯುಳ್ಳವರು. ಹಿಗೆ ಇವರ ಸಂಸ್ಕೃತಿಯೂ ವೈಶಿಷ್ಟ್ಯತೆಯಿಂದ ಕೂಡಿದೆ.

ಸೋಲಿಗರಲ್ಲಿ ಅನೇಕ ಬಗೆಯ ಕುಲಪಂಗಡಗಳನ್ನು ಕಾಣುತ್ತೇವೆ. ಕುಲ ವ್ಯವಸ್ಥೆಯು ಅವರಿಗೆ ಬಂಧುತ್ವವನ್ನು ಗುರುತಿಸಿಕೊಳ್ಳುವ ಸಲುವಾಗಿಯೂ, ವೈವಾಹಿಕ ಸಂಬಂಧ ಬೆಳೆಸಿದ ಸಲುವಾಗಿಯೂ

ಅವಶ್ಯಕತವಾಗಿದೆ. ಇವರಲ್ಲಿ ಐದು ಕುಲದವರು(ಆಲುರುಕುಲ, ತೆನೆಯರಕುಲ, ಸೂರ್ಯನಕುಲ, ಬೆಳ್ಳರಕುಲ, ಸಲಕರಕುಲ) ಮತ್ತು ಏಳು ಕುಲದವರು ಎಂಬ ಎರಡು ಗುಂಪುಗಳಿವೆ. ಇವರ ಕುಲದ ವಿಂಗಡಣೆಯೂ ವೈವಾಹಿಕ ಸಂಬಂಧ ಬೆಳೆಸುವಲ್ಲಿ ಪ್ರಮುಖ ಪಾತ್ರವನ್ನು ವಹಿಸುತ್ತದೆ. ಒಂದು ಕುಲದಿಂದ ಮತ್ತೊಂದು ಕುಲಕ್ಕೆ ಹೆಣ್ಣು ಕೊಡುವ, ತಂದುಕೊಳ್ಳುವ ಸಂಪ್ರದಾಯವನ್ನು ಕಾಣುತ್ತೇವೆ. ಒಂದೇ ಕುಲದಲ್ಲಿ ವೈವಾಹಿಕ ಸಂಬಂಧ ಬೆಳೆಸುವುದು ಇವರಲ್ಲಿ ನಿಷಿದ್ಧವಾದುದು. ಒಂದೇ ಕುಲದವರು ಭ್ರಾತೃ ಸಂಬಂಧವನ್ನು ಹೊಂದಿರುತ್ತಾರೆಂಬ ದೃಢ ನಂಬಿಕೆ ನಾಗರಿಕ ಸಮಾಜದ ಜನರಲ್ಲಿರುವಂತೆ ಬುಡಕಟ್ಟು ಸಮುದಾಯದವರಲ್ಲಿಯೂ ಇದೆ.[೫೧]

**ಸಾಮಾಜಿಕ ಜೀವನ :** ಸೋಲಿಗರ ಸಾಮಾಜಿಕ ವ್ಯವಸ್ಥೆಗೆ ವೇದ, ಉಪನಿಷತ್ತು ಧರ್ಮಶಾಸ್ತ್ರ ಇತ್ಯಾದಿಗಳ ಪರಂಪರೆ ಇರುವುದಿಲ್ಲ. ಜೀವನ ಕ್ರಮದಲ್ಲಿ ಸಾಂಘಿಕ ಜೀವನದಲ್ಲಿ ಉಂಟಾಗಬಹುದಾದ ಸಾಮಾಜಿಕ ಸಮಸ್ಯೆಗಳ ತೊಡಕುಗಳನ್ನು ಪರಿಹರಿಸಿಕೊಳ್ಳಲು ಕಂಡುಕೊಂಡ ರೀತಿ ನೀತಿ ನಿಯಮಗಳೆಲ್ಲ ಈ ಜನರ ಸಾಮಾಜಿಕ ವ್ಯವಸ್ಥೆಯನ್ನು ನಿಯಂತ್ರಿಸುತ್ತಾ ಬಂದಿದೆ. ವರ್ತಮಾನ ಕಾಲಕ್ಕೂ ಹಿಂದಿನಿಂದ ಬಂದ ನಿಯಮಗಳನ್ನೆ ಪಾಲಿಸುತ್ತಾ ಬದುಕುತ್ತಿದ್ದಾರೆ.

ಯಾವುದೇ ಸಾಮಾಜಿಕ ವ್ಯವಸ್ಥೆಯಲ್ಲಿ ಕುಟುಂಬ ಎನ್ನುವುದು ಮೂಲಭೂತವಾದ ಒಂದು ಸಂಸ್ಥೆ. ಈ ಸಂಸ್ಥೆಗಳೆ ಸಾಮಾಜಿಕ ಜೀವನ, ಸಮಾಜ ರಚನೆ ಮೊದಲಾದವುಗಳ ಬಗ್ಗೆ ಪ್ರಾಪಂಚಿಕ ತಿಳುವಳಿಕೆಯನ್ನು ಕೊಟ್ಟು ಸಮಾಜವನ್ನು ರೂಪಿಸುವವು. ಇಂತಹ ವ್ಯವಸ್ಥೆಗಳಲ್ಲಿ ಬಹು ಮುಖ್ಯವಾದವುಗಳೆಂದರೆ

೧. ಕುಟುಂಬ ಮತ್ತು ವಿವಾಹ.

೨. ಕುಲ ಪಂಚಾಯಿತಿ

ಬುಡಕಟ್ಟು ಜನರಲ್ಲಿ ಬಂಧುತ್ವ ವ್ಯವಸ್ಥೆ ವಿಶಿಷ್ಟವಾಗಿರುತ್ತದೆ. ಮಾತೃ ಪ್ರಧಾನ ಕುಟುಂಬ ವ್ಯವಸ್ಥೆ ಇಲ್ಲಿದ್ದು, ಎಲ್ಲದಕ್ಕೂ ಸರಿ ಸಮಾನವಾದ ಸ್ಥಾನಮಾನವಿದೆ. ಇದರಲ್ಲಿ ಬಂಧುತ್ವವು ರಕ್ತಸಂಬಂಧದ ಮೂಲಕ ನಿರ್ಣಯವಾಗುತ್ತದೆ. ತಾಯಿ ಮತ್ತು ತಂದೆ ಕಡೆಯ ಸಂಬಂಧಗಳು ಚಿಕ್ಕಪ್ಪ, ಚಿಕ್ಕಮ್ಮ, ದೊಡ್ಡಪ್ಪ, ದೊಡ್ಡಮ್ಮ, ಅಣ್ಣ-ತಂಗಿಯರು, ಅಕ್ಕ-ತಮ್ಮ ಹೀಗೆ ಸಂಬಂಧಗಳು ನಿರ್ಮಾಣವಾಗುತ್ತವೆ. ಪೋಡಿನಲ್ಲಿ ಒಂದು ಮಗು ಅನಾಥವಾದರೆ ಸಹಜವೆಂಬಂತೆ ತಮ್ಮ ಮಕ್ಕಳೊಡನೆ, ತಮ್ಮ ಮಗುವೆ ಎಂಬಂತೆ ಸಾಕಿ-ಸಲಹುವ ಪ್ರಸಂಗಗಳು ಇವರಲ್ಲಿವೆ.

ವಿವಾಹವು ಮಾನವನ ಆಸೆ, ಆಕಾಂಕ್ಷೆ ಹಾಗೂ ಬೇಡಿಕೆಗಳನ್ನು ಪೂರೈಸುತ್ತದೆ. ಮಾನವನು ಸಮಾಜದಲ್ಲಿ ವಿವಾಹದ ಧ್ಯೇಯೋದ್ದೇಶಗಳ ಪೂರೈಕೆಗಾಗಿ ಈ ಪದ್ಧತಿಯ ಮೇಲೆ ಅನೇಕ ಕಟ್ಟುಪಾಡುಗಳನ್ನು

ಇಂದಿಗೂ ಜೀವಂತವಾಗಿ ಉಳಿಸಿಕೊಂಡು ಬರುತ್ತಿದ್ದಾನೆ. ಸೋಲಿಗರಲ್ಲಿ ಕುಲವು ಮದುವೆ ಸಂದರ್ಭದಲ್ಲಿ ಪ್ರಮುಖ ಪಾತ್ರ ವಹಿಸುತ್ತದೆ. ಒಂದೇ ಕುಲದ ಹೆಣ್ಣು ಮತ್ತು ಗಂಡು ಅಣ್ಣ-ತಂಗಿ ಎಂಬುವಂತಹ ಭಾವನೆಯನ್ನು ಹೊಂದಿದ್ದಾರೆ. ಸೋಲಿಗರ ವಿವಾಹ ಪದ್ಧತಿಯು ತುಂಬಾ ಸರಳ ವಿಧಾನದಿಂದ ಕೂಡಿರುತ್ತದೆ. ಇವರದು ಸಂಪ್ರದಾಯಿಕ ಮದುವೆ ಪದ್ಧತಿಯಾದರೂ ಹಿರಿಯರೆಲ್ಲ ಸೇರಿ ಸರಳ ವಿಧಾನದಿಂದ ವಿವಾಹ ಕಾರ್ಯವನ್ನು ನೆರವೇರಿಸಿಕೊಳ್ಳುತ್ತಾರೆ.

ಸೋಲಿಗರಲ್ಲಿ ವಿಶಿಷ್ಟವಾದ ಅನೇಕ ವಿಧವಾದ ವಿವಾಹ ಪದ್ಧತಿಗಳಿವೆ. ಅವುಗಳಲ್ಲಿ

೧. ಬಲವಂತ ವಿವಾಹ

೨. ಅಪಹರಣ ವಿವಾಹ

೩. ಸೇವಾ ವಿವಾಹ

೪. ಏಕಪತ್ನಿತ್ವ ವಿವಾಹ

೫. ಬಹುಪತ್ನಿತ್ವ ವಿವಾಹ

೬. ವಿಧವಾ ವಿವಾಹ

೭. ಮಿಶ್ರದಾಯಾದಿ ವಿವಾಹ

ಬಯಸಿದ ಕನ್ಯೆಯನ್ನು ಆಕೆಯ ಮತ್ತು ಅವಳ ಮನೆಯವರ ಅನುಮತಿಯಿಲ್ಲದೆ ಹುಡುಗಿಯನ್ನು ಹುಡುಗ ಬಲವಂತವಾಗಿ ಬೇರೆಡೆಗೆ ಕರೆದುಕೊಂಡು ಹೋಗಿ ಮದುವೆಯಾಗುವುದನ್ನೆ ಬಲವಂತ ವಿವಾಹ ಎಂದು ಕರೆಯುವರು. ಸೋಲಿಗರಲ್ಲಿ ಅಪಹರಣ ವಿವಾಹವು ಹೆಚ್ಚು ಪ್ರಚಾರದಲ್ಲಿ ಇರುವ ಒಂದು ವಿವಾಹ ಪದ್ಧತಿಯಾಗಿದೆ. ಅವರು ವಾಸಿಸುವ ಪರಿಸರ ಈ ಬಗೆಯ ವಿವಾಹಕ್ಕೆ ಪರೋಕ್ಷವಾಗಿ ಸಹಾಯವಾಗುತ್ತದೆ ಎಂದು ಹೇಳಬಹುದು. ಮೂಲದಲ್ಲಿ ಸೋಲಿಗರು ಆರ್ಥಿಕವಾಗಿ ದುರ್ಬಲರಾಗಿದ್ದರಿಂದ ಗೆಡ್ಡೆಗೆಣಸು ಕೀಳುವ ಸಲುವಾಗಿ, ಸೌದೆ ತರಲು, ಜೇನು ಬಿಡಿಸಲು ಮುಂತಾದ ಸಂದರ್ಭದಲ್ಲಿ ಗಂಡು ಹೆಣ್ಣು ಬೇಧವಿಲ್ಲದೆ ಕಾಡಿನಲ್ಲಿ ಒಟ್ಟಾಗಿ ಅಲೆಯಬೇಕಾಗಿ ಬಂದ ಸಂದರ್ಭದಲ್ಲಿ, ಇಬ್ಬರಲ್ಲೂ ಸಲಿಗೆ ಬೆಳೆದು ಪರಸ್ಪರ ಮಾತನಾಡಿ ಅರ್ಥಮಾಡಿಕೊಂಡಂತಹ ಸಂದರ್ಭದಲ್ಲಿ ಪರಸ್ಪರರು ಜೊತೆಯಾಗಿ ಬೇರೆಡೆಗೆ ಓಡಿ ಹೋಗುವ ತೀರ್ಮಾನ ಮಾಡುತ್ತಾರೆ. ಗಂಡು ತಾನು ಬಯಸಿದೆಡೆಗೆ ಅವಳನ್ನು ಅಪಹರಿಸಿಕೊಂಡು ಹೋಗುತ್ತಾನೆ. ಹುಡುಗಿಯು ಅವನ ಇಚ್ಛೆಯಮತೆ ನಡೆಯುತ್ತಾಳೆ. ಪೋಡಿನಲ್ಲಿ ಯಾರು ಇಲ್ಲ ಎಂಬುದು ತಿಳಿದ ಮೇಲೆ ಹುಡುಗ ಹುಡುಗಿಯರ ಚಲನವಲನದ ಮೇಲೆ ಗಮನವಿಟ್ಟಿದ್ದು ಪೋಡಿನ ಜನಕ್ಕೆ ಪೋಡಿನಲ್ಲಿ ಕಾಣೆಯಾಗಿರುವವರು ಯಾರು ಎಂಬುದು ಖಾತ್ರಿಯಾಗುತ್ತದೆ. ಹುಡುಗ-ಹುಡುಗಿ ಪೋಡಿಗೆ ಮರಳಿದ ದಿನ ಕುಲಪಂಚಾಯಿತಿ ಸೇರಿ ಹಿರಿಯರ ಅಪ್ಪಣೆಯಿಲ್ಲದೆ ಓಡಿಹೋಗಿದ್ದರಿಂದ ಇಬ್ಬರಿಗೂ ದಂಡವಿಧಿಸು ತ್ತಾರೆ. ಅಲ್ಲದೆ ಕುಲಸ್ಥರಿಗೆ ಭೋಜನಕೂಟವನ್ನು ಏರ್ಪಡಿಸಬೇಕು. ಅನಂತರದಲ್ಲಿ ಅವರಿಬ್ಬರೂ ಗಂಡ-ಹೆಂಡತಿಯರೆಂದು ಪೋಡಿನವರೆಲ್ಲಾ ಒಪ್ಪಿಕೊಳ್ಳುತ್ತಾರೆ.[೨]

ಸೇವಾ ವಿವಾಹ ಅಥವಾ ಜೀತ ವಿವಾಹವು ಕನ್ಯಾಶುಲ್ಕವನ್ನು ನೀಡದೆ ನಡೆಯುವಂತ ವಿವಾಹ ಪದ್ಧತಿಯಾಗಿದೆ. ಕನ್ಯಾಶುಲ್ಕ ಕೊಡಲು ಸಾಧ್ಯವಾಗದಿದ್ದಂತ ಬಡ ಯುವಕರು ತಮ್ಮ ಭಾವಿ ಅತ್ತೆ ಮಾವಂದಿರ ಮನೆಯಲ್ಲಿ ಕೆಲವು ಕಾಲ ದುಡಿದು ಅನಂತರ ಮದುವೆ ಮಾಡಿಸಿಕೊಳ್ಳುವುದು. ಇದು ಸೇವಾ ವಿವಾಹವಾದ ಹಾಗೆಯೇ ಆಗುತ್ತದೆ. ಕನ್ಯಾಶುಲ್ಕ ತೆರೆದ ಮದುವೆ ಕಾರ್ಯ ನಡೆಯುತ್ತದೆ. ಹುಡುಗ ಬಯಸಿದಾಗ ಮರಳಿ ತಂದೆ ಮನೆಗೆ ಹೋಗಬಹುದು.

ಏಕಪತ್ನಿ ವಿವಾಹ ಪದ್ಧತಿಯು ಸೋಲಿಗರಲ್ಲಿ ಕಡ್ಡಾಯವಾಗಿ ಇರುವಂತದ್ದು. ಸೋಲಿಗರ ಎಷ್ಟೋ ಕುಟುಂಬಗಳು ಇಂದೂ ಸಹ ಏಕಪತ್ನಿ ವ್ರತಸ್ಥರಾಗಿ ಸಂಸಾರ ಸಾಗಿಸಿಕೊಂಡು ಸುಖೀ ಸಂಸಾರಿಗಳಾಗಿರುವುದನ್ನು ಕಾಣುತ್ತೇವೆ.

ಬಹುಪತ್ನಿತ್ವ ವಿವಾಹ ಪದ್ಧತಿಯು ಸೋಲಿಗರಲ್ಲಿ ಬಹಳ ವಿರಳ. ಒಬ್ಬ ವ್ಯಕ್ತಿ ಮರುಮದುವೆ ಮಾಡಿಕೊಂಡನೆಂದರೆ ಮುಗಿಯಿತು. ಅವನ ಮೊದಲ ಹೆಂಡತಿಯನ್ನು ಬಿಟ್ಟಂತೆಯೇ ವಾಡಿಕೆ. ಆ ವ್ಯಕ್ತಿಯ ಮೊದಲ ಹೆಂಡತಿ ಮತ್ತೆ ಬೇರೆ ಗಂಡಿನೊಡನೆ ಕೂಡಿಕೆ ಮಾಡಿಕೊಳ್ಳುತ್ತಾಳೆ.

ಬುಡಕಟ್ಟು ಜನಾಂಗಗಳಲ್ಲಿ ಪ್ರಾಪ್ತ ವಯಸ್ಸಿನ ವಿಧವೆ ಹೆಣ್ಣುಮಕ್ಕಳು ಪುನರ್ ವಿವಾಹವಾಗುವ ಅಪೂರ್ವ ಅವಕಾಶವನ್ನು ಕಾಣುತ್ತೇವೆ. ಸೋಲಿಗರಲ್ಲಿ ವಿಧವಾ ವಿವಾಹ ರೂಢಿಯಲ್ಲಿದೆ. ಆಕೆ ಒಂದು ವೇಳೆ ತನ್ನ ಮೊದಲ ಗಂಡನಿಂದ ಮಗುವನ್ನು ಪಡೆದಿದ್ದರೂ ಆ ಮಗು ಸಹ ಎರಡನೇ ಗಂಡನ ಮನೆಯಲ್ಲಿ ಬೆಳೆಯುವ ಅವಕಾಶವಿರುತ್ತದೆ. ವಿಧವಾ ಸ್ತ್ರೀಯ ಗಂಡನು ಆ ಮಗುವನ್ನು ತನ್ನದೆಂಬಂತೆ ಪ್ರೀತಿಯಿಂದ ನೋಡಿಕೊಳ್ಳುತ್ತಾನೆ. ಜೊತೆಗೆ ಆ ಮಗುವಿಗೆ ಸಾಮಾಜಿಕ ಮನ್ನಣೆ ಹಾಗೂ ಆರ್ಥಿಕ ಸ್ಥಾನಮಾನವೂ ಸಹ ದೊರಕುತ್ತದೆ. ಇಲ್ಲಿ ವಿಧವಾ ವಿವಾಹವೂ ಸೋಲಿಗರಲ್ಲಿರುವ ಸ್ತ್ರೀ ಸಮಾನತೆಯನ್ನು ಪ್ರತಿಪಾದಿಸುತ್ತದೆ.

ಮಿಶ್ರದಾಯಾದಿ ವಿವಾಹ : ಈ ಪದ್ಧತಿಯು ಸಾಮಾನ್ಯ ಜನಾಂಗಗಳಲ್ಲಿ ರೂಢಿಯಲ್ಲಿರುವಂತೆ ಬುಡಕಟ್ಟು ಜನಾಂಗಗಳಲ್ಲಿ ಪ್ರಸ್ತುತ ಪ್ರಚಲಿತದಲ್ಲಿರುವ ವಿವಾಹ ಪದ್ಧತಿಯಾಗಿದೆ. 'ಕುಲ'ವನ್ನು ಅವಲಂಬಿಸಿ ಈ ರೀತಿಯ ವಿವಾಹ ಪದ್ಧತಿ ತೀರ್ಮಾನವಾಗುತ್ತದೆ.

ಹೆರಿಗೆ ಮತ್ತು ಮಗುವಿನ ಜನನ : ಸೋಲಿಗರಲ್ಲಿ ಜನನ ಸಂಸ್ಕಾರಗಳು ಸ್ತ್ರೀ ಗರ್ಭಿಣಿಯಾದ ದಿನದಿಂದಲೇ ಪ್ರಾರಂಭವಾಗುತ್ತವೆ. ಸಾಮಾನ್ಯವಾಗಿ ಎಲ್ಲಾ ಬುಡಕಟ್ಟುಗಳು ಸೂತಕ, ಮುಟ್ಟು ಅಥವಾ ಮೈಲಿಗೆಯನ್ನು ಅತ್ಯಂತ ಕಟ್ಟುನಿಟ್ಟಿನಿಂದ ಪಾಲಿಸುತ್ತಾರೆ. ಹೆರಿಗೆ ಸಂದರ್ಭದಲ್ಲಿ ಆಚರಿಸುವ ಮೈಲಿಗೆ ಮಾನವ ಹುಟ್ಟಿಗೆ ಸಂಬಂಧಿಸಿದ ಮೊದಲ ಮೈಲಿಗೆ, ಸೋಲಿಗರಲ್ಲಿ ಹೆರಿಗೆ ಮತ್ತು ಜನನ ಸಂಸ್ಕಾರಗಳು ಕಟ್ಟುನಿಟ್ಟಾಗಿ ನಡೆಯುತ್ತವೆ. ಜನ ಸಾಮಾನ್ಯರಂತೆ ಮೊದಲನೆಯ ಹೆರಿಗೆಯನ್ನು ತವರು ಮನೆಯಲ್ಲೇ ನಡೆಸಿಕೊಡುವುದನ್ನು

ಕಾಣುತ್ತೇವೆ. ಗಂಡನ ಮನೆಯಿಂದ ನಿರ್ದಿಷ್ಟ ಪಡಿಸಿದ ದಿನ ಚೊಚ್ಚಲ ಹೆರಿಗೆಗಾಗಿ ತವರು ಮನೆಗೆ ಕರೆದುಕೊಂಡು ಹೋಗಲು ಹೆಣ್ಣಿನ ಮನೆಯವರು ಬರುತ್ತಾರೆ. ಬಸುರಿ ಹೆಂಗುಸನ್ನು ಆದಿನ ಶಾಸ್ತ್ರೋಕ್ತವಾಗಿ ಉಡಿತುಂಬಿ ಕುಲಸ್ಥರು, ಬಂದು ಬಾಂಧವರಿಗೆಲ್ಲ ಊಟ ಹಾಕಿ ಕಳುಹಿಸಿ ಕೊಡುತ್ತಾರೆ. ಹೆರಿಗೆ ಸಮೀಪಿಸುತ್ತಿರುವಾಗ ಅವಳನ್ನು ಹೊರಗೆ ತಿರುಗಾಡಲು ಬಿಡುವುದಿಲ್ಲ. ಒಂಟಿಯಾಗಿ ಎಲ್ಲಿಯೂ ಹೋಗುವಂತಿಲ್ಲ. ಚಪ್ಪಲಿ ಹಾಕಿಕೊಂಡೇ ಹೋಗಬೇಕು. ಚಪ್ಪಲಿ ಇಲ್ಲದೆ ಬರಿಗಾಲಿನಲ್ಲಿ ತಿರುಗಾಡಿದರೆ ಅವಳಿಗೆ ಭೂತ-ಪ್ರೇತಗಳು ಹಿಡಿದು ಅವಳಿಗೆ ಮತ್ತು ಹುಟ್ಟುವ ಮಗುವಿಗೆ ತೊಂದರೆ ಆಗುತ್ತದೆ ಎಂಬ ಭಯ ಅವರಲ್ಲಿದೆ.

ಹೆರಿಗೆಯನ್ನು ತಮ್ಮ ಪೋಡಿನ ಅನುಭವಿ ಹೆಂಗಸಿನಿಂದ ಮಾಡಿಸುತ್ತಾರೆ. ಹೆರಿಗೆ ಬೇನೆ ಆಗದಿದ್ದರೆ ಬೆಂಡೆ ಮತ್ತು ಸೆಲ್ಲ ಮಂಗಳ ತೊಗಟೆಯಿಂದ ತಯಾರಿಸಿದ ಕಷಾಯವನ್ನು ಕುಡಿಸುತ್ತಾರೆ. ಸೋಲಿಗರು ಹೆರಿಗೆ ಆಗುವುದಕ್ಕಿಂತ ಮೊದಲೆ ಮಗುವಿನ ಹೆಸರನ್ನು ಆಯ್ಕೆ ಮಾಡಿಕೊಂಡಿರುತ್ತಾರೆ. ಮೊದಲೇ ಆಯ್ಕೆ ಮಾಡಿಕೊಂಡಿರುವ ಹೆಸರನ್ನು ಮಗು ಜನಿಸಿದ ಮೇಲೆ ಮೂರು ಸಲ ಕಿವಿಯಲ್ಲಿ ಪುನರುಚ್ಚರಿಸಿ ಮಗುವಿನ ಹಣೆಗೆ ವಿಭೂತಿ ಹಚ್ಚುತ್ತಾರೆ. ಜೊತೆಗೆ ಐದು ಕುಲದ ಹಿರಿಯರು ಮಗುವಿನ ಹಣೆಗೆ ವಿಭೂತಿ ಹಚ್ಚಿ ಮಗುವಿನ ಹೆಸರನ್ನು ಮೂರು ಸಲ ಹೇಳುತ್ತಾರೆ. ನಂತರ ಬಾಣಂತಿಯ ಮುಂದೆ ಬೆಂಕಿ ಹಾಕಿ ದೂಪ ಹಾಕುತ್ತಾರೆ. ಹಾವಿನ ಸೆಲೆ, ಕಟ್ಟಿರುವೆ, ಕೊಳ್ಳಿರುವೆ, ಕುಂದನ ಸ್ವಾಲೆ, ಎಮ್ಮರಕ ಎಂಬ ವಿವಿಧ ಜಾತಿಯ ವಿಷದ ಮುಳ್ಳು ಎಲ್ಲವನ್ನು ಸೇರಿಸಿ ಪುಡಿ ಮಾಡಿ ಆ ಪುಡಿಯನ್ನು ಕುಲಸ್ಥರು ಬೆಂಕಿಗೆ ಹಾಕುತ್ತಾರೆ. ನಂತರ ತಾಯಿ ಮಗುವನ್ನು ಎತ್ತಿಕೊಂಡು ಹೋಗುತ್ತಾಳೆ. ಅಲ್ಲಿಗೆ ಸೂತಕ ಕಳೆದಂತೆ. ಅಂದು ಐದು ಜನ ಕುಲಸ್ಥರಿಗೆ ಊಟ ಹಾಕುತ್ತಾರೆ. ಮಗುವಿಗೆ ಮತ್ತು ಬಾಣಂತಿಗೆ ಯಾರ ದೃಷ್ಟಿ ಹಾಕದಿರಲೆಂದು ಈ ಸಂಪ್ರದಾಯ ಬೆಳೆದು ಬಂದಿರಬಹುದು.

ಮಗು ಮೇಲಿಂದ ಮೇಲೆ ಅಳುತ್ತಿದ್ದರೆ, ರಚ್ಚೆ ಮಾಡುತ್ತಿದ್ದರೆ, ಬೆಂಕಿ ಕೆಂಡವನ್ನು ಮಗು ಮಲಗುವ ಜಾಗದಲ್ಲಿ ಹಾಕಿ ಕೆಂಡದಲ್ಲಿ ಒಂದೆರಡು ಪೊರಕೆಯ ಚೂರು, ಉಪ್ಪಿನ ಹರಳು, ಮೆಣಸಿನಕಾಯಿ ಹಾಕಿ ಹೊಗೆ ಎಬ್ಬಿಸುತ್ತಾರೆ. ಇದರಿಂದ ದೋಷ ನಿವಾರಣೆಯಾಗುವುದೆಂಬ ನಂಬಿಕೆ ಅವರದು, ಹುಟ್ಟಿದ ಮಕ್ಕಳು ಸಾಯುತ್ತಿದ್ದರೆ ಏನೋ ದೋಷವಿದೆ ಎಂದು ತಿಳಿದು ದೋಷ ನಿವಾರಣೆಗಾಗಿ ಮಗುವಿನ ಮೂಗು ಅಥವಾ ಕಿವಿ ಚುಚ್ಚಿಸಿ ದೋಷದ ಮೇಟಿಯನ್ನು ಹಾಕುತ್ತಾರೆ. ಕಾಡಿನಿಂದ ಹೊರ ಇರುವ ಸೋಲಿಗರು ಇಂದು ಸಹ ತಾಯಿಯ ಆರೋಗ್ಯದ ಕಡೆ ಹೆಚ್ಚಿನ ಗಮನ ನೀಡುತ್ತಾರೆ. ಆರಂಭದಲ್ಲಿ ಮಗು ಮತ್ತು ಬಾಣಂತಿಗೆ ಪ್ರತಿದಿನ ಸ್ನಾನ ವ್ಯವಸ್ಥೆ ಇರುತ್ತದೆ. ಮಗುವಿಗೆ ತಾಯಿಯ ಹಾಲು ಸಾಲದಿದ್ದರೆ, ಹಸುವಿನ ಹಾಲು, ಹತ್ತಿಯ ಹಾಲನ್ನು ಕುಡಿಸುತ್ತಾರೆ. ಬಯಲು ಸೀಮೆಯ ಪ್ರಭಾವಕ್ಕೆ ಒಳಗಾಗಿರುವ ಕೆಲವು ಕಡೆ ನಾಮಕರಣ

ಮಾಡುವಂತ ಸಂಪ್ರದಾಯವು ರೂಢಿಯಲ್ಲಿದೆ. ಇಲ್ಲಿ ಮಗುವಿನ ಸೋದರ ಮಾವ ಮಗುವಿಗೆ ಹೆಸರು ಸೂಚಿಸುವ ರೂಢಿ ಸಂಪ್ರದಾಯವನ್ನು ಕಾಣುತ್ತೇವೆ.[೫೩]

**ಋತುಮತಿ ಆಚರಣೆ :** ಸೋಲಿಗರಲ್ಲಿ ಹೆಣ್ಣು ಪ್ರೌಢಾವಸ್ಥೆಗೆ ಬಂದಾಗ ಅದನ್ನು ಮೈಲಿಗೆ ಎಂದು ತಿಳಿಯುತ್ತಾರೆ. ಈ ಸಂದರ್ಭದಲ್ಲಿ ಮನೆ ಒಳಗೆ ಸೇರಿಸುವುದಿಲ್ಲ. ಇವಳಿಗಾಗಿ ಒಂದು ಪ್ರತ್ಯೇಕ ಗುಡಿಸಲನ್ನು ನಿರ್ಮಿಸುತ್ತಾರೆ. ಅವಳ ಗುಡಿಸಲಿನ ಪಕ್ಕದಲ್ಲಿಯೇ ಮತ್ತೊಂದು ಗುಡಿಸಲನ್ನು ಹಾಕಿಕೊಂಡು ಅವಳ ಸೋದರಮಾವ ಅವಳನ್ನು ಕಾಯುವನು. ಋತುಮತಿಯಾದ ಐದು ದಿನಗಳವರೆಗೆ ಆ ಗುಡಿಸಲಿನಲ್ಲಿಯೇ ಇರಬೇಕು. ಸೋಲಿಗರು ಈ ಸಂದರ್ಭದಲ್ಲಿ ಆ ಹೆಣ್ಣನ್ನು ಅತ್ಯಂತ ಅಕ್ಕರೆಯಿಂದ ಯಾವ ತೊಂದರೆಯು ಆಗದಂತೆ ನೋಡಿಕೊಳ್ಳುತ್ತಾರೆ. ಮೈಲಿಗೆ ಕಳೆಯುವವರೆಗೆ ಅವಳಿಗೆ ಯಾವ ಕೆಲಸವನ್ನು ಹಚ್ಚುವುದಿಲ್ಲ. ಅವಳು ಹಸಿ ಮೈಯಲ್ಲಿ ಇರುತ್ತಾಳೆಂದು ತಿಳಿಯುತ್ತಾರೆ. ಸೋಲಿಗರಲ್ಲಿ ಹೆಣ್ಣು ಋತುಮತಿಯಾದಾಗ ಸೋದರ ಮಾವನ ಪಾತ್ರ ಎದ್ದು ಕಾಣುತ್ತದೆ. ಋತುಮತಿಯಾದ ಹೆಣ್ಣನ್ನು ಆರನೆಯ ದಿನ ಮೈಲಿಗೆ ಕಳೆಯಲು ಗುಡಿಸಲಿನಿಂದ ಕರೆದುಕೊಂಡು ಹೋಗಿ ಮನೆಯ ಹೊರಗಡೆ ಚಿಕ್ಕಗುಡಿಸಲಿನಲ್ಲಿ ಅವಳು ಮತ್ತು ಅವಳ ಜೊತೆಗಾತಿಗೆ ಅರಿಶಿಣ, ಸೀಗೆಕಾಯಿ ಹಚ್ಚಿ ಸ್ನಾನ ಮಾಡಿಸಿ, ಮನೆ ಒಳಗೆ ಕರೆದುಕೊಳ್ಳುವವರೆಗೆ ಅವಳು ಐದು ದಿನದಿಂದ ವಾಸವಿದ್ದ ಗುಡಿಸಲನ್ನು ಅವಳ ಸೋದರ ಮಾವ ಬೆಂಕಿ ಹಚ್ಚಿ ಸುಟ್ಟಿರಬೇಕೆಂಬ ಸಂಪ್ರದಾಯವಿದೆ. ವಾಸದ ಮನೆಯನ್ನು ಪ್ರವೇಶಿಸುವ ಮುನ್ನ ಸುಟ್ಟ ಗುಡಿಸಲಿನ ಬೂದಿಯನ್ನು ತುಳಿದು ಬರಬೇಕೆಂಬ ನಂಬಿಕೆ ಇವರಲ್ಲಿದೆ.

ನಂತರ ಐದು ಕುಲದವರು ಹುಡುಗಿಯನ್ನು ಹೊಸ್ತಿಲಿನಾಚೆ ನಿಲ್ಲಿಸಿ ಪೂಜೆ ಮಾಡಿಸಿ ಅವಳಿಗೆ ಐದು ಮಂದಿಯಿಂದಲೂ ಬಾಗಿಲಿನಲ್ಲಯೇ ತೀರ್ಥಕೊಡಿಸುತ್ತಾರೆ. ಈ ಘಟ್ಟಕ್ಕೆ ಅವಳ ಸೂತಕ ಕಳೆಯಿತ್ತೆಂದು ಆ ದಿನ 'ಹೊಸಗೆಹಿಟ್ಟು' ಎಂಬ ಪುಟ್ಟ ಔತಣಕೂಟವನ್ನು ಏರ್ಪಡಿಸುತ್ತಾರೆ. ಕೆಲವು ಕಡೆ ಕಡೆಯ ದಿನ ಸ್ನಾನ ಮಾಡಿಸುವಾಗ (ಮಹದೇಶ್ವರ ಬೆಟ್ಟದಲ್ಲಿರುವ ಸೋಲಿಗರು) ಪೋಡಿನ ಹಿರಿಯ ಮುತ್ತೈದೆಯನ್ನು ಕರೆಸಿ ಹಿರಿಯ ಹೆಂಗಸು ತನ್ನ ಕೈನ ಐದು ಬೆರಳುಗಳ ಮೇಲೆ ಐದು ಬಿಲ್ಲೆಯಾಕಾರದ ಚಿಕ್ಕ ಚಿಕ್ಕ ರೊಟ್ಟಿಗಳನಿಟ್ಟುಕೊಂಡು ಹುಡುಗಿಯ ತಲೆಯ ಮೇಲೆ ಕೈ ಇಟ್ಟು ಕೈ ಮೇಲೆ ಹಾಕಿದ ನೀರು ಹುಡುಗಿಯ ತಲೆಯ ಮೇಲೆ ಬೀಳುವಂತೆ ಮಾಡುತ್ತಾರೆ. ಹಿರಿಯ ಮುತ್ತೈದೆಯಿಂದ ಸ್ನಾನವಾದ ನಂತರ ಹುಡುಗಿ ಪವಿತ್ರಳಾದಳು ಎಂಬುದಾಗಿ ನಂಬುತ್ತಾರೆ.[೫೪]

**ಶವ ಸಂಸ್ಕಾರ ಆಚರಣೆ :** ಸೋಲಿಗರು ಸಾವು ಸಮೀಪಿಸಿದ ವ್ಯಕ್ತಿಯನ್ನು ಮನೆಯ ಹೊರಗೆ ತಂದು ಮಲಗಿಸುವರು. ಪ್ರಾಣ ಹೋಗುವುದರೊಳಗಾಗಿ ಅವನ ಬಾಯಿಗೆ ನೀರು ಬಿಡುಸುತ್ತಾರೆ. ಶವವನ್ನು ಅಂಗಾತ ಮಲಗಿಸಿ ಕೈಗಳನ್ನು ಎದೆಯ ಮೇಲಿಟ್ಟು ಕಾಲುಗಳನ್ನು ಮಡಿಸುವ ಪದ್ಧತಿ ಇವರಲ್ಲಿದೆ. ಸತ್ತ ವ್ಯಕ್ತಿಯ ಮನೆಯ ಮುಂದೆ ಸಣ್ಣ ಬೆಂಕಿಕೊಂಡ ಮಾಡುವರು. ಇದು ಆ ಮನೆಯಲ್ಲಿ ಯಾರೋ

ಸತ್ತಿದ್ದಾರೆಂಬುದನ್ನು ಪ್ರತಿನಿಧಿಸುತ್ತದೆ. ಸೋಲಿಗರ ಪ್ರಕಾರ ವ್ಯಕ್ತಿಯೊಬ್ಬನ ಸಾವು ಸತ್ತ ಕುಟುಂಬಕ್ಕೆ ಮಾತ್ರವಲ್ಲ ಇಡೀ ಸೋಲಿಗ ಕುಟುಂಬಗಳಿಗೆಲ್ಲಾ ಅನ್ವಯಿಸುತ್ತದೆ. ಹಾಗಾಗೀ ಯಾರೇ ಸತ್ತರು ಸಾವಿನ ಸುದ್ದಿಯನ್ನು ಇಡೀ ಪೋಡಿನ ಎಲ್ಲಾ ಜನರಿಗೂ ಹೇಳಿ ಕಳುಹಿಸುತ್ತಾರೆ. ಬಂಧುಗಳಿಗೂ ತಿಳಿಸುತ್ತಾರೆ. ಎಲ್ಲರೂ ಬಂದ ಮೇಲೆ ಒಂದು ಗಜ ಹೊಸ ಬಿಳಿಯ ಬಟ್ಟೆಯನ್ನು, ಪೂಜಾ ಸಾಮಗ್ರಿಗಳನ್ನು ತರಿಸುತ್ತಾರೆ. ಪೋಡಿನ ಜನರೆಲ್ಲಾ ಸೇರಿ ಚಟ್ಟವನ್ನು ತಯಾರಿಸುತ್ತಾರೆ. ಹೆಣಕ್ಕೆ ಬಿಸಿ ನೀರಿನ ಸ್ನಾನ ಮಾಡಿಸುವುದಲ್ಲದೆ, ಶೃಂಗಾರ ಮಾಡಿ ಪೂಜೆ ಮಾಡುತ್ತಾರೆ. ಸತ್ತ ವ್ಯಕ್ತಿ ಗಂಡಸಾಗಿ ಅವನ ಹೆಂಡತಿ ಬದುಕಿದ್ದರೆ ಅವಳಿಗೆ ಸ್ನಾನ ಮಾಡಿಸಿ, ಮಡಿ ಸೀರೆ ಉಡಿಸಿ ಅರಿಷಿಣ, ಕುಂಕುಮ ಹಚ್ಚಿ, ಹೂ ಮುಡಿಸಿ, ಬಳೆ ತೊಡಿಸಿ, ಹೆಣದ ಪಕ್ಕದಲ್ಲಿಯೇ ಕೂರಿಸಿ ಇಬ್ಬರಿಗೂ ಪೂಜೆ ಮಾಡುವರು.

ಪೂಜೆಯೆಲ್ಲಾ ಮುಗಿದ ನಂತರ ಚಟ್ಟದಲ್ಲಿ ಹೆಣವನ್ನು ಮಲಗಿಸಿ ಸ್ಮಶಾನಕ್ಕೆ ಹೊತ್ತುಕೊಂಡು ಹೋಗುತ್ತಾರೆ. ಹೆಣವನ್ನು ಸ್ಮಶಾನಕ್ಕೆ ತರುವ ವೇಳೆಗೆ ಕೆಲವರು ಮುಂದಾಗಿ ಹೋಗಿ 'ಗುದ್ದ'ವನ್ನು (ಸಮಾಧಿಯ ಹಳ್ಳ) ತೋಡಿರುತ್ತಾರೆ. ಇವರಲ್ಲಿ ಗುದ್ದವನ್ನು ಉತ್ತರ ದಕ್ಷಿಣವಾಗಿ ತೆಗೆಯುವುದು ರೂಢಿಯಲ್ಲಿದೆ. ಹಾಗೆಯೇ ಶವದ ತಲೆಯ ಭಾಗವನ್ನು ಉತ್ತರದ ಕಡೆಗೆ, ಕಾಲುಗಳನ್ನು ದಕ್ಷಿಣದ ಕಡೆಗೆ ಇಟ್ಟು ಊಳುವ ಪದ್ಧತಿ ಇವರಲ್ಲಿದೆ. ಸ್ಮಶಾನಕ್ಕೆ ಇವರು 'ಗೋಪಮನೆ' ಎಂದು ಕರೆಯುತ್ತಾರೆ. ಗುದ್ದದೊಳಗೆ ಹೆಣವನ್ನು ಮಲಗಿಸುವ ಮೊದಲು ಅದರೊಳಗೆ ಕಾರೆಮುಳ್ಳೂ, ತರಗುಹಾಕಿ ಜೊತೆಗೆ ರಾಗಿಮುದ್ದೆ ಒಂದು ಚೊಂಬಿನಲ್ಲಿ ನೀರು, ಅವನು ಬಳಸುತ್ತಿದ್ದ ದಿನಬಳಕೆಯ ವಸ್ತುಗಳನ್ನು ಅದರೊಳಗೆ ಹಾಕಿ ಮಣ್ಣು ಮುಚ್ಚುವರು. ಒಪ್ಪಮಾಡಿದ ದಿನವೇ ಗುದ್ದದ ತಲೆಯ ಕಡೆ ಒಂದು ಕಲ್ಲು ಇಡುವರು. ಆ ಕಲ್ಲಿಗೂ ಪೂಜೆ ಸಲ್ಲಿಸುವರು. ಸತ್ತವನ ಹೆಂಡತಿಯ ಮುತ್ತೈದೆತನದ ಸಂಕೇತವಾಗಿದ್ದ ಬಳೆಗಳನ್ನು ಆ ಕಲ್ಲಿನ ಮೇಲೆ ಹೊಡೆಯುವರು. ಇಲ್ಲಿಗೆ ಶವಸಂಸ್ಕಾರ ಕಾರ್ಯ ಮುಗಿದಂತೆ.

ಇದರ ಜೊತೆಗೆ 'ಮಾವಟಿಶಾಸ್ತ್ರ' ಎಂಬುದೊಂದಿದೆ. ಇದಕ್ಕೆ ಕತ್ತಿಶಾಸ್ತ್ರ ಎಂದು ಸಹ ಹೇಳುವರು. ಸಮಾಧಿಯ ಕುಣಿ ತೆಗೆಯಲು ಉಪಯೋಗಿಸಿದ ಗುದ್ದಲಿ ಮಾವಟಿಗಳು ಈ ಶಾಸ್ತ್ರದ ಪ್ರಮುಖ ವಸ್ತು. ಗುದ್ದಲಿಯನ್ನು ಬಿಚ್ಚಿ ಅದನ್ನು ಕಾಮಿನಲ್ಲಿ ಹಿಂದು-ಮುಂದಾಗಿ ಹಾಕಿ ಸಮಾದಿಯ ಒಂದು ಕಡೆಯಿಂದ ಇನ್ನೊಂದು ಕಡೆಗೆ ಕಾಲು ಸಂಧಿಯಿಂದ ಇಬ್ಬರು ಮೂರು ಸಾರಿ ಎಸೆಯುವರು. ಸಮಾಧಿಗೆ ಪೂಜೆ ಮಾಡಿದ ನಂತರ ನಾಲ್ಕು ಜನ ಸೋಲಿಗರು ನಾಲ್ಕು ದಿಕ್ಕಿಗೆ ನಿಂತು ಒಬ್ಬರ ಮುಖ ಒಬ್ಬರಿಗೆ ಕಾಣದಂತೆ ಎಡಗೈಯಿಂದ ಇನ್ನೊಬ್ಬನ ಎಡಗೈಗೆ ಮಾವಟಿಯನ್ನು ಬದಲಾಯಿಸಿಕೊಳ್ಳುತ್ತಾರೆ. ಮಾವಟಿಶಾಸ್ತ್ರ ಮುಗಿದ ಮೇಲೆ ಸಮಾಧಿ ಕಡೆಗೆ ತಿರುಗಿ ನೋಡದೇ ಹೊಳೆ ಅಥವಾ ಹಳ್ಳದ ಕಡೆಗೆ ಹೋಗಿ ಸ್ನಾನಕ್ಕೆ ಹೊರಡುತ್ತಾರೆ. ಈ ಸ್ನಾನವನ್ನು ಹೆಗಲುತೊಳೆದುಕೊಳ್ಳುವ ಸ್ನಾನ ಎನ್ನುವರು. ನಂತರ ಸಂಸ್ಕಾರ ಮುಗಿಸಿ ಬಂದವರೆಲ್ಲ ಸತ್ತವನ ಮನೆಯಲ್ಲಿ ಹಚ್ಚಿರುವ ದೀಪವನ್ನು ಒಂದು ಕ್ಷಣ ಏಕಚಿತ್ತದಿಂದ ನೋಡಿ ಅದಕ್ಕೆ ಕೈಮುಗಿದು

ಸ್ವಲ್ಪ ಹುಣಸೆಹಣ್ಣಿನ ಪಾನಕವನ್ನು ಕುಡಿದು ಮನೆಗಳಿಗೆ ಹೋಗುತ್ತಾರೆ. ಈ ದೀಪ ನೋಡುವುದನ್ನು ಸೋಲಿಗರು 'ಸೊಳ್ಳು' ನೋಡುವುದು ಎನ್ನುವರು.

ಸೋಲಿಗರಲ್ಲಿ ಸಹಜ ಸಾವಿನ ಸಂಸ್ಕಾರ ಈ ರೀತಿ ನಡೆದರೆ ತೊನ್ನು ಇದ್ದವರನ್ನು ಕಾಡುಪ್ರಾಣಿಗಳಿಂದ ಸತ್ತವರನ್ನು, ಬಾಣಂತಿಯರನ್ನು, ಬಸುರಿಯಾದವರನ್ನು ಸುಡುವ ಪದ್ಧತಿಯಿದೆ. ತೊನ್ನು ಇದ್ದವರು ಹೂಳಿದರೆ, ಬರಗಾಲ ಬರುತ್ತದೆ ಎಂಬ ನಂಬಿಕೆ ಅವರಲ್ಲಿದೆ. ಒಂದು ವೇಳೆ ಅಂತಹವರನ್ನು ಹೂಳಿದರೆ ಮತ್ತೆ ಕುಣಿಯನ್ನು ತೆಗೆದು ಹೆಣಕ್ಕೆ ನೂರೊಂದು ಬಿಂದಿಗೆ ನೀರು ಸುರಿದು ಮತ್ತೆ ಮಣ್ಣು ಮುಚ್ಚುತ್ತಾರೆ. ಬಸುರಿಯಾಗಿದ್ದರೆ ಅವಳ ಹೆಣದ ಮೇಲೆ ಬಾಳೆ ಎಲೆ ಇಟ್ಟು ಅದನ್ನು ಎರಡು ಭಾಗವಾಗಿ ಸೀಳಿ ಹೆಣದ ಮೇಲೆ ಹಾಕಿ ನಂತರ ಸುಡುತ್ತಾರೆ.[35]

ಸತ್ತ ವ್ಯಕ್ತಿಯ ತಿಥಿಯನ್ನು ಐದು ಅಥವಾ ಹನ್ನೆರಡನೆಯ ದಿನಕ್ಕೆ ಮಾಡುತ್ತಾರೆ. ತಿಥಿ ಮಾಡುವವರೆಗೆ ಇವರು ಸೂತಕ ಆಚರಿಸುವರು. ತಿಥಿಯ ದಿನ ಮಾಂಸದ ಅಡುಗೆ ಮಾಡುವ ಪದ್ಧತಿ ಸೋಲಿಗರಲ್ಲಿದೆ. ಒಟ್ಟಾರೆ ಚಾಮರಾಜನಗರ ತಾಲೂಕಿನಲ್ಲಿ ವಾಸಿಸುವ ಸೋಲಿಗರು ಶವಸಂಸ್ಕಾರ ಕಾರ್ಯವನ್ನು ಅವಲೋಕಿಸಿದಾಗ ಬಯಲು ಸೀಮೆಯ ಇತರೆ ಸಮುದಾಯದ ಶವಸಂಸ್ಕಾರದ ಆಚರಣಾ ವಿಧಿಗಳನ್ನು ರೂಢಿಸಿಕೊಂಡಿದ್ದಾರೆ ಎನ್ನಬಹುದು. ಆದರೂ ಸರಳ ಸ್ವಭಾವಿಗಳು, ಮುಗ್ಧರೂ ಆದ ಈ ತಾಲೂಕಿನ ಸೋಲಿಗರ ಸಾಮಾಜಿಕ ಆಚರಣೆಗಳಲ್ಲಿ ವೈವಿಧ್ಯತೆಯನ್ನು ರೂಢಿಸಿಕೊಂಡಿರುವುದನ್ನು ಕಾಣುತ್ತೇವೆ.

**ಕುಲ ಪಂಚಾಯಿತಿ :** ಯಾವುದೇ ಒಂದು ಸಮಾಜ ಒಂದು ಆದಿವಾಸಿ ಸಮಾಜವಾಗಿರಲಿ, ನಾಗರೀಕ ಸಮಾಜವಾಗಿರಲಿ, ಬೆಳೆದಂತೆಲ್ಲಾ ಅದರ ಏಳಿಗೆಗೆ ಬೇಕಾದಂತಹ ನಿಯಮಾವಳಿಗಳು ಹುಟ್ಟಿಕೊಳ್ಳುತ್ತವೆ. ಹಾಗೆಯೇ ಬುಡಕಟ್ಟು ಜನಾಂಗಗಳು ತಮ್ಮದೇ ಆದ ಆಡಳಿತ ವ್ಯವಸ್ಥೆಯನ್ನು ಹೊಂದಿದ್ದಾರೆ. ಯಾವುದೇ ಬಗೆಯ ಆಂತರಿಕ ವ್ಯವಹಾರಗಳನ್ನು ಹೊರಬಿಡದೆ ತಮ್ಮಲ್ಲಿಯೇ ಅವುಗಳನ್ನು ಪರಿಹರಿಸಿಕೊಳ್ಳುತ್ತಾರೆ. ಪ್ರತಿಯೊಬ್ಬರು ಸಮಾಜದ ಕಟ್ಟುಪಾಡುಗಳಿಗೆ ಬದ್ಧರಾಗಿರುತ್ತಾರೆ. ಹೀಗಾಗಿ ಬುಡಕಟ್ಟಿನ ಜನ ಸಾಮಾಜಿಕ ಕಟ್ಟುಪಾಡುಗಳ ಎದುರಿನಲ್ಲಿ ತಲೆಬಾಗಿ ನಡೆಯುವುದರಿಂದ ಅವರಲ್ಲಿ ಒಳಾಡಳಿತ ವ್ಯವಸ್ಥೆ ಉಳಿದು ಬರಲು ಸಾಧ್ಯವಾಗಿದೆ. ಗುಂಪಿನ ಹಿತರಕ್ಷಣೆಗಾಗಿ ತಾವೇ ಮಾಡಿಕೊಂಡ ನಿಯಮಾವಳಿಗಳನ್ನು ಪ್ರತಿಯೊಬ್ಬ ಸದಸ್ಯನೂ ತನಗಾಗಿ, ತಮ್ಮ ಕುಟುಂಬದ ಗುಂಪಿನ ರಕ್ಷಣೆಗಾಗಿ ಹಾಗೂ ಕ್ಷೇಮಕ್ಕಾಗಿ ಪಾಲಿಸಬೇಕಾಗುತ್ತದೆ.

ವಿವಾದಗಳನ್ನು ಬಗೆಹರಿಸಿಕೊಳ್ಳಲು ನ್ಯಾಯಾಲಯಗಳ ಮೊರೆ ಹೋಗುತ್ತಾರೆ. ಆದರೆ ಆದಿವಾಸಿಗಳಿಗೆ ನ್ಯಾಯಾಲಯದ ಕಲ್ಪನೆ ಇದ್ದರೂ ನ್ಯಾಯಾಲಯಕ್ಕೆ ಹೋಗುವ ಸಾಹಸ ಮಾಡುವುದಿಲ್ಲ. ತಮ್ಮ ಆದಿವಾಸಿ ಸಮಾಜಗಳ ನಿಯಮಾವಳಿಗಳು, ಕಟ್ಟುನಿಟ್ಟುಗಳು ಅವರ ಗುಂಪುಗಳನ್ನು ಕುಲವನ್ನು ಸರಿಯಾದ ರೀತಿಯಲ್ಲಿ ಕಾಪಾಡಿಕೊಂಡು ಹೋಗಲು ಸಹಾಯಕವಾಗಿವೆ.

ಸೋಲಿಗರಲ್ಲಿ ಯಜಮಾನನ ಆಯ್ಕೆ ಮಾತ್ರ ಸರ್ವಾನುಮತದಿಂದಲೇ ಆಗಬೇಕು. ಯಜಮಾನನ ಸ್ಥಾನಕ್ಕೆ ಒಬ್ಬರಿಗಿಂತ ಹೆಚ್ಚು ಸ್ಪರ್ಧಿಗಳಿದ್ದರೆ ಯಜಮಾನನ ಆಯ್ಕೆಯಲ್ಲಿ ಪಾಲ್ಗೊಳ್ಳಲು ಬಂದಿರುವಂತಹ ಜನರ ಸಂಖ್ಯಾಬಲ ಯಾರಿಗೆ ಹೆಚ್ಚಿಗೆ ಇದೆ ಎಂಬುದನ್ನು ಖಾತ್ರಿ ಪಡಿಸಿಕೊಂಡು ಯಜಮಾನನ ಆಯ್ಕೆ ಮಾಡುತ್ತಾರೆ. ಈ ಯಜಮಾನನಿಗೆ ಸಹಾಯಕನಾಗಿ 'ಚಲುವಾದಿ' ಇರುತ್ತಾನೆ. ಜೊತೆಗೆ ಇಬ್ಬರೂ ಕೋಲುಕಾರರಿರುತ್ತಾರೆ. ಈ ಹುದ್ದೆಗಳು ಅನುವಂಶಿಕವಾದವು. ಕುಲದೊಳಗೆ ವಾದವಿವಾದ ಉಂಟಾದಾಗ ಅದು ಯಜಮಾನನ ಹತ್ತಿರ ತೀರ್ಮಾನಕ್ಕೆ ಬರುತ್ತದೆ. ಯಜಮಾನ ತನ್ನ ಕುಲದ ನಿಯಮಾವಳಿಗಳಿಗೆ ಅನುಗುಣವಾಗಿ ತೀರ್ಪುನೀಡಿ ಒಂದು ಅಂತಿಮ ತೀರ್ಮಾನಕ್ಕೆ ಬರುತ್ತಾನೆ. ಹೀಗೆ ವಿವಾದವನ್ನು ಪರಿಹರಿಸುವ ಸಂದರ್ಭದಲ್ಲಿ ಯಜಮಾನನಿಗೆ ಸಹಾಯಕರಾಗಿ ಪಟ್ಟೆವಾಲ (ಪಟೇಲ) ಮತ್ತು ದಳ್ಳಾಳಿಗಳಿರುತ್ತಾರೆ. ಈ ರೀತಿಯ ಕಟ್ಟುನಿಟ್ಟಾದ ನೀತಿ-ನಿಯಮಗಳ ನ್ಯಾಯವ್ಯವಸ್ಥೆ ಇರುವುದರಿಂದಲೇ ಅವರಲ್ಲಿ ಉಂಟಾಗುವ ವಿವಾದಗಳು ಕುಲಪಂಚಾಯಿತಿಯಲ್ಲಿಯೇ ಇತ್ಯರ್ಥವಾಗುತ್ತವೆ. ಯಜಮಾನನು ತಪ್ಪು ಮಾಡಿದವರನ್ನು ಶಿಕ್ಷಿಸುವ, ದಂಡ ವಿಧಿಸುವ ಅಥವಾ ಕುಲದಿಂದ ಹೊರಗೆ ಹಾಕುವ ಅಧಿಕಾರವನ್ನು ಪಡೆದಿರುತ್ತಾನೆ.

ಆದಿವಾಸಿ ಸಮಾಜದಲ್ಲಿ ಕುಟುಂಬ ಮೂಲ ಘಟಕವಾದರೆ, ಹಲವಾರು ಕುಟುಂಬಗಳು ಸೇರಿ ಒಂದು ಪೋಡು' ಎಂದು ಕರೆಸಿಕೊಳ್ಳುತ್ತವೆ. ಈ ಪೋಡಿನ ಹಿರಿಯರು ಅಲ್ಲಿನ ಎಲ್ಲಾ ರೀತಿ-ನೀತಿಗಳ ಬಗೆಗೆ ಹಿಡಿತ ಹೊಂದಿರುತ್ತಾರೆ. ಅಲ್ಲದೆ ಇಡೀ ಪೋಡಿನ ಮೇಲೆ ಹಿಡಿತವನ್ನು ಹೊಂದಿರುತ್ತಾರೆ. ಇಂದಿಗೂ ನಾವು ಸೋಲಿಗರಲ್ಲಿ ಇದೇ ರೀತಿಯ ಕುಲಪಂಚಾಯಿತಿ ವ್ಯವಸ್ಥೆಯನ್ನು ಮುಂದುವರೆಸಿಕೊಂಡು ಬರುತ್ತಿರುವುದನ್ನು ಕಾಣುತ್ತೇವೆ. ಪ್ರತಿಯೊಂದು ಸೋಲಿಗ ಪೋಡಿಗೂ ಈ ಕುಲ ಪಂಚಾಯಿತಿ ವ್ಯವಸ್ಥೆ ಇರುತ್ತದೆ. ಹೀಗೆ ಹಿರಿಯರು ಕುಳಿತು ನ್ಯಾಯ ತೀರ್ಮಾನ ಮಾಡುವ ಪ್ರದೇಶವನ್ನು 'ಕಟ್ಟೆಮನೆ' ಎಂದು ಕರೆಯುತ್ತಾರೆ. ಈಗಲೂ ಅಲ್ಲಲ್ಲಿ ಈ ಬಗೆಯ ಚಾವಡಿಗಳನ್ನು ಕಾಣಬಹುದು.

ಶಿಕ್ಷೆಗಳು : ವ್ಯಭಿಚಾರಿಗಳಿಗೆ ಕಠಿಣವಾದ ಶಿಕ್ಷೆ ಸೋಲಿಗರಲ್ಲಿ ಪರಂಪರಾಗತವಾಗಿ ನಡೆದು ಬಂದಿದೆ. ಅಪರಾಧಿಯೂ ತಪ್ಪೊಪ್ಪಿಕೊಳ್ಳದೆ ಹೋದರೆ ಯಜಮಾನನಿಗೆ ಸಹಾಯಕರಾಗಿರುವ ಎರಡು ಜನ ಕೋಲುಗಾರರು ಯಜಮಾನನ ಆಜ್ಞೆಯಂತೆ ಅಪರಾಧಿಯನ್ನು ಸೊಂಟದಿಂದ ಕೆಳಕೆ ಚೆನ್ನಾಗಿ ಥಳಿಸುತ್ತಾರೆ. ಈ ಶಿಕ್ಷೆಯೂ ಅಪರಾಧಿಯಲ್ಲಿ ಭಯವನ್ನು ಮೂಡಿಸಿ ಆತ/ಆಕೆ ತಪ್ಪನ್ನು ಒಪ್ಪಿಕೊಳ್ಳುವಂತೆ ಮಾಡುತ್ತದೆ.

ಬಹಿಷ್ಕಾರಃ ತಪ್ಪಿತಸ್ಥರನ್ನು ಕುಲದಿಂದ ಹೊರಹಾಕಲೂ, ಕುಲಕ್ಕೆ ಸೇರಿಸಿಕೊಳ್ಳಲು ಅನೇಕ ಧಾರ್ಮಿಕ ವಿಧಿಗಳನ್ನು ಆಚರಿಸುತ್ತಾರೆ. ತಪ್ಪಿತಸ್ಥ ತಾನು ತನ್ನ ತಪ್ಪಿಗೆ ಸರಿಯಾದ ದಂಡ ತೆರದೆ ಹೋದಾಗ, ತಪ್ಪನ್ನು ಒಪ್ಪಿಕೊಳ್ಳದೇ ಹೋದಾಗ ಅಥವಾ ಮಾಡಬಾರದ ಅನಾಚಾರ ಮಾಡಿದಾಗ ಅನಿವಾರ್ಯವಾಗಿ ಕುಲದಿಂದ ಹೊರಹಾಕುತ್ತಾರೆ. ಕುಲದಿಂದ ಹೊರಹಾಕುವ ಸಂದರ್ಭದಲ್ಲಿ ಹೆಚ್ಚಿನ ಧಾರ್ಮಿಕ ವಿಧಿಗಳನ್ನು ಮಾಡಿದಿ

ದ್ದರೂ, ಅಪರಾಧಿಯ ಕೊರಳಿಗೆ ದನದ ಮೂಳೆಯ ಸರವನ್ನು ಹಾಕಿ ಕುಲದ ಹಿರಿಯರು ಬಹಿಷ್ಕಾರ ಹಾಕುತ್ತಾರೆ. ಅವನು ಕುಲದ ಯಾವುದೇ ಕ್ರಿಯೆಯಲ್ಲೂ ಮುಂದೆ ಭಾಗವಹಿಸುವಂತಿಲ್ಲ. ಅವನು ಪೋಡಿಗೆ 'ಒಂದು ಒಕ್ಕು' ಎಂದು ನಿರ್ಧರಿಸುತ್ತಾರೆ. ಯಾರ ಮನೆಯಿಂದಲೂ ಅವನಿಗೆ ಬೆಂಕಿ, ಬಿಸಿ ನೀರು ಕೊಡುವಂತಿಲ್ಲ. ಕೂಲಿಗೆ ಕರೆಯುವಂತಿಲ್ಲ. ಅವನನ್ನು ಯಾರು ಮಾತನಾಡಿಸುವಂತಿಲ್ಲ. ಹಾಗೇನಾದರೂ ಮಾತನಾಡಿಸಿದ ಪಕ್ಷದಲ್ಲಿ ಮಾತನಾಡಿಸಿದ ವ್ಯಕ್ತಿಗೂ ಶಿಕ್ಷೆ ಕಾದಿರುತ್ತದೆ.

ಕುಲದಿಂದ ಹೊರಹಾಕಲ್ಪಟ್ಟ ವ್ಯಕ್ತಿ ಒಂದು ವೇಳೆ ಕುಲಕ್ಕೆ ಸೇರಲು ಇಚ್ಛಿಸಿದರೆ ಕುಲದ ಹಿರಿಯರು ಕೊಡುವ ತೀರ್ಪಿಗೆ ಬದ್ಧನಾಗಿರಬೇಕು. ಬಾಧ್ಯನಾಗಿರುತ್ತೇನೆಂದು ಯಜಮಾನನಿಗೆ ತನ್ನ ಬೇಡಿಕೆ ಸಲ್ಲಿಸಿದಾಗ ಕುಲದ ಹಿರಿಯರೆಲ್ಲರೂ ಸಭೆ ಸೇರಿ ಅವನನ್ನು ಕುಲಕ್ಕೆ ಸೇರಿಸಿಕೊಳ್ಳಲು ಅವನು ಮಾಡಿದ ತಪ್ಪಿಗೆ ಪರಿಹಾರವನ್ನೂ, ಕುಲಸ್ಥರಿಗೆ ಊಟದ ವ್ಯವಸ್ಥೆ ಮಾಡುತ್ತೇನೆಂದು ಅಪರಾಧಿ ಒಪ್ಪಿಕೊಂಡ ನಂತರ ಕುಲಕ್ಕೆ ಸೇರಿಸಿಕೊಳ್ಳಲು ಒಂದು ಚಿಕ್ಕ ಧಾರ್ಮಿಕ ವಿಧಿಯನ್ನು ನಡೆಸುತ್ತಾರೆ. ಆ ವಿಧಾನವನ್ನು ಸಂಕ್ಷಿಪ್ತವಾಗಿ ಹೇಳುವುದಾದರೆ ಅಪರಾಧಿಯ ತಲೆ ಬೋಳಿಸುತ್ತಾರೆ. ಮಿಂದು ಮಡಿಯುಟ್ಟು ಬಂದ ಅವನನ್ನು ಪೋಡಿನ ಹೊರಗಡೆ ಏಳು ಗೆರೆಯಾಚೆ ನಿಲ್ಲಿಸಿ ಒಂದೊಂದು ಗೆರೆಯನ್ನು ದಾಟಿದಾಗಲೂ ತೀರ್ಥ ಪ್ರಸಾದವೆಂದು ಗೋಮೂತ್ರವನ್ನು ನೀಡುತ್ತಾರೆ. ಅನಂತರ ಆಯಾಯ ಪೋಡಿನ ದೇವಸ್ಥಾನದಲ್ಲಿ ಪೂಜೆ ಮಾಡಿಸಿ, ತುಳಸಿ ಹಾರ ಹಾಕಿ, ಏಳು ಬಾರಿ ತೀರ್ಥ ಕುಡಿಸಿ ಪೋಡಿಗೆ ಕರೆದುಕೊಂಡು ಬರುತ್ತಾರೆ. ಅನಂತರ ಕುಲಕ್ಕೆ ಸೇರಿದವನ ಕಡೆಯಿಂದ ಭೋಜನವಾಗುತ್ತದೆ. ಈ ಬಗೆಯ ನ್ಯಾಯ ಪದ್ಧತಿ ಬಹಳ ಹಿಂದಿನಿಂದಲೂ ಇದ್ದಿತ್ತೆಂಬುದರ ಬಗ್ಗೆ 'The Mysore Tribes and Castes' ನಲ್ಲಿಯೂ ಆಧಾರವಿದೆ.[೯೬]

ಸೋಲಿಗರಲ್ಲಿ ನ್ಯಾಯ ವ್ಯವಸ್ಥೆಗೆ ಸಂಬಂಧಿಸಿದಂತೆ ಕೆಲವು ದಂಡನೆಗಳು ಹಾಗೂ ಶಿಕ್ಷೆಗಳು ಅವರ ಪೂರ್ವಿಕರಿಂದ ಬಳುವಳಿಯಾಗಿ ಬಂದಿರುವಂತೆ ಕಾಣಿಸುತ್ತದೆ. ಇವರಲ್ಲಿ ಚಪ್ಪಲಿಯಲ್ಲಿ ಹೊಡೆಯುತ್ತೇನೆ ಎಂದು ಹೇಳಿದರೂ, ಚಪ್ಪಲಿಯಲ್ಲಿ ಹೊಡೆದವನಿಗೂ, ಹೊಡೆಸಿಕೊಂಡವನಿಂದಲೂ ದಂಡ ವಸೂಲಿ ಮಾಡುವರು. ಇದರಿಂದ ಇವರಿಬ್ಬರಿಗೂ ಕುಲಪಂಚಾಯಿತಿಯ ಭೀತಿ ಹುಟ್ಟಿಸುವ ತಂತ್ರವಾಗಿದೆ. ಮದುವೆಗೆ ಮುನ್ನ ತಾಯಿಯಾದರೆ ಯಜಮಾನ ವಿಚಾರ ತಪ್ಪಿತಸ್ಥನಿಗೆ ದಂಡದ ಜೊತೆಗೆ ಆಕೆಯೊಡನೆ ವಿವಾಹ ನೆರವೇರಿಸುವನು. ಹೀಗೆ ಕುಟುಂಬದ, ಗುಂಪಿನ, ಹಿತದೃಷ್ಟಿಯಿಂದ ಸೋಲಿಗರ ನ್ಯಾಯದಾನ ಪದ್ಧತಿ ವಿಶಿಷ್ಟ ರೀತಿ ರಿವಾಜುಗಳಿಂದ ಕೂಡಿದೆ, ಪೂರ್ವರಿಂದಲೂ ತಮ್ಮ ಪೂರ್ವಜರು ಹಾಕಿಕೊಟ್ಟ ತತ್ವಗಳನ್ನು ಪರಿಪಾಲಿಸುತ್ತಾ ತಮ್ಮೊಳಗೆ ತಮ್ಮ ವಿವಾದಗಳನ್ನು ಬಗೆಹರಿಸಿಕೊಳ್ಳುವ ವಿವೇಕಶಾಲಿಗಳಾಗಿದ್ದಾರೆ ಹಾಗೂ ಇಂದಿಗೂ ಅವರದೇ ಆದ ನ್ಯಾಯಾಡಳಿತ ವ್ಯವಸ್ಥೆಯನ್ನು ಜೀವಂತವಾಗಿ ಉಳಿಸಿಕೊಂಡಿದ್ದಾರೆ.

ಧಾರ್ಮಿಕ ಜೀವನ : ಸೋಲಿಗರು ಧಾರ್ಮಿಕ ನಿಷ್ಠೆಯುಳ್ಳವರು, ಸಂಪ್ರದಾಯವುಳ್ಳವರು, ಪ್ರಕೃತಿಪೂಜೆ, ಪಿತೃಪೂಜೆ ಮತ್ತು ಕುಲದೇವರ ಆರಾಧನೆ ಹಾಗೂ ಸಜೀವವಾದದಲ್ಲಿಯೂ ಇವರಿಗೆ ನಂಬಿಕೆಯಿದೆ. ಗಿಡ,

ಮರ, ಪ್ರಾಣಿ, ಪಕ್ಷಿ, ಬಳ್ಳಿಗಳನ್ನು ಪೂಜಿಸುವರು. ಸಾಮಾಜಿಕ, ರಾಜಕೀಯ ವ್ಯವಸ್ಥೆಗಳು ಅವರ ಧಾರ್ಮಿಕ ವ್ಯವಸ್ಥೆಯನ್ನು ಆಧರಿಸಿ ನಿಂತಿವೆ ಎನ್ನಬಹುದು. ''ಸೋಲಿಗರ ಜೀವನವು ಧರ್ಮದೊಂದಿಗೆ ಲೀನವಾಗಿದೆ. ಅವರ ಇಡೀ ಬದುಕು ಧರ್ಮದಲ್ಲಿ ಅದ್ದಿತೆಗೆದಂತಿದೆ'' ಎಂದು ಅವರ ಧಾರ್ಮಿಕ ಆಚರಣೆಗಳು ಅವರು ಪಾಲಿಸುವಂತಹ ಕಟ್ಟುಪಾಡುಗಳನ್ನು ರೂಢಿ ಸಂಪ್ರದಾಯಗಳ ಆಚರಣೆಯನ್ನು ನೋಡಿ ಹೇಳಬಹುದು.

ಸೋಲಿಗರು ಕಾಡಿನ ಮಕ್ಕಳಾಗಿ ನಿಸರ್ಗದ ಜೊತೆ ಜೊತೆಯಲ್ಲಿಯೇ ಬೆಳೆದು ಬಂದವರು ಇಂದಿಗೂ ಅದೇ ಕಾಡಿನ ನಿವಾಸಿಗಳು. ಇವರು ತಮ್ಮ ವಿವಿಧ ಪಂಗಡಗಳಿಗೆ ಹೆಸರಿಟ್ಟುಕೊಂಡಿರುವ ರೀತಿಯನ್ನು ಪರಿಶೀಲಿಸಿದರೇ ನಿಸರ್ಗದ ಜೊತೆಗಿನ ಅವರ ಸಂಬಂಧವನ್ನು ಸ್ಪಷ್ಟಪಡಿಸುತ್ತದೆ. ಹೊಂಗೆಲರ ಕುಲ(ಹೊಂಗೆಮರ), ಆಲೂರು ಕುಲ(ಆಲದಮರ), ಬೆಲ್ಲರ ಕುಲ(ಬೆಳ್ಳಿಕುಲ-ನಕ್ಷತ್ರ), ಸೂರ್ಯ ಕುಲ, ತೆನೇರು ಕುಲ (ರಾಗಿಯ ತೆನೆ), ಜೇನು ಕುಲ, ಕುಂಬಳ ಕುಲ (ಕುಂಬಳ ಹೂ) ಹೀಗೆ ಪ್ರಕೃತಿಯ ಸೂರ್ಯ, ನಕ್ಷತ್ರ, ಮರ, ಗಿಡಗಳನ್ನು ಕುಲದ ಗುರುತುಗಳನ್ನಾಗಿ ಇಟ್ಟುಕೊಂಡ ಇವರ ಮೂಲದಲ್ಲಿ ನಿಸರ್ಗಾರಧಕರು ಎಂಬುದರಲ್ಲಿ ಎರಡು ಮಾತಿಲ್ಲ. ಇವರ ದೈವಾರಾಧನೆಯೂ ಹಲವು ಹಂತಗಳಲ್ಲಿ ನಮಗೆ ಕಾಣಸಿಗುತ್ತದೆ. ತಮ್ಮ ಬುಡಕಟ್ಟಿನ 'ಮೂಲಮಾತೆ' ಎಂದು ಭಾವಿಸುವ 'ಸಂಕಮ್ಮ'ನನ್ನು ಆರಾಧಿಸುವವರು ಇದ್ದಾರೆ. ಸೋಲಿಗರ ಮಹಾಮಾತೆ ಎನಿಸಿಕೊಂಡಿರುವ 'ಸಂಕಮ್ಮ' ತುಂಬಾ ವಿಶಿಷ್ಟವಾದ ವ್ಯಕ್ತಿತ್ವವನ್ನು ಪಡೆದ ಒಬ್ಬ ಧೀರ ಮಹಿಳೆ, ಹಾಗಾಗಿ ಈ ಸಂಕಮ್ಮನ ಹಬ್ಬವನ್ನು ವಿಜೃಂಭಣೆಯಿಂದ ಆಚರಿಸುತ್ತಾರೆ.

ಸಂಕಮ್ಮನ ಮಕ್ಕಳೆನಿಸಿದ ಕಾರಯ್ಯ ಮತ್ತು ಬಿಲ್ಲಯ್ಯರನ್ನು ತಮ್ಮ ಸಾಂಸ್ಕೃತಿಕ ನಾಯಕರನ್ನಾಗಿ ಪೂಜಿಸುತ್ತಾರೆ. 'ಕ್ಯಾತೆದೇವರು' ಇವರ ಮತ್ತೊಂದು ಪ್ರಮುಖ ದೈವ. ಮಾರಮ್ಮನನ್ನು ಇವರು ಪೂಜಿಸುತ್ತಾರೆ. 'ಮಾಸ್ತಮ್ಮ'ನಂತೂ ಇವರ ಅಚ್ಚುಮೆಚ್ಚಿನ ದೈವ. ಆನಂತರದಲ್ಲಿ ಬಿಳಿಗಿರಿ ರಂಗಪ್ಪ ಮತ್ತು ಮಲೆಮಹಾದೇಶ್ವರ ಇವರ ಆರಾಧ್ಯ ದೈವವಾದುದು ಕುತೂಹಲಕಾರಿಯಾದ ವಿಚಾರ. ಅಲ್ಲದೆ ಇವರ ಬದುಕಿಗೆ ಗಂಡಾಂತರವನ್ನೊದಗಿಸುವ ಕ್ರೂರ ಪ್ರಾಣಿ, ಒಳಿತು-ಕೆಡಕುಗಳೆರಡನ್ನು ಮಾಡಬಲ್ಲ ಭೂತ, ಪಿಶಾಚಾದಿ ಅಗೋಚರದ ಶಕ್ತಿ ಮುಂತಾದವನೆಲ್ಲಾ ನೆನೆದು ಅದಕ್ಕೊಂದು ಮೂರ್ತರೂಪವನ್ನು ಕೊಟ್ಟು ಆರಾಧಿಸುತ್ತಾರೆ.[೫೭] ಪೌರಾಣಿಕ ಮತ್ತು ಚಾರಿತ್ರಿಕ ಹಿನ್ನೆಲೆಯಿಂದ ರೂಪುಗೊಂಡಿರುವ ಹಬ್ಬಗಳು ಸೋಲಿಗರಲ್ಲಿ ಕಡಿಮೆಯೇ. ಹಾಗೆಯೇ ಇವರು ಉಳಿದ ಸಮುದಾಯಗಳ ಜನಸಾಮಾನ್ಯರು ಆಚರಿಸುವಂತಹ ಗೌರಿ, ದೀಪಾವಳಿ, ದಸರಾ, ಸಂಕ್ರಾಂತಿ, ಯುಗಾದಿ ಮುಂತಾದ ಹಬ್ಬಗಳನ್ನು ಆಚರಿಸುವುದಿಲ್ಲ. ಆದರೆ ಈ ಹಬ್ಬಗಳ ಸಂದರ್ಭದಲ್ಲಿಯೇ ಅವರದೇ ಆದ ಕೆಲವು ಹಬ್ಬಗಳನ್ನು ಮಹತ್ವಪೂರ್ಣವಾಗಿ ಆಚರಿಸುತ್ತಾರೆ. ಒಟ್ಟಾರೆ ಇವರ ಧಾರ್ಮಿಕ ಬದುಕನ್ನು ಗಮನಿಸಿದಾಗ ಅದು ಹಬ್ಬ-ಹರಿದಿನಗಳೊಂದಿಗೆ ಬೆರೆತಂತಿದೆ.

ಸೋಲಿಗ ಸಮುದಾಯವು ಅತ್ಯಂತ ಸರಳವಾದ ಮತ್ತು ಸಂಕೀರ್ಣತೆಯಿಲ್ಲದ ಸಮುದಾಯ. ಆಧುನಿಕ ಜಗತ್ತಿನ ವೈವಿಧ್ಯಮಯ ಬದುಕಿನಿಂದ ಬಹಳದೂರ ಇರುವವರು. ಪ್ರಕೃತಿಯೊಂದಿಗಿನ ಅವಿನಾಭಾವ ಸಂಬಂಧ ಅವರಿಗೆ ರಕ್ತಗತವಾಗಿದೆ. ಕೃತ್ರಿಮತೆ, ವಂಚನೆ, ಮೋಸ ಇವು ಅವರಿಗೆ ತಿಳಿಯವು. ಇವರು ಬಹುಮಟ್ಟಿಗೆ ಸ್ವಯಂಪೂರ್ಣತೆಯನ್ನು ಹೊಂದಿರುವವರು. ಸಹಕಾರ, ಒಗಟ್ಟು ಮತ್ತು ಐಕ್ಯತಾ ಭಾವನೆಗಳು ಅವರಲ್ಲಿ ಎದ್ದು ಕಾಣುತ್ತವೆ. ಅಪಾಯ, ಸಂಕಟ, ಸಮಸ್ಯೆಗಳು ಎದುರಾದಾಗ ಎಲ್ಲರೂ ಒಟ್ಟಾಗಿ ಸೇರಿ ಸಮಸ್ಯೆಗಳನ್ನು ಬಗೆಹರಿಸಿಕೊಳ್ಳುತ್ತಾರೆ. ಸಮುದಾಯದ ಹಿತಕೋಸ್ಕರ ಎಂತಹ ತ್ಯಾಗಕ್ಕೂ ಸಿದ್ಧರಿದ್ದಾರೆ. ಇವರ ಐಕ್ಯತಾಭಾವನೆಯು ಸಮುದಾಯಿಕ ಹಬ್ಬದ ಆಚರಣೆಯಲ್ಲಿ ಹೆಚ್ಚಾಗಿ ಬಿಂಬಿತವಾಗಿರುವುದನ್ನು ಕಾಣಬಹುದು. ಇವರಲ್ಲಿ ಒಳಬಾಂಧವ್ಯ ವಿವಾಹಗಳು ಹೆಚ್ಚಿನ ಸಂಖ್ಯೆಯಲ್ಲಿ ನಡೆಯುತ್ತವೆ. ತಮ್ಮ ಸಮೂಹದ ಪಾವಿತ್ರತೆ, ಐಕ್ಯತೆ, ಸಂಪತ್ತು, ಪ್ರತ್ಯೇಕತೆ ಇವುಗಳನ್ನು ಉಳಿಸಿಕೊಳ್ಳಲು ಒಳಬಾಂಧವ್ಯ ವಿವಾಹಕ್ಕೆ ಬದ್ಧರಾಗಿದ್ದಾರೆ. ಈ ಎಲ್ಲದಕ್ಕಿಂತಲೂ ಮುಖ್ಯವಾಗಿ ಈ ಜನಾಂಗ ಇರುವುದರಲ್ಲಿಯೇ ತೃಪ್ತಿ ಇಟ್ಟುಕೊಂಡು ತಮ್ಮ ಸೀಮಿತ ಬೇಡಿಕೆಗಳನ್ನು ತಮ್ಮ ಕ್ಷೇತ್ರದಲ್ಲಿಯೇ ಪೂರೈಸಿಕೊಂಡು ಸಂತೃಪ್ತ, ಸ್ವತಂತ್ರ ಜೀವನ ನಿರ್ವಹಣೆಯ ಸರಳ ಸ್ವಭಾವದ ಸಂವೇದನಾಶೀಲರೂ ಆಗಿದ್ದಾರೆ ಎಂದು ಹೇಳಬಹುದು.

## ಲಂಬಾಣಿಗಳು

ಕರ್ನಾಟಕದ ಭೂಪಟದಲ್ಲಿ ಕಟ್ಟಕಡೆಯ ದಕ್ಷಿಣದ ತುದಿಯಲ್ಲಿರುವ ಜಿಲ್ಲೆಯಾದ ಚಾಮರಾಜ ನಗರದ ಪುಣಜನೂರಿನ ವ್ಯಾಪ್ತಿಯಲ್ಲಿ ಸುಮಾರು ೫೦೦ ಲಂಬಾಣಿ ಕುಟುಂಬಗಳು ವಾಸವಾಗಿದ್ದಾರೆ. ಇವರನ್ನು ಲಂಬಾಣಿ, ಲಮಾಣಿ, ಲಂಬಾಡಾ, ಬಂಜಾರ, ಬಣಜಾರ, ಸುಖಾಲಿ, ಸುಗಾಲಿ ಇತ್ಯಾದಿ ಹೆಸರುಗಳಿಂದ ಗುರುತಿಸುತ್ತಾರೆ. ಲಂಬಾಣಿ ಎಂಬುದು ಯಾವುದೇ ಜಾತಿ ಸಂಬಂಧಿ ಪರವಾಗಿರದೆ ಅದು ಅವರ ಕುಲವೃತ್ತಿಗಳನ್ನು ಪೂಜಿಸುವ ಪದವಾಗಿದೆ. ಇವರು ಮೂಲತಃ ವ್ಯಾಪಾರಿಗಳು, ಹಾಗಾಗಿಯೇ ಇವರು ಅಲೆಮಾರಿಗಳು ಹೌದು, ಹಿಂದೆ ಇವರು ವ್ಯಾಪಾರಕ್ಕಾಗಿ ಗುಂಪುಗುಂಪಾಗಿ ವಲಸೆ ಹೋಗುತ್ತಿದ್ದರು. ಆಗ ತಾತ್ಕಾಲಿಕವಾಗಿ ಉಳಿದುಕೊಳ್ಳಲು ಇವರು ತಾಂಡಗಳನ್ನು ಕಟ್ಟಿಕೊಳ್ಳುತ್ತಿದ್ದರು. ತಾಂಡ ಎನ್ನುವ ಪದಕ್ಕೆ ಕನ್ನಡ ನಿಘಂಟುವಿನಲ್ಲಿ ಬೀಡು, ಪಾಳೆಯ ಗುಂಪು, ಸಮೂಹ ಎಂದು ಅರ್ಥಕೊಡಲಾಗಿದೆ. ಇಂದು ನಾಗರೀಕತೆ ಬೆಳೆದಂತೆ ಈ ಜನಾಂಗ ತಮ್ಮ ಮೂಲ ವೃತ್ತಿಗಳನ್ನು ಬಿಟ್ಟು ಬೇರೆ ಕಸುಬುಗಳಿಗೆ ಬದಲಾಗಿದ್ದಾರೆ. ಆದರೆ ತಮ್ಮ ಸಮುದಾಯದ ಆಚಾರ-ವಿಚಾರ, ಸಂಪ್ರದಾಯ, ವೇಷಭೂಷಣ, ನಂಬಿಕೆ, ಹಾಡುಕುಣಿತ ಮುಂತಾದ ಅಂಶಗಳನ್ನು ಇಂದಿಗೂ ಉಳಿಸಿಕೊಂಡು ಬಂದಿದ್ದಾರೆ.

ಮೂಲತಃ ರಾಜಸ್ಥಾನದವರಾದ ಇವರು ಭಾರತದ ಬೇರೆ ಬೇರೆ ಭಾಗಗಳಲ್ಲಿ ವ್ಯಾಪಿಸಿದ್ದಾರೆ. ಚಾಮರಾಜನಗರ ತಾಲೂಕಿನಲ್ಲಿ ವಾಸಿಸುವ ಲಂಬಾಣಿಗಳು ಉತ್ತರ ಕರ್ನಾಟಕದಿಂದ ಬಂದವರೆಂಬ ಅಭಿಪ್ರಾಯವಿದೆ. ಸಾಮಾನ್ಯವಾಗಿ ನಗರ, ಪಟ್ಟಣ, ದೊಡ್ಡ ಗ್ರಾಮಗಳಿಂದ ದೂರವಿದ್ದು, ಸಾಧ್ಯವಾದಷ್ಟು

ಬೆಟ್ಟ-ಗುಡ್ಡ, ಕಾಡು-ಮೇಡುಗಳ ಪರಿಸರದಲ್ಲಿ ಈ ಜನಾಂಗ ವಾಸಿಸಲು ಇಷ್ಟಪಡುತ್ತಾರೆ. ಇವರು ತಮ್ಮ ಗುಡಿಸಲುಗಳಿಗೆ ಬಾದೆಹುಲ್ಲು, ಅಪದಹುಲ್ಲು ಮತ್ತು ಭತ್ತದ ಹುಲ್ಲನ್ನು ಮೇಲು ಹೊದಿಕೆಯಾಗಿ ಬಳಸುತ್ತಾರೆ. ತಮ್ಮ ಗುಡಿಸಲುಗಳ ಸನಿಹವೇ ದನಕರುಗಳನ್ನು ಕಟ್ಟಲು ಚಪ್ಪರವಿರುತ್ತದೆ. ಇವರ ತಾಂಡಗಳಲ್ಲಿ ಇವರ ಸಾಂಸ್ಕೃತಿಕ ನಾಯಕನಾದ ಸೇವಾಬಾಯಿಯ ಗುಡಿ ಮತ್ತು ಮರಿಯಮ್ಮನ ಗುಡಿಯನ್ನು ನಿರ್ಮಿಸಿಕೊಂಡಿದ್ದಾರೆ. ಸೇವಾಬಾಯಿಯ ಗುಡಿಯ ಮುಂದೆ ಬಿಳಿಯ ಬಾವುಟ ಮರಿಯಮ್ಮನ ಗುಡಿಯ ಮುಂದೆ ಕೆಂಪು ಬಾವುಟ ನೆಟ್ಟಿರುತ್ತಾರೆ.

ಉಡಿಗೆ-ತೊಡಿಗೆಗಳು: ಲಂಬಾಣಿಗರ ಉಡುಗೆ-ತೊಡಿಗೆಗಳು ಬೇರೆ ಸಮುದಾಯದವರನ್ನು ಹೆಚ್ಚು ಆಕರ್ಷಿಸುತ್ತದೆ. ಇವರು ಉಡುಗೆಯಲ್ಲಿ ಕೆಂಪು ಬಣ್ಣಕ್ಕೆ ಹೆಚ್ಚಿನ ಆದ್ಯತೆಯನ್ನು ನೀಡುತ್ತಾರೆ. ಲಂಬಾಣಿ ಮಹಿಳೆಯರು ಮೂರು ವಿಧದ ಬಟ್ಟೆಯನ್ನು ಧರಿಸುತ್ತಾರೆ. ಅವುಗಳಲ್ಲಿ ಮೊದಲನೆಯದು ಛಾಂಟಿಯಾ ಇದು ತಲೆಯ ಮೇಲೆ ಧರಿಸುವ ದೊಡ್ಡದಾದ ವಸ್ತ್ರ. ಎರಡನೆಯದು 'ಕಾಂಚಳಿ' ಇದು ಕುತ್ತಿಯಿಂದ ಸೊಂಟದವರೆಗೆ ಮುಂಭಾಗವನ್ನು ಆವರಿಸಿರುವ ಕುಪ್ಪಸ. ಮೂರನೆಯದು ಫೇಟಿಯಾ ಇದು ಸೊಂಟದಿಂದ ಕಾಲಿವರೆಗಿನ ಭಾಗಗಳನ್ನು ಮುಚ್ಚುವ ಲಂಗ. ಈ ಮೂರು ಭಾಗಗಳನ್ನು ಹೊಲೆಯುವಾಗ ಕವಡೆ, ಕಾಸು, ಗೆಜ್ಜೆಗೊಂಡೆ, ಗಾಜಿನ ಬಿಲ್ಲೆಗಳನ್ನು ಸೇರಿಸಿ ಹೊಲೆಯುತ್ತಾರೆ. ಲಂಬಾಣಿ ಮಹಿಳೆಯರು ಹೆಚ್ಚು ಅಲಂಕಾರ ಪ್ರಿಯರು, ಒಡವೆಗಳಿಂದ ತಮ್ಮನ್ನು ಅಲಂಕರಿಸಿಕೊಂಡಂತೆ ತಮ್ಮ ದೇಹದ ಅಂಗಾಂಗಗಳನ್ನು ಹಚ್ಚೆ ಹಾಕಿಸಿಕೊಳ್ಳುವುದರಿಂದ ಅಲಂಕರಿಸಿಕೊಳ್ಳುತ್ತಾರೆ. ಮೈನೆರೆಯುವ ಮೊದಲು ಹಾಕಿಸಿಕೊಳ್ಳುವ ಹಚ್ಚೆಯನ್ನು "ಧರ್ಮಮುದ್ರೆ" ಎಂತಲೂ, ಮೈನೆರೆದ ನಂತರ ಹಾಕಿಸಿಕೊಂಡ ಹಚ್ಚೆಯನ್ನು "ಪಾಪಮುದ್ರೆ" ಎಂದು ನಂಬುತ್ತಾರೆ.[೫೮]

ಲಂಬಾಣಿ ಪುರುಷರ ಉಡುಗೆಗಳು ಹೆಚ್ಚು ಅಕರ್ಷವಲ್ಲದಿದ್ದರೂ ವಿಶೇಷವಾಗಿರುವುದನ್ನು ಕಾಣುತ್ತೇವೆ. ಸುಂದರರೂ, ದೃಢಕಾಯರೂ ಆದ ಲಂಬಾಣಿ ಗಂಡಸರಿಗೆ ಮದುವೆ ಸಮಾರಂಭಗಳಲ್ಲಿ ವಿಶೇಷಗಳಿರುತ್ತವೆ. ಅದರಲ್ಲಿ ತಲೆಯ ಮೇಲಿನ ಪೇಟ ಬಹಳ ಮುಖ್ಯವಾದುದು. ಇದನ್ನು ಅವರು 'ಪಾಗಡಿ' ಎನ್ನುತ್ತಾರೆ. ಪಾಗಡಿಯನ್ನು ತಲೆಯ ಮೇಲೆ ಸುತ್ತಿಕೊಳ್ಳುವ ಪದ್ಧತಿ ಇವರಲ್ಲಿ ರೂಢಿಯಲ್ಲಿದೆ. ಈ ಪಾಗಡಿಗೆ ವಿಶೇಷವಾದ ಗೌರವವಿದ್ದು ಸಭೆ-ಸಮಾರಂಭಗಲಲ್ಲಿ ತಲೆಯ ಮೇಲಿನ ಪಾಗಡಿ ಇರಲೇಬೇಕು. ಪರಸ್ಪರ ಮಾತು ಪ್ರಾರಂಭಿಸುವ ಮುನ್ನ ಶುಭಾಶಯದ ಮಾತುಗಳಾದ 'ರಾಂರಾಮಿ'ಯನ್ನು ಹೇಳಬೇಕಾದರೆ ತಲೆಯ ಮೇಲೆ ಪಾಗಡಿ ಇರಬೇಕು. ಉಳಿದಂತೆ ಇತರ ಸಮುದಾಯ ಪುರುಷರಂತೆ ಪರಟು ಪಂಚೆಯನ್ನು ಧರಿಸುವುದು ಚಾಮರಾಜನಗರ ಸುತ್ತಲಿನ ಲಂಬಾಣಿ ಗಂಡಸರ ಸಂಪ್ರದಾಯ. ಒಟ್ಟಿನಲ್ಲಿ ಚಾಮರಾಜನಗರ ಸುತ್ತಲಿನ ಲಂಬಾಣಿಗರು ಹತ್ತಿರದ ತಮಿಳು ಮುಸ್ಲಿಂ ಹಾಗೂ ಇತರ ಸಮುದಾಯದ ಜನರ ಸಂಸ್ಕೃತಿಯ

ಪ್ರಭಾವಕ್ಕೆ ಒಳಗಾಗಿದ್ದರೂ ಕೂಡ ತಮ್ಮ ಸಾಂಪ್ರದಾಯಿಕ ಉಡುಗೆಗಳ ಬಗ್ಗೆ ಮಹತ್ವಕೊಟ್ಟಿರುವುದು ಗಮನಾರ್ಹ ಸಂಗತಿ.

ಲಂಬಾಣಿ ಮಹಿಳೆಯರು ಅಲಂಕಾರ ಪ್ರಿಯರು. ದೇಹದ ಅಂಗಾಗಗಳನ್ನು ವಿವಿಧ ರೀತಿಯ ಆಭರಣಗಳಿಂದ ಶೃಂಗರಿಸಿಕೊಳ್ಳುತ್ತಾರೆ. ತಲೆ, ಕೂದಲು, ಕಿವಿ, ಮೂಗು, ಕೊರಳು, ಕೈ-ಕಾಲುಗಳ ಬೆರಳುಗಳನ್ನು ಸಹ ಭಾರವಾದ ಆಭರಣಗಳಿಂದ ಅಲಂಕರಿಸಿಕೊಳ್ಳುತ್ತಾರೆ. ಲಂಬಾಣಿ ಸ್ತ್ರೀಯರು ಕೆನ್ನೆಗಳ ಎರಡು ಬದಿಯ ಕೂದಲಿಗೆ ಚಿಕ್ಕ ಚಿಕ್ಕ ಜಡೆ ಎಣೆದು ಅದನ್ನು ಎರಡು ಬದಿಯಿಂದ ಹಿಂದಕ್ಕೆ ತೆಗೆದು ಎಲ್ಲಾ ಕೂದಲನ್ನು ಒಟ್ಟು ಸೇರಿಸಿ ಜಡೆ ಹೆಣೆದು ಕಟ್ಟಿಕೊಳ್ಳುತ್ತಾರೆ. ಈ 'ಘುಗರಿ' ಟೋಪ್ಲಿಗಳಿಗೆ ಕವಡೆಯಿಂದ ಸಿದ್ಧಪಡಿಸಿರುವ 'Dan' ಸೇರಿಸಿ ಜಡೆ ಹೆಣೆಯುವುದರಿಂದ ಜಡೆಯು ಸಡಿಲವಾಗುವುದಿಲ್ಲ. ತಲೆಯ ಕ್ರಾಪಿನಿಂದ ಹಣೆಯ ಮೇಲೆ ಟೀಕಿಯನ್ನು ಇಳಿಬಿಟ್ಟಿರುತ್ತಾರೆ. ಕೂದಲಿಗೆ ಹಾಕುವ ಘುಗರಿ, ಟೋಪ್ಲಿಯನ್ನು ಮದುವೆಯಾದ ದಿನದಂದು ಗಂಡಿನ ಮನೆಯವರು ತರುತ್ತಾರೆ. ಘುಗರಿಯನ್ನು ಮದುವೆಯ ನಂತರ ಟೋಪ್ಲಿಯ ಜೊತೆ ಸೇರಿಸಿ ಹಾಕಿಕೊಳ್ಳುತ್ತಾರೆ. ಅದೆ ಅವರ ಮಂಗಳ ಸೂತ್ರವಾಗಿರುತ್ತದೆ. ಇದರೊಂದಿಗೆ ಸೌಭಾಗ್ಯ ಚಿನ್ಹೆಯಾದ 'ಚೂಡೋ' ಮತ್ತು ಕಾಲುಂಗುರವನ್ನು ಹಾಕಿರುತ್ತಾರೆ. ವಿಧವೆಯರು ಘುಗರಿ ಚೂಡೊ, ಕಾಲುಂಗುರ ಹಾಕುವಂತಿಲ್ಲ. ಅವರು ಕೇವಲ ಡೋಪ್ಲಿ ಹಾಕಿಕೊಳ್ಳಲು ಮಾತ್ರ ಅರ್ಹರು. ಮೊದ ಮೊದಲು ಲಂಬಾಣಿಗಳಲ್ಲಿ ತಾಳಿಕಟ್ಟುವ ಪದ್ಧತಿ ಇರಲಿಲ್ಲ. ಆದರೆ ಈಗೀಗ ಸಾಂಸ್ಕೃತೀಕರಣದಿಂದಾಗಿ ತಾಳಿಕಟ್ಟುವ ಪದ್ಧತಿಯನ್ನು ರೂಢಿಸಿಕೊಂಡಿದ್ದಾರೆ. ಈ ಮಹಿಳೆಯರು ತಮ್ಮ ಕಿವಿಗಳಿಗೆ ಲೋಹದ ಕನಿಯಾ, ಕಾವಳಿ, ಕಡ್ಡಿ, ಅಂಡಿಸಾಂಕಳಿಯನ್ನು ಧರಿಸುತ್ತಾರೆ. ಗಂಡಸರು ತಮ್ಮ ಕಿವಿಗಳಿಗೆ 'ಮರ್ಕಿ' ಎಂಬ ಆಭರಣವನ್ನು ತೊಡುತ್ತಾರೆ. ಮಹಿಳೆಯರು ಮೂಗಿಗೆ ಬೇಸರಿ ಅಥವಾ ಮೇಸರಿ ಹಾಗೂ ರಂಗಿನಾಕಾರದ ಭುರಿಯಾ ಧರಿಸುತ್ತಾರೆ. ಇದು ಅವರ ಮುಖದ ಕಾಂತಿಗೆ ಮತ್ತಷ್ಟು ಬೆಡಗುಂಟು ಮಾಡುತ್ತದೆ. ಹೀಗೆ ಲಂಬಾಣಿಗರ ಆಭರಣಗಳ ಪಟ್ಟಿ ಬೆಳೆಯುತ್ತಲೇ ಹೋಗುತ್ತದೆ.[೫೯]

ಆಹಾರ ಪದ್ಧತಿ : ಯಾವುದೇ ಬುಡಕಟ್ಟು ಸಮುದಾಯಗಳ ಆಹಾರ ಪದ್ಧತಿ ಮತ್ತು ಪರಿಸರದಲ್ಲಿ ದೊರೆಯುವ ಗಿಡದ ಬೇರು, ಹಣ್ಣು, ಕಾಯಿ, ಗೆಡ್ಡೆ-ಗೆಣಸು ಹಾಗೂ ಸಸ್ಯ ಜನ್ಯ ಮತ್ತು ಪ್ರಾಣಿಜನ್ಯದಿಂದ ಬರುವ ಸಾಮಾಗ್ರಿಗಳನ್ನು ಅವಲಂಬಿಸಿರುತ್ತದೆ. ಚಾಮರಾಜನಗರ ತಾಲೂಕಿನ ಲಂಬಾಣಿಗರು ಇದಕ್ಕೆ ಹೊರತಾಗಿಲ್ಲ. ಇವರು ಮೂಲತಃ ಮಾಂಸಹಾರಿಗಳು ಹಾಗೂ ಕಾಡುಗಳ ತಪ್ಪಲಿನಲ್ಲಿ ವಾಸಮಾಡುವವರಾದ್ದರಿಂದ ಬೇಟೆ ಮೂಲಕ ಅಥವಾ ಸಾಕಿದ ಪ್ರಾಣಿಗಳನ್ನು ಕೊಂದು ತಿನ್ನುವುದರ ಮೂಲಕ ತಮ್ಮ ಅಗತ್ಯತೆಗಳನ್ನು ಪೂರೈಸಿಕೊಳ್ಳುತ್ತಾರೆ. ಧವಸಧಾನ್ಯಗಳಿಂದಲೂ ಆಹಾರವನ್ನು ತಯಾರಿಸಿಕೊಂಡು ತಮ್ಮ ಅಗತ್ಯತೆಗಳನ್ನು ಪೂರೈಸಿಕೊಳ್ಳುವ ಈ ಸುತ್ತಿನ ಲಂಬಾಣಿಗರು ಪ್ರಾದೇಶಿಕವಾಗಿ ಬಳಕೆಯಲ್ಲಿರುವ ರಾಗಿ, ಜೋಳ, ಸವಣೆ, ಸೀಮೆ, ಅಕ್ಕಿ ಮೊದಲಾದ ಧಾನ್ಯಗಳನ್ನು ಆಹಾರಕ್ಕಾಗಿ ಉಪಯೋಗಿಸುತ್ತಾರೆ.

ಇವರು ಆಹಾರ ತಯಾರಿಕೆಗಾಗಿ ಮಣ್ಣಿನ ಪಾತ್ರೆಗಳನ್ನು ಹೆಚ್ಚಾಗಿ ಬಳಸುತ್ತಾರೆ. ಇವರಿಗೆ ಸಿಹಿ ಅಡುಗೆಗಿಂತ ಖಾರದ ಅಡುಗೆ ಬಲುಪ್ರಿಯ. ಮಾಂಸಾಹಾರವನ್ನು ಹೆಚ್ಚಾಗಿ ಸ್ವೀಕರಿಸುತ್ತಾರೆ. ಕುರಿ, ಕೋಳಿ, ಆಡು, ಜಿಂಕೆ, ಮೊಲ, ಕಾಡುಕೋಳಿ, ಉಡ, ಪಾರಿವಾಳ, ಗೌಜಗಲಕ್ಕಿ, ಮೀನು, ಸೀಗಡಿ, ನಳ್ಳಿ, ಆಮೆ, ಮೊದಲಾದ ಪ್ರಾಣಿಗಳ ಮಾಂಸವನ್ನು ಹೆಚ್ಚು ಉಪಯೋಗಿಸುತ್ತಾರೆ.

ಜನನ : ಚಾಮರಾಜನಗರ ತಾಲೂಕಿನ ಲಂಬಾಣಿ ಬುಡಕಟ್ಟಿನ ಜನರು ಮದುವೆ ಮತ್ತು ಮರಣಕ್ಕೆ ಸಂಬಂಧಿಸಿದ ಸಂಪ್ರದಾಯಿಕ ಆಚರಣೆಗಳಣ್ನು ಬಹಳ ಅಚ್ಚುಕಟ್ಟಾಗಿ ಆಚರಿಸುತ್ತಾರೆ. ಗರ್ಭಿಣಿಗೆ ಪ್ರಸವ ದಿನ ಸಮೀಪಿಸುತ್ತಿದ್ದಂತೆ ಪ್ರತ್ಯೇಕವಾದ ವ್ಯವಸ್ಥೆಯನ್ನು ಮಾಡುತ್ತಾರೆ. ಸಾಮಾನ್ಯವಾಗಿ ಈ ವಸತಿಯು ಮನೆಯ ಜಗಲಿಯ ಮೂಲೆ ಅಥವಾ ಹೊರ ಕೋಣೆ ಇಲ್ಲವೆ ದನದ ಕೊಟ್ಟಿಗೆಯಾಗಬಹುದು. ಚೊಚ್ಚಿಲ ಹೆರಿಗೆ ತವರಿನಲ್ಲಿ ನಡೆಯಬೇಕೆಂಬುದು ಈ ಸುತ್ತಿನ ಲಂಬಾಣಿಗರಲ್ಲಿ ನಡೆದು ಬಂದಿರುವ ಸಂಪ್ರದಾಯ. ಇವರಲ್ಲಿ 'ಸೀಮಂತ' ಆಚರಣೆಯೇನು ಇಲ್ಲ. ಆದರೆ ಗರ್ಭಿಣಿ ಸ್ತ್ರೀಯ ಆಸೆ ಆಕಾಂಕ್ಷೆಗಳನ್ನು ಎಂಥ ಬಡವರಾದರೂ ಈಡೇರಿಸುವ ಪದ್ಧತಿಯುಂಟು. ಬಸುರಿಯನ್ನು ಏಳನೇಯ ತಿಂಗಳು ಮನೆಗೆ ಕರೆತರುವ ಮೊದಲು ತವರಿನವರು ಮಗಳ ಬಯಕೆಯೇನು ಎಂಬುದನ್ನು ತಿಳಿದುಕೊಂಡು ಅವಳ ಆಸೆ ಈಡೇರಿಸುತ್ತಾರೆ. ಬಸುರಿ ಬಯಕೆಯನ್ನು ಈಡೇರಿಸದಿದ್ದರೆ ಪ್ರಸವದ ಸಂದರ್ಭದಲ್ಲಿ ಗರ್ಭಿಣಿಯ ಕಾಲುಗಳಲ್ಲಿ ಊತ ಬರುತ್ತದೆ. ಹುಟ್ಟುವ ಮಗುವಿಗೆ ಕಿವಿ ಸೋರುತ್ತದೆ ಎಂಬ ನಂಬಿಕೆ ಇವರದು. ಮಳೆಗಾಲದಲ್ಲಿ ಗುಡುಗು ಸಿಡಿಲು ಬರುವಾಗ ಬಸುರಿ ಹೆಂಗಸನ್ನು ಮನೆಯಿಂದ ಹೊರಗೆ ಕಳುಹಿಸುವುದಿಲ್ಲ. ಈ ಸಂದರ್ಭದಲ್ಲಿ ಆಕೆಯಿಂದ ಯಾವ ಕೆಲಸವನ್ನು ಮಾಡಿಸುವುದಿಲ್ಲ. ಈ ಸಂದರ್ಭದಲ್ಲಿ ಬಸುರಿ ಕೈಯಿಂದ ಕೆಲಸ ಮಾಡಿಸಿದರೆ ಏನನ್ನಾದರೂ ಕತ್ತರಿಸಿದರೆ ಹುಟ್ಟುವ ಮಗು ಅಂಗವಿಕಲವಾಗುತ್ತದೆಂಬ ನಂಬಿಕೆ ಇವರಲ್ಲಿದೆ.[೨೦]

ಬಸುರಿಗೆ ಹೆರಿಗೆ ನೋವು ಕಾಣಿಸಿಕೊಂಡ ಕೂಡಲೆ ಇಂಥ ಕೆಲಸದಲ್ಲಿ ನುರಿತರೆಂದು ಹೆಸರುವಾಸಿಯಾದ ತಾಂಡದ ಹೆಂಗಸರನ್ನು ಕರೆತರಲಾಗುವುದು. ನೆರೆಹೊರೆಯ ಹೆಂಗಸರು ಆಕೆಗೆ ಸಹಾಯಕರಾಗಿ ನಿಲ್ಲುವರು. ಅನುಭವಿ ಹೆಂಗಸರು ಸುಗಮವಾಗಿ ಹೆರಿಗೆ ಮಾಡಿಸಿ ಹೊಕ್ಕಳು ಬಳ್ಳಿಯನ್ನು ಕತ್ತರಿಸಿ ತಾಯಿ ಮಗುವನ್ನು ಬೇರ್ಪಡಿಸುವಳು. ಮಾಸನ್ನು ಒಂದು ಗುಂಡಿ ತೆಗೆದು ಅದರಲ್ಲಿ ಒಂದು ಕಾಸು, ಒಂದು ಗೇರು ಕಾಯಿ ಹಾಗೂ ಸ್ವಲ್ಪ ಹಿಟ್ಟನ್ನು ಹಾಕಿ ಮುಚ್ಚುವರು. ಮಾಸವನ್ನು ಕಾಗೆ, ನಾಯಿ ಮುಂತಾದ ಪ್ರಾಣಿ-ಪಕ್ಷಿಗಳು ತಿಂದರೆ ತಾಯಿಯ ಮೊಲೆ ಹಾಲು ಬತ್ತಿ ಹೋಗುವುದಾಗಿ ನಂಬುತ್ತಾರೆ. ಮಗುವಿನ ಹೊಕ್ಕುಳು ಬಳ್ಳಿ ಒಣಗಿ ಉದುರಿದಾಗ ತಾಯಿತ ಮಾಡಿ ಮಗುವಿನ ಕೊರಳಿಗೆ ಕಟ್ಟುತ್ತಾರೆ. ಚಾಮರಾಜನಗರದ ಲಂಬಾಣಿ ಜನರಲ್ಲಿ ಗಂಡು ಮಗುವಾದರೆ ಹೆಚ್ಚಿನ ಆನಂದ ಪಡುತ್ತಾರೆ. ಹೆಣ್ಣು ಮಗು ಜನನವಾದರೆ ದುಃಖಮಾಡಿಕೊಳ್ಳುತ್ತಾರೆ. ಹಿಂದೆ ಈ ಜನಾಂಗದಲ್ಲಿ ಹೆಣ್ಣು ಹುಟ್ಟಿದರೆ ಅದು ತಮ್ಮ ಬದುಕಿನ ಭಾಗ್ಯ

ಎಂದು ಸಂತೋಷ ಪಡುತ್ತಿದ್ದ ಕಾಲವೊಂದಿತ್ತು. ಹೆಣ್ಣಿನಿಂದ ತಮ್ಮ ಘನತೆ ಹೆಚ್ಚಾಗುತ್ತದೆಂದು ಭಾವಿಸುತ್ತಿದ್ದ ಕಾಲ ಅದು. ಆದರೆ ಬದಲಾದ ಸಾಮಾಜಿಕ ಸಂದರ್ಭದಲ್ಲಿ ಹೆಣ್ಣು ಮಗು ಜನಿಸಿದರೆ ಎಕ್ಕದ ಹಾಲು ಬಾಯಿಗೆ ಹಾಕಿ ಉಸಿರುಗಟ್ಟುವಂತೆ ಮಾಡಲಾಗುತ್ತಿತ್ತೆಂಬ ಮಾಹಿತಿಗಳು ವಕ್ತೃಗಳಿಂದ ತಿಳಿದುಬರುತ್ತದೆ. ಆದರೆ ಪ್ರಸ್ತುತ ಲಂಬಾಣಿಗರಲ್ಲಿ ಈ ಭಾವನೆಗಳಿಲ್ಲ.

ಹೆರಿಗೆಯಾದ ತಕ್ಷಣ ಪ್ರತ್ಯೇಕ ಕೋಣೆಯಲ್ಲಿ ತಾಯಿ-ಮಗುವಿಗೆ ಬಿಸಿ ನೀರಿನ ಸ್ನಾನ ಮಾಡಿಸಿ ಮಗುವಿಗೆ ಚೌಡಲ ಎಣ್ಣೆಯನ್ನು ಕುಡಿಸುವುದರ ಮೂಲಕ ಜನನದ ವಿಧಿಯನ್ನು ಆಚರಿಸುತ್ತಾರೆ. ಗಂಡು ಮಗು ಜನಿಸಿದರೆ, ಬಾಣಂತಿಯು ಐದು ದಿನ ಪ್ರತ್ಯೇಕ ಕೋಣೆಯಲ್ಲಿರುವಳು. ಹೆಣ್ಣು ಮಗು ಜನಿಸಿದರೆ, ಮೂರು ದಿನ ಇರುವಳು, ಹೆರಿಗೆಯಾದ ಕ್ಷಣದಿಂದ ಹನ್ನೆರಡು ದಿನಗಳವರೆಗೆ ಸೂತಕವನ್ನು ಆಚರಿಸುತ್ತಾರೆ. ಹನ್ನೆರಡು ದಿನಗಳ ತನಕ ಬಾಣಂತಿಗೆ ಸಪ್ಪೆ ಅನ್ನ, ಬಿಸಿ ನೀರು ಕೊಡುವರು. ಜನಿಸಿದ ಮಗು ಹೆಣ್ಣಾಗಿದ್ದರೆ ಈ ಎಲ್ಲಾ ಕಟ್ಟುನಿಟ್ಟುಗಳು ಸಡಿಲ. ಗಂಡು ಮಗುವಾದರೆ ಬಹಳ ಕಟ್ಟುನಿಟ್ಟು ಹಾಗೂ ಬಾಣಂತಿಯನ್ನು ಚೆನ್ನಾಗಿ ಆರೈಕೆ ಮಾಡಿ ತಾಯಿ-ಮಗುವನ್ನು ಎಚ್ಚರಿಕೆಯಿಂದ ಕಾಪಾಡುತ್ತಾರೆ.

ಲಂಬಾಣಿಗಳಲ್ಲಿ ಮಗು ಜನಿಸಿದ ಹನ್ನೆರಡನೆಯ ದಿನ ಮಾಡುವ ಕಾರ್ಯಕ್ಕೆ 'ಹಾಂಡಿ ಕಾಡೀರೊ' ಎನ್ನುವರು. ಅಂದರೆ ಅಲ್ಲಿಯವರೆಗೆ ಬಳಸಿದ ಮಡಿಕೆಗಳನ್ನು ಬಿಸಾಕಿ ಹೊಸ ಮಡಿಕೆಗಳನ್ನು ಬಳಸುತ್ತಾರೆ. ಅಲ್ಲದೆ ಮನೆಗೆ ಸುಣ್ಣ ಬಣ್ಣ ಬಳಿದು ಮನೆ ಸಾರಿಸಿ, ಸ್ನಾನ ಮಾಡಿಕೊಂಡು ಹೊಸ ಮಡಿಕೆಯಲ್ಲಿ ಹೊಸ ನೀರು ತಂದು ಅಡುಗೆ ಮಾಡಿ ಮನೆ ದೇವರಿಗೆ ಹಾಗೂ ಗುರೂಜಿಗೆ ಪೂಜೆ ಮಾಡಿ ಎಡೆಯಿಟ್ಟು ನಾಲ್ಕು ಜನರಿಗೆ ಊಟ ಹಾಕುವರು. ಈ ರೀತಿ ಮಡಿಕೆ ತೆಗೆದಾದ ಬಳಿಕ ಬಾಣಂತಿ ಮತ್ತು ಮಗು ಮೂಲ ಮನೆಗೆ ಹೋಗಬಹುದು.

ಇವರಲ್ಲಿ ನಾಮಕರಣ ಪದ್ಧತಿಯಿದ್ದು ಒಂದು ಒಳ್ಳೆಯ ದಿನ ಮಗುವನ್ನು ತೊಟ್ಟಿಲಿನಲ್ಲಿ ಮಲಗಿಸಿ ಮೊದಲೇ ಕೇಳಿ ನಿರ್ಧರಿಸಿಕೊಂಡಿದ್ದ ಹೆಸರನ್ನು ಮಗುವಿನ ಕಿವಿಯಲ್ಲಿ ಮೂರು ಬಾರಿ ಉಚ್ಚರಿಸುತ್ತಾರೆ. ಇಲ್ಲವೆ ಮನೆಯ ಹಿರಿಯರೊಬ್ಬರ ಹೆಸರನಿಟ್ಟು ಸುಮ್ಮನಾಗುವರು. ನಾಮಕರಣಕ್ಕೆ ಬಂದವರಿಗೆ ಸಿಹಿ ಹಂಚುವುದರ ಮೂಲಕ ಲಂಬಾಣಿಗರಲ್ಲಿ ಜನನದ ವಿಧಿ ವಿಧಾನಗಳು ಮುಕ್ತಾಯವಾಗುತ್ತವೆ. ನಿಸರ್ಗ ಸಹಜವಾದ ವಂಶೋತ್ಪತ್ತಿಯು ಇಲ್ಲದಿದ್ದಾಗ ಲಂಬಾಣಿಗರಲ್ಲಿ ದತ್ತು ತೆಗೆದುಕೊಳ್ಳುವ ಪದ್ಧತಿಯಿದೆ. ಆದರೆ ಆ ದತ್ತು ಸ್ವೀಕಾರ ಪದ್ಧತಿಯು ಸಹ ಸಮಾಜದ ಒಪ್ಪಿಗೆಯ ಮೇರೆಗೆ ನಡೆಯುತ್ತದೆ.

**ಋತುಮತಿ ಆಚರಣೆ :** ಈ ತಾಲೂಕಿನ ಲಂಬಾಣಿ ಜನಾಂಗದಲ್ಲಿ ಮೈನೆರೆದ ಹುಡುಗಿಗಾಗಿ ಯಾವ ವಿಶೇಷ ಆಚರಣೆಗಳು ಇರುವುದಿಲ್ಲ. ಹೆಣ್ಣು ಮೈನೆರೆಯುವುದನ್ನು ಫೂಲ್ ಪೇರ್ಲೀದಿ, ಜೀರೆಂಭಳಗಿ, ಮೋಟಿಯಾರ್ ವೇಗಿ, ಮೊದಲಾದ ಹೆಸರುಗಳಿಂದ ತಮ್ಮ ಭಾಷೆಯಲ್ಲಿ ಕರೆಯುತ್ತಾರೆ. ಇವರಲ್ಲಿ ಪ್ರಥಮ ಸ್ರಾವವನ್ನು ಹೆಣ್ಣಿನ ತಾಯಿ ನೋಡಬಾರದೆಂಬ ನಂಬಿಕೆಯಿದೆ, ನೋಡಿದರೆ ಅದು ಅಪಶಕುನ ಏನಾದರೂ ಕೆಡುಕಾಗುತ್ತದೆ

ಎಂಬ ಭಾವನೆಯಿದೆ. ಇಂಥ ನಂಬಿಕೆ ಕೆಲವು ಬ್ರಾಹ್ಮಣರಲ್ಲಿಯೂ ಇದೆಯಂತೆ.[೫೮] ಋತುಮತಿಯಾದ ಕ್ಷಣದಿಂದಲೇ ಹುಡುಗಿಯ ಮನೆಯವರಿಗೆ ಹಾಗೂ ರಕ್ತ ಸಂಬಂಧಿಗಳಿಗೆ ಸೂತಕ' ತಲೆದೋರುತ್ತದೆ. ಹನ್ನೆರಡು ದಿನಗಳವರೆಗೆ ಈ ಸೂತಕ ಇರುವವರು ದೇವಸ್ಥಾನಗಳಿಗೆ ಹೋಗಬಾರದು, ಮಂಗಳಕಾರ್ಯಗಳಲ್ಲಿ ಭಾಗವಹಿಸಬಾರದು ಹಾಗೂ ಇತರರು ಸೂತಕದ ಮನೆಯಲ್ಲಿ ಊಟೋಪಾಚಾರ ಮಾಡಬಾರದೆಂಬ ನಂಬಿಕೆಯಿದೆ.

ಋತುಮತಿಯಾದ ಹೆಣ್ಣನ್ನು ಸ್ನಾನ ಮಾಡಿಸಿ ಮನೆಯಿಂದ ದೂರವಿರುವ ಒಂದು ಕೋಣೆಯಲ್ಲಿ ಕೂರಿಸುವರು. ಉತ್ತಮವಾದ ಬಟ್ಟೆ ಉಡಿಸಿ, ತಲೆಬಾಚಿ, ತಿಲಕವಿಟ್ಟು ಶೃಂಗಾರ ಮಾಡಿದ ಹುಡುಗಿಯನ್ನು ಹಿರಿಯ ಮಹಿಳೆಯೊಬ್ಬಳ ಉಸ್ತುವಾರಿಯಲ್ಲಿ ಹನ್ನೆರಡು ದಿನಗಳ ಕಾಲ ಇರಿಸುವರು. ಹನ್ನೆರಡನೆಯ ದಿನ ಮನೆಮಂದಿಯೆಲ್ಲ ಸ್ನಾನ, ಮಡಿಮಾಡಿಕೊಂಡು ಮನೆಯಲ್ಲಿ ಇದ್ದ ಹಳೆಯ ಮಡಿಕೆಗಳನ್ನು ಬಿಸಾಡಿ ಹೊಸ ಮಡಿಕೆಗಳಲ್ಲಿ ಹೊಸ ನೀರು ತಂದು, ಅಡುಗೆ ಮಾಡಿ ಸಂಪ್ರದಾಯದಂತೆ ಮೊದಲು ಹಿರಿಯರಿಗೆ ಎಡೆ ಇಕ್ಕಿ ಆ ಬಳಿಕ ಬಂಧುಮಿತ್ರರಿಗೆಲ್ಲಾ ಊಟ ಬಡಿಸುವರು. ಅಲ್ಲಿಗೆ ಋತುಮತಿ ಸೂತಕ ಕಳೆದಂತಾಗುತ್ತದೆ. ಒಟ್ಟಾರೆ ಹೇಳುವಾದರೆ ಲಂಬಾಣಿ ಜನಾಂಗ ಋತುಮತಿ ಆಚರಣೆ ಸರಳವಾಗಿ ಸಹಜವಾಗಿಯೇ ಆಚರಿಸುವರೇ ಹೊರತು ವಿಜೃಂಭಣೆಯಿಂದೇನು ಆಚರಿಸುವುದಿಲ್ಲ.

ಮದುವೆ ಸಂಪ್ರದಾಯಗಳು : ಚಾಮರಾಜನಗರ ಸುತ್ತಿನ ಲಂಬಾಣಿಗರ ಮದುವೆಯ ವಿಧಿವಿಧಾನ, ಸಂಪ್ರದಾಯಾಚರಣೆಗಳು ಕುತೂಹಲಕಾರಿಯಾಗಿದ್ದು ಅವರ ಸಾಂಸ್ಕೃತಿಕ, ಸಾಮಾಜಿಕ ಬದುಕಿನ ಮೇಲೆ ಬೆಳಕನ್ನು ಚೆಲ್ಲುತ್ತವೆ. ಲಂಬಾಣಿಗಳಲ್ಲಿ ಕುಲಗೋತ್ರ, ಪಂಗಡಗಳಿಗೆ ಹೆಚ್ಚಿನ ಪ್ರಾಮುಖ್ಯತೆಯಿದೆ. ಇವರಲ್ಲಿ ರಾಠೋಡ(ಭುಕ್ಯಾ), ಚವ್ಹಾಣ, ಪವಾರ(ಜಾತ್) ಮತ್ತು ಜಾದವ್ (ವಡತಾ) ಎಂಬ ನಾಲ್ಕು ಒಳಪಂಗಡಗಳಿವೆ. ಅಲ್ಲದೆ ಜಾತಿಯ ಉಪಜಾತಿಗಳಲ್ಲಿ, ಉಪಜಾತಿಗಳು ಕುಲಗಳಲ್ಲಿ ಹಾಗೂ ಕುಲಗಳು ಗೋತ್ರಗಳಲ್ಲಿ ಅಲ್ಲದೆ ಗೋತ್ರಗಳು ಉಪಗೋತ್ರಗಳಲ್ಲಿ ವಿಲೀನಗೊಂಡಿರುತ್ತವೆ.[೫೯] ಈ ಪ್ರಾಂತ್ಯದ ಲಂಬಾಣಿಗರಲ್ಲೂ ಈ ಬಗೆಯ ವಿಲೀನತೆಗಳಿವೆ.

ಇವರಲ್ಲಿ ಸಗೋತ್ರ ವಿವಾಹ ನಿಷಿದ್ಧ. ಬುಕ್ಯಾ ಮತ್ತು ಜಾತ್ ಗೋತ್ರಗಳ ನಡುವೆ ಸಂಬಂಧಗಳು ನಡೆಯುತ್ತವೆ. ಒಂದೇ ಗೋತ್ರಕ್ಕೆ ಸೇರಿದವರು ಪರಸ್ಪರ ಸಹೋದರ ಸಂಬಂಧಿಗಳೆಂದು ನಂಬಿಕೆ ಇವರಲ್ಲಿದೆ. ಈ ನಿಯಮವನ್ನು ಕಟ್ಟುನಿಟ್ಟಾಗಿ ಪಾಲಿಸುವುದರಿಂದ ಬುಡಕಟ್ಟಿನ ಒಳಗಡೆ ಲೈಂಗಿಕ ಶಿಸ್ತನ್ನು ಕಾಪಾಡಿಕೊಳ್ಳಲು ಸಾಧ್ಯವಾಗಿದೆ. ಲಂಬಾಣಿಗರಲ್ಲಿ ಮದುವೆಯ ಹೆಣ್ಣು-ಗಂಡು ತಮ್ಮ ಬಾಳ ಸಂಗಾತಿಯನ್ನು ಆಯ್ಕೆ ಮಾಡಿಕೊಳ್ಳುವ ಅವಕಾಶವಿಲ್ಲ. ತಂದೆ-ತಾಯಿಯರೇ ಆ ಜವಾಬ್ದಾರಿಯನ್ನು ನಿರ್ವಹಿಸುತ್ತಾರೆ. ವಿವಾಹ ವಿಚ್ಛೇದನದ ಸಂದರ್ಭದಲ್ಲಿಯೂ ಕೂಡ ತಂದೆ-ತಾಯಿಯರ ತೀರ್ಮಾನವೇ ಅಂತಿಮವಾಗಿರುತ್ತದೆ.

ಲಂಬಾಣಿಗರಲ್ಲಿ ಹೆಣ್ಣು ಆಯ್ಕೆ ಮಾಡುವುದೇ ಬಹಳ ಕಷ್ಟ. ಗಂಡಿನ ಮನೆಯವರ ಹೆಣ್ಣಿನ ಮನೆಗೆ ಹೋಗುವ ಮುನ್ನ ಗಂಡಿನ ತಂದೆ ಅಥವಾ ಹಟ್ಟಿಯ ಯಜಮಾನ ಹೆಣ್ಣಿನ ಮನೆಗೆ ಬಂದು ನಿಮ್ಮ ಮಗಳನ್ನು ನಮ್ಮ ಮಗನಿಗೆ ಕೊಡಬೇಕು ಎಂಬುದನ್ನು ಸೂಕ್ಷ್ಮವಾಗಿ ತಿಳಿಸುತ್ತಾರೆ. ಹೆಣ್ಣಿನ ತಂದೆ ಊರಿಗೆ ಯಜಮಾನರ ಸಮ್ಮುಖದಲ್ಲಿ ಗಂಡಿನವರ ಮುಂದೆ ನನ್ನ ಮಗಳನ್ನು ಇಂಥವರ ಮಗನಿಗೆ ಕೊಡಬೇಕೆಂದಿದ್ದೇನೆ. ಗಂಡು ಹೆಣ್ಣಿನ ಕೂಟ ಕೂಡಿ ಬಂದರೆ ಅವರು ನಮ್ಮ ಮನೆಗೆ ಬರಲಿ ಇಲ್ಲವಾದರೆ ಅವರು ಬರುವುದು ಬೇಡ ಎಂದು ನೇರವಾಗಿ ಹೇಳುತ್ತಾನೆ. ಕೂಡ ಸರಿ ಬಂದರೆ ಎಲ್ಲರೂ ಸಂತೋಷದಿಂದ ಹೆಣ್ಣಿನ ಮನೆಗೆ ಹೋಗುತ್ತಾರೆ. ಆದರೆ ಲಂಬಾಣಿಗಳಲ್ಲಿ ಯಾವುದೇ ಕಾರಣಕ್ಕೂ ಹೆಣ್ಣಿನ ಮನೆಯವರು ಗಂಡಿನ ಮನೆಗೆ ಗಂಡು ಕೊಡಿರೆಂದು ಹೋಗುವುದಿಲ್ಲ. ಹಾಗೇ ಕೇಳುವುದು ಅಪಮಾನವೆಂದೇ ಈ ಜನ ಭಾವಿಸಿದ್ದಾರೆ. ವರದಕ್ಷಿಣೆ ಪಿಡುಗು ಹೆಚ್ಚಾಗುತ್ತಿರುವ ಇವತ್ತಿನ ದಿನಗಳಲ್ಲೂ ಲಂಬಾಣಿಗರು ಗಂಡಿನವರೇ ಮುಂದಾಗಿ ಹೆಣ್ಣನ್ನು ಬೇಡುವ ಪದ್ಧತಿಯನ್ನು ಪರಂಪರಾಗತವಾಗಿ ಉಳಿಸಿಕೊಂಡು ಬಂದಿರುವುದು ಸ್ತುತ್ಯಾರ್ಹವಾದುದು. ಒಟ್ಟಿನಲ್ಲಿ ಲಂಬಾಣಿಗರ ಮದುವೆ ಪದ್ಧತಿಯು ಆಧುನಿಕರ ದೃಷ್ಟಿಯಲ್ಲಿ ವಿಚಿತ್ರವಾಗಿ ಕಂಡರೂ ಆ ಸಮುದಾಯವು ತನ್ನದೇ ಆದ ವಿಶಿಷ್ಟ ಸಂಸ್ಕಾರಗಳನ್ನು ಹೊಂದಿದ್ದು. ಅವುಗಳು ಇನ್ನುಳಿದ ಬುಡಕಟ್ಟು ಸಮುದಾಯದ ಸಂಸ್ಕಾರಗಳಿಗಿಂತ ಭಿನ್ನವಾಗಿ ತೋರುತ್ತದೆ.

**ಕೂಡಾವಳಿ ಪದ್ಧತಿ :** ಬುಡಕಟ್ಟು ಜನರ ಬದುಕಿನಲ್ಲಿ ರೂಢಿಯಲ್ಲಿರುವ ‘ಕೂಡಾವಳಿ ಪದ್ಧತಿ’ ಲಂಬಾಣಿಗರಲ್ಲೂ ಇದೆ. ಆಧುನಿಕರಲ್ಲಿ ಕೂಡಾವಳಿ ನವನಾಗರಿಕತೆ ರೂಪದಲ್ಲಿ ಕಂಡು ಬಂದರೆ ಅಡವಿ ವಾಸಿಗಳಲ್ಲಿ ‘ಕೂಡಾವಳಿ’ ಸಮಾಜ ಸಮ್ಮತ ಪದ್ಧತಿಯಾಗಿ ಕಂಡುಬರುತ್ತದೆ. ಗಂಡ ಸತ್ತು ಪ್ರಾಯವಿರುವ ಹೆಂಗಸರನ್ನು ಹೆಂಡತಿ ಸತ್ತ ವಿಧುರನಾಗಲಿ, ರೋಗಪೀಡಿತ ಹೆಂಡತಿಯ ಗಂಡನಾಗಲಿ ಕೂಡಾವಳಿ ಮಾಡಿಕೊಳ್ಳಬಹುದು. ಹಾಗೆಯೇ ಗಂಡಸತ್ತ ವಿಧವೆ ನಾನಾ ಕಾರಣಕ್ಕೆ ಹೊಂದಾಣಿಕೆಯಿಲ್ಲದ ಹಗೆತನ, ನಡತೆಗೆಟ್ಟ ಪತ್ನಿ, ಲೈಂಗಿಕ ತೃಪ್ತಿ ನೀಡದ ಹೆಂಡತಿ -ಹೀಗೆ ಗಂಡನಿಂದ ತ್ಯಜಿಸಲ್ಪಟ್ಟ ಹೆಣ್ಣು ಮಾನಸಿಕ ಶಾರೀರಿಕ ಧರ್ಮಕ್ಕನುಗುಣವಾಗಿ ಬೇರೊಬ್ಬ ಗಂಡಸನ್ನು ಕೂಡಾವಳಿ ಮಾಡಿಕೊಳ್ಳಬಹುದು. ಅಲ್ಲದೆ ಮದುವೆಯಾಗದ ಕನ್ಯೆಯನ್ನು ವಿಧುರ ವಿವಾಹವಾಗುತ್ತಾನೆ. ಅದು ಕೂಡಿಕೆಯಲ್ಲ. ಆದರೆ ಮದುವೆಯಾದ ಹೆಣ್ಣು ವಿವಾಹವಾಗದ ಪುರುಷನನ್ನು ವಿವಾಹವಾಗುವಂತಿಲ್ಲ. ಕೂಡಾವಳಿ ಮಾಡಿಕೊಳ್ಳಬೇಕಾಗುತ್ತದೆ. ಇದು ಲಂಬಾಣಿಗರಲ್ಲೂ ಇರುವ ಪುರುಷ ಪ್ರಧಾನ ಸಾಮಾಜಿಕ ವ್ಯವಸ್ಥೆಯನ್ನು ಪ್ರತಿನಿಧಿಸುತ್ತದೆ.

**ಶವ ಸಂಸ್ಕಾರ :** ಸತ್ತ ವ್ಯಕ್ತಿಯ ಶವಸಂಸ್ಕಾರ ಮಾಡುವ ಪದ್ಧತಿ ಎಲ್ಲ ಸಮುದಾಯಗಳಲ್ಲೂ ಇದೆ. ಅವರವರ ನಂಬಿಕೆ ಆಚಾರ ವಿಚಾರಗಳ ಹಿನ್ನೆಲೆಯಲ್ಲಿ ಮರಣ ‘ಸಂಸ್ಕಾರ ಕ್ರಿಯೆಗಳು ನಡೆಯುತ್ತವೆ. ಚಾಮರಾಜನಗರ ಲಂಬಾಣಿಗಳಲ್ಲಿ ಸ್ವರ್ಗ ನರಕದ ಕಲ್ಪನೆ ಇರುವುದರ ಜೊತೆಗೆ ಆತ್ಮವು ಮರಣದೊಂದಿಗೆ

ಮುಕ್ತಿ ಪಡೆಯುತ್ತದೆ ಅಥವಾ ಕರ್ಮಾಧೀನಕ್ಕೆ ಒಳಪಟ್ಟು ಪುನರ್ ಜನ್ಮ ಪಡೆಯುತ್ತದೆ ಎಂಬ ನಂಬಿಕೆ ಇವರಲ್ಲಿದೆ. ಈ ನಂಬಿಕೆಗಳ ಹಿನ್ನೆಲೆಯಲ್ಲಿ ಇವರ ಶವಸಂಸ್ಕಾರ ಕ್ರಿಯೆಗಳು ರೂಪಿತಗೊಂಡಿವೆ.

ಇವರಲ್ಲಿ ಹೆಣವನ್ನು ಹೂಳುವ ಮತ್ತು ಸುಡುವ ಎರಡು ಪದ್ಧತಿಗಳು ಆಚರಣೆಯಲ್ಲಿವೆ. ಸಹಜವಾಗಿ ಸತ್ತವರನ್ನು, ಮಕ್ಕಳನ್ನು ಹೂಳುತ್ತಾರೆ. ಅಸಹಜವಾಗಿ ಸತ್ತವರನ್ನು, ತೊನ್ನು ಇದ್ದವರನ್ನು, ರೋಗಿಷ್ಟರನ್ನು ಸುಡುವ ಪದ್ಧತಿ ಇವರಲ್ಲಿದೆ. ಮಕ್ಕಳು ತೀರಿಕೊಂಡರೆ ಹೆಚ್ಚಿನ ಆಚರಣೆಗಳನ್ನು ಮಾಡುವುದಿಲ್ಲ. ದೊಡ್ಡವರಂತೆ ಮಕ್ಕಳಿಗೆ ಹೆಚ್ಚಿನ ಸಂಸ್ಕಾರ ಮಾಡಿದರೆ ಮಕ್ಕಳಿಗೆ ಮೋಕ್ಷ ಪ್ರಾಪ್ತಿಯಾಗಿ ಮರುಹುಟ್ಟು ಪಡೆಯುವುದಿಲ್ಲವೆಂದು ಭಾವಿಸುತ್ತಾರೆ. ತೀರಿಕೊಂಡ ಮಕ್ಕಳು ಮರುಹುಟ್ಟು ಪಡೆದು ತಮ್ಮ ಆಸೆ ಆಕಾಂಕ್ಷೆಗಳನ್ನು ಈಡೇರಿಸಿಕೊಳ್ಳಲಿ ಎಂಬುದು ಇವರ ಆಶಯ. ಮಕ್ಕಳಿಗೆ ಅಪಾರವಾದ ಕರ್ಮಗಳನ್ನು ಮಾಡುವುದಿಲ್ಲ. ಶವವನ್ನು ಹೂಳುವ ಸಮಯದಲ್ಲಿ ತೋಡಿದ ಗುಂಡಿ ಶವಕ್ಕಿಂತ ಉದ್ದವಾಗಿದ್ದರೆ ಸತ್ತವನಿಗೆ ಆಯಸ್ಸು ತೀರಿರಲಿಲ್ಲ. ಅಕಾಲಿಕ ಮರಣವನ್ನಪ್ಪಿದ್ದಾನೆಂದು, ತೋಡಿದ ಗುಂಡಿ ಶವಕ್ಕೆ ಸರಿ ಹೋಗುವಂತಿದ್ದರೆ ಸತ್ತವನ ಆಯಸ್ಸು ಅಷ್ಟೇ ಎಂದು ಭಾವಿಸುತ್ತಾರೆ. ಹಾಗೆಯೇ ಶವವನ್ನು ಬೆತ್ತಲು ಮಾಡದೆ ಮೇಲು ಮುಖವಾಗಿ ಉತ್ತರ ದಿಕ್ಕಿಗೆ ತಲೆಮಾಡಿ ಹೂಳುತ್ತಾರೆ.

ಲಂಬಾಣಿಗರು ವ್ಯಕ್ತಿ ತೀರಿಕೊಂಡ ಹನ್ನೆರಡನೆ ದಿನಕ್ಕೆ ಮಾಡುವ ಕಾರ್ಯಕ್ಕೆ 'ಭೇಳೇರೊ' ಎಂದು ಕರೆಯುತ್ತಾರೆ. ವ್ಯಕ್ತಿ ತೀರಿಹೋದ ಹನ್ನೆರಡು ಅಥವಾ ಹದಿಮೂರನೆ ದಿನಕ್ಕೆ ಮನೆಯನೆಲ್ಲ ಸಾರಿಸಿ, ಎಲ್ಲರೂ ಸ್ನಾನಮಾಡಿಕೊಂಡು ವಿಶೇಷ ಸಿಹಿ ಅಡುಗೆಯನ್ನು ಮಾಡುತ್ತಾರೆ. ಒಲೆಯ ಬೆಂಕಿಯ 'ಸೀಪರು' ಎಂಬ ಒಂದು ವಿಧದ ಅಡುಗೆಯನ್ನು ಮಾಡಿ, ತುಪ್ಪದೊಂದಿಗೆ ಕಳಸಿ ಧೂಪ ಹಾಕುತ್ತಾರೆ. ಮನೆಯವರೆಲ್ಲ ಸೇರಿ ಮೃತರನ್ನು ಕುರಿತು ನೀವು ಇಂದಿನಿಂದ ದೇವರಾದಿರಿ, ನಿಮ್ಮ ವಂಶದ ಕುಡಿಗಳನ್ನು ರಕ್ಷಣೆ ಮಾಡಿ ಅವರನ್ನು ಕಾಪಾಡುವ ಜವಾಬ್ದಾರಿ ನಿಮ್ಮದು, ಇನ್ನು ಮುಂದೆ ನೀವು ಕುಲಪೂಜೆಯನ್ನು ಸ್ವೀಕರಿಸಿ ದೈವ ಸ್ವರೂಪರಾಗಿ ಎಂದು ಪ್ರಾರ್ಥಿಸುತ್ತಾರೆ. ಮನೆಯ ಹೊರಗಡೆ ಸುತ್ತುತ್ತಿರುವ ಪ್ರೇತಾತ್ಮವೂ ಅಂದಿನಿಂದ ಆ ಮನೆಯನ್ನು ಪ್ರವೇಶಿಸಿ ದೈವೀ ಸ್ವರೂಪವನ್ನು ಪಡೆದುಕೊಳ್ಳುತ್ತಿದೆಂಬುದಾಗಿ ನಂಬುತ್ತಾರೆ.

ಯಾವುದೇ ಕುಟುಂಬವೊಂದರಲ್ಲಿ ಸಾವು ಸಂಭವಿಸಿದ ಸಂದರ್ಭದಲ್ಲಿ ಇಡೀ ತಾಂಡದ ಜನರು ಮೃತರ ಕುಟುಂಬದವರೊಂದಿಗೆ ಸ್ಪಂದಿಸುವ ರೀತಿ ಅಂತಃಕರಣ ಪೂರ್ವಕವೂ ಮಾನವೀಯವೂ ಆಗಿರುತ್ತದೆ. ಮೃತರ ಕುಟುಂಬದ ನೋವು ಇಡೀ ತಾಂಡದ ಅಥವಾ ಸಮಾಜದ ನೋವೆಂದು ಭಾವಿಸುತ್ತಾರೆ. ಹಬ್ಬ ಹತ್ತಿರವಿರುವಾಗ ಯಾರಾದರೂ ತೀರಿಕೊಂಡರೆ ಹಬ್ಬವನ್ನೇ ಮಾಡುವುದಿಲ್ಲ. ಹಬ್ಬದ ದಿನದಂದೇ ಮೃತರಾದರೆ ಹಬ್ಬವನ್ನು ಸರಳವಾಗಿ ಮಾಡುತ್ತಾರೆ.[೨೨] ಹೀಗೆ ಲಂಬಾಣಿಗಳಲ್ಲಿ ವೈಯಕ್ತಿಕ ನೋವನ್ನು ಸಾಮಾಜೀಕರಣ ಗೊಳಿಸಿ ಅದರ ತೀವ್ರತೆಯನ್ನು ಕಡಿಮೆ ಮಾಡುವ ಪ್ರವೃತ್ತಿ ಕಂಡುಬರುತ್ತದೆ.

**ಧಾರ್ಮಿಕ ಆಚರಣೆಗಳು :** ಲಂಬಾಣಿ ಜನರು ಸಾಮಾನ್ಯವಾಗಿ ಶಕ್ತಿ ದೇವತೆಗಳ ಆರಾಧಕರು, ಮರಿಯಮ್ಮ, ಕಾಳಿ-ಕಂಕಾಳಿ, ದಂಡಿಮಾರಿ, ಹುಲಿಗಮ್ಮ ಮುಂತಾದ ಶಕ್ತಿ ದೇವತೆಗಳನ್ನು, ಮೀಠುಭಕ್ಯಾ, ವೆಂಕುಭಗತ್ ಮುಂತಾದ ಮಹಾಪುರುಷರನ್ನು ದೈವತ್ವಕ್ಕೇರಿಸಿ ದೇವರೆಂದು ಪೂಜಿಸುತ್ತಾರೆ. ಅಲ್ಲದೆ ರಾಮ, ಕಷ್ಣ, ಶಿವ, ವಿಷ್ಣು ಮುಂತಾದ ಹಿಂದೂ ದೇವತೆಗಳನ್ನು ಪೂಜಿಸುತ್ತಾರೆ. ಲಂಬಾಣಿಗರು ವಾಸಿಸುವ ಪ್ರತಿಯೊಂದು ತಾಂಡಗಳಲ್ಲಿಯೂ ಸೇವಾಲಾಲ ಹಾಗೂ ಮರಿಯಾಮಳ ದೇವಸ್ಥಾನಗಳಿರುತ್ತವೆ. ಇವರು ಎಲ್ಲಿಯೇ ಹೋಗಲಿ, ಹೇಗೆ ಇರಲಿ ಈ ದೇವತೆಗಳನ್ನು ಪೂಜಿಸುತ್ತಾರೆ. ಅವರು ವಾಸಿಸುವ ಪ್ರದೇಶಗಲ್ಲಲಿ ಈ ಇಬ್ಬರು ದೇವತೆಗಳ ದೇವಸ್ಥಾನಗಳಿದ್ದು ಮುಂಭಾಗದಲ್ಲಿ ಕೆಂಪು ಹಾಗೂ ಬಿಳಿ ಬಣ್ಣದ ಎರಡು ನಿಶಾನೆಗಳಿರುತ್ತವೆ. ಕೆಂಪು ನಿಶಾನೆ ಮರಿಯಾಮಳದಾಗಿದ್ದು ಸಮೃದ್ಧಿಯ ಸಂಕೇತವಾದರೆ ಬಿಳಿ ನಿಶಾನೆ ಸೇವಾಭಾಯಾದಾಗಿದ್ದು ಶಾಂತಿಪಾಲನೆಯ ಪ್ರತೀಕವಾಗಿದೆ. ತಾಂಡಗಳಲ್ಲಿ ಈ ಎರಡು ದೇವಸ್ಥಾನಗಳಿದ್ದರೆ ಕಾಲರಾ, ಪ್ಲೇಗು ಬರುವುದಿಲ್ಲವೆಂಬ ನಂಬಿಕೆ ಲಂಬಾಣಿಗಳದ್ದು.[11] ಈ ದೇವರುಗಳ ಬಗೆಗೆ ಅನೇಕ ರೀತಿಯ ಕಥೆ, ದೈತಿಹ್ಯ, ಲಾವಣಿಗಳನ್ನು ಇಂದಿಗೂ ಅವರ ಸಾಹಿತ್ಯದಲ್ಲಿ ಕಾಣಬಹುದು.

ಲಂಬಾಣಿ ಬುಡಕಟ್ಟಿನ ಮತ್ತೊಂದು ಮುಖ್ಯವಾದ ಧಾರ್ಮಿಕ ಪದ್ಧತಿಯೆಂದರೆ ಪೂರ್ವಜರ ಆರಾಧನೆ. ಅವರು ತಮ್ಮ ಕುಟುಂಬದಲ್ಲಿ ಬಾಳಿ ಬದುಕಿ ತೀರಿಕೊಂಡ ಹಿರಿಯರನ್ನು, ಸಮಾಜ ಗಣ್ಯ ವ್ಯಕ್ತಿಗಳನ್ನು, ವೀರರನ್ನು, ತ್ಯಾಗಿಗಳನ್ನು ಪೂಜಿಸುತ್ತಾರೆ. ಇದಕ್ಕೆ ಅವರು 'ಘರ್ ಘರೇರ್ ' ಪೂಜಾ (ಮನೆ ಮನೆಯ ಪೂಜಾ) ಎಂದು ಕರೆಯುತ್ತಾರೆ. ಅಂದರೆ ಪ್ರತಿಯೊಂದು ಮನೆಗಳಲ್ಲಿಯೂ ಪ್ರತ್ಯೇಕವಾಗಿ ನಡೆಯುವ ಪೂಜೆ ಇದಾಗಿದೆ. ವರ್ಷಕ್ಕೊಮ್ಮೆ ದೀಪಾವಳಿ ಹಬ್ಬದಲ್ಲಿ ಸಾಮೂಹಿಕವಾಗಿ ನಡೆಯುವ ಈ ಪೂಜೆ ಚಾಮರಾಜನಗರದ ಲಂಬಾಣಿಗರಿಗಷ್ಟೇ ಅಲ್ಲ ಕರ್ನಾಟಕದ ಎಲ್ಲಾ ಲಂಬಾಣಿಗರಲ್ಲೂ ಕಂಡುಬರುತ್ತದೆ. ತಮ್ಮ ಪೂರ್ವಿಕರನ್ನು ವರ್ಷಕ್ಕೊಮ್ಮೆಯಾದರೂ ಆರಾಧಿಸದಿದ್ದರೆ ಸಂಸಾರದಲ್ಲಿ ಕಷ್ಟ-ನಷ್ಟಗಳು ತಲೆದೋರಿ ಸಂಕಷ್ಟಕ್ಕೀಡಾಗುತ್ತೇವೆಂಬ ಭಾವನೆ ಲಂಬಾಣಿಗರದ್ದು. ಆದ್ದರಿಂದ ಈ ಪೂಜೆಯನ್ನು ಬಹಳ ಭಯಭಕ್ತಿಯಿಂದ ನೆರವೇರಿಸುತ್ತಾರೆ. ಇದು ಉಳಿದ ಧರ್ಮದವರು ಆಚರಿಸುವ 'ಮಹಾಲಯ' ಹಬ್ಬಕ್ಕೆ ಸಾಮ್ಯವಾದುದು.

ಲಂಬಾಣಿಗರು ಈ ಮೇಲೆ ಹೇಳಿದ ದೇವತೆಗಳಲ್ಲದೆ 'ಸಾತಿ ಸತ್ತಿ'(ಏಳು ಸತಿಯರು) ಹಾಗೂ ಸಾತಿಭವಾನಿ ದೇವತೆಗಳನ್ನು ಬಹುಗೌರವದಿಂದ ಪೂಜಿಸುತ್ತಾರೆ. 'ಸಾತಿಭವಾನಿ' ಎಂದು ಕರೆಸಿಕೊಳ್ಳುವ ಏಳು ಜನ ದೇವಿಯರನ್ನು ಹೊಲದಲ್ಲಿ ಫಸಲು ಬಂದು ಹೆಚ್ಚು ಮಾಡುವ ಸಂದರ್ಭದಲ್ಲಿ ಏಳು ಕಲ್ಲುಗಳನಿಟ್ಟು ಈ ಏಳು ಭವಾನಿಯರನ್ನು ಪ್ರತಿಷ್ಠಾಪಿಸಿ ಪೂಜಿಸುತ್ತಾರೆ. 'ಸಾತಿಸತ್ತಿ' ಎಂದು ಕರೆಸಿಕೊಳ್ಳುವ ದೇವಿಯರು ಏಳು ಜನ ರಾಜರ ಸತಿಯರಾಗಿದ್ದು, ಏಳು ಜನ ಸತಿಯರು ತಮ್ಮ ತಮ್ಮ ಗಂಡಂದಿರ ಚಿತೆ ಏರಿ ಸಹಗಮನ ಮಾಡಿ ಮಹಾಸತಿಯವರಾದರು. ಈ ಏಳು ಜನ ಸತಿಯರಲ್ಲಿ ಯಾರಾದರೊಬ್ಬರನ್ನು

ತಮ್ಮ ತಮ್ಮ ಕುಲದೇವತೆಯನ್ನಾಗಿ ಪೂಜಿಸುತ್ತಾರೆ. ಇದು ವೀರಶೈವರ 'ಸಪ್ತಮಾತೃಕೆ' ದೇವತೆಗಳ ಕಲ್ಪನೆಗೆ ಸಮಾನವಾದುದು.

ಮೂಲತಃ ಅಲೆಮಾರಿಗಳಾದ ಲಂಬಾಣಿಗರು ಹಿಂದೂ ಸಂಪ್ರದಾಯಕ್ಕೆ ಅಂಟಿಕೊಂಡಿದ್ದರೂ ತಮ್ಮದೇ ಆದ ವೈಶಿಷ್ಟತೆಗಳಿಂದ ಹಬ್ಬ-ಜಾತ್ರೆಗಳನ್ನು ಆಚರಿಸುತ್ತಾರೆ. ಅವರ ಹಬ್ಬಗಳ ಆಚರಣೆಯಿಂದ ಅವರ ಧಾರ್ಮಿಕ ಮನೋಭಾವ ಹಾಗೂ ಸಾಂಸ್ಕೃತಿಕ ಪರಂಪರೆಗಳು ವ್ಯಕ್ತವಾಗುತ್ತವೆ. ಇವರು ಮಹಾಲಯ ಅಮವಾಸೆ, ನಾಗಪಂಚಮಿ, ಸಂಕ್ರಾಂತಿ, ಮಹಾಶಿವರಾತ್ರಿ ಮುಂತಾದವನೆಲ್ಲ ಸಾಮಾನ್ಯವಾಗಿ ಆಚರಿಸಿದರೂ ಅವರು ಪ್ರಮುಖವಾಗಿ ತೇಜ್, ದಸರಾ, ದೀಪಾವಳಿ, ಹೋಳಿ, ಯುಗಾದಿ ಹಾಗೂ ಥಡೇರ್ ಪೂಜಾಗಳಂಥ ಹಬ್ಬಗಳನ್ನು ಬಹಳ ವಿಶಿಷ್ಟವಾಗಿ ಆಚರಿಸುತ್ತಾರೆ. ಇದರೊಂದಿಗೆ ಆಯಾ ತಾಂಡಗಳಲ್ಲಿ ಪ್ರತಿಷ್ಠಾಪಿತ ವಾಗಿರುವ ದೇವಿಯರ ಜಾತ್ರೆಗಳನ್ನು ಸಹ ಆಚರಿಸುತ್ತಾರೆ. ತಮ್ಮ ಬದುಕಿನಲ್ಲಿ ಎದುರಾಗುವ ಕಷ್ಟಕಾರ್ಪಣ್ಯ ಗಳನ್ನು ನಿವಾರಿಸಿಕೊಂಡು ಮಳೆ ಬೆಳೆ ಜನ ಜಾನುವಾರು ಇರುವೆ ಆದಿಯಾಗಿ ಎಂಬತ್ತುಕೋಟಿ ಜೀವರಾಶಿ ಗಳನ್ನೆಲ್ಲ ಕಾಪಾಡಿಕೊಳ್ಳುವ ನಿಟ್ಟಿನಲ್ಲಿ ದೇವರಿಗೆ ಕೃತಜ್ಞತೆ ಸಲ್ಲಿಸಿ, ಪೀಡೆ ಪಿಶಾಚಿಗಳು, ಉಪದ್ರವದಿಂದ ಪಾರಾಗಲು ಅನೇಕ ಹಬ್ಬಗಳನ್ನು ಆಚರಿಸಿಕೊಂಡು ಬರುತ್ತಿರುವುದು ಈ ಸುತ್ತಿನ ಲಂಬಾಣಿಗರ ಜೀವನ ಶ್ರದ್ಧೆಗೆ, ನಂಬಿಕೆಗೆ ಸಾಕ್ಷಿಯಾಗಿದೆ.

### ತಾಲೂಕಿನ ಆಡಳಿತ ವ್ಯವಸ್ಥೆ

ಹಿಂದೆ ಚಾಮರಾಜನಗರ ತಾಲೂಕಿನ ಆಡಳಿತವು ಮೈಸೂರು ಅರಸರ ಆಳ್ವಿಕೆಗೆ ಒಳಪಟ್ಟಿತ್ತು. ಅದರಂತೆ ತಳವಾರ, ತೋಟಿ, ಹಳೆಪೈಕಿ, ಪಟೇಲ, ಶಾನುಭೋಗರು ಇರುತ್ತಿದ್ದರು. ಕಾಲಕ್ರಮೇಣ ಈ ಪದ್ಧತಿಯಲ್ಲಿ ಅನೇಕ ಬದಲಾವಣೆಗಳು ಉಂಟಾದವು. ಚಾಮರಾಜನಗರ ಜಿಲ್ಲೆಯಾಗುವುದಕ್ಕಿಂತ ಮುಂಚೆ ಮೈಸೂರು ಜಿಲ್ಲೆಯ ಹನ್ನೊಂದು ತಾಲೂಕುಗಳ ಪೈಕಿ ಒಂದಾಗಿತ್ತು. ಆಗ ಮೈಸೂರು ಜಿಲ್ಲೆಯಲ್ಲಿ ಮೂರು ಕಂದಾಯ ವಿಭಾಗಗಳಿದ್ದವು. ಅವುಗಳೆಂದರೆ ನಂಜನಗೂಡು, ಮೈಸೂರು, ಹುಣಸೂರು, ಚಾಮರಾಜನಗರ ನಂಜನಗೂಡು ವಿಭಾಗಕ್ಕೆ ಸೇರಿತ್ತು. ಆದರೆ ಆಗಸ್ಟ್ ೧೯೯೭ರಂದು ಚಾಮರಾಜನಗರ ಜಿಲ್ಲೆಯಾದ ನಂತರ ಜಿಲ್ಲೆಯ ಪ್ರತಿಯೊಂದು ತಾಲೂಕನ್ನು ಒಂದೊಂದು ಅಭಿವೃದ್ಧಿ ಕ್ಷೇತ್ರವೆಂದು ಪರಿಗಣಿಸಲಾಗಿದೆ. ಕ್ಷೇತ್ರಾಭಿವೃದ್ಧಿಗಾಗಿ ಒಬ್ಬ ಅಧಿಕಾರಿ ಇದ್ದಾರೆ. ತಾಲೂಕಿಗೆ ತಹಶೀಲ್ದಾರರಿದ್ದಾರೆ. ಇವರ ಅಧೀನದಲ್ಲಿ ಕಂದಾಯ ಇನ್ ಸ್ಪೆಕ್ಟರ್ ಮತ್ತು ಗ್ರಾಮಸೇವಕರಿದ್ದಾರೆ. ಹೋಬಳಿ ಮಟ್ಟದಲ್ಲಿ ಕಂದಾಯ ಇನ್ ಸ್ಪೆಕ್ಟರ್ ಇರುತ್ತಾರೆ. ಚಾಮರಾಜನಗರ ತಾಲೂಕಿನಲ್ಲಿ ಒಟ್ಟು ಐದು ಹೋಬಳಿಗಳಿವೆ. ಗ್ರಾಮ ಕಂದಾಯ ಲೆಕ್ಕಪತ್ರಗಳನ್ನು ನೋಡಿಕೊಳ್ಳಲು ಗ್ರಾಮ ಲೆಕ್ಕಿಗರಿದ್ದಾರೆ. ಸರ್ಕಾರಿ ಇತ್ತೀಚೆಗೆ ನಾಡ ಕಛೇರಿಗಳನ್ನು ಆರಂಭಿಸಿದೆ.

ಹಳ್ಳಿಗಳ ಸರ್ವಾಂಗೀಣ ಅಭಿವೃದ್ಧಿಯ ಜವಾಬ್ದಾರಿಯನ್ನು ವಹಿಸಿಕೊಂಡ ಗ್ರಾಮಮಟ್ಟದ ಮುಖಂಡರ ತಂಡ ಈ ತಾಲೂಕಿನ ಎಲ್ಲಾ ಗ್ರಾಮಗಳಲ್ಲೂ ಬಹು ಹಿಂದಿನಿಂದಲೂ ರೂಢಿಯಲ್ಲಿದೆ. ವ್ಯಕ್ತಿ ವ್ಯಕ್ತಿಗಳ ನಡುವೆ ತಲೆದೋರಿದ ಭಿನ್ನಾಭಿಪ್ರಾಯ ಕಲಹಗಳ ತೀರ್ಮಾನ ಮೊದಲ್ಗೊಂಡು ಗ್ರಾಮಗಳ ಸಾರ್ವಜನಿಕ ಕಾರ್ಯಗಳಾದ ಹಬ್ಬ, ಜಾತ್ರೆಗಳ ಆಚರಣೆ, ಕೆರೆ ಕಟ್ಟೆ ದೇವಾಲಯಗಳ ನಿರ್ಮಾಣ ಮತ್ತು ಜೀರ್ಣೋದ್ಧಾರ ನ್ಯಾಯ ಪಂಚಾಯ್ತಿ ಮೊದಲಾದ ಅನೇಕ ಕೆಲಸ ಕಾರ್ಯಗಳ ನಿರ್ವಹಣೆಗೆ ಆಯಾಯ ಗ್ರಾಮಗಳ ಗೌಡಿಕೆಯವರು, ಪಟೇಲರು ಮತ್ತು ಆಯಾಯ ಜನಾಂಗದ ಯಜಮಾನರುಗಳಿಗೆ ಸೇರಿರುತ್ತದೆ. ಮೇಲ್ನೋಟಕ್ಕೆ ಸರ್ಕಾರದ ವತಿಯಿಂದ ಸ್ಥಾಪಿತವಾಗಿರುವ 'ಗ್ರಾಮಪಂಚಾಯ್ತಿ'ಗಿಂತ ಈ ಗ್ರಾಮಗಳ ಯಜಮಾನರುಗಳ ತಂಡ ಭಿನ್ನವಾಗಿ ಕಂಡರೂ ಮೂಲತಃ ಇವೆರಡು ಸಂಸ್ಥೆಗಳು ಗ್ರಾಮದ ಅಭಿವೃದ್ಧಿಯನ್ನೆ ಬಯಸುತ್ತಿವೆ. ಪ್ರಸ್ತುತಾ ಈ ತಾಲೂಕಿನ ಗ್ರಾಮೀಣ ಮಟ್ಟದಲ್ಲಿ ಅಸ್ಥಿತ್ವದಲ್ಲಿರುವ ಸ್ಥಳೀಯ ಆಡಳಿತ ವ್ಯವಸ್ಥೆಯನ್ನು ಕೆಳಕಂಡಂತೆ ಗುರುತಿಸಬಹುದು. ಅವುಗಳೆಂದರೆ

೧. ಕುಟುಂಬದಲ್ಲಿ ಆಡಳಿತ ವ್ಯವಸ್ಥೆ

೨. ಜಾತಿ ಆಡಳಿತ ವ್ಯವಸ್ಥೆ

೩. ಗ್ರಾಮೀಣಮಟ್ಟದ ಆಡಳಿತ ವ್ಯವಸ್ಥೆ

೪. ಸರ್ಕಾರಿ ಸ್ಥಳೀಯ ಸಂಸ್ಥೆಗಳ ಆಡಳಿತ ವ್ಯವಸ್ಥೆ

**೧. ಕುಟುಂಬದ ಆಡಳಿತ ವ್ಯವಸ್ಥೆ :** ಚಾಮರಾಜನಗರದಲ್ಲಿ 'ಬುಡಕಟ್ಟು ಕುಟುಂಬಗಳನ್ನು' ಹೊರತುಪಡಿಸಿದರೆ ಮಾತೃಪ್ರಧಾನ ಕುಟುಂಬ ವ್ಯವಸ್ಥೆ ವಿರಳ. ಮನೆಯ ಹಿರಿಯ ಅಥವಾ ಗಂಡಸು ಇಲ್ಲದಿದ್ದ ಸಂದರ್ಭದಲ್ಲಿ ಅಥವಾ ಗಂಡು ದುರ್ಬಲನಾದ ಸಂದರ್ಭಗಳಲ್ಲಿ ಮಾತೃ ಪ್ರಧಾನ ಕುಟುಂಬ ವ್ಯವಸ್ಥೆಯನ್ನು ಕಾಣಬಹುದಾಗಿದೆ. ಪಿತೃಪ್ರಧಾನ ವ್ಯವಸ್ಥೆಯೇ ಹೆಚ್ಚಾಗಿ ಇಲ್ಲಿ ಕುಟುಂಬ ವ್ಯವಹಾರಗಳು ನಡೆಯುತ್ತಿವೆ. ಆಧುನಿಕತೆಯ ಪ್ರಭಾವದಿಂದ ಮನೆಯ ಯಜಮಾನ ತನ್ನ ಕುಟುಂಬದ ಸದಸ್ಯರೆಲ್ಲರನ್ನು ಮಿತ್ರರಂತೆ ಕಾಣುವ, ಬೆರೆಯುವ ರೂಢಿ ಹೆಚ್ಚಾಗಿರುವುದರಿಂದ ಗಂಡು-ಹೆಣ್ಣುಗಳು, ತಂದೆ-ತಾಯಿ ಒಂದೆಡೆ ಕುಳಿತು ಚರ್ಚಿಸಿ ತೀರ್ಮಾನಗಳನ್ನು ತೆಗೆದುಕೊಳ್ಳುವ ಸಮಾನ ಮನಸ್ಕತೆಯಿಂದ ದುಷ್ಪರಿಣಾಮಗಳು ಕಡಿಮೆಯಾಗು ತ್ತವೆ. ತಂದೆಯೇ ಪಿತೃ ಪ್ರಧಾನ ಕುಟುಂಬದ ಸರ್ವಾಧಿಕಾರಿಯಾಗಿರುತ್ತಾನೆ. ಆತನ ಅಧಿಕಾರಕ್ಕೆ ಯಾವ ಅಡಚಣೆಯೂ ಇರುವುದಿಲ್ಲ. ಹಾಗಾಗಿ ಈ ತಾಲೂಕಿನ ಕುಟುಂಬ ಆಡಳಿತ ವ್ಯವಸ್ಥೆಯನ್ನು ಪಿತೃಪ್ರಧಾನ ವಾದುದೆಂದು ಹೇಳಬಹುದು.

**೨. ಜಾತಿ ಆಡಳಿತ ವ್ಯವಸ್ಥೆ :** ಚಾಮರಾಜನಗರ ತಾಲೂಕಿನಲ್ಲಿ ಜಾತಿ ವ್ಯವಸ್ಥೆಯೂ ತನ್ನದೇ ಆದ ಆಡಳಿತ ವ್ಯವಸ್ಥೆಯನ್ನು, ನ್ಯಾಯ ಪದ್ಧತಿಗಳನ್ನು ಒಳಗೊಂಡಿದೆ. ಈ ತಾಲೂಕಿನ ಗ್ರಾಮಗಳ ಗ್ರಾಮಪಂಚಾಯಿತಿ ವ್ಯಾಪ್ತಿಯಲ್ಲಿ ಗುರುತಿಸಿಕೊಂಡರೂ ವೈಯಕ್ತಿಕ ನೆಲೆಯಲ್ಲಿ ತನ್ನದೇ ಆದ ಜಾತಿ ಪಂಚಾಯತಿಗಳು

ಕಟ್ಟುನಿಟ್ಟಾಗಿ ಕಾರ್ಯನಿರ್ವಹಿಸುತ್ತವೆ. ಈ ತಾಲೂಕಿನ ಲಿಂಗಾಯ್ತರು, ಉಪ್ಪಾರರು, ನಾಯಕರು, ಹರಿಜನರು, ಗಾಣಿಗರು, ಒಕ್ಕಲಿಗರು ಮತ್ತು ಬುಡಕಟ್ಟು ಸಮುದಾಯಗಳಲ್ಲಿರುವ ಜಾತಿ ಆಡಳಿತವ್ಯವಸ್ಥೆ ಇಂದಿಗೂ ಬಲಿಷ್ಠವಾಗಿದ್ದು ನ್ಯಾಯ ತೀರ್ಮಾನಗಳು ಶಿಥಿಲವಾಗದಂತೆ ಕಾಯ್ದುಕೊಂಡು ಬಂದಿರುವುದನ್ನು ಕಾಣಬಹುದು. ಉಪ್ಪಾರ, ನಾಯಕ ಮತ್ತು ಹರಿಜನ ಮೊದಲಾದ ಕೆಲವು ಸಮುದಾಯದವರು ಇಂತಹ "ಜಾತಿ ಪಂಚಾಯಿತಿ ವ್ಯವಸ್ಥೆ"ಯನ್ನು 'ಕೂಟ' ಎಂದು ಹೆಸರಿಸುತ್ತಾರೆ. ಈ ಕೂಟಗಳು ಸಾಮಾಜಿಕ ಕಳಕಳಿಯನ್ನು ಹೊಂದಿದ್ದು ಊರಿನಲ್ಲಿ ಮದುವೆಯಂತಹ ಶುಭ ಸಂದರ್ಭವಾಗಲೀ ಅಥವಾ ಸಾವಿನಂತಹ ದುಃಖದ ವಿಚಾರವಾಗಲೀ ತಲೆದೋರಿದಾಗ ಹೆಗಲಿಗೆ ಹೆಗಲು ಕೊಟ್ಟು ಸಹಕರಿಸುತ್ತಾ ಬಂದಿದೆ. ಇಂಥಹ ಕೂಟದ ಆಡಳಿತವನ್ನು ಆಯಾ ಜನಾಂಗದ ಮುಖ್ಯಸ್ಥರು ಪಡೆದಿರುತ್ತಾರೆ. ಈ ಕೂಟದ ಅಧಿಪತ್ಯವನ್ನು ಆ ಜನಾಂಗದ ಹಿರಿಯನೂ ಲೋಕಾರೂಢಿಗಳನ್ನು ಬಲ್ಲ ಅನುಭವಿಯೂ, ಸಂಘಟನಾಚತುರನೂ, ಗುಣ ವಂತನೂ ಆದ ವ್ಯಕ್ತಿಗೆ ವಹಿಸುತ್ತಾರೆ. ಕೆಲವೊಮ್ಮೆ ಈ ಹುದ್ದೆ ಅವರಿಗೆ ವಂಶಪಾರಂಪರ್ಯವಾಗಿಯೂ ಬರುತ್ತದೆ. ಇವರಿಗೆ ಸಹಾಯಕರಾಗಿ ಚಿಕ್ಕ ಯಜಮಾನ ಮತ್ತು ಗಡಿಯಜಮಾನರು ಇರುತ್ತಾರೆ. ತಮ್ಮ ಜಾತಿಯಲ್ಲಿ ಯಾವುದೇ ಸಮಸ್ಯೆಗಳು ಎದುರಾದರೂ ಇಂತಹ ಕೂಟದ ಯಜಮಾನರಲ್ಲಿ ದೂರು ದಾಖಲಾಗತ್ತದೆ. ಆ ಸಂದರ್ಭದಲ್ಲಿ ಯಜಮಾನ ಕುಲಬಾಂಧವರನ್ನು ಒಂದೆಡೆ ಸೇರಿಸಿ ಸಮಸ್ಯೆಗಳನ್ನು ಬಗೆಹರಿಸುವ, ಐಕ್ಯತೆಯನ್ನು ಮೂಡಿಸುವ ಜವಾಬ್ದಾರಿಯನ್ನು ಹೊಂದಿರುತ್ತಾರೆ. ಯಜಮಾನನಾದವನಿಗೆ ಆಯಾಯ ಜಾತಿಯವರು ನಡೆಸುವ ಶುಭಕಾರ್ಯಗಳಲ್ಲಿ ಮದುವೆ ಸಂದರ್ಭಗಳಲ್ಲಿ ಮೊದಲ ಯಜಮಾನಿಕ ವೀಳ್ಯ ಸಲ್ಲುತ್ತದೆ. ಇದು ಅವರಿಗೆ ಗೌರವವನ್ನು ಪ್ರತಿಷ್ಠೆಯನ್ನು ತಂದುಕೊಡುತ್ತದೆ.

ಕೆಲವು ಜಾತಿ ಸಮುದಾಯಗಳಲ್ಲಿ ಗಡಿಮನೆ ಮತ್ತ ಕಟ್ಟೆಮನೆಗಳ ನ್ಯಾಯವ್ಯವಸ್ಥೆಯಿದ್ದು ಹಲವು ಊಟಗಳನ್ನು ಒಳಗೊಂಡಿದೆ. ಈ ರೀತಿಯ ಕೂಟಗಳನ್ನು ಒಳಗೊಂಡ ಹಲವು ಗ್ರಾಮಗಳು ಕಟ್ಟೆ ಮನೆಯಾಗಿಯೂ, ಇಂತಹ ಹಲವು ಕಟ್ಟೆಮನೆಗಳು ಗಡಿಮನೆಗಳಾಗಿಯೂ ಕಾರ್ಯನಿರ್ವಹಿಸುತ್ತವೆ. ತಾಲೂಕಿನ ಹೊಂಗನೂರು, ನಾಗುವಳ್ಳಿ, ಮಂಗಲ, ಹರದನಹಳ್ಳಿ, ಅಮಚವಾಡಿ, ತಮಿಳುನಾಡಿಗೆ ಸೇರಿದ ದೊಡ್ಡ ಗಾಜನೂರು, ತಿಗಣಾರೆ, ತಾಳವಾಡಿ ಹರಿಜನರ ಪ್ರಮುಖ ಕಟ್ಟೆಮನೆಗಳಾಗಿವೆ. ಗಡಿಮನೆಗೆ ಸೇರಿದ ವ್ಯವಹಾರಗಳನ್ನು ನೋಡಿಕೊಳ್ಳುವ ಹೊಣೆಗಾರಿಕೆ ಗಡಿ ಯಜಮಾನರಿಗೆ ಪತ್ರದ ಮೂಲಕ ತಿಳಿಸಿ ಅವರು ಸೂಚಿಸಿದ ದಿನಾಂಕದಂದು ಗಡಿಯಜಮಾನರು ಹಾಗೂ ಮುಖಂಡರೊಂದಿಗೆ ಸೇರಿ ಪಂಚಾಯಿತಿಯ ಮೂಲಕ ಪರಿಹಾರ ಕಂಡುಕೊಳ್ಳುತ್ತಾರೆ. ಈ ಗಡಿಮನೆ, ಕಟ್ಟೆಮನೆ ಹಾಗೂ ಕೂಟದ ಆದೇಶಗಳನ್ನು ಯಾರು ಧಿಕ್ಕರಿಸುವಂತಿಲ್ಲ. ಒಂದು ವೇಳೆ ಧಿಕ್ಕರಿಸಿದರೆ ಬಹಿಷ್ಕಾರ ಅಥವಾ ದಂಡವನ್ನು ಕಟ್ಟ ಬೇಕಾಗುತ್ತದೆ. ಕೆಲವೊಮ್ಮೆ ಮಾನವೀಯತೆಯ ದೃಷ್ಟಿಯಿಂದ ಉಗ್ರ ಕಟ್ಟುಪಾಡುಗಳಿಂದ ವಿನಾಯಿತಿ ನೀಡಿ ತಪ್ಪಿತಸ್ಥರಲ್ಲಿ ಆತ್ಮಾವಲೋಕನ ಮಾಡಿಕೊಳ್ಳಲು ಅವಕಾಶ ಮಾಡಿಕೊಳ್ಳುವ ಸಂದರ್ಭಗಳುಂಟು.

೩. ಸರ್ಕಾರಿ ಸ್ಥಳೀಯ ಸಂಸ್ಥೆಗಳಲ್ಲಿ ಆಡಳಿತ ವ್ಯವಸ್ಥೆ : ಸ್ಥಳೀಯ ಸಂಸ್ಥೆಗಳನ್ನು ಆಡಳಿತ ವ್ಯವಸ್ಥೆಯಲ್ಲಿ ಪರಿಣಾಮಕಾರಿಯಾಗಿ ಭಾಗವಹಿಸುವಂತೆ ಮಾಡಲು ೧೯೮೩ರ ಕರ್ನಾಟಕ ಜಿಲ್ಲಾಪರಿಷತ್ ಈ ತಾಲೂಕ್ ಪಂಚಾಯಿತಿ ಹಾಗೂ ಮಂಡಲ ಪಂಚಾಯಿತಿ ಕಾಯಿದೆಗಳನ್ನು ಪುನರ್ ರಚಿಸಲಾಯಿತು. ಜನತೆಯ ಸಹಭಾಗಿತ್ವದೊಡನೆ ಕೆಳಹಂತದಲ್ಲಿ ಸಾಮಾಜಿಕ ಹಾಗೂ ಆರ್ಥಿಕ ಪರಿವರ್ತನೆಯನ್ನು ತರುವ ಮೂಲ ಸಂಸ್ಥೆಗಳಾಗಿ ಗ್ರಾಮಸ್ವರಾಜ್ಯದ ಗುರಿಸಾಧಿಸಲು ಈ ಮಸೂದೆ ನೆರವಾಗುತ್ತದೆಂದು ಅಂದಿನ ಸರ್ಕಾರ ಭಾವಿಸಿದ್ದಿತು. ಅದರ ಪರಿಣಾಮವಾಗಿ ಮಂಡಲ ಪಂಚಾಯಿತಿ, ತಾಲೂಕ್ ಪಂಚಾಯಿತಿ ಹಾಗೂ ಜಿಲ್ಲೆ ಪಂಚಾಯಿತ್‌ಗಳು ರೂಪುಗೊಂಡವು. ಚಾಮರಾಜನಗರ ತಾಲೂಕಿನ ಸ್ಥಳೀಯ ಆಡಳಿತದಲ್ಲಿ ಗ್ರಾಮಗಳ ಅಭಿವೃದ್ಧಿ ದೃಷ್ಟಿಯಿಂದ ಇಂದಿನ ಗ್ರಾಮಪಂಚಾಯಿತಿ ವ್ಯವಸ್ಥೆ ಪಾತ್ರ ಪ್ರಮುಖವಾಗಿರುತ್ತದೆ. ಇದು ಆಯಾಯ ಗ್ರಾಮದ ಮತದಾರರಿಂದ ಚುನಾಯಿತಗೊಂಡ ಪ್ರತಿನಿಧಿಗಳ ಆಡಳಿತ ವ್ಯವಸ್ಥೆಯಾಗಿರುತ್ತದೆ. ಗ್ರಾಮ ಪಂಚಾಯಿತಿ ಅಧ್ಯಕ್ಷ ಅಥವಾ ಉಪಾಧ್ಯಕ್ಷನ ಹಾಜರಿಯಲ್ಲಿ ಪ್ರತಿ ತಿಂಗಳಿಗೊಮ್ಮೆ ಗ್ರಾಮಸಭೆಯು ಊರಿನ ಚುನಾಯಿತ ಸದಸ್ಯರಿಂದ ನಡೆಯುತ್ತದೆ. ಈ ಸಭೆಯಲ್ಲಿ ವಿವಿಧ ಇಲಾಖೆಯ ಸರ್ಕಾರಿ ಅಧಿಕಾರಿಗಳು ಭಾಗವಹಿಸಿ ಊರಿನ ಕುಂದುಕೊರತೆಗಳ ಬಗ್ಗೆ ಎಲ್ಲರೂ ಚರ್ಚಿಸಿ ಪರಿಹಾರ ಕಂಡುಕೊಳ್ಳುತ್ತಾರೆ. ಈ ಗ್ರಾಮ ಪಂಚಾಯಿತಿಯ ಜನ ಪ್ರತಿನಿಧಿಗಳ ಅಧಿಕಾರವೂ ಅಭಿವೃದ್ಧಿ ಕೆಲಸಗಳನ್ನು ನಿರ್ವಹಿಸುವುದರೊಂದಿಗೆ ನೆಲಗಂದಾಯ, ಮನೆ ಗಂದಾಯ, ನೀರಿನ ಕಂದಾಯಗಳನ್ನು ಸಂಗ್ರಹಿಸುವ ಜವಾಬ್ದಾರಿಯನ್ನು ಹೊಂದಿದೆ, ಇದರೊಂದಿಗೆ ಊರಿನ ಕುಡಿಯುವ ನೀರಿನ ಸಮಸ್ಯೆ, ದೀಪದ ಸಮಸ್ಯೆ, ಒಳಚರಂಡಿ ವ್ಯವಸ್ಥೆ ಮೊದಲಾದ ಸಮಸ್ಯೆಗಳಿಗೆ ಪರಿಹಾರವನ್ನು ನೀಡುತ್ತಾ ಬಂದಿದೆ. ಚಾಮರಾಜನಗರದಾದ್ಯಂತ ೪೨ ಗ್ರಾಮಪಂಚಾಯಿತಿ ಗಳಿದ್ದು, ಈ ಪಂಚಾಯ್ತಿಗಳಲ್ಲಿ ಒಟ್ಟು ೭೧೧ ಸದಸ್ಯರಿದ್ದಾರೆ. ಅಲ್ಲದೆ ಸರ್ಕಾರಿ ವತಿಯಿಂದ ಕಾರ್ಯದರ್ಶಿ ಮತ್ತು ಒಬ್ಬ ಬಿಲ್ ಕಲೆಕ್ಟರ್ ಇರುತ್ತಾರೆ. ಗ್ರಾಮಾಂತರ ಪ್ರದೇಶಗಳ ಸಮಗ್ರ ಸಾಮಾಜಿಕ ಕಾರ್ಯಗಳನ್ನು ಕೈಗೊಳ್ಳುವ ಜವಾಬ್ದಾರಿ ಈ ಗ್ರಾಮ ಪಂಚಾಯಿತಿಗೆ ಸೇರಿರುತ್ತದೆ.

ತಾಲೂಕು ಮಟ್ಟದಲ್ಲಿ 'ತಾಲೂಕ್ ಪಂಚಾಯತ್' ಕಾರ್ಯನಿರ್ವಹಿಸುತ್ತದೆ. ಈ ತಾಲೂಕಿನಲ್ಲಿ ೨೮ ಮಂದಿ ತಾಲೂಕ್ ಪಂಚಾಯಿತಿ ಸದಸ್ಯರಿರುತ್ತಾರೆ. ಅದರಲ್ಲಿ ಅಧ್ಯಕ್ಷರು ಮತ್ತ ಉಪಾಧ್ಯಾಕ್ಷರುಗಳು ಇದ್ದು ತಾಲೂಕ್ ಪಂಚಾಯತ್ ಮುಖ್ಯ ಕಾರ್ಯನಿರ್ವಾಣಾಧಿಕಾರಿಗಳು ಆಡಳಿತ ವ್ಯವಸ್ಥೆಯನ್ನು ನಿರ್ವಹಿಸುತ್ತಾರೆ. ಈ ತಾಲೂಕಿನ ಎಲ್ಲಾ ಗ್ರಾಮ ಪಂಚಾಯತ್‌ಗಳು 'ತಾಲೂಕ್ ಪಂಚಾಯತ್'ನ ಅಧೀನದಲ್ಲಿರುತ್ತವೆ. ಎಲ್ಲಾ ಗ್ರಾಮಪಂಚಾಯತ್ ಅಭಿವೃದ್ಧಿ ಕಾರ್ಯಗಳ ಮೇಲುಸ್ತುವಾರಿಕೆ ಈ 'ತಾಲೂಕ್ ಪಂಚಾಯತ್' ಇಲಾಖೆಯದ್ದಾಗಿದೆ.

ಈ ತಾಲೂಕಿನಲ್ಲಿಯೇ 'ಜಿಲ್ಲಾ ಪಂಚಾಯತ್' ಇಲಾಖೆಯಿದ್ದು ೦೭ ಮಂದಿ ಜಿಲ್ಲಾ ಪಂಚಾಯಿತಿ ಸದಸ್ಯರಿದ್ದಾರೆ. ಇವರು ತಮ್ಮ ತಮ್ಮ ಕ್ಷೇತ್ರದ ವ್ಯಾಪ್ತಿಗೆ ಸಂಬಂಧಿಸಿದ ಅಭಿವೃದ್ಧಿ ಕಾರ್ಯಗಳ

ಜವಾಬ್ದಾರಿಯನ್ನು ಹೊಂದಿರುತ್ತಾರೆ. ಇಡೀ ಜಿಲ್ಲೆಯ ಜಿಲ್ಲಾ ತಾಲೂಕು ಪಂಚಾಯಿತಿಗಳ ಅಭಿವೃದ್ಧಿ ಕಾರ್ಯಗಳ ಮೇಲುಸ್ತುವಾರಿಕೆ ಈ ಜಿಲ್ಲಾ ಪಂಚಾಯ್ತಿಯ ಇಲಾಖೆಯದು.

ಸ್ಥಳೀಯ ಸಂಸ್ಥೆಗಳ ಅಧ್ಯಯನ ಸಂದರ್ಭದಲ್ಲಿ ಪುರಸಭೆಗಳನ್ನು ವಿಶೇಷವಾಗಿ ಅಧ್ಯಯನ ಮಾಡಬೇಕಾಗುತ್ತದೆ. ೧೭ನೇ ಶತಮಾನದಿಂದಲೂ ಪುರಸಭೆಗಳು ಅಸ್ತಿತ್ವದಲ್ಲಿದ್ದು The Mysore Municipality Act 1951 ಹಾಗೂ The Karnatak Muncipalty Act 1993ಗಳು ಈಗ ಅಸ್ತಿತ್ವದಲ್ಲಿವೆ. ಈ ಕಾನೂನುಗಳು ಪುರಸಭೆಯ ಆಡಳಿತಕ್ಕೆ ಹೆಚ್ಚಿನ ಮಹತ್ವ ಕೊಟ್ಟಿವೆ.

ಚಾಮರಾಜನಗರ ಜಿಲ್ಲೆಯಾಗಿ ೧೨ ವರ್ಷಗಳು ಕಳೆದಿದ್ದರೂ ಇನ್ನೂ ಮಹಾನಗರ ಪಾಲಿಕೆ ಅಸ್ತಿತ್ವಕ್ಕೆ ಬಂದಿಲ್ಲ. ಹಿಂದೆ ಇದ್ದ ಪುರಸಭೆಯನ್ನೆ ಮೇಲ್ದರ್ಜೆಗೇರಿಸಿ ಅಭಿವೃದ್ಧಿ ಕಾರ್ಯನಿರ್ವಹಿಸುತ್ತಿದ್ದಾರೆ. ಪ್ರಸ್ತುತಾ ಅಸ್ತಿತ್ವದಲ್ಲಿರುವ ಚಾಮರಾಜನಗರ ಪಟ್ಟಣದ ನಗರಸಭೆಯೂ ೧೭,೦೨,೧೯೯೬ರಲ್ಲಿ ಅಸ್ತಿತ್ವಕ್ಕೆ ಬಂದಿದ್ದು, ಪಟ್ಟಣದ ಜನರಿಂದ ಆಯ್ಕೆಯಾದ ಪುರಪಿತೃಗಳು ಆಡಳಿತ ನಡೆಸುತ್ತಿದ್ದಾರೆ. ಜೊತೆಗೆ ಸರ್ಕಾರದ ಮುಖ್ಯಾಧಿಕಾರಿಯನ್ನು ನೇಮಿಸಲಾಗಿದೆ. ನೀರಿನ ಸೌಕರ್ಯ, ಒಳಚರಂಡಿ ವ್ಯವಸ್ಥೆ, ರಸ್ತೆ ನಿರ್ಮಾಣ, ಉದ್ಯಾನವನಗಳ ನಿರ್ಮಾಣ, ನೈರ್ಮಲ್ಯೀಕರಣ ಮುಂತಾದ ಪಟ್ಟಣದ ಸಮಗ್ರ ಸೌಲಭ್ಯಗಳ ಹೊಣೆಗಾರಿಕೆ ಪುರಸಭೆಗೆ ಸೇರಿದ್ದು ಜೊತೆಗೆ ಮನೆಗಂದಾಯ, ನೀರಿನ ತೆರಿಗೆ ಇತ್ಯಾದಿ ತೆರಿಗೆಗಳನ್ನು ನಗರಸಭೆಯೂ ಆದಾಯ ರೂಪದಲ್ಲಿ ಸಂಗ್ರಹಿಸುತ್ತದೆ. ಇದರ ವ್ಯಾಪ್ತಿಯಲ್ಲಿ ೩೧ ವಾರ್ಡ್‌ಗಳು ೧೬ ಡಿವಿಜನ್‌ಗಳಿವೆ.

ಪಟ್ಟಣದಲ್ಲಿರುವ ವಿವಿಧ ಬಡಾವಣೆಗಳಿಗೆ ವೈವಿಧ್ಯಮಯವಾದ ಹೆಸರುಗಳನಿಟ್ಟಿದ್ದಾರೆ. ಸೋಮವಾರ ಪೇಟೆ ಬಡಾವಣೆ, ಕರಿನಂಜನಪುರ ಬಡಾವಣೆ, ಡಾ.ಬಿ.ಆರ್.ಅಂಬೇಡ್ಕರ್ ಬಡವಾಣೆ, ಬಾಬು ಜಗಜೀವನ ರಾವ್ ಬಡಾವಣೆ, ನಾಯಕರ ಬಡಾವಣೆ, ಭಗೀರಥ ಉಪ್ಪಾರರ ಬಡಾವಣೆ, ರೈಲ್ವೆ ಬಡಾವಣೆ, ಶಂಕರಪುರ ಬಡಾವಣೆ, ಪಿ.ಡಬ್ಲ್ಯೂ.ಡಿ. ಬಡಾವಣೆ, ಭುಜಂಗೇಶ್ವರ ಬಡಾವಣೆ ಇತ್ಯಾದಿ. ಇವುಗಳ ಜೊತೆಗೆ ಭುವನೇಶ್ವರಿ ವೃತ್ತ (ಪಚ್ಚಪ್ಪ ಸರ್ಕಲ್), ಸಂತೇಮರಳ್ಳಿ ವೃತ್ತ, ಸುಲ್ತಾನ್ ಷರಿಫ್ ವೃತ್ತ, ರಾಮಸಮುದ್ರ ವೃತ್ತ, ಗುಂಡ್ಲುಪೇಟೆ ವೃತ್ತ, ಮೊದಲಾದ ವೃತ್ತಗಳು ಕಂಡುಬರುತ್ತವೆ. ಅಲ್ಲದೆ ಪಟ್ಟಣದ ವಿವಿಧ ರಸ್ತೆಗಳಿಗೆ ರಾಚಯ್ಯ ಜೋಡಿ ರಸ್ತೆ, ಡೀವಿಯೇಷನ್ ರಸ್ತೆ, ಜಾಮೀನು ಮಸೀದಿ ರಸ್ತೆ, ನಗರಖಾನೆ ರಸ್ತೆ, ವಾಣಿಮಾರ ರಸ್ತೆ ಮತ್ತು ಆಯಾಯ ಜನಾಂಗದವರು ವಾಸಿಸುವ ಬೀದಿಗಳಿಗೆ ಆಯಾಯ ಜನಾಂಗೀಯ ಹೆಸರುಗಳು ರೂಢಿಯಲ್ಲಿವೆ. ಉದಾಹರಣೆಗೆ ದೊಡ್ಡ ಅಂಗಡಿ ಬೀದಿ, ಚಿಕ್ಕ ಅಂಗಡಿ ಬೀದಿ, ದೇವಾಂಗ ಬೀದಿ, ರಥದ ಬೀದಿ, ಕೊಳದ ಬೀದಿ. ಗಂಗಾಡಿಕಾರ ಬೀದಿ, ಬಳೆಗಾರ ಬೀದಿ, ಪರಿವಾರ ಬೀದಿ, ಅಗ್ರಹಾರ ಬೀದಿ, ಚಮಾಲ್ ಬೀದಿ, ಬಣಜಿಗರ ಬೀದಿ, ಹಳೆಬೀದಿ ಪ್ರಮುಖವಾದವು.

ಇನ್ನು ಕಾನೂನು ದೃಷ್ಟಿಯಿಂದ ಹೇಳುವುದಾದರೆ ಈ ತಾಲೂಕಿನಲ್ಲಿ ಒಂದು ಕಾರಗೃಹವಿದೆ. ಎರಡು ಡಿ.ವೈ.ಎಸ್.ಪಿ. ಕಛೇರಿಗಳಿವೆ. ಪೊಲೀಸ್ ವೃತ್ತ ನಿರೀಕ್ಷಕರ ಕಛೇರಿಯಿದೆ. ಐದು ಆರಕ್ಷಕರ ಕಛೇರಿ,

ಹದಿಮೂರು ಉಪನಿರೀಕ್ಷಕರ ಕಛೇರಿ, ಎರಡು ಪೋಲೀಸ್ ಔಟ್‌ಪೋಸ್ಟ್ ಠಾಣೆಗಳು, ಒಂದು ಅಗ್ನಿಶಾಮಕದಳ ಹಾಗೂ ಒಂದು ತಾಲೂಕು ಮಟ್ಟದ ನ್ಯಾಯಾಲಯವಿದೆ. ಹಾಗೆಯೇ ಈ ತಾಲೂಕು ಜಿಲ್ಲಾ ಕೇಂದ್ರವಾಗಿರುವುದರಿಂದ ಎಲ್ಲಾ ಸರ್ಕಾರಿ ಕಛೇರಿಗಳು ಇಲ್ಲಿವೆ. ಹಾಗಾಗಿ ಈ ತಾಲೂಕಿನ ಜನಸಾಮಾನ್ಯರ ಕೆಲಸ ಕಾರ್ಯಗಳು ಸುಗಮವಾಗಿ ಆಗುತ್ತಿವೆ.

## ಧಾರ್ಮಿಕ ವ್ಯವಸ್ಥೆ

ಅನಾದಿಕಾಲದಿಂದಲೂ ಜ್ಞಾನಿಗಳು, ತತ್ವಜ್ಞಾನಿಗಳು, 'ಧರ್ಮ' ಎಂಬ ಪದಕ್ಕೆ ಅರ್ಥವಿವರಣೆ ಕೊಡಲು ಪ್ರಯತ್ನಿಸುತ್ತಲೇ ಇದ್ದಾರೆ. ಆದರೆ ಈ ಪದಕ್ಕೆ ನಿಖರವಾದ, ಪರಿಪೂರ್ಣವಾದ, ಅರ್ಥವಿವರಣೆ ಕೊಡಲು ಸಾಧ್ಯವಾಗಿಲ್ಲ. ಒಂದು ಜನಾಂಗ ಸಾಂಪ್ರದಾಯಿಕವಾಗಿ ಅನುಸರಿಸಿಕೊಂಡು ಬಂದಿರುವ ಆಚಾರ, ಪದ್ಧತಿ ಮತ್ತು ನಿಯಮಗಳಿಗೆ ಧರ್ಮವೆಂದು ಹೆಸರು. ಯಾವುದು ಒಂದು ಜೀವಿಗೆ ಧಾರಣಶಕ್ತಿಯನ್ನು ಯೋಗ್ಯ ರೀತಿಯಲ್ಲಿ ಬಾಳುವ ಶಕ್ತಿಯನ್ನು ಕೊಡುವುದೋ ಅದೇ ಧರ್ಮ. ಧರ್ಮ ಎಂಬ ಪದ "ಧೃ" ಎಂಬ ಸಂಸ್ಕೃತದ ಪದದಿಂದ ನಿಷ್ಪತ್ತಿಯಾಗಿದೆ. "ಧೃ" ಎಂದರೆ ಎತ್ತಿ ಹಿಡಿದಿರುವುದು ಎಂದರ್ಥ. ಅದನ್ನೇ "ಧರ್ಮೋ ರಕ್ಷತಿ ರಕ್ಷಿತಃ" ಅಂದರೆ ಧರ್ಮ ನಮ್ಮನ್ನು ಕಾಪಾಡುತ್ತದೆ, ನಾವು ಧರ್ಮವನ್ನು ಕಾಪಾಡಬೇಕು ಎಂದು ನಮ್ಮ ಪೂರ್ವಜರು ಹೇಳಿದ್ದಾರೆ.

ಧರ್ಮ ಎಂಬ ಪದಕ್ಕೆ ಆಂಗ್ಲಭಾಷೆಯಲ್ಲಿ ಸಂವಾದಿಯಾದ ಶಬ್ದವೇ ಇಲ್ಲವೆಂದು ಸ್ವಾಮಿ ವಿವೇಕಾನಂದರ ಅಭಿಪ್ರಾಯ. ವಾಸ್ತವವಾಗಿ ಧರ್ಮ ಎಂಬ ಪದದಲ್ಲಿ ರಕ್ಷಣೆ ಮತ್ತು ಅಭ್ಯುದಯ ಎಂಬ ಎರಡು ಅರ್ಥಗಳಿವೆ. ಯಾವ ವ್ಯಕ್ತಿಯಾಗಲೀ, ಸಮಾಜವೇ ಆಗಲೀ ರಕ್ಷಣೆ ಮಾಡಿಕೊಂಡು, ಅಭ್ಯುದಯ ಸಾಧಿಸಬೇಕಾದರೆ ಧರ್ಮದ ರೀತ್ಯ ಕರ್ಮ ಮಾಡಬೇಕು. ಕರ್ಮನಿರತನಾಗಿರದ ವ್ಯಕ್ತಿ ಧರ್ಮದಿಂದ ಇರಲು ಸಾಧ್ಯವಿಲ್ಲ. ನಾವು ಮಾಡುವ ಕರ್ಮಗಳಿಗೆ ಫಲವಿದ್ದೇ ಇರುತ್ತದೆ. ಕರ್ಮ ಎಂದರೆ ಕೆಲಸ. ಸತ್ಕರ್ಮ ಮಾಡಿದರೆ ಒಳ್ಳೆಯ ಫಲ ದೊರೆಯುತ್ತದೆ. ದುಷ್ಕರ್ಮ ಮಾಡಿದರೆ ಕೆಟ್ಟಫಲ ದೊರಕುತ್ತದೆ. ಯಾವ ವ್ಯಕ್ತಿಯೂ ಕಾರ್ಯನಿರತನಾಗದೇ ಕೈಕಟ್ಟಿ ಕುಳಿತುಕೊಳ್ಳಲು ಸಾಧ್ಯವಿಲ್ಲ. ಹಾಗೆ ಮಾಡುವುದು ಸರಿಯಲ್ಲ. ಆದ್ದರಿಂದ ವ್ಯಕ್ತಿ ಸ್ವಾಭಾವಿಕ ಗುಣಗಳಿಗನುಗುಣವಾಗಿ ವಿವೇಚನೆಯಿಂದ ತನ್ನ ಕಾರ್ಯನಿರ್ವಹಿಸ ಬೇಕಾಗುತ್ತದೆ.

ಧರ್ಮದ ವ್ಯಾಪ್ತಿಗೆ ಒಳಪಡದ ವಿಷಯವೇ ಇಲ್ಲ. ತತ್ತ್ವ, ಆಚಾರ, ವಿಚಾರ, ವ್ಯವಹಾರ, ನಿಷೇಧ, ಶೌಚ, ಪ್ರಾಯಶ್ಚಿತ್ತ ಮುಂತಾದ ವಿಷಯಗಳನ್ನು ವ್ಯಕ್ತಿಯು ದೇವ, ಪಿತೃ, ಋಷಿ ಮತ್ತು ಭೂತಗಳಿಗೆ ಮಾಡಬೇಕಾದ ಕರ್ತವ್ಯಗಳನ್ನು, ವ್ಯಕ್ತಿಗಳ ಪರಸ್ಪರ ಸಂಬಂಧ, ವ್ಯಕ್ತಿಗಳಿಗೂ, ಪ್ರಾಣಿಗಳಿಗೂ ಮತ್ತು ದೇವರಿಗೂ ಇರುವ ಸಂಬಂಧ ಮುಂತಾದ ಹಲವಾರು ವಿಷಯಗಳನ್ನು ಧರ್ಮ ಒಳಗೊಂಡಿದೆ. ಧರ್ಮದ ಮೂಲವನ್ನು ಕುರಿತು ಸ್ಮೃತಿ, ವೇದ, ಉಪನಿಷತ್ತು, ಸೂತ್ರ ಹಾಗೂ ಧರ್ಮಶಾಸ್ತ್ರಗಳು ಚರ್ಚಿಸಿವೆ

ದೇವರ ಅಸ್ತಿತ್ವವನ್ನು ಪ್ರಮಾಣ ಪೂರ್ವಕವಾಗಿ, ತೋರಿಸಲಾಗದಿದ್ದರೂ, ವ್ಯಕ್ತಿಗಳಿಗೆ ದೇವರಲ್ಲಿರುವ ನಂಬಿಕೆ ಮಾತ್ರ ಅಚಲವಾದುದು. ಈ ನಂಬಿಕೆಯಿರುವುದರಿಂದಲೇ ವ್ಯಕ್ತಿಗಳು ನೀತಿಮಾರ್ಗದಲ್ಲಿ ನಡೆಯುವುದು ಅನಿವಾರ್ಯವಾಗಿದೆ. ನೀತಿಯಿಲ್ಲದೆ ಮಾನವ ಬದುಕಲಾರ. ನೀತಿಯಿಲ್ಲದೆ ಸಮಾಜವಿಲ್ಲ, ಸಮಾಜವಿಲ್ಲದೆ ವ್ಯಕ್ತಿ ಬದುಕಲಾರ, ಆತನ ವ್ಯಕ್ತಿತ್ವದ ವಿಕಾಸ ಸಮಾಜದಲ್ಲಿಯೇ, ಸಮಾಜದ ಮೂಲಕವೇ ಸಾಧ್ಯ. ವ್ಯಕ್ತಿ ಸಮಷ್ಟಿಗಳ ಹಿತಾರ್ಥಗಳ ಘರ್ಷಣೆ ಬರದಂತೆ ನೋಡಿಕೊಳ್ಳುವುದು ಧರ್ಮದ ಕರ್ತವ್ಯ. ಈ ಹಿನ್ನೆಲೆಯಲ್ಲಿ ಒಂದು ಪ್ರದೇಶದ ಸಾಂಸ್ಕೃತಿಕ ಅಧ್ಯಯನ ಮಾಡುವಾಗ ಧಾರ್ಮಿಕ ಅಧ್ಯಯನವೂ ಮಹತ್ವ ಪಡೆಯುತ್ತದೆ.

ಚಾಮರಾಜನಗರ ಹಲವು ಧರ್ಮಗಳ ನೆಲೆವೀಡು, ವಿವಿಧ ಸಂಸ್ಕೃತಿಗಳ ಸಂಗಮವಾಗಿ ಬೆಳೆದು ಬಂದಿರುವ ಹಿಂದೂ ಧರ್ಮದ ಆಸರೆಯಲ್ಲೇ ರೂಪುಗೊಂಡಿರುವ ಅದ್ವೈತ, ದ್ವೈತ, ವಿಶಿಷ್ಟಾದ್ವೈತ ಪಂಥಗಳ ವೈದಿಕಧರ್ಮ, ಶೈವ, ಕಾಳಮುಖ, ಪಾಶುಪತ ಮುಂತಾದ ಪಂಥಗಳನ್ನು ಖಂಡಿಸಿ ರೂಪುಗೊಂಡ ವೀರಶೈವ ಧರ್ಮ; ಅಹಿಂಸೆಯನ್ನೇ ಪರಮ ಧ್ಯೇಯವಾಗಿಟ್ಟುಕೊಂಡ ಜೈನಧರ್ಮ; ಹೊರದೇಶಗಳಿಂದ ಇಲ್ಲಿಗೆ ಪ್ರವೇಶಿಸಿ ಇಲ್ಲಿ ಮಾನ್ಯತೆ ಪಡೆದುಕೊಂಡಿರುವ ಇಸ್ಲಾಂ, ಕ್ರೈಸ್ತಧರ್ಮಗಳು ಮತ್ತು ಜನರ ಬದುಕಿನಲ್ಲಿ ಒಂದಾಗಿ ಅವರಿಂದಲೇ ಬೆಳೆದು ಬಂದ ಜನಪದ ಧರ್ಮ - ಇವುಗಳನ್ನು ಇಲ್ಲಿ ಪ್ರಧಾನವಾಗಿ ಕಾಣಬಹುದು. ಈ ಎಲ್ಲಾ ಧರ್ಮಗಳಿಗೂ ದೇವರ ಮೇಲಿನ ನಂಬಿಕೆಯೇ ಅಡಿಪಾಯ ಎಂಬುದು ಗಮನಾರ್ಹವಾದ ಅಂಶ. ದೇವರನ್ನು ಪರಿಭಾವಿಸುವ ಮತ್ತು ಅರ್ಚಿಸುವ ರೀತಿಯಲ್ಲಿ ಮಾತ್ರ ಇವು ಒಂದರಿಂದ ಒಂದು ಭಿನ್ನವಾಗುತ್ತವೆ.

ಚಾಮರಾಜನಗರದ ಕೆಲವು ಊರುಗಳಲ್ಲಿ ಒಂದೇ ಧರ್ಮವನ್ನು ಆಚರಿಸುವ ಜನ ನೆಲೆ ನಿಂತಿದ್ದಾರೆ. ಬಹುಪಾಲು ಊರುಗಳಲ್ಲಿ ವಿವಿಧ ಧರ್ಮದ ಜನ ಒಂದೆಡೆ ಕಲೆತಿರುತ್ತಾರೆ. ಆದರೂ ಅಂತಹ ಕಡೆ ಅವರ ವೈವಿಧ್ಯತೆಯಲ್ಲಿ, ಏಕತೆಯನ್ನು ಸೌಹಾರ್ದತೆಯನ್ನು ಮನಗಾಣಬಹುದು. ಅಲ್ಲದೆ ತಾಲೂಕಿನಲ್ಲಿ ವಿವಿಧ ಧರ್ಮಗಳು ಒಂದೆಡೆ ಕಲೆತು, ತಾಲೂಕನ್ನು ಸಹಬಾಳ್ವೆಯ ಕೇಂದ್ರವನ್ನಾಗಿ ಮಾಡಿದ್ದಾರೆ. ಇದಕ್ಕ ಪ್ರಮುಖವಾದ ಪ್ರಭಾವ ದಕ್ಷಿಣ ಕರ್ನಾಟಕ ಪ್ರದೇಶದ ಸಾಂಸ್ಕೃತಿಕ ಸಾಮ್ರಾಜ್ಯದ ಅಧಿಪತಿ, ಸಾಂಸ್ಕೃತಿಕ ವೀರನಾದ 'ಮಲೆ ಮಹದೇಶ್ವರ' ಎಂಬುದು ಗಮನಾರ್ಹವಾದ ಅಂಶ.

### ಬೌದ್ಧ ಧರ್ಮ

ಕರ್ನಾಟಕದಲ್ಲಿ ಬೌದ್ಧಧರ್ಮ ಕುರಿತು ಕ್ರಿ.ಪೂ. ೩ನೆ ಶತಮಾನದಿಂದ ಕ್ರಿ.ಶ. ೧೬ನೆ ಶತಮಾನದವರೆಗೆ ದಾಖಲೆಗಳು ಸಿಗುತ್ತವೆ. ಅವುಗಳಲ್ಲಿ ಬ್ರಹ್ಮಗಿರಿ, ಕೊಪ್ಪಳ, ಮಸ್ಕಿ, ಸಿದ್ದಾಪುರ, ಜಟ್ಟಂಗಿ, ರಾಮೇಶ್ವರ, ಬಳ್ಳಿಗಾವೆ, ಚಂದ್ರವಳ್ಳಿ, ಸನ್ನತಿ, ಡಂಬಳ ಮೊದಲಾದ ಸ್ಥಳಗಳಲ್ಲಿ ದೊರೆಯುವ ಶಾಸನಗಳು, ಪುರಾತತ್ವ

ಶೋಧಗಳು, ಸ್ಥಳನಾಮಗಳು, ವಿದೇಶಿ ಪ್ರವಾಸಿಗರ ವರದಿಗಳು, ಸಾಹಿತ್ಯಿಕ ಆಧಾರಗಳು, ಸ್ಮಾರಕಗಳು ಹಾಗು ಮೌಖಿಕ ಆಕರಗಳು ಮುಖ್ಯವಾದವು. ಸಿಂಹಳ ದ್ವೀಪದ ಇತಿಹಾಸ ಗ್ರಂಥಗಳಾದ ಮಹಾವಂಶ ಮತ್ತು ದೀಪವಂಶಗಳ ಪ್ರಕಾರ ಕ್ರಿ.ಪೂ.೩ನೆ ಶತಮಾನದಲ್ಲಿ ಮೌರ್ಯ ದೊರೆ ಅಶೋಕನು ತನ್ನ ಮಗನಾದ ಮಹೇಂದ್ರನನ್ನು ಬೌದ್ಧಮತ ಪ್ರಚಾರಕ್ಕೆ ಸಿಂಹಳಕ್ಕೆ ಕಳುಹಿಸಿದಾಗಲೇ, ಕರ್ನಾಟಕದ ಮಹಿಷಿಮಂಡಲಕ್ಕೆ ಭಿಕ್ಷು ಮಹದೇವನನ್ನು, ಬನವಾಸಿಗೆ ಭಿಕ್ಷು ರಕ್ಷಿತನನ್ನೂ, ಕಳುಹಿಸಿದನೆಂದು ತಿಳಿದುಬರುತ್ತದೆ.[೬೪] ಈ ಉಲ್ಲೇಖಿತ ಆಧಾರಗಳಿಂದ ಕ್ರಿ.ಪೂ.ಕಾಲಮಾನದಲ್ಲೇ ಬೌದ್ಧಧರ್ಮ ಕರ್ನಾಟಕದಲ್ಲಿ ಅಸ್ತಿತ್ವದಲ್ಲಿತ್ತೆಂದು ತಿಳಿಯುತ್ತದೆ. ಹಾಗೆಯೇ ಕ್ರಿ.ಶ.೧ ರಿಂದ ೩ನೆ ಶತಮಾನಗಳಲ್ಲಿ ಕರ್ನಾಟಕವನ್ನಾಳಿದ ಶಾತವಾಹನರು, ಪಲ್ಲವರು ಬೌದ್ಧಧರ್ಮ ಪಕ್ಷಪಾತಿಗಳಾಗಿದ್ದರು ಎಂಬುದನ್ನು ಗಮನಿಸಿದಾಗ ಬೌದ್ಧಧರ್ಮ, ಜೈನಧರ್ಮ ಕ್ಕಿಂತಲೂ ಮೊದಲೇ ಈ ನಾಡಿನಲ್ಲಿ ನೆಲೆಸಿತ್ತೆನ್ನಬಹುದು. ಆದರೆ ಅದು ಎಂದಿಗೂ ಜೈನಧರ್ಮದ ಉತ್ಕರ್ಷತೆಯನ್ನು ಮಾತ್ರ ಕಂಡುಕೊಳ್ಳಲಿಲ್ಲ. ದಕ್ಷಿಣ ಕರ್ನಾಟಕದ ಹಳೆಯ ಮೈಸೂರು ಭಾಗದಲ್ಲಂತೂ ಬೌದ್ಧಧರ್ಮ ಹೆಚ್ಚಾಗಿ ಹರಡಿದಂತೆ ಕಾಣುವುದಿಲ್ಲ. ಆದರೆ ಮಂಗಳೂರಿನ ಕದರಿಬೆಟ್ಟದ ಗುಹೆಗಳು, ಧರ್ಮಸ್ಥಳದ ಮಂಜುನಾಥ(ಈಗ ಹಿಂದೂ ದೇವರು) ಮೂಲತಃ ಬೌದ್ಧ ಕೇಂದ್ರಗಳಾಗಿದ್ದವು ಎಂಬುದಾಗಿ ಡಾ.ಎಂ.ಚಿದಾನಂದಮೂರ್ತಿಯವರು ಅಭಿಪ್ರಾಯಪಟ್ಟಿದ್ದಾರೆ.[೬೫]

ಪ್ರಾಕೃತದಲ್ಲಿ ರಚನೆಯಾದ ಅಶೋಕನ ಬೌದ್ಧಮತ ಬೋಧಕ ಶಿಲಾಶಾಸನಗಳು ಕರ್ನಾಟಕದಲ್ಲಿ ದೊರಕಿವೆ. ಈತನ ಬೌದ್ಧಧರ್ಮ ನಿಷ್ಠೆಯಿಂದಾಗಿ ಬೌದ್ಧಧರ್ಮ ದೇಶ ವಿದೇಶಗಳಲ್ಲಿ ಹರಡಲು ಸಾಧ್ಯವಾಯಿತು. ಬೌದ್ಧಧರ್ಮವು ತನ್ನ ತತ್ವೋಪದೇಶಗಳ ಆಶ್ರಯದಿಂದ ಇಡೀ ಭರತಖಂಡ ಪ್ರಸಿದ್ಧಿ ಪಡೆದಿದ್ದರೂ ಕರ್ನಾಟಕದಲ್ಲಿ ಅದು ಒಂದು ಪ್ರಬಲ ಧರ್ಮವಾಗಿ ಮೆರೆಯಲಿಲ್ಲ. ಮೌರ್ಯರ ಆಡಳಿತದ ನಂತರ ಕುಗ್ಗಿದ ರಾಜನಿಷ್ಠೆ. ತದನಂತರ ಕಾಲಘಟ್ಟಗಳಲ್ಲಿ ಜೈನ, ವೀರಶೈವ, ವೈಷ್ಣವ ಧರ್ಮಗಳ ಪ್ರಾಬಲ್ಯ, ಕೆಲವು ರಾಜರ ಆಕ್ರಮಣ ಇವುಗಳಿಂದಾಗಿ ಬೌದ್ಧಧರ್ಮ ಕ್ರಮೇಣವಾಗಿ ಕ್ಷೀಣಿಸಲಾರಂಭಿಸಿತು. ಅಷ್ಟೇ ಏಕೆ ೧೫ನೇ ಶತಮಾನದ ಹೊತ್ತಿಗೆ ಬೌದ್ಧಧರ್ಮ ಶಿಥಿಲವಾಗಿ, ಹದಿನಾರನೆಯ ಶತಮಾನದ ಹೊತ್ತಿಗೆ ನಾಮಾವಶೇಷವಾಯಿತು.[೬೬] ಹೀಗೆ ಬೌದ್ಧಧರ್ಮ ಮರೆಯಾದರೂ ಕರ್ನಾಟಕ ಸಾಂಸ್ಕೃತಿಕ ಚರಿತ್ರೆಯ ಅಧ್ಯಯನದಲ್ಲಿ ಬೌದ್ಧಧರ್ಮವನ್ನು ಮರೆಯುವಂತಿಲ್ಲ.

ಚಾಮರಾಜನಗರ ತಾಲೂಕಿನಲ್ಲಿ ಬೌದ್ಧಧರ್ಮ ಪ್ರಬಲವಾಗಿತ್ತು ಎಂಬುದಕ್ಕೆ ಸ್ಪಷ್ಟವಾದ ಆಧಾರ ಗಳಿಲ್ಲ. ಕೆಲವರು ಬಿಳಿಗಿರಿ ರಂಗಪ್ಪನ ಬೆಟ್ಟ, ಹಿಮವತ್ ಗೋಪಾಲಸ್ವಾಮಿ ಬೆಟ್ಟ ಮತ್ತು ತಾಲೂಕಿನ ಕೆಲವು ದೇವಾಲಯಗಳ ವಿನ್ಯಾಸವನ್ನು ಆಧರಿಸಿ ಇವು ಮೂಲತಃ ಬೌದ್ಧ ಕೇಂದ್ರಗಳು ಕಾಲಾನಂತರ ಜೈನ, ಶೈವ ಮತ್ತು ವೈಷ್ಣವ ಕೇಂದ್ರಗಳಾಗಿವೆ ಎಂದು ಊಹಿಸುತ್ತಾರೆ. ಅದಕ್ಕೆ ಸ್ಪಷ್ಟವಾದ ಆಧಾರಗಳಿಲ್ಲ. ಆದರೆ ಮಲೆಯೂರಿನ ದೇವಚಂದ್ರಕವಿ ಮಾತ್ರ ತನ್ನ 'ರಾಜಾವಳಿ ಕಥೆ'ಯಲ್ಲಿ ಬೌದ್ಧ ಮತ್ತು ಶೈವ, ಬೌದ್ಧ

ಮತ್ತು ಜೈನ ಧರ್ಮಗಳ ನಡುವೆ ನಡೆದ ಸಂಘರ್ಷವನ್ನು ಉಲ್ಲೇಖಿಸಿದ್ದಾನೆ.[೬೬] ಮೊದಲು ಶೈವರಿಗೂ, ಬೌದ್ಧರಿಗೂ ವಾದ ನಡೆದು ಶೈವರು ವಾದದಲ್ಲಿ ಸೋಲುವಂತಾದಾಗ, ಸುಧಾಪುರದ ಅಕಳಂಕನ ಸಹಾಯವನ್ನು ಪಡೆದು ವಾದದಲ್ಲಿ ಬೌದ್ಧರನ್ನು ಸೋಲಿಸಿದರೆಂದು, ನಂತರ ಜೈನ ಮತ್ತು ಬೌದ್ಧರ ವಾದದಲ್ಲಿ ಜೈನರು ಹದಿನೈದು ದಿವಸಗಳ ಶೂನ್ಯವಾದವನ್ನು ಹಿಡಿದು ವಾದಿಸಿ, ಆಮ್ರಕೂಷ್ಮಾಂಡಿನಿದೇವಿಯ ಸಹಾಯದಿಂದ ಬೌದ್ಧರನ್ನು ಗೆದ್ದರು ಎಂದು ವಿವರಿಸಿದ್ದಾನೆ.

ಒಟ್ಟಿನಲ್ಲಿ ಬೌದ್ಧ ಮತ್ತು ಜೈನರ ನಡುವೆ ತೀವ್ರವಾದ ಸಂಘರ್ಷಗಳಿದ್ದುದು ಸ್ಪಷ್ಟ. ಈ ಸಂಘರ್ಷವನ್ನು ಕವಿ ತನ್ನ ರಾಜಾವಳೀ ಕಥೆಯಲ್ಲಿ ಸವಿವರವಾಗಿ ಪ್ರತಿಪಾದಿಸಿರುವುದನ್ನು ನೋಡಿದರೆ ಇದು ಬೇರೆ ಕಡೆ ಹೊರಗಿನ ಪರಿಸರದಲ್ಲಿ ಪ್ರಚಲಿತವಿದ್ದ ಅನೇಕ ಪ್ರಸಂಗಗಳನ್ನು ಹೇಳುವಾಗ ಇದನ್ನು ಸಹ ಉಲ್ಲೇಖಿಸಿದ್ದಾನೆ. ಎಂದು ಊಹಿಸಬಹುದು. ಹಾಗೆಯೇ ಚಾಮರಾಜನಗರ ಪರಿಸರದಲ್ಲಿ ಬೌದ್ಧಧರ್ಮವು ಬೇರೆ ಧರ್ಮಗಳಷ್ಟು ಪ್ರಭಾವಯುತವಾಗಿಲ್ಲದಿದ್ದರೂ, ಸಾಧಾರಣವಾಗಿ ಅಸ್ತಿತ್ವದಲ್ಲಿದ್ದು, ಜೈನ ಮತ್ತು ಶೈವ ಧರ್ಮಗಳ ಸಂಘರ್ಷದಲ್ಲಿ ನಿಲ್ಲಲಾರದೆ ಹೊರಗಡೆ ಪಲಾಯನವಾಯಿತೆಂದು ಹೇಳಬಹುದು.

## ಜೈನಧರ್ಮ

ಕರ್ನಾಟಕದ ಚರಿತ್ರೆಯನ್ನು ಅಭ್ಯಾಸ ಮಾಡುವವರು, ಕನ್ನಡ ಸಾಹಿತ್ಯವನ್ನು ವ್ಯಾಸಂಗ ಮಾಡುವವರು ಜೈನಧರ್ಮದ ಪರಿಚಯವಿಲ್ಲದೆ ಮುಂದೆ ಹೋಗುವಂತಿಲ್ಲ. ಕನ್ನಡನಾಡಿನ ಮೇಲೆ ಜೈನಧರ್ಮದ ಪ್ರಭಾವ ಅಷ್ಟು ವ್ಯಾಪಕವಾಗಿದೆ. ಈ ಧರ್ಮವೂ ಕ್ರಿ.ಪೂ.೩ನೆಯ ಶತಮಾನದ ವೇಳೆಗಾಗಲೇ ಕರ್ನಾಟಕವನ್ನು ಪ್ರವೇಶಮಾಡಿತ್ತು. ಅತ್ತ ಪುನ್ನಾಡು, ಇತ್ತ ಕಳ್ಪಪ್ಪು ಇವೆರಡು ಕನ್ನಡನಾಡಿನಲ್ಲಿ ಜೈನಧರ್ಮದ ಪ್ರಾರಂಭದ ಕೇಂದ್ರಗಳಾಗಿದ್ದವು.

ಇದು ಭಾರತದಲ್ಲೇ ಉದಯಿಸಿದ ಪುರಾತನ ಧರ್ಮ. ಸನಾತನ ಹಿಂದೂ ಧರ್ಮಕ್ಕಿಂತ ಭಿನ್ನವಾದುದು. ಪ್ರಾರಂಭದಲ್ಲಿ ಜೈನಧರ್ಮವೂ ಬೌದ್ಧಧರ್ಮದ ಒಂದು ಪ್ರಭೇದವೆಂದೂ, ಅದಕ್ಕೆ ಸ್ವತಂತ್ರವಾದ ಅಭ್ಯಾಸ ಅಗತ್ಯವಿಲ್ಲವೆಂದೂ ಕೆಲವರು ಭಾವಿಸಿದ್ದರು. ಆನಂತರದ ಸಂಶೋಧನೆಗಳಿಂದ ಅದೇ ಒಂದು ಪ್ರತ್ಯೇಕ ಧರ್ಮವೆಂದೂ, ಬೌದ್ಧಧರ್ಮಕ್ಕಿಂತ ಸ್ವಲ್ಪ ಪ್ರಾಚೀನವೆಂಬುದು ಸ್ಥಿರವಾಯಿತು.[೬೮]

ಆರಂಭದಲ್ಲಿ ಮೌರ್ಯವಂಶ ಸ್ಥಾಪಕನಾದ ಚಂದ್ರಗುಪ್ತನು(ಕ್ರಿ.ಪೂ. ೩೨೩-೨೯೮) ಅಂತಿಮ ಶ್ರುತಕೇವಲಿ ಭದ್ರಬಾಹುವಿನೊಡನೆ ಬಂದು ಇಲ್ಲಿ ಜೈನಧರ್ಮವನ್ನು ನೆಲೆಗೊಳಿಸಿದನೆಂದು ಹಲವು ವಿದ್ವಾಂಸರು ಊಹಿಸಿದರು. ವಿ.ಎಂ.ಗೋವಿಂದ ಪೈಯವರು ಅದನ್ನು ಅಲ್ಲಗಳೆದು ಚಂದ್ರಗುಪ್ತನೆಂದರೆ

ಮೌರ್ಯವಂಶ ಸ್ಥಾಪಕನಲ್ಲವೆಂದೂ, ಅಶೋಕನ ಮೊಮ್ಮಗನಾದ ಸಂಪ್ರತಿ ಚಂದ್ರಗುಪ್ತ ಎಂದು ಆಧಾರ ಸಹಿತ ನಿರೂಪಿಸಿದ್ದಾರೆ.

ಒಟ್ಟಾರೆ ಲಭ್ಯವಿರುವ ಶಾಸನಗಳ ಆಧಾರದ ಮೇಲೆ ಜೈನಧರ್ಮವೂ ಗಂಗ, ಚಾಲುಕ್ಯ ರಾಷ್ಟ್ರಕೂಟರ ಬೆಂಬಲದಿಂದ ೯ನೆ ಶತಮಾನದ ವೇಳೆಗೆ ಪ್ರಬಲವಾಗಿತ್ತು. ಗಂಗರಾಜ್ಯ ಸ್ಥಾಪನೆ ಮಾಡಲು ಪ್ರೇರೇಪಿಸಿದವರು ಸಿಂಹನಂದಿ ಎಂಬ ಜೈನ ಮುನಿ. ಅಲ್ಲದೆ ಜೈನಧರ್ಮವೇ ಗಂಗರ ರಾಷ್ಟ್ರಧರ್ಮವಾಗಿದ್ದು, ಗಂಗರು ಜೈನಧರ್ಮವನ್ನು ಹೊರೆಯಲೆಂದೇ ಹುಟ್ಟಿ ಬಂದವರೆಂದು ಒಂದು ಶಾಸನ ಸಾರುತ್ತದೆ.[೭೯]

ಚಾಮರಾಜನಗರ ತಾಲೂಕು ಜೈನಧರ್ಮಕ್ಕೆ ವಿಶೇಷವಾದ ಆಶ್ರಯ ನೀಡಿದೆ. ಈ ತಾಲೂಕಿನ ಕುಲಗಾಣದಲ್ಲಿ ದೊರೆತಿರುವ ಗಂಗ ದೊರೆ ಶಿವಮಾರನ ಕ್ರಿ.ಶ.೮ನೆಯ ಶತಮಾನದ ತಾಮ್ರಶಾಸನವೂ ಈ ತಾಲೂಕಿನಲ್ಲಿ ಜೈನಧರ್ಮದ ಅತಿಪ್ರಾಚೀನ ದಾಖಲೆಯಾಗಿದೆ,[೮೦] ''ಜೈನ ಅಚಾರ್ಯ ಚಂದ್ರಸೇನಾ ಚಾರ್ಯರಿಗೆ ಕಿಲ್ಲಿಪುಸೂರು ಗ್ರಾಮದ ಅಂದರೆ ಇಂದಿನ ಕೆಲಸೂರು ಜಿನಾಲಯಕ್ಕಾಗಿ ಅರಸನ ಅಪ್ಪಣೆ ಪಡೆದು ಪಲ್ಲವ ವೇಲಾರಸ ಮತ್ತು ಗಂಗೈನಾಡ ಕಣ್ಣಮ್ಮನ್ ಅವರು ಭೂಮಿಯನ್ನು ದಾನಕೊಟ್ಟಿರುವುದಾಗಿ ಈ ತಾಮ್ರಶಸಾನ ತಿಳಿಸುತ್ತದೆ."

ಉತ್ಕಟ ಶಿವಭಕ್ತರಾಗಿದ್ದ ಚೋಳರ ಕಾಲದಲ್ಲಿ ಜೈನಧರ್ಮ ಕ್ಷೀಣಿಸಿತು. ಚೋಳರ ಪ್ರಬಲ ವಿರೋಧದಿಂದಾಗಿ ದಕ್ಷಿಣ ಭಾರತದಲ್ಲಿ ಜೈನಧರ್ಮವು ಹಾನಿಗೀಡಾದರೂ ಕನ್ನಡನಾಡಿನಲ್ಲಿ ಈ ಧರ್ಮದ ಪರಿಸ್ಥಿತಿ ಉತ್ತಮವಾಗಿತ್ತು. ಏಳನೇ ಶತಮಾನದಲ್ಲಿ ಕನ್ನಡನಾಡಿಗೆ ಜೈನರು ಅಪಾರ ಸಂಖ್ಯೆಯಲ್ಲಿ ವಲಸೆ ಬಂದುದು ಈ ಕಾರಣಕ್ಕಾಗಿ. ಶ್ರವಣಬೆಳಗೊಳ, ಮಲೆಯೂರು ಮಠಗಳು ಪ್ರಾಚೀನ ಕಾಲದಿಂದಲೂ ಪ್ರಮುಖ ಜೈನರಿಗೆ ಆಶ್ರಯ ನೀಡಿದ ಕೇಂದ್ರಗಳಾಗಿವೆ. ಗಂಗರ ಪತನದ ನಂತರ ಹೊಯ್ಸಳರ ಕಾಲದಲ್ಲೂ ಜೈನಧರ್ಮ ಉತ್ತಮವಾಗಿತ್ತು. ಅವರ ಕಾಲದಲ್ಲಿ ಹಲವು ಜೈನ ದೇವಾಲಯಗಳು ನಿರ್ಮಾಣಗೊಂಡವು.

ಈ ತಾಲೂಕಿನ ಅತೀ ಪ್ರಾಚೀನವಾದ ಬಸದಿ ಚಾಮರಾಜನಗರದ ಪಾರ್ಶ್ವನಾಥ ಬಸದಿ. ಇದನ್ನು ಹೊಯ್ಸಳ ವಿಷ್ಣುವರ್ಧನನ ದಂಡನಾಯಕ ಪುಣೀಸಮಯ್ಯನು ಕ್ರಿ.ಶ. ೧೧೧೭ರಲ್ಲಿ ನಿರ್ಮಿಸಿ ಭೂಮಿಯನ್ನು ದಾನಕೊಟ್ಟಿದ್ದಾನೆ.[೮೧] ಇವನನ್ನು ಶಾಸನದಲ್ಲಿ ''ಗಂಗವಾಡಿ ತೊಂಬತ್ತಾರು ಸಾಸಿರದ ಬಸದಿಗಳನಲಂಕರಿಸಿದಂ ಪುಣೀಸದಂಡಾದಿಪ'' ಎಂದು ಪ್ರಶಂಶಿಸಿದೆ. ಹಾಗೆಯೇ ಹೊಯ್ಸಳ ವೀರಬಲ್ಲಾಳನ ಕಾಲದ ಕುಲಗಾಣದ ಕ್ರಿ.ಶ. ೧೧೭೩ರ ಶಾಸನವು ೬೦ ಜನ ಪ್ರಭುಗಾವುಂಡರು ವಾದಿರಾಜ ಮುನಿಯ ಶಿಷ್ಯನಾದ ಸಿಂಗಣ್ಣ ದೇವರಿಗೆ ಕುಲಗಾಣದ ಬಸದಿಗಾಗಿ ದಾನ ನೀಡಿರುವುದನ್ನು ನಿರೂಪಿಸುತ್ತದೆ.[೮೨]

ಕ್ರಿ.ಶ. ೧೨೯ರ ಹೊಯ್ಸಳ ವೀರನರಸಿಂಹನ ಆಳ್ವಿಕೆಯ ಕಾಲದ ಶಾಸನದಲ್ಲಿ ಚಾಮರಾಜನಗರದ ಪಾರ್ಶ್ವನಾಥ ಬಸದಿಗಾಗಿ ಕೆಲವು ತೆರಿಗೆಗಳನ್ನು ದಾನವಾಗಿ ಮಾಡಿರುವುದಾಗಿ ತಿಳಿದು ಬರುತ್ತದೆ.

ಕನಕಗಿರಿಯ ಬೆಟ್ಟದ ಮೇಲಿನ ಶಿಲಾಮಯ ಬಸದಿಯನ್ನು ಕ್ರಿ.ಶ.ಸು. ೯ನೆಯ ಶತಮಾನದಲ್ಲಿ ಗಂಗರು ಕಟ್ಟಿಸಿದರು. ನಂತರ ಹೊಯ್ಸಳ ರಾಜನು ಈ ಕ್ಷೇತ್ರದರ್ಶನ ಪಡೆದು ಜಯಶಾಲಿಯಾದನು. ಆದ್ದರಿಂದ ಈ ಕ್ಷೇತ್ರದ ಶ್ರೀಸ್ವಾಮಿಯನ್ನು ವಿಜಯ ಪಾರ್ಶ್ವನಾಥನೆಂದು ಕರೆದರೆಂದು ಐತಿಹ್ಯಗಳಿವೆ.

ಹರವೆಯ ಆದಿಪರಮೇಶ್ವರ ಚೈತ್ಯಾಲಯವನ್ನು ಕ್ರಿ.ಶ.೧೪೮೨ರಲ್ಲಿ ಉಮ್ಮತ್ತೂರಿನ ದೊರೆ ವೀರಸೋಮೇಶ್ವರ ಒಡೆಯನ ಕರಣಿಕ ದೇವರಸನು ನಿರ್ಮಿಸಿದನು.[೭೩] ಈ ಆದಿನಾಥ ಬಸದಿಯು ದ್ವಿಕೂಟಚಲವುಳ್ಳದಾಗಿದೆ. ಇಲ್ಲಿ ಆದಿನಾಥನೊಂದಿಗೆ ನೇಮಿನಾಥನ ಮೂರ್ತಿಯೂ ಇದೆ. ಈ ದೇವಾಲಯದ ಅಂತರಾಳದಲ್ಲಿ ವಿಜಯನಗರ ಕಾಲದ ಪದ್ಮಾವತಿ ಮತ್ತು ಬ್ರಹ್ಮದೇವರ ವಿಗ್ರಹಗಳಿವೆ. ಇದು ವಿಜಯನಗರ ಕಾಲದ ರಚನೆ, ಹಾಗೆಯೇ ಆದಿನಾಥನ ಪ್ರಾಕಾರದಲ್ಲಿರುವ ಶಾಸನವು ಕರಣಿಕ ದೇವರಸನ ಹಿರಿಯ ಪತ್ನಿ ಸೋಮಾಯಿಯ ಸಮಾಧಿ ಮರಣವನ್ನು ನಿರೂಪಿಸುತ್ತದೆ.[೭೪] ಸಮಾಧಿ ಮರಣವನ್ನು ಪಡೆದ ಶ್ರಾವಕಿಯೊಬ್ಬಳಿಗೆ ಇದು ನಿದರ್ಶನ. ಮಲೆಯೂರಿನ ಊರೊಳಗಿನ ಆದಿನಾಥ ಬಸದಿಯೂ ವಿಜಯನಗರ ಕಾಲದಲ್ಲಿ ರಚನೆಯಾಗಿದೆ.

ಉಮ್ಮತ್ತೂರಿನ ಶ್ರೀ ಮಹಾವೀರ ತೀರ್ಥಂಕರ ಬಸದಿಯನ್ನು ಪೆನುಗೊಂಡೆಯ ಪಾಯಂಣನು ೧೪ನೆ ಶತಮಾನದಲ್ಲಿ ಕಟ್ಟಿಸಿದನು. ಅತ್ಯಂತ ಮನೋಹರವಾದ ೨ ಅಡಿ ಎತ್ತರದ ಜಿನಮೂರ್ತಿ ಇರುವ ಬಹುದೊಡ್ಡ ಬಸದಿ. ಇದು ದಕ್ಷಿಣ ಕರ್ನಾಟಕದ ಏಕೈಕ ಮಹಾವೀರನ ಬಸದಿ.

ಕುದೇರಿನ ಶ್ರೀ ಆದಿನಾಥಸ್ವಾಮಿ ಬಸದಿಯೂ ಅತ್ಯಂತ ಪ್ರಾಚೀನ ಬಸದಿಯಾಗಿದ್ದು ಸು.೮೦೦ ವರ್ಷಗಳ ಹಿಂದೆ ಮಧುರೈ ಸಂಸ್ಥಾನದ ದೀಪಗುಡಿ ಕ್ಷೇತ್ರದಿಂದ ಬಂದ ಶ್ರಾವಕ ಬಂಧುಗಳು ಇದನ್ನು ಕಟ್ಟಿಸಿದ್ದಾರೆಂದು ಕ್ಷೇತ್ರಕಾರ್ಯದಿಂದ ತಿಳಿದುಬಂದಿದೆ. ಅಲ್ಲದೆ ತಾಲೂಕಿನ ಕುಲಗಾಣ, ಮುಕ್ಕಡಹಳ್ಳಿ, ಮಂಗಲ, ಹರಳುಕೋಟೆ ಮೊದಲಾದ ಗ್ರಾಮಗಳಲ್ಲಿ ಗಂಗರ ಕಾಲದ ಬಸದಿಯ ಅವಶೇಷಗಳು ಕಂಡುಬರುತ್ತವೆ.

ಈ ತಾಲೂಕಿನ ಜೈನ ಮುನಿಗಳಲ್ಲಿ ಪ್ರಾಚೀನರಾದ ಜೈನಮುನಿವರ್ಯರು ಪೂಜ್ಯಪಾದರಾಗಿದ್ದಾರೆ. ಇವರ ಕಾಲವನ್ನು ಕ್ರಿ.ಶ.೫ನೆಯ ಶತಮಾನವೆಂದು ನಿರ್ಧರಿಸಬಹುದು. ಜೈನೇಂದ್ರವ್ಯಾಕರಣ, ಸಮಾಧಿಶತಕ, ಸರ್ವಾರ್ಥಸಿದ್ಧಿ ಮುಂತಾದ ಕೃತಿಗಳ ಕರ್ತೃವಾದ ಪೂಜ್ಯಪಾದರು ಮಲೆಯೂರಿನ ಕನಕಗಿರಿಯಲ್ಲಿ ಸಮಾಧಿ ಮರಣ ಹೊಂದಿರುವುದು ದೇವಚಂದ್ರನ ಪೂಜ್ಯಪಾದ ಚರಿತ್ರೆಯಿಂದ ತಿಳಿದುಬರುತ್ತದೆ.[೭೫]

ಕ್ರಿ.ಶ. ೧೨೦೦-೧೩೦೦ರ ಕಾಲಮಾನದಲ್ಲಿದ್ದ ಹಸ್ತಿಮಲ್ಲನ ವಂಶಸ್ಥನಾದ ಬ್ರಹ್ಮಸೂರಿ ಎಂಬ ಕವಿಯೊಬ್ಬನು "ತ್ರೈವರ್ಣಿಕಾಸುರ" ಎಂಬ ಕೃತಿಯನ್ನು ಬರೆದಿದ್ದಾನೆ. ಇದಲ್ಲದೆ ಕುಲಗಾಣದ ಚಾಮರಾಜ ನಗರ.೩೪೭ ಶಾಸನದಲ್ಲಿ ಉಲ್ಲೇಖಿತ ಚಂದ್ರಸೇನಾಚಾರ್ಯ, ಮಲೆಯೂರಿನ ಚಾ.ನ.೩೬೯ರಲ್ಲಿ ಉಲ್ಲೇಖಿತ

ಬಾಹುಬಲಿಪಂಡಿತದೇವ, ಚಾ.ನ.೩೬೨ರಲ್ಲಿ ಉಲ್ಲೇಖಿತ ಚಂದ್ರಕೀರ್ತಿಮುನಿ, ಚಾ.ನ.೩೫೭ರಲ್ಲಿ ಉಲ್ಲೇಖಿತ ಕನಕಗಿರಿ ಪೀಠದ ಭಟ್ಟಕಳಂಕ ಮುನಿ, ಮಂಗಲ ಶಾಸನದಲ್ಲಿ ಉಲ್ಲೇಖಿಸಿರುವ ಗುಣನಂದಿ ಕರ್ಮ ಪ್ರಕೃತಿ ಭಟ್ಟಾರಕರು, ಚಾ.ನ.೬೧ರಲ್ಲಿ ಉಲ್ಲೇಖಗೊಂಡಿರುವ ಅನಂತಕೀರ್ತಿ ಮುನಿಗಳು ಮುಂತಾದವರು ಈ ತಾಲೂಕಿನ ಶಾಸನೋಕ್ತ ಮುನಿಗಳಾಗಿರುತ್ತಾರೆ.

ಹನ್ನೊಂದನೆಯ ಶತಮಾನದ ವೇಳೆಗೆ ಗಂಗರಾಜ್ಯ ಮತ್ತು ರಾಷ್ಟ್ರಕೂಟ ಸಾಮ್ರಾಜ್ಯ ಗತಕಾಲಕ್ಕೆ ಸೇರಿತು. ಆಗ ತನ್ನ ಆಜನ್ಮ ವೈರಿಗಳಾದ ಚೋಳರಾಜರಿಂದ ಮತ್ತೆ ಜೈನಧರ್ಮ ಆಕ್ರಮಣಕ್ಕೆ ಒಳಗಾಯಿತು. ಹೀಗೆ ಗಂಗವಾಡಿಯಲ್ಲಿ ರಾಜಾಶ್ರಯವನ್ನು ಕಳೆದುಕೊಂಡು, ತಮಿಳುನಾಡಿನ ಚೋಳರಿಂದ ಹಿಂಸೆಗೆ ಗುರಿಯಾಗಿ, ವೀರಶೈವ ಪ್ರಾಬಲ್ಯದಿಂದ ಉತ್ತರ ಕರ್ನಾಟಕದಲ್ಲಿ ನೆಲೆ ತಪ್ಪಿದ ಜೈನಧರ್ಮ ಮತ್ತೆ ಎರಡು ಶತಮಾನಗಳ ಕಾಲ ಹಾಗೂ ಹೀಗೂ ಜೀವಂತವಾಗಿ ಮುಂದುವರೆಯುತ್ತದೆ.

ಮೈಸೂರು ಒಡೆಯರ ಕಾಲದಲ್ಲಿ ಜೈನಧರ್ಮ ಅಲ್ಪಸಂಖ್ಯಾತರ ಧರ್ಮವಾಗಿತ್ತು. ಆದರೆ ಚಾಮರಾಜ ಒಡೆಯರು ಬೊಮ್ಮರಸನಿಂದ ಸನತ್ಕುಮಾರ ಷಟ್ಪದಿ, ದೊಡ್ಡಯ್ಯನಿಂದ ಚಂದ್ರಪ್ರಭಚರಿತೆ ಎಂಬ ಜೈನಕೃತಿಗಳನ್ನು ಬರೆಯಿಸಿ ಲೋಕೋತ್ತರ ಧರ್ಮವೆಂದು ಸಭಾ ಮಧ್ಯದಲ್ಲಿ ಘೋಷಿಸಿದರೆಂದು 'ರಾಜಾವಳೀ ಕಥೆ'ಯಿಂದ ತಿಳಿದುಬರುತ್ತದೆ.[೭೬] ಒಟ್ಟಿನಲ್ಲಿ ಮೈಸೂರು ಒಡೆಯರ ಕಾಲದಲ್ಲೂ ಅನ್ಯ ಧರ್ಮಗಳ ಪ್ರಭಾವದಿಂದ ಜೈನಧರ್ಮ ಬಹುಮಟ್ಟಿಗೆ ಕುಂಟಿತವಾಯಿತು. ಜೈನರು ಶ್ರೀ ವೈಷ್ಣವರಾಗಿಯೂ, ವೀರಶೈವರಾಗಿಯೂ ಬಹುಸಂಖ್ಯೆಯಲ್ಲಿ ಮತಾಂತರ ಹೊಂದಿದರು ಎಂದೂ ದೇವಚಂದ್ರನು ರಾಜಾವಳೀ ಕಥೆಯಲ್ಲಿ ಉಲ್ಲೇಖಿಸಿದ್ದಾನೆ.[೭೭] ಹೀಗೆ ನಡೆದ ಜೈನ ಮತ್ತು ವೈಷ್ಣವ ಧರ್ಮಗಳ ಘರ್ಷಣೆಯಲ್ಲಿ ಅನೇಕ ಬಸದಿಗಳು, ಶೈವದೇವಾಲಯಗಳಾಗಿಯೂ, ಕೆಲವು ಕಡೆ ವೈಷ್ಣವ ದೇವಾಲಯಗಳಾಗಿಯೂ ಪರಿವರ್ತಿತ ವಾದವು. ಹಾಗೆ ಮತಾಂತರಗಳಾಗುವಾಗ ಕೆಲವು ಕಡೆ ರಕ್ತಪಾತವೂ ಆಗಿದ್ದರೆ ಆಶ್ಚರ್ಯವಿಲ್ಲ. ಎಂಬ ಡಾ.ಎಂ.ಚಿದಾನಂದಮೂರ್ತಿಯವರ ಮಾತು ಸತ್ಯಕ್ಕೆ ಹತ್ತಿರವಾಗಿದೆ.[೭೮]

ಕ್ರಿ.ಶ. ೧೨ನೆಯ ಶತಮಾನದವರೆಗೆ ಸರ್ವವ್ಯಾಪಕವಾಗಿ, ಪ್ರಬಲವಾಗಿದ್ದ ಜೈನಧರ್ಮ ೧೪ನೆಯ ಶತಮಾನದ ವೇಳೆಗೆ ಶ್ರೀವೈಷ್ಣವ ಮತ್ತು ವೀರಶೈವ ಧರ್ಮಗಳ ಆಕ್ರಮಣಕ್ಕೆ ಒಳಗಾಯಿತು. ಶೈವರು ಚೋಳ ದೇಶದಲ್ಲಿ ಜೈನರ ಮೇಲೆ ಕೊಲೆಗಡುಕರಾಗಿ ವರ್ತಿಸಿದರು. ಅದರ ಬೆನ್ನ ಹಿಂದೆಯೇ ಕರ್ನಾಟಕದಲ್ಲಿ ಹೊಯ್ಸಳರ ಆಳ್ವಿಕೆಯಲ್ಲಿ ಶ್ರೀ ವೈಷ್ಣವರು ಜಿನಮಂದಿರಗಳನ್ನು ಶ್ರೀರಾಮನ, ಶ್ರೀನಿವಾಸನ ಇಲ್ಲವೇ ಆಂಜನೇಯನ ಗುಡಿಗಳಾಗಿಸಿದರು. ಅಲ್ಲದೆ ಸಹಸ್ರಾರು ಜೈನರನ್ನು ತಮ್ಮ ಮತಕ್ಕೆ ಸೇರಿಸಿಕೊಂಡರು. ಕರ್ನಾಟಕದಲ್ಲಿ ಏಕಾಂತ ರಾಮಯ್ಯ, ಗೊಗ್ಗರಸ ಮೊದಲಾದ ಕೆಲವರು ಕೊಲೆಗಡುಕರೋಪಾದಿಯಲ್ಲಿ ಜೈನರ ಮೇಲೆ ಆಕ್ರಮಣ ನಡೆಸಿದರು. ಈ ಬಗ್ಗೆ ಪಾಲ್ಕುರಿಕೆ ಸೋಮನಾಥನ ಬಸವಪುರಾಣ, ಭೀಮಕವಿಯ

ಕನ್ನಡ ಬಸವಪುರಾಣ(ಪದ್ಯ ೫೧-೬೪), ಷಡಕ್ಷರ ಕವಿಯ ವೃಷಭೇಂದ್ರವಿಜಯ ಪದ್ಯ (೩೫ ರಿಂದ ೬೫) ವಿರೂಪಾಕ್ಷ ಪಂಡಿತನ ಚೆನ್ನಬಸವಪುರಾಣ (ಪದ್ಯ ೫೭) ಮೊದಲಾದ ಕಾವ್ಯಗಳಲ್ಲಿ ಉಲ್ಲೇಖವಿದೆ. ಅಲ್ಲದೆ ಕ್ರಿ.ಶ.ಸುಮಾರು ೧೬೦೦ ಸಿದ್ಧಲಿಂಗೇಶ ಕವಿಯ ಚಿತ್ತಾರಾಧ್ಯ ಚರಿತೆಯಲ್ಲಿ ಗುರುಚಿತ್ತಾರಾಧ್ಯನು ನಿಸ್ಸೀತಿ ಪಟ್ಟಣದಲ್ಲಿ ೨೦ ಬಸದಿಗಳನ್ನು ಹೊಡೆಸಿ ಜೈನಗುಡಿಗಳ ಕಳಶಗಳನ್ನು ಶಿವಾಲಯಗಳಿಗೆ ಹಾಕಿದ್ದನ್ನು ತನ್ಮಯತೆ ಅಭಿಮಾನಗಳಿಂದ ಪ್ರಶಂಸಿಸಲಾಗಿದೆ. ಶಾಂತನಿರಂಜನ ಕವಿಯ ಸುಮಾರು ೧೬೮೦ರಲ್ಲಿ ರಚಿತವಾದ ಅಬ್ಬಲೂರು ಚರಿತ್ರೆಯು ಏಕಾಂತರಾಮಯ್ಯನು ಶಿವಪ್ರೇರಣೆಯಿಂದ ಜಿನಮೂರ್ತಿಗಳನ್ನು ನಾಶಮಾಡಿದ್ದನ್ನು ವಿಸ್ತಾರವಾಗಿ ವೈಭವದಿಂದ ವರ್ಣಿಸುತ್ತದೆ. ಹೀಗೆ ಉತ್ತರ ಕರ್ನಾಟಕದಲ್ಲಿ ಕಾಣಿಸಿಕೊಂಡ ವೀರಶೈವಧರ್ಮ ದೇವಚಂದ್ರನ ಕಾಲಕ್ಕೆ ದಕ್ಷಿಣದಲ್ಲೂ ತನ್ನ ಗಾಢವಾದ ಪ್ರಭಾವವನ್ನು ಬೀರಿತು.

ಚಾಮರಾಜನಗರ ಹಾಗೂ ಮೈಸೂರು ಜಿಲ್ಲೆಯ ಶೇ.೮೦ ಭಾಗದ ಗ್ರಾಮನಾಮಗಳು ಜೈನ ಮೂಲವನ್ನು ಸಾಬಿತು ಪಡಿಸುತ್ತವೆ. ಉದಾ : ಕನಕಗಿರಿ, ಅರಿಕುಠಾರ, ಮುಡಿಗುಂಡ, ಬಸ್ತಿಪುರ, ಕೊಳ್ಳೇಗಾಲ, ಮಧುವನಹಳ್ಳಿ, ದೊಡ್ಡಿಂದುವಾಡಿ, ತೆರಕಣಾಂಬಿ, ಮುಕ್ಕಡಹಳ್ಳಿ, ಹರವೆ, ಕೆಲಸೂರು, ನವಿಲೂರು, ಇತ್ಯಾದಿ. ಇಂದಿನ ಕರ್ನಾಟಕದ ಬಹುಸಂಖ್ಯಾತ ಸವದತ್ತಿ ಎಲ್ಲಮ್ಮ ದೇವಾಲಯವು ಮೂಲತಃ ಪದ್ಮಾವತಿ ಯಕ್ಷಿಗುಡಿಯಾಗಿತ್ತು.[೭೯] ಶೃಂಗೇರಿ, ಮೇಲುಕೋಟೆ, ತಿರುಪತಿ, ನಂದಿಬೆಟ್ಟ, ಮೈಸೂರಿನ ಚಾಮುಂಡಿಬೆಟ್ಟ, ಮಲೆಮಹಾದೇಶ್ವರ ಬೆಟ್ಟ, ಬಿಳಿಗಿರ ರಂಗಪ್ಪನ ಬೆಟ್ಟ, ಮೂಗೂರು ತಿಬ್ಬಾದೇವಿ, ಇನ್ನೂ ಹಲವಾರು ದೇವಾಲಯಗಳು ಸಹ ಮೂಲತಃ ಜೈನಕೇಂದ್ರಗಳಾಗಿದ್ದವು. ಅಲ್ಲಿನ ಜಿನ ಪ್ರತಿಮೆಗಳನ್ನು ತೆಗೆಸಿ ಅವರವರ ಧರ್ಮ ಮೂರ್ತಿಗಳನಿಟ್ಟರು ಎಂದು ದೇವಚಂದ್ರ ರಾಜಾವಳೀ ಕಥಾಸಾರದಲ್ಲಿ ಆರೋಪಿಸುತ್ತಾನೆ.[೮೦] ಶೈವ ಮತ್ತು ಜೈನಧರ್ಮಗಳ ನಡುವೆ ನಡೆದ ಈ ಸಾಂಸ್ಕೃತಿಕ ಮತ್ತು ಧಾರ್ಮಿಕ ಸಂಘರ್ಷ ಚಾಮರಾಜನಗರ ತಾಲೂಕಿನಲ್ಲಿ ನಡೆದಿದೆ. ಇದಕ್ಕೆ ಪ್ರಬಲವಾದ ಎರಡು ಸಾಕ್ಷಿಗಳೆಂದರೆ ಒಂದು ಕ್ರಿ.ಶ. ೧೫೦೦ರ ಕೆಂಪನಪುರದ ಶಾಸನ.[೮೧]ಮತ್ತೊಂದು 'ರಾಜಾವಳೀ ಕಥೆ'ಯಲ್ಲಿ ಬರುವ ದೊಡ್ಡದೇವಯ್ಯನ ಪ್ರಸಂಗ.[೮೨]

ಕೆಂಚನಪುರದ ಶಾಸನದಲ್ಲಿ ಏಕಾಂತ ಬಸವೇಶ್ವರ ಎಂಬ ವೀರಶೈವನು ಮೂಲಸ್ಥಾನ ದೇವರಿಗೆ ದಾನ ಕೊಟ್ಟಿರುವ ಪ್ರಸ್ತಾಪವಿದೆ. ಜೊತೆಗೆ ದಾನಕೊಟ್ಟ ಏಕಾಂತದ ಬಸವೇಶ್ವರನನ್ನು "ಅನೇಕಾಂತಾದಿ ವಿರುದ್ಧವಾಗ್ವಿಘಟನ ಪ್ರೌಢಪ್ರತಾಪೋಜ್ವಲ" ಎಂದು ಸ್ತುತಿಸಿ ಆತ ಅನೇಕಾಂತವನ್ನು ಅಥವಾ ಜೈನಧರ್ಮವನ್ನು ಖಂಡಿಸುವನು ಎಂದು ತಿಳಿಸಿದೆ. ಅಲ್ಲದೆ ಪ್ರಸ್ತುತ ಶಾಸನ ಏಕಾಂತ ಬಸವೇಶ್ವರನನ್ನು, ಏಕಾಂತದ ರಾಮಯ್ಯನ ನಿಜ ಸ್ವರೂಪ ಎಂದು ಪ್ರಸಂಶಿಸಿದೆ.

ರಾಜಾವಳೀ ಕಥೆಯಲ್ಲಿ ಪ್ರಸ್ತಾಪಗೊಂಡಿರುವಂತೆ ಚಿಕ್ಕದೇವರಾಜ ಅರಸು ರಾಜಕಾರ್ಯಕ್ಕೆ ಹೊರಗೆ ಹೋಗಿದ್ದಾಗ ದೊಡ್ಡದೇವಯ್ಯನೆಂಬುವನು ಸರ್ವಾಧಿಕಾರಿಯಂತೆ ವರ್ತಿಸಿ, ಜೈನಧರ್ಮದ ಹೆಸರಿಲ್ಲದಂತೆ

ಮಾಡುವನೆಂದು ಮೂರು ನಾಲ್ಕು ದಿನಗಳಲ್ಲಿ ಅನೇಕ ಬಸದಿಗಳನ್ನು ನಾಶಪಡಿಸಿದನೆಂದು ತಿಳಿದುಬರುತ್ತದೆ. ಈ ಎರಡು ಆಧಾರಗಳಿಂದ ತಾಲ್ಲೂಕಿನಲ್ಲಿ ಏಕಾಂತ ಬಸವೇಶ್ವರ ಮತ್ತು ದೊಡ್ಡದೇವಯ್ಯನು ಏಕಾಂತ ರಾಮಯ್ಯನ ಹಾಗೆ ಈ ತಾಲೂಕಿನಲ್ಲಿ ಜೈನಧರ್ಮದ ನಾಶದ ಕಾರ್ಯದಲ್ಲಿ ತೊಡಗಿದರೆಂದು ಹೇಳಬಹುದು.

ತಮ್ಮ ಧರ್ಮದ ಮೇಲೆ ನಿರಂತರವಾಗಿ ನಡೆದ ಆಕ್ರಮಣಗಳನ್ನು ಸ್ವಲ್ಪಮಟ್ಟಿಗಾದರೂ ಪ್ರತಿಭಟಿಸಿದವರೆಂದರೆ ಈ ತಾಲೂಕಿನ ಕನಕಗಿರಿಯ ಶ್ರುತಕೀರ್ತಿ, ದೇವಚಂದ್ರ, ಧರಣಿಪಂಡಿತ ಮತ್ತು ಚಂದ್ರಸಾಗರವರ್ಣಿ ಮೊದಲಾದ ಕವಿಗಳು. ಶ್ರುತಕೀರ್ತಿಯೂ ಕ್ರಿ.ಶ. ೧೫೬೭ರಲ್ಲಿ ಬರೆದಿರುವ 'ವಿಜಯ ಕುಮಾರಿ ಚರಿತೆ' ಕಾವ್ಯವೂ ಜೈನರಾಗಿ ಉಳಿದಿರುವ ಕುಟುಂಬದೊಂದಿಗೆ ವೀರಶೈವರಾಗಿ ಮತಾಂತರ ವಾದವರು ವೈವಾಹಿಕ ಸಂಬಂಧಕ್ಕೆ ಪ್ರಯತ್ನಪಟ್ಟ, ಸಾಮಾಜಿಕ ಸವಾಲೊಂದನ್ನು ವಸ್ತುವನ್ನಾಗಿಸಿಕೊಂಡ ಕೃತಿ. ಧರಣಿಪಂಡಿತ ಮತ್ತು ಚಂದ್ರಸಾಗರವರ್ಣಿಯ ಕೃತಿಗಳು ಕಲಚೂರಿ ರಾಜ ಬಿಜ್ಜಳನನ್ನು ಜೈನನೆಂದು ಚಿತ್ರಿಸಿ, ಮೇಲೆತ್ತಿದ್ದರೆ, ವಿಭೂತಿ ಪುರುಷ ಬಸವಣ್ಣನನ್ನು ನಿರ್ಲಕ್ಷಿಸಿವೆ. ಮಲೆಯೂರಿನ ದೇವಚಂದ್ರನಂತೂ ತನ್ನ 'ರಾಜಾವಳೀ ಕಥೆಯಲ್ಲಿ' ಅಂದಿನ ಚಾಮರಾಜನಗರದ ಪರಿಸರದಲ್ಲಿ ವೀರಶೈವರಿಂದ ಜೈನರ ಮೇಲಾದ ದಬ್ಬಾಳಿಕೆಯನ್ನು ಕಣ್ಣಿಗೆ ಕಟ್ಟುವಂತೆ ವರ್ಣಿಸಿದ್ದಾನೆ.[೮೨]

ಹೀಗೆ ಹಿಂದೊಮ್ಮೆ ಗಂಗವಾಡಿಯಲ್ಲಿ 'ಏಕಮೇವಾದ್ವಿತೀಯ'ವಾಗಿ ರಾರಾಜಿಸಿದ ಜೈನಧರ್ಮ ಕೊನೆಗೆ ರಾಜಾಶ್ರಯವಿಲ್ಲದೆ, ಲೋಕಾಶ್ರಯವೂ ಇಲ್ಲದೆ, ಗತವೈಭವ ಸಮಸ್ತವನ್ನು ಕಳೆದುಕೊಂಡು, ಪೂರ್ವಕಾಲದ ಜೈನ ಸಂಘಗಳ ಕೇಂದ್ರಗಳಾಗಿದ್ದ ಕೆಲ-ಕೆಲವು ಸ್ಥಳಗಳಿಗೆ ಮಾತ್ರ ಇಂದು ಸೀಮಿತವಾಗಿದೆ.

### ವೀರಶೈವ ಧರ್ಮ

ಶೈವಧರ್ಮವು ಭರತಖಂಡದ ಅತಿಪುರಾತನ ಧರ್ಮಗಳಲ್ಲೊಂದು. ಅದು ವೈದಿಕ ಪೂರ್ವಕಾಲ ದೆಂದೂ, ಆರ್ಯೇತರದೆಂದೂ ಕೆಲವು ವಿದ್ವಾಂಸರ ಅಭಿಮತ. ಆದರೆ ನಿರ್ದಿಷ್ಟ ಆಧಾರಗಳಿಲ್ಲದ ಕಾರಣ ಅವರ ವಾದಗಳನ್ನು ಒಪ್ಪಲಾಗದು. ಕ್ರಿಸ್ತಪೂರ್ವ ಕಾಲದಿಂದಲೂ ಭಾರತದೇಶದಲ್ಲಿ ಶಿವಪೂಜೆಯೂ ಲಿಂಗರೂಪದಲ್ಲಿ ಮತ್ತು ಮೂರ್ತಿರೂಪದಲ್ಲಿ ಜನಪ್ರಿಯವಾಗಿತ್ತು ಎಂಬುದಕ್ಕೆ ಸ್ಪಷ್ಟ ಆಧಾರಗಳು ದೊರೆಯುತ್ತವೆ. ದಕ್ಷಿಣ ಭಾರತದಲ್ಲೂ ಚರಿತ್ರೆ ಪೂರ್ವಕಾಲದಿಂದಲೂ ಶೈವ ಮತ ಪ್ರಚಾರದಲ್ಲಿತ್ತೆಂದು ಸಂಪ್ರದಾಯ ಪರಂಪರೆಗಳು ಹೇಳುತ್ತವೆ. ರಾವಣ ತನ್ನ ತಾಯಿಗೆ ಲಿಂಗಪೂಜೆಗೆ ಅನುಕೂಲ ಮಾಡಿಕೊಡುವುದಕ್ಕಾಗಿ ಶಿವನಿಂದ ಲಿಂಗ ಪಡೆದು, ಅದನ್ನು ತೆಗೆದುಕೊಂಡು ಹೋಗಲಾರದೆ ಅದು ಗೋಕರ್ಣದಲ್ಲಿ ಮಹಾಬಲೇಶ್ವರ ಲಿಂಗವೆಂದು ಸ್ಥಾಪಿತವಾಗಿರುವುದು ಸ್ಮರಿಸಬಹುದು.

ಶೈವ ಮತಾನುಯಾಯಿಗಳು ಲಿಂಗೋಪಾಸಕರು. ಲಿಂಗವು ಶೈವಧರ್ಮದ ಚಿಹ್ನೆ. ಶಿಲಾಲಿಂಗಗಳ ಪ್ರಥಮ ದರ್ಶನವಾಗುವುದು. ಹರಪ್ಪ-ಮೆಹೆಂಜೊದಾರೋ ಸಂಸ್ಕೃತಿ ಕಾಲದಲ್ಲಿ. ಅದರಂತೆ ವೇದಗಳಲ್ಲೂ

ಲಿಂಗ ಶಬ್ದದ ಉಲ್ಲೇಖವಿದೆ. ಇವರು ಪರಬ್ರಹ್ಮ ವಸ್ತುವನ್ನು ಶಿವ, ರುದ್ರ ಎಂದು ಪೂಜಿಸುತ್ತಾರೆ. ಶ್ರುತಿ-ಸ್ಮೃತಿಗಳಲ್ಲೂ ಇದಕ್ಕೆ ಆಧಾರವಿದೆ. ಶೈವರು ಚಾರ್ವಾಕರಂತಾಗಲಿ, ಬೌದ್ಧರಂತಾಗಲಿ ವೇದದೂಷಕರಲ್ಲ, ವೇದ ವಚನಗಳಿಗೂ ಶೈವಾಗಮಗಳಿಗೂ ಪರಸ್ಪರ ವಿರೋಧವಿಲ್ಲದೆಡೆಗಳಲ್ಲೆಲ್ಲಾ, ಶೈವರು ವೇದ ಪ್ರಾಮಾಣ್ಯವನ್ನು ಒಪ್ಪಿಕೊಳ್ಳುತ್ತಾರೆ.

ಕರ್ನಾಟಕವನ್ನಾಳಿದ ಶಾತವಾಹನ, ಗಂಗರು, ಪಲ್ಲವ ಮತ್ತು ಕದಂಬರ ಕಾಲದಲ್ಲಿ ಶೈವ ಮತವು ಪ್ರಧಾನವಾಗಿತ್ತೆಂದೂ, ಬಹುಜನಪ್ರಿಯವಾಗಿತ್ತೆಂದೂ ಬೃಹತ್ ಕಥೆಯ ಭಾಷಾಂತರವಾದ ಬೃಹತ್ಕಥಾಸರಿತ್ಸಾಗರದಿಂದ ತಿಳಿದುಬರುತ್ತದೆ. ಬಾದಾಮಿ ಚಾಲುಕ್ಯರು ಶೈವ ಮತದ ಆಶ್ರಯದಾತರಾಗಿದ್ದರೆಂದು ಅದಕ್ಕೆ ಬಾದಾಮಿ ಗವಿಗಳಲ್ಲಿ ದೊರೆತಿರುವ ನಟರಾಜ, ಹರಿಹರ, ಅರ್ಧನಾರೀಶ್ವರ, ಮಹಿಷಾಸುರ ಮರ್ಧಿನಿ-ಮೂರ್ತಿಗಳೇ ಸಾಕ್ಷಿಯಾಗಿವೆ.

ಕರ್ನಾಟಕದ ಶೈವ ಮತಾವಲಂಬಿಗಳಲ್ಲಿ ಕಾಪಾಲಿಕರು, ಕಾಳಮುಖರು ಮತ್ತು ವೀರಶೈವರು ಪ್ರಮುಖರು, ವೀರಶೈವ ಎಂಬುದು ಶೈವ ಮತದ ಒಂದು ಶಾಖೆ. ಇದನ್ನು ಕಲ್ಯಾಣದ ಕಲಚೂರಿ ಬಿಜ್ಜಳನ ಆಸ್ಥಾನದ ಭಂಡಾರಿಯಾಗಿದ್ದ ಬಸವಣ್ಣನವರು (ಕ್ರಿ.ಶ. ೧೧೩೧-೧೧೬೭) ಸ್ಥಾಪಿಸಿದನು. ರೇಣುಕ, ಪಂಡಿತಾರಾಧ್ಯ, ಮರುಳಾರಾಧ್ಯ, ಏಕೋರಾಮ ಮತ್ತು ವಿಶ್ವರಾಧ್ಯರೆಂಬ ಪಂಚಾಚಾರ್ಯರು ವೀರಶೈವ ಮತದ ಸ್ಥಾಪಕರೆಂದು ಸಂಪ್ರದಾಯವಾದಿಗಳು ಹೇಳಿದರೂ ಬಸವಣ್ಣನವರಿತ್ತ ಪ್ರಚೋದನೆ, ಪ್ರೋತ್ಸಾಹಗಳೇ ವೀರಶೈವಕ್ಕೆ ನಿಜವಾದ ಸ್ವರೂಪಕೊಟ್ಟವು. ಆದ್ದರಿಂದ ಬಸವಣ್ಣನವರೇ ವೀರಶೈವ ಧರ್ಮದ ನಿಜವಾದ ಸ್ಥಾಪಕರೆಂದು ಭಾವಿಸಬಹುದು. ಏಕೆಂದರೆ ವೀರಶೈವರ ಅಸ್ತಿತ್ವವನ್ನು ಕುರಿತು ಬಸವಣ್ಣನಿಗಿಂತ ಮೊದಲಿನ ಯಾವುದೇ ಶಾಸನಾಧಾರಗಳಿಲ್ಲ. ಜಾತಿಭೇದ, ಲಿಂಗಭೇದಗಳನ್ನು ವೀರಶೈವರು ಒಪ್ಪುವುದಿಲ್ಲ. ಎಲ್ಲ ಮಾನವರು ಸಮ ಎಂಬುದು ಅವರ ಭಾವನೆ. ಎದೆಯ ಮೇಲೆ ಇಷ್ಟಲಿಂಗವನ್ನು ಧರಿಸಿ ಅದನ್ನು ಪೂಜಿಸುವುದು, ಅಂತೆಯೇ ಗುರು ಜಂಗಮರನ್ನು ಪೂಜಿಸುವುದಕ್ಕೆ ವೀರಶೈವ ಮತ ಪ್ರಾಮುಖ್ಯತೆ ಕೊಡುತ್ತದೆ.

ಇಂದು ಚಾಮರಾಜನಗರ ತಾಲೂಕಿನಲ್ಲಿರುವ ಪ್ರಮುಖ ಧರ್ಮವೆಂದರೆ ವೀರಶೈವ ಧರ್ಮ. ಈ ಧರ್ಮೀಯರು ತಾಲೂಕಿನಲ್ಲಿ ಇಂದು ಅಧಿಕವಾಗಿದ್ದಾರೆ. ಈ ಧರ್ಮವು ಕ್ರಿ.ಶ. ೧೪-೧೫ನೆಯ ಶತಮಾನದಿಂದಲೂ ತಾಲೂಕಿನಲ್ಲಿ ಅಸ್ತಿತ್ವದಲ್ಲಿದ್ದಲ್ಲಿರುವುದಕ್ಕೆ ಶಾಸನ, ಸಾಹಿತ್ಯ ಕೃತಿಗಳ ಉಲ್ಲೇಖವನ್ನು ಗಮನಿಸಬಹುದು. ಬಸವಾದಿ ಪ್ರಮಥರಲೊಬ್ಬರಾದ ಏಕಾಂತ ಬಸವೇಶ್ವರರನು ಕ್ರಿ.ಶ. ೧೫೦೦ರಲ್ಲಿ ಈ ಪ್ರಾಂತ್ಯದಲ್ಲಿ ಶರಣ ಚಟುವಟಿಕೆಗಳನ್ನು ನಡೆಸುತ್ತಿದ್ದರೆಂದು ಶಾಸನದಿಂದ ತಿಳಿದುಬರುತ್ತದೆ.[೫೪]

ವೀರಶೈವ ತತ್ವ ಸಿದ್ಧಾಂತಗಳನ್ನು ಒಪ್ಪಿ ಈ ಭಾಗದ ವೀರಶೈವ ಧರ್ಮದ ಬೆಳವಣಿಗೆಗೆ ಆಶ್ರಯಕೊಟ್ಟ ಶ್ರೀಕ್ಷೇತ್ರ ನಂಜನಗೂಡು, ಸುತ್ತೂರು, ಸಿದ್ಧಗಂಗೆ, ಮಲೆಮಹದೇಶ್ವರ ಬೆಟ್ಟ, ಮೊದಲಾದ ಪುಣ್ಯಕ್ಷೇತ್ರಗಳ

ಶಾಲಿನಲ್ಲಿ ವೀರಶೈವ ಧರ್ಮದ ಪುನರುಜ್ಜೀವನಕ್ಕೆ ತನ್ನದೇ ಆದ ಕೊಡುಗೆಯನ್ನು ನೀಡಿದ ಕೀರ್ತಿ ತಾಲೂಕಿನ ಹರದನಹಳ್ಳಿ ಗುರುಪರಂಪರೆಗೂ ಸಲ್ಲುತ್ತದೆ. ವೀರಶೈವಧರ್ಮ ನಾಡಿನಾದ್ಯಂತ ಒಂದು ಪ್ರಬಲ ಧರ್ಮವಾಗಿ ರೂಪುಗೊಳ್ಳಲು ಹರದನಹಳ್ಳಿಯ ಗೋಸಲಪೀಠ ಪರಂಪರೆಯೂ ಪ್ರಮುಖ ಕಾರಣವಾಗಿದೆ. ಹೀಗೆ ತಾಲೂಕಿನಲ್ಲಿ ಹಲವು ವೀರಶೈವ ಮಠಗಳಿದ್ದು ಅವುಗಳು ನಿರಂತರವಾಗಿ ಧಾರ್ಮಿಕ ಚಟುವಟಿಕೆಗಳಲ್ಲಿ ತೊಡಗಿಸಿಕೊಂಡಿವೆ.

ಈ ತಾಲೂಕಿನಲ್ಲಿ ವೀರಶೈವ ಧರ್ಮದ ಬಗ್ಗೆ ಕೆಲವು ವಿವರಗಳನ್ನು ತಿಳಿಸುವ ಶಾಸನಗಳು ದೊರಕಿವೆ. ಅವುಗಳಲ್ಲಿ ಕುಂತೂರಿನ ವೀರಶೈವ ಮಠದ ಗುರು ಸಾಲೂರು ಶಾಂತದೇವನಿಗೆ ಹದಿನಾಡಿಗೆ ಸೇರಿದ ಕುಂತೂರು ಗ್ರಾಮವನ್ನು ದಾನ ನೀಡಿದುದನ್ನು ಕ್ರಿ.ಶ. ೧೫೧೨ರ ಶಾಸನ ತಿಳಿಸುತ್ತದೆ.[೮೫]

ಕ್ರಿ.ಶ. ೧೨೪೬ನೆಯ ಕಾಲಮಾನದ ಹರದನಹಳ್ಳಿಯ ತಾಮ್ರಶಾಸನದಲ್ಲಿ ಚಂದ್ರಣಿಮಠ, ಕಂಚಿ ತೆಲುಗಾಣ್ಯದ ಮಠ, ವಾಣೀಜ್ಯಪುರಿಮಠ, ಕೆಂಬಲ್ಲುಮಠ ಹಾಗೂ ಮಹಾಲಿಂಗಿಮಠ ವೆಂಬ ಪಂಚಮಠಗಳ ಪ್ರಸ್ತಾಪವಿದೆ. ಹರದನಹಳ್ಳಿಯ ಗೋಸಲಪೀಠದ ಆರನೇಯವರಾಗಿ ಸಿಂಹಾಸನ ವನ್ನೇರಿದ ನಿರ್ಮಾಯ ಗಣೇಶ್ವರ ಮತ್ತು ೧೫ನೇ ಪೀಠಾಧ್ಯಕ್ಷರಾದ ಗೋಸಲಯತೀಶ ಮೊದಲಾದ ಶರಣರ ಬಗ್ಗೆ ಈ ಶಾಸನ ವಿವರಿಸುತ್ತದೆ.[೮೬]

ವೀರಶೈವಧರ್ಮವನ್ನು ಎಡೆಯೂರಿನಲ್ಲಿ ಸಂಘಟಿಸಿದವರು ತೋಂಟದ ಸಿದ್ಧಲಿಂಗ ಯತಿಗಳು. ನಿರಂಜನವಂಶ ರತ್ನಾಕರದ ಪ್ರಕಾರ ಶೂನ್ಯ ಸಿಂಹಾಸನದ ೧೫ನೆಯ ಅಧಿಕಾರಿಗಳಾದ ಹರದನಹಳ್ಳಿಯ ಗೋಸಲದೇವ, ಶಂಕರದೇವ, ದಿವ್ಯಲಿಂಗದೇವ, ಗೋಸಲ ಚನ್ನಬಸವೇಶ್ವರರ ತರುವಾಯ ೧೬ನೆಯ ಅಧಿಕಾರಿಗಳಾಗಿ ಪಟ್ಟವೇರಿದ ಇವರ ಚರಿತ್ರೆ ಉಜ್ವಲವಾದುದು. ಈ ತಾಲೂಕಿನ ವೀರಶೈವಧರ್ಮದ ಉದ್ಧಾರಕರಾದ ಹರದನಹಳ್ಳಿಯ ಸಿದ್ಧಲಿಂಗ ಶಿವಯೋಗಿಗಳ ಕೀರ್ತಿಯನ್ನು ಉದ್ಘೋಷಿಸುತ್ತಿರುವ ಶಾಸನವೊಂದು ಎಡೆಯೂರು ಮಠದ ಆವರಣದಲ್ಲಿದೆ.[೮೭]

ಕ್ರಿ.ಶ. ೧೫೪೫ರ ಶಾಸನವು ಉಮ್ಮತ್ತೂರಿನ ವೀರಶೈವ ಉಪ್ಪರಿಗೆಯ ಮಠಕ್ಕೆ 'ನಿರಾಸಿ' ಮಠವೆಂಬ ಹೆಸರಿತ್ತೆಂದು ಉಲ್ಲೇಖಿಸುತ್ತದೆ. ಅಲ್ಲದೆ ಈ ಮಠದ ಆರೋಗಣೆಯ ಅವಸರಕ್ಕೆ ಶ್ರೀರಂಗಪಟ್ಟಣದ ಉಭಯ ಕಾವೇರಿ ಮಧ್ಯದ ಗಂಗಾಧರ ದೇವರ ಸನ್ನಿಧಿಯಲ್ಲಿ ಗ್ರಾಮವೊಂದನ್ನು ದತ್ತಿಬಿಟ್ಟ ವಿಚಾರವನ್ನು ಶಾಸನ ವಿವರಿಸುತ್ತದೆ.[೮೮]

ಒಂದನೆಯ ವೆಂಕಟಪತಿಯ ಆಳ್ವಿಕೆಯ ಕ್ರಿ.ಶ. ೧೫೯೩ರ ಕಾಲದ ಶಾಸನವು ಸುತ್ತೂರು ಸಿಂಹಾಸನಕ್ಕೆ ಕರ್ತರಾದ ಸಿವರಾತ್ರೆಯ ದೇವರ ಶಿಷ್ಯರಾದ ಚೆನ್ನಬಸವದೇವರಿಗೆ ಹೊಂಗನೂರು ವ್ಯಾಪ್ತಿಯ ಹಸುರ ಹಳ್ಳಿಯನ್ನು ದಾನವಿತ್ತ ಸಂಗತಿಯನ್ನು ಉಲ್ಲೇಖಿಸುತ್ತದೆ.[೮೯]

ಕ್ರಿ.ಶ. ೧೬ನೆಯ ಶತಮಾನದಲ್ಲಿ ಹುಲಿಯೂರ ಆರಾಧ್ಯವೊಡೆಯರಿಗೆ ವೀರಸೋಮರಾಯನು ಭಕ್ತಿಪೂರ್ವಕವಾಗಿ ವೀರಶೈವ ಮಠವೊಂದನ್ನು ಕಟ್ಟಿಸಿಕೊಟ್ಟನೆಂದು ಶಾಸನದಿಂದ ತಿಳಿಯುತ್ತದೆ.[೧೦] ಕಳಲೆಯ ಪ್ರಭು ಮಲ್ಲರಾಜ ಅರಸನ ಮಗಳಾದ ಮಲ್ಲಾಜಮ್ಮ ಎಂಬುವಳು ಕಲ್ಲಮಠವೆಂಬ ಹೆಸರಿನ ವೀರಶೈವ ಮಠವೊಂದನ್ನು ಕಟ್ಟಿಸಿದುದನ್ನು ಕ್ರಿ.ಶ. ೧೬೪೭ಕ್ಕೆ ಸೇರುವ ಮಲ್ಲಾರಪಾಳ್ಯ ಶಾಸನವು ಉಲ್ಲೇಖಿಸುತ್ತವೆ.[೧೧]

ಪ್ರೌಢದೇವರಾಯನ ಕಾಲದ ಲಕ್ಷಣದಂಡೇಶನು, ಕ್ರಿ.ಶ.ಸುಮಾರು ೧೪೫೦ರಲ್ಲಿ ರಚಿಸಿದ 'ಶಿವತತ್ವ ಚಿಂತಾಮಣಿ'ಯಲ್ಲಿ ತನ್ನ ಸಮಕಾಲೀನರಾದ ನೂರೊಂದು ವಿರಕ್ತರ ಚರಿತ್ರೆಯನ್ನು ದಾಖಲಿಸಿದ್ದಾರೆ. ಅವರಲ್ಲಿ ಚಾಮರಾಜನಗರ ತಾಲೂಕಿನ ಶರಣರ ಬಗ್ಗೆ ಕೆಲವು ವಿವರಗಳನ್ನು ನೀಡಿದ್ದಾನೆ.[೧೨]

ನವಿಲೂರ ಬಸವಪ್ಪನಾ ವೂರ ಮಹದೇವಿ
ನವಿಲೂರ ಮಹಮನೆಯ ವೀರಣ್ಣ ಕುದಿಹೇ
ಚೆವಹಾರಿ ಮಲ್ಲಣ್ಣನಮ್ಮಳೆಯ ಬಸವಣ್ಣ ಕಂಚುಮನಹಳ್ಳಿಯಲ್ಲಿ
ತವೆ ಕಂಪಣ್ಣಯ್ಯಗಳು ಕಂಪಸಾಗರದೊಂ
ಶಿವಮುದ್ದು ಮಂಗಣ್ಣ ಸೂಲೆ ಹಳ್ಳಿಯ ಮಲ್ಲು
ಶಿವರೊಳಾ ಹೆಗ್ಗವಾಡಿಯ ಕೆಂಪಣ್ಣಯ್ಯಗಳ ಚರಣಾಂಬುಜಕ್ಕೆ ಶರಣು

ಸಂಧಿ-೩೮, ಪದ್ಯ-೮೮

ಹಿಂಗದೆ ಕಳಲೆಯ ಕುಂಬರ ಸಾಯಿದೇವಯ್ಯ
ಸಂಗಳಿಸೆಯಿಬ್ಬೆದಲ ಮಾಯ್ದೇವ ತೆರಕಣಬೆ
ಹಂಗುಳದ ನೋಟದಾ ಕಾಮಣ್ಣ ಮಲ್ಲಾಜಿ ಬಿಲ್ಲಿಸೆಟ್ಟಿಯರು ಕುಂಬರ
ಲಿಂಗಯ್ಯ ಹಾಲಪ್ಪ ಸಿರಿಯೂರ ಚೆನ್ನಯ್ಯ
ಇಂಗುಳಾವಾಡಿ ಮಹಲಿಂಗ ಹರದನಹಳ್ಳಿ
ಗಂಗೀಕ ಗೋಸಾಯಿ ಪೋಲಣ್ಣಳ ವಿಮಲ ಚರಣಾಂಬುಜಕ್ಕೆ ಶರಣು.

ಸಂಧಿ-೩೮, ಪದ್ಯ-೮೯

........ರಾಜಿಸುವ ಪಟ್ಟಣದ ನಾಡೊಳರ ಹೆಗ್ಗಡೆಯ-ರೆಂದೆನಿಸುವ
ವಿಸುವ ಭಂಡಾರಿ ಲಕ್ಕಣ್ಣನೆಳೆಯಪ್ಪಣ್ಣ
ರಸಿಕರೆಬ್ಬಣ್ಣ ಕೊಟ್ಟಾರದಲ್ಲಿ ಕಾಳಪ್ಪ........

ಸಂಧಿ-೩೯, ಪದ್ಯ-೯೫

ಓಂಗೆ ಕಹಿಂಬಳ್ಳಿಯಲ್ಲಿ ಮರುಳಯ್ಯ ಹಾ ನಿಧಿಯ

ಲಿಂಗೈಕ್ಯ ಮಲ್ಲಣ್ಣನುಮ್ಮತೂರೊಳಗೆಯುಂ

ಹೊಂಗೆಲಸಿ ಬಸವಣ್ಣನಾ ನಾಡಗೆಜ್ಜೆಗಾ ನ ಹಳ್ಳಿಯೊಳು

-ಲಕ್ಕಣಂ

ಸಂಧಿ-೩೮, ಪದ್ಯ-೧೧೪

ಓಸುಗವತಿ ಕೇತನಗೊಂಡನಪೂರ ದೊಡ್ಡಯ್ಯ

ರಸಿಕ ಬಂಡೆಯಹಳ್ಳಿಯಲ್ಲಿ ವೀರಣ್ಣಯ್ಯ

ನಸಮ ಮೂಕಿಯ ಹಳ್ಳಿಯಲಿ ಮರುಳಿಯಮ್ಮ ಕತ್ತರಿನತ್ತವೆನಿಪಪುರದ

ರಸಿಕ ಶಿವಭಕ್ತೆ ಮಹದೇವಿಯುಂ ಹೊಂಗನೂ

ರ್ಗೆಸೆವ ಶೂಣ್ಣಯ್ಯ ಕಾಗಲವಾಡಿ ವೀರಯ್ಯ

ರಸಿಕನುಂ ಗಂಗೆವಾಡಿಯ ಪುರದ ಬಸವಣ್ಣನ ಚರಣಾಂಬುಜಕ್ಕೆ ಶರಣು

ಸಂಧಿ-೩೮, ಪದ್ಯ-೧೧೫

ಬೆಟ್ಟದಪುರದ ಅಂಕಿದೇವಯ್ಯಗಳು ಆ ಪೂರ ಸಪ್ಪೆಯವ್ವೆ

ಮಾರಾರಿ ಭಕ್ತ ನವತಿಯ ಮಲ್ಲಣ್ಣಯ್ಯ.......

ಸಂಧಿ-೩೮, ಪದ್ಯ-೯೧

......ಪಂಡಿರಿದೇವನಹಗ್ರಹಾರದ ಕಲ್ಲು ಸೋಮಣ್ಣ......

ಸಂಧಿ-೩೮, ಪದ್ಯ-೯೭

ಮೇಲಿನ ಪದ್ಯಭಾಗಗಳಲ್ಲಿ ಉಲ್ಲೇಖಿತರಾಗಿರುವ ನವಿಲೂರ ಬಸಪ್ಪ, ಮಹಾಮನೆಯ ವೀರಣ್ಣ, ಮಹದೇವಿ, ಕುದಿಹೇರ ಮಲ್ಲಣ್ಣ, ಅಮ್ಮಳೆಯ ಬಸವಣ್ಣ, ಹೆಗ್ಗವಾಡಿಯ ಕೆಂಪಣ್ಣಯ್ಯ, ಹರದನಹಳ್ಳಿಯ ಗಂಗೀಕ ಗೋಸಾಯಿ ಪೋಲಣ್ಣ ಬೆಟ್ಟದಪುರದ ಅಂಕಿದೇವಯ್ಯ, ಸಪ್ಪೆಯವ್ವೆ, ಅಗ್ರಹಾರದ ಕಲ್ಲು ಸೋಮಣ್ಣ, ಹೊಂಗನೂರಿನ ಶೂಣ್ಣಯ್ಯ, ಕಾಗಲವಾಡಿಯ ವೀರಯ್ಯ ಇವರು 'ಶಿವತತ್ವ ಚಿಂತಾಮಣಿ'ಯಲ್ಲಿ ನೂತನ ಗಣಂಗಳಲ್ಲಿ ಬರುವ ತಾಲೂಕಿನ ಶರಣರಾಗಿದ್ದಾರೆ.

ಈ ಮೇಲಿನ ಎಲ್ಲಾ ಅಂಶಗಳನ್ನು ಗಮನಿಸಿದಾಗ ಚಾಮರಾಜನಗರ ತಾಲೂಕಿನಲ್ಲಿ ವೀರಶೈವ ಧರ್ಮವು ಕ್ರಿ.ಶ.೧೫ನೇ ಶತಮಾನದ ಮಧ್ಯಭಾಗದಿಂದಲೇ (ಕ್ರಿ.ಶ.೧೪೫೦) ಅಸ್ತಿತ್ವದಲ್ಲಿದ್ದು, ಸು.೬೦೦ ವರ್ಷಗಳಿಗೂ ಮೀರಿದ ಇತಿಹಾಸವನ್ನು ಹೊಂದಿದೆ ಎಂದು ಅಧಿಕೃತವಾಗಿ ದಾಖಲಿಸಬಹುದು.

ಇಂದಿಗೂ ಚಾಮರಾಜನಗರ ತಾಲೂಕಿನಲ್ಲಿ ಈ ಪಂಥದ ಅನುಯಾಯಿಗಳು ಪ್ರಬಲರಾಗಿದ್ದಾರೆ. ವಿವಿಧ ಜಾತಿಗಳ ಜನರು ಈ ಧರ್ಮಕ್ಕೆ ಸೇರಿದವರಾದುದರಿಂದ ಅವರ ಮೂಲ ಜಾತಿಯ ಆಧಾರದಿಂದ ಈ ಪಂಥದಲ್ಲಿಯೇ ಲೆಕ್ಕವಿಲ್ಲದಷ್ಟು ಉಪಪಂಗಡಗಳಿವೆ. ಇವರಲ್ಲಿ ವೀರಶೈವ ಶೆಟ್ಟರು ಪ್ರಮುಖರಾಗಿದ್ದು ವ್ಯಾಪಾರವೇ ಅವರ ಪ್ರಮುಖ ಉದ್ದೇಶ. ತಮ್ಮಡಿಗಳೆಂಬ ಮತ್ತೊಂದು ಪ್ರಮುಖ ವರ್ಗವಿದ್ದು ತಾಲೂಕಿನ ಬಹುತೇಕ ದೇವಾಲಯಗಳ ಅರ್ಚಕರಾಗಿದ್ದಾರೆ. ಈ ತಾಲೂಕಿನಲ್ಲಿ ಅಪಾರ ಸಂಖ್ಯೆಯಲ್ಲಿರುವ, ಮಹದೇಶ್ವರ, ವೀರಭದ್ರೇಶ್ವರ, ಮಂಟೇಸ್ವಾಮಿ, ಸಿದ್ದಪ್ಪಾಜಿ, ರಾಚಪ್ಪಾಜಿ, ಹನುಮಂತ ಹಾಗೂ ಎಲ್ಲಾ ಊರಿನಲ್ಲೂ ಇರುವ ಮಾರಿಗುಡಿಗಳು, ಬಸವನಗುಡಿಗಳು ಇವರ ವಶದಲ್ಲಿವೆ. 'ಜಂಗಮ'ರು ಇವರ ಧರ್ಮಗುರುಗಳಾಗಿದ್ದಾರೆ.

### ನಾಥಪಂಥ

ಭಾರತದ ಪ್ರಾಚೀನ ಪಂಥಗಳಾದ ನಾಥ, ಕಾಳಾಮುಖ, ಶಾಕ್ತ, ಸೂಫಿ, ಕಾಪಾಲಿಕ ಮುಂತಾದವು ಕರ್ನಾಟಕದ ಧಾರ್ಮಿಕ, ಸಾಮಾಜಿಕ, ರಾಜಕೀಯ ಬದುಕಿನಲ್ಲಿ ಆಳವಾದ ಪ್ರಭಾವ ಬೀರಿವೆ. ಆದರೆ ಈ ಪಂಥಗಳ ಬಗ್ಗೆ ನಡೆದಿರುವ ಅಧ್ಯಯನಗಳು ಸಿಗುವ ಮಾಹಿತಿಗಳು ಮಾತ್ರ ತೀರ ಕಡಿಮೆ. ಕನ್ನಡದ ಪ್ರಾಚೀನ ಪಠ್ಯಗಳಲ್ಲಿ ಅಲ್ಲಮಪ್ರಭು, ರೇವಣ್ಣಸಿದ್ಧ, ಮರುಳಸಿದ್ಧ, ಶಂಕರದಾಸಿಮಯ್ಯ, ತೋಂಟದ ಸಿದ್ಧಲಿಂಗ ಮುಂತಾದವರನ್ನು ಮುಖಾಮುಖಿ ಮಾಡುವ ಕತನಗಳಿವೆ. ಇವು ಆಧುನಿಕ ಕಾಲದಲ್ಲಿ ನಾಥಪಂಥದ ಬಗೆಗೆ ಸಿಗುವ ಅಲ್ಪ ಪ್ರಮಾಣದ ಮಾಹಿತಿಗಳು.

ನಾಥಪಂಥವು ಒಂದು ಬಗೆಯಲ್ಲಿ ವಿರಕ್ತಪಂಥ. ಹಳೆಯ ಚಿಂದಿಯಿಂದ ಮಾಡಿದ ಕಥೆಯಿಂದ ದೇಹಮುಚ್ಚಿಕೊಂಡು (ಕುತ್ಸಿತ ಕಂಥಚ್ಛಾದಿತದೇಹ) ಹಾಳು ದೇಗುಲಗಳಲ್ಲಿ, ಗಿರಿ-ಕದರಗಳಲ್ಲಿ ವಾಸಮಾಡಿ ಕೊಂಡು (ಶೂನ್ಯ ಸುರಾಲಯ ಕಂದರಗೇಹಃ) ಇರುವ ಅವಧೂತನು ಗುರುಪಾದವನ್ನು ಪೂಜಿಸಿಕೊಂಡು ಸುಖವಾಗಿರುತ್ತಾನೆ ಎಂದು ಚರ್ಪಟನಾಥ ಹೇಳುತ್ತಾನೆ.[೯]

ಕರ್ನಾಟಕದಲ್ಲಿ ನಾಥಪಂಥವು ಶತಮಾನಗಳ ತನ್ನ ಬಾಳುವೆಯಲ್ಲಿ ಜೋಗಪ್ಪ ಸಂಪ್ರದಾಯವಾಗಿ, ಅರ್ಜುನ ಜೋಗಿಯ ಹಾಡಾಗಿ, ಲುಂಕೆಮಾಲೆ ಜಾತ್ರೆ-ಯಾತ್ರೆಯಾಗಿ, ಭೈರವನ ಪ್ರೇಮ ಕಥೆಯಾಗಿ, ಸಿದ್ಧಭುಕ್ತಿ ಆಚರಣೆಯಾಗಿ, ಸಿದ್ಧರ ಮಠಗಳಾಗಿ ಯಕ್ಷಗಾನ ಬಯಲಾಟಗಳಾಗಿ ಹಲವಾರು ಅವಸ್ಥೆಗಳನ್ನು ಹಾದು ಅಸಂಖ್ಯ ಆಕೃತಿಗಳನ್ನು ಪಡೆದಿದೆ. ಈ ಶೈವಪಂಥವಾದ ನಾಥಪಂಥವನ್ನು ಜೈನರಿಗಿಂತ ಹೆಚ್ಚು ಕಟುವಾಗಿ ಶರಣರು ಹಾಗೂ ವೀರಶೈವರು ವಿಮರ್ಶಿಸುವುದು ಒಂದು ವಿಶೇಷ. ಹಂಪೆಯಲ್ಲಿ ನಾಥಪಂಥದ ದೇವತೆ ಭೈರವನ ವಿಗ್ರಹವಿದೆ. ಈ ಪಂಥದ ಗುರುಪರಂಪರೆಯಲ್ಲಿ ವಿರೂಪಾಕ್ಷನ ಹೆಸರು ಕಂಡುಬರುತ್ತದೆ. ಇಲ್ಲಿ ಆಗಿ ಹೋದ ೧೦೧ ವಿರಕ್ತರು, ಇಲ್ಲಿಯವನೇ ಆದ ಕೊಡೆಕಲ್ಲ ಬಸವಣ್ಣ, ಸಮೀಪದ ಉಜ್ಜಯಿನಿಯ

ಮರುಳಸಿದ್ಧೇಶ್ವರ ಮೂಲತಃ ಇಲ್ಲಿಯವನೇ ಆದ ಕೊಡೆಕಲ್ಲ ಬಸವಣ್ಣ, ಸಮೀಪದ ಉಜ್ಜಯಿನಿಯ ಮರುಳಸಿದ್ಧೇಶ್ವರ ಮೂಲತಃ ನಾಥಪಂಥದವರೇ ಆಗಿದ್ದಾರೆ. ಇವೆ ಮೊದಲಾದ ಆಧಾರಗಳಿಂದ ಹಂಪೆ ಮೂಲತಃ ನಾಥಪಂಥದ ಕೇಂದ್ರವಾಗಿತ್ತೆಂದು ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ.

ಕರ್ನಾಟಕದ ಹೇಮ, ಕನಕ, ಸುವರ್ಣ, ಗಿರಿಗಳು, ಶ್ರೀಶೈಲಗಳು - ರಸಸಿದ್ಧರು, ಬೌದ್ಧರು ಹಾಗೂ ನಾಥಪಂಥಗಳ ನಡುವೆ ಯಾವುದೋ ಒಂದು ಬಗೆಯ ಸಂಬಂಧವನ್ನು ಸೂಚಿಸುತ್ತವೆ. ಈ ಹಿನ್ನೆಲೆಯಲ್ಲಿ ಚಾಮರಾಜನಗರ ತಾಲೂಕಿನ ಮಲೆಯೂರಿನ ಕನಕಗಿರಿ ಜೈನ ಬೆಟ್ಟಕ್ಕೂ, ಜಿಲ್ಲೆಯ ಹಿಮವದ್ ಗೋಪಾಲಸ್ವಾಮಿ ಬೆಟ್ಟಕ್ಕೂ, ಮಹದೇಶ್ವರ ಬೆಟ್ಟಕ್ಕೂ, ಬಿಳಿಗಿರಿ ರಂಗಪ್ಪನ ಬೆಟ್ಟಕ್ಕೂ ನಾಥಪಂಥದ ಒಂದು ಸಣ್ಣ ಎಳೆ ಇರುವುದನ್ನು ಖಂಡಿತವಾಗಿಯೂ ಗುರುತಿಸಬಹುದು.

**ಕಾಪಾಲಿಕರು**

ಇವರು ಕಾಳಾಮುಖ, ಪಾಶುಪತ ಹಾಗೂ ಲಕುಲೀಶರಂತೆ ಒಂದು ಶೈವಶಾಖೆಗೆ ಸೇರಿದವರು. ಕರ್ನಾಟಕದಲ್ಲಿ ಈ ನಾಲ್ಕು ಶೈವ ಶಾಖೆಗಳು ಪ್ರಚಲಿತವಿದ್ದರು ಇವು ತಾತ್ವಿಕವಾಗಿ ಭಿನ್ನ ಭಿನ್ನ ನೆಲೆಯಲ್ಲಿ ನಿಲ್ಲುತ್ತವೆ. ಕಾಪಾಲಿಕರು ಹಿಂದೂ ದೈವವಾದ ಭೈರವ-ಶಿವ ಹಾಗೂ ಅವನ ಗಣಗಳನ್ನು ಆರಾಧಿಸುವವರು. ಇವರು ಶೈವ ಶಾಖೆಗೆ ಸೇರಿದವರೆಂಬುದರಲ್ಲಿ ಅನುಮಾನವಿಲ್ಲ. ನಿಜಗುಣಶಿವಯೋಗಿಗಳು ಪಾಶುಪತ, ಕಾಪಾಲಿಕ, ಮಹಾವ್ರತಗಳನ್ನು ಭಿನ್ನಪಂಥಗಳೆಂದು ಭಾವಿಸಿ, ಅವನ್ನು 'ಅತಿಮಾರ್ಗಿಕ'ಗಳೆಂದು ಕರೆದಿದ್ದಾರೆ.[illegible]

ಕರ್ನಾಟಕದಲ್ಲಿ ಹನ್ನೆರಡನೆಯ ಶತಮಾನಕ್ಕೆ ಹಿಂದೆಯೇ ಕಾಪಾಲಿಕರು ಇದ್ದರು. ಇವರು ಶೈವ ಶಾಖೆಗೆ ಸೇರಿದವರಾದರೂ ಅವರ ಉಗ್ರಖಂಡನೆ ಹನ್ನೆರಡನೆ ಶತಮಾನದ ವಚನಕಾರರಿಗೆ ಆಗಿದೆ. ಅವರ ವಾಮಮಾರ್ಗೀಯ ಆಚರಣೆಗಳು, ಭೀಭತ್ಸ ವರ್ತನೆಗಳು ವಚನಕಾರರು ಅವರನ್ನು ಉಗ್ರವಾಗಿ ಟೀಕಿಸಲು ಕಾರಣಗಳಾಗಿರಬೇಕು. ಅಲ್ಲಮಪ್ರಭುವು ಕಾಪಾಲಿಕರ ಭೈರವನನ್ನು ಭಯಂಕರ ಸ್ವರೂಪಿಯಾದ ಶಿವನೆಂದು ಕರೆಯುವವರನ್ನು ಶಿವದ್ರೋಹಿಗಳು, ಗುರುದ್ರೋಹಿಗಳು ಎಂದಿರುವನು.[illegible] ಅಲ್ಲದೆ ಚೆನ್ನಬಸವಣ್ಣನು ಶೈವಸ್ವೈರಗಾದ, ಪಾಶುಪತ, ಪಥವನರಿಯದ ಕಾಳಮುಖ, ಕಂಗೆಟ್ಟ ಮಹಾವ್ರತಿ, ಮದವೇರಿದ ಸನ್ಯಾಸಿ, ಪಾಷಂಡಿಯಾದ ಕಾಪಾಲಿ, ಮರುಳಾಗಿ ತಿರುಗಿದ ಈ ಆರುಭಕ್ತಿ ಪಥಕ್ಕೆ ಸಲ್ಲವು[illegible] ಎಂದಿದ್ದಾನೆ.

ಕಾಪಾಲಿಕರಿಗೆ ಭಕ್ತಿಮಾರ್ಗದಲ್ಲಿ ವಿಶ್ವಾಸವಿದ್ದರೂ ಅವರಿಗೆ ವೈಯಕ್ತಿಕ ಸಾಧನೆಯಲ್ಲಿಯೇ ಹೆಚ್ಚು ನಂಬಿಕೆ. ಈ ಸಾಧನೆಗಾಗಿಯೇ ಅವರು ಜನವಿದೂರವಾದ ಕಾಡನ್ನು ಆಶ್ರಯಿಸಿದರು. ಜನ ಸಂಪರ್ಕದಿಂದ ದೂರವಾಗಿ ಮಾರ್ಗಸಮಾಜದಿಂದ ಅವರು ಇನ್ನಷ್ಟು ದೂರ ಸರಿಯುವಂತೆ ಮಾಡಿತು. ವರ್ಣಾಶ್ರಮಧರ್ಮವನ್ನು ಟೀಕಿಸಿದುದರಿಂದ ಅವರು ಪುರೋಹಿತವರ್ಗದ ತಿರಸ್ಕಾರಕ್ಕೂ ಗುರಿಯಾದರು. ಕಾಪಾಲಿಕ ಪದದ ಬಳಕೆಯಾಗಿರುವ ಮೂರು ಶಾಸನಗಳು ಕರ್ನಾಟಕ ರಾಜ್ಯದ ದಕ್ಷಿಣಭಾಗದಲ್ಲಿ ದೊರಕಿವೆ. ಅವುಗಳಲ್ಲಿ

ಎರಡು ಶ್ರವಣಬೆಳಗೊಳದ್ದು, ಒಂದು ತಿರುಮಕೂಡಲು ನರಸೀಪುರ ತಾಲೂಕಿನದ್ದು. ಮೊಟ್ಟ ಮೊದಲನೆಯದು ಪಶ್ಚಿಮ ಗಂಗರ ಮೂರನೇ ಮಾರಸಿಂಹನು (ಕ್ರಿ.ಶ. ೯೬೦-೯೭೪) ಸಲ್ಲೇಖನ ವ್ರತವನ್ನು ಸ್ವೀಕರಿಸಿದುದನ್ನು ಹೇಳುತ್ತದೆ. ಈ ಶಾಸನದ ಕರ್ತೃ ಮಾರಸಿಂಹನನ್ನು ಕಾಪಾಲಿಕರ ಒಡೆಯನಾದ ಶಿವನಿಗೆ ಹೋಲಿಸುವನು. ೧೨ನೇಯ ಶತಮಾನಕ್ಕೆ ಸೇರಿದ ಶ್ರವಣಬೆಳಗೊಳದ ಶಾಸನವು ಜೈನಗುರು ಮಲ್ಲಿಷೇಣ ಮಲಧಾರಿದೇವನು ಕ್ರಿ.ಶ. ೧೧೨೯ರಲ್ಲಿ ಸಲ್ಲೇಖನ ವ್ರತ ಸ್ವೀಕರಿಸಿ ಮರಣ ಹೊಂದಿದ್ದನ್ನು ಸ್ಮರಿಸುತ್ತದೆ. ಈ ಮೇಲಿನ ಮೂರು ಶಾಸನಗಳು ಕಾಪಾಲಿಕರು ೯-೧೦ನೇ ಶತಮಾನಗಳಲ್ಲಿ ಕರ್ನಾಟಕದ ದಕ್ಷಿಣ ಭಾಗದಲ್ಲಿದ್ದುದ್ದನ್ನು ಸೂಚಿಸುತ್ತವೆ.

ನಿಜಗುಣರು 'ವಿವೇಕ ಚಿಂತಾಮಣಿ ಕೃತಿಯಲ್ಲಿ ಪಾಶುಪತ, ಕಾಪಾಲಿಕ, ಮಹಾವ್ರತಗಳು ಅತಿಮಾರ್ಗಿಕಗಳು, ಕಾಪಾಲಿಕವು, ನರಕಪಾಲ ಭಿಕ್ಷಾಟನಾದಿಗಳನ್ನು ವರ್ಣಿಸಿದರೆ, ಮಹಾವ್ರತವು ಅಸ್ಥಿಧಾರಣಾದಿಗಳನ್ನು ವಿವರಿಸುತ್ತದೆ ಎಂದಿದ್ದಾರೆ. ಬ್ರಹ್ಮಶಿವನು ತನ್ನ ಸಮಯ ಪರೀಕ್ಷೆಯಲ್ಲಿ ೪ ಶೈವಶಾಖೆಗಳನ್ನು ಪ್ರಸ್ತಾಪಿಸಿ ಅವುಗಳಲ್ಲಿ ಕಾಳಾಮುಖ, ಪಾಶುಪತ ಹಾಗೂ ಶೈವಶಾಖೆಗಳು ಸೌಮ್ಯಾಚರಣೆಯುಳ್ಳವುಗಳಾದರೆ ಕಾಪಾಲಿಕವು ರುದ್ರಮಾರ್ಗಾಚರಣೆಯದು ಎಂದಿದ್ದಾನೆ. ಒಟ್ಟಿನಲ್ಲಿ ಕರ್ನಾಟಕದಲ್ಲಿ ಕಾಪಾಲಿಕರಂತೆ ಕೌಳರದೂ ಒಂದು ಶಾಖೆ, ಇವೆರಡು ಆಚರಣೆಗಳಲ್ಲಿ ಹೆಚ್ಚು ವ್ಯತ್ಯಾಸಗಳಿಲ್ಲ. ಕಾಪಾಲಿಕರು ಶೈವರಾದರೆ, ಕೌಳರು ಶಾಕ್ತರು.

ಪ್ರಾಚೀನ ಶೈವ ಪಂಥಗಳಲ್ಲಿ ಒಂದಾದ ಕಾಪಾಲಿಕ ಪಂಥವೂ ನಾಥಪಂಥದೊಡನೆ ವಿಲೀನವಾದ ಬಗ್ಗೆ ಕುತೂಹಲಕಾರಿಯಾದ ಮಾಹಿತಿಗಳಿವೆ. ಆದರೆ ಚಾಮರಾಜನಗರ ತಾಲೂಕಿನಲ್ಲಿ ಭೈರವಮೂರ್ತಿಯನ್ನು ಆರಾಧಿಸುವ ಕಾಪಾಲಿಕರ ಪ್ರಭಾವ ಅಸ್ಪಷ್ಟ. ನೆರೆಯ ನಂಜನಗೂಡಿನ ಶ್ರೀಕಂಠೇಶ್ವರ ದೇವಾಲಯ ಬಿಟ್ಟರೆ ಈ ತಾಲೂಕಿನ ಯಾವ ದೇವಾಲಯಗಳಲ್ಲೂ ನಗ್ನಭೈರವ ಮತ್ತು ಭೈರವಿಯ ವಿಗ್ರಹಗಳಿಲ್ಲ. ಚಕ್ರಪೂಜೆಯ ಕುರುಹುಗಳೂ ಇಲ್ಲ.

**ಕಾಳಾಮುಖ**

ಕಾಳಾಮುಖ ಸಂಪ್ರದಾಯವು ಒಂಬತ್ತರಿಂದ ಹದಿಮೂರನೆಯ ಶತಮಾನದ ನಡುವಿನ ಕಾಲಾವಧಿಯಲ್ಲಿ ಕರ್ನಾಟಕದಲ್ಲಿದ್ದ ಶೈವಪಂಥವಾದ ಪಾಶುಪತ 'ಪಂಥ'ದ ಪ್ರಮುಖ ಶಾಖೆಯಾಗಿತ್ತು. ವಿಶೇಷವಾಗಿ ಕಲ್ಯಾಣ ಚಾಲುಕ್ಯ ಅರಸು ಮನೆತನದ ಕಾಲಕ್ಕೆ ಹಾಗೂ ತುಸುಮಟ್ಟಿಗೆ ಕಲಚೂರಿ ಹಾಗೂ ಸೇವುಣ ಅಥವಾ ದೇವಗಿರಿಯ ಯಾದವರ ಕಾಲಕ್ಕೆ ಈ ನಾಡಿನಲ್ಲಿ ಕಾಳಾಮುಖ ಸಂಪ್ರದಾಯವು ಪ್ರಬಲವಾದ ಒಂದು ಧಾರ್ಮಿಕ ಶಕ್ತಿ ಎನಿಸಿತ್ತು. ಬಹಳಷ್ಟು ಜನ ಕಾಳಾಮುಖ ಯತಿಗಳು ಈ ಅರಸು ಮನೆತನಗಳು ಹಾಗೂ ಅವರ ಮಾಂಡಲಿಕರಿಗೆ 'ರಾಜಗುರು'ಗಳು ಎನಿಸಿದ್ದರು. ಹದಿಮೂರನೆಯ ಶತಮಾನದಲ್ಲಿ ಕಾಳಾಮುಖ ಸಂಪ್ರದಾಯ ಒಮ್ಮೆಲೆ ಇಳಿಮುಖ ಹೊಂದಲು ಈ ಅರಸು ಮನೆತನಗಳ ಅವನತಿ ಒಂದು

ಕಾರಣವಾದರೆ, ವೀರಶೈವ ಹಾಗೂ ಇನ್ನಿತರ ಧಾರ್ಮಿಕ ಎದುರಾಳಿಗಳ ಚಳುವಳಿಗಳೂ ಅಷ್ಟೇ ಮುಖ್ಯ ಕಾರಣಗಳೆನಿಸಿವೆ.

ಕಾಳಾಮುಖರು ಹಾಗೂ ವೀರಶೈವರಿಬ್ಬರೂ ಶಿವೋಪಾಸಕರು. ಇವೆರಡೂ ಸಂಪ್ರದಾಯಗಳು ಶಿವನ ಲಿಂಗರೂಪದ ಆರಾಧನೆಗೆ ಒತ್ತುಕೊಡುತ್ತವೆ. ವೀರಶೈವ ಯತಿಗಳಂತೆಯೇ ಕಾಳಮುಖ ಯತಿಗಳನ್ನು ಕೂಡ ಕೆಲವು ಸಲ 'ಜಂಗಮ' ಇಲ್ಲವೆ 'ಜಂಗಮಲಿಂಗ'ವೆಂದು (ಚರಲಿಂಗ) ಕರೆಯಲಾಗುತ್ತದೆ. ಪಾಶುಪತ ಹಾಗೂ ವೀರಶೈವರ ದೇವತಾಶಾಸ್ತ್ರಗಳಲ್ಲೂ ಕೆಲವು ಸೈದ್ಧಾಂತಿಕ ಸಾಮ್ಯಗಳಿವೆ.

ಕಳಚೂರಿ ಬಿಜ್ಜಳನ ಮಂತ್ರಿಯಾಗಿದ್ದ ಬಸವಣ್ಣನು ರಾಜ್ಯದ ಬೊಕ್ಕಸದಿಂದ ದೊಡ್ಡ ದೊಡ್ಡ ಮೊತ್ತಗಳಲ್ಲಿ ಹಣವನ್ನು ದಾನ ನೀಡಿದ್ದನೆಂದು ಹೇಳುವ ಜಂಗಮರು ಬೇರಾರೂ ಆಗಿರದೆ ಕಾಳಾಮುಖರೇ ಆಗಿದ್ದರು ಎಂಬ ಅಭಿಪ್ರಾಯವೂ ಇದೆ. ಅಷ್ಟೇ ಅಲ್ಲದೆ ಏಕಾಂತದ ರಾಮಯ್ಯನೂ ಆ ಕಾಲಕ್ಕೆ ಕಾಳಾಮುಖನಾಗಿದ್ದನೆಂಬ ಅಭಿಮತವಿದೆ.[೯೭]

ಚಾಮರಾಜನಗರ ತಾಲೂಕಿನ ಕೆಂಪನಪುರದ ಒಂದು ಶಾಸನವೂ ಈ ಪ್ರಾಂತ್ಯದ ಏಕಾಂತ ರಾಮಯ್ಯನ ವಾರಸುದಾರನೆಂದು ಬಣ್ಣಿಸಲಾಗಿರುವ, ವೀರಶೈವ ಬೋಧಕ ಯತಿ ಏಕಾಂತ ಬಸವೇಶ್ವರನನ್ನು ಹೊರತುಪಡಿಸಿದರೆ ಮತ್ತಾವ ಕಾಳಾಮುಖರ ಚಹರೆಗಳು ಈ ತಾಲೂಕಿನಲ್ಲಿ ಸಿಗುವುದಿಲ್ಲ.[೯೮]

### ವೈದಿಕ ಧರ್ಮ

ಕನ್ನಡ ನಾಡಿನಲ್ಲಿ ವೈದಿಕ ಧರ್ಮವು ಸುಮಾರು ಕ್ರಿ.ಶ. ಆರಂಭದಲ್ಲೇ ಪ್ರಚಲಿತವಾಗಿತ್ತು. ಕ್ರಿ.ಶ. ೪೫೦ರ ಕದಂಬ ಕಾಕುಸ್ಥವರ್ಮನ ಹಲ್ಮಿಡಿ ಶಾಸನವು ವಿಷ್ಣುಸ್ತುತಿಯಿಂದ ಪ್ರಾರಂಭವಾಗಿದೆ. ತಲಕಾಡಿನ ಗಂಗರು ಸಹ ಶೈವ ದೇವಾಲಯಗಳ ಜೊತೆಗೆ ವಿಷ್ಣುದೇವಾಲಯಗಳನ್ನು ಕಟ್ಟಿಸಿದ್ದನು. ಪ್ರಾಚೀನ ಗಂಗರು ಜೈನರೇ, ಜೈನೇತರರೇ ಎಂಬ ವಿಚಾರದಲ್ಲಿ ಭಿನ್ನಭಿಪ್ರಾಯಗಳಿವೆ. ಆದರೆ ವೈಷ್ಣವ ಧರ್ಮದ ಬಗೆಗೆ ಗಂಗರು ವಿಶೇಷ ಗೌರವಾದರಗಳನ್ನು ಹೊಂದಿದ್ದರೆಂದು ತಿಳಿದುಬರುತ್ತದೆ. ನಂತರ ಬಂದ ಚೋಳ ಮತ್ತು ಹೊಯ್ಸಳ ವಂಶಗಳ ಆಳ್ವಿಕೆಯ ಕಾಲದಲ್ಲೂ ವೈಷ್ಣವ ಧರ್ಮದ ಬೆಳವಣಿಗೆಗೆ ಅಡ್ಡಿಯಾಗಿರಲಿಲ್ಲ. ೧೨ನೇ ಶತಮಾನ ದಲ್ಲಿ ರಾಮಾನುಜರು ಕರ್ನಾಟಕಕ್ಕೆ ಬಂದು ವಿಷ್ಣುವರ್ಧನನ ಪ್ರೋತ್ಸಾಹವನ್ನು ಪಡೆದು ದಕ್ಷಿಣ ಕರ್ನಾಟಕದಲ್ಲಿ ಶ್ರೀ ವೈಷ್ಣವಧರ್ಮವನ್ನು ಪ್ರಚಾರ ಮಾಡಿದರು. ರಾಮಾನುಜರು ಕರ್ನಾಟಕಕ್ಕೆ ಬರುವ ಮೊದಲೇ ತಮಿಳುನಾಡಿನ ಆಳ್ವಾರರ ವೈಷ್ಣವ ಧರ್ಮದ ಪ್ರಭಾವ ಕರ್ನಾಟಕದ ಮೇಲೆ ಆಗಿತ್ತು ಎಂಬುದು ಕೆಲವು ವಿದ್ವಾಂಸರ ಅಭಿಪ್ರಾಯ. ಇದಕ್ಕೆ ಒಂದೆರಡು ಶಾಸನಗಳನ್ನು ಉಲ್ಲೇಖಿಸುತ್ತಾರೆ.[೯೯]

ರಾಮಾನುಜಾಚಾರ್ಯರು ಕರ್ನಾಟಕದಲ್ಲಿ ಸಾಕಷ್ಟು ಕಾಲ ಇದ್ದರು. ವಿಶಿಷ್ಟಾದ್ವೈತ ಸಿದ್ಧಾಂತವನ್ನು ಪ್ರತಿಪಾದಿಸಿದ ಇವರು ಹೊಯ್ಸಳ ವಿಷ್ಣುವರ್ಧನನನ್ನು ಶ್ರೀವೈಷ್ಣವಕ್ಕೆ ಮತಾಂತರಿಸುವಲ್ಲಿ ಯಶಸ್ವಿಯಾದರು.

ಅಲ್ಲದೆ ಬೇಲೂರು ದೇವಸ್ಥಾನ ಒಳಗೊಂಡಂತೆ ಅನೇಕ ಸುಂದರ ವೈಷ್ಣವ ದೇವಾಲಯಗಳು ಅವರ ಕಾಲದಲ್ಲಿ ನಿರ್ಮಾಣಗೊಂಡವು. ಹೀಗೆ ಕನ್ನಡನಾಡನ್ನು ಆಳಿದ ಗಂಗರು, ಹೊಯ್ಸಳರು, ವಿಜಯನಗರದ ಅರಸರು, ಮೈಸೂರಿನ ಒಡೆಯರು ಶ್ರೀವೈಷ್ಣವ ಅನುಯಾಯಿಗಳಾಗಿದ್ದರು.

ಚಾಮರಾಜನಗರ ತಾಲೂಕಿನ ಸ್ಪಷ್ಟ ರಾಜಕೀಯ ಇತಿಹಾಸ ಪ್ರಾರಂಭವಾಗುವುದು ಗಂಗರ ಕಾಲದಲ್ಲಿ. ಕ್ರಿ.ಶ. ೪ನೇ ಶತಮಾನದ ಮಧ್ಯಭಾಗದಿಂದ ಪ್ರಾರಂಭವಾದ ಗಂಗರ ಆಳ್ವಿಕೆ ೧೦ನೇ ಶತಮಾನದ ಕೊನೆವರೆಗೂ ಮುಂದುವರಿಯಿತು. ಇದರಿಂದಾಗಿ ಗಂಗರಿಗೆ ಮುಂಚಿತವಾಗಿ ದಕ್ಷಿಣ ಕರ್ನಾಟಕದಲ್ಲಿ ಅದರಲ್ಲೂ ಚಾಮರಾಜನಗರ ತಾಲೂಕಿನ ಪ್ರಾಂತ್ಯದಲ್ಲಿ ವೈದಿಕಧರ್ಮ ಮತ್ತು ಸಂಸ್ಕೃತಿ ಇತ್ತೆಂಬುದು ಸ್ಪಷ್ಟವಾಗುತ್ತದೆ.

ಈ ತಾಲೂಕಿನಲ್ಲಿ (ಅದ್ವೈತ) ಶಂಕರಾಚಾರ್ಯರು,(ವಿಶಿಷ್ಟಾದ್ವೈತ) ರಾಮಾನುಜಾಚಾರ್ಯರು, ಮತ್ತು (ದ್ವೈತ) ಮಧ್ವಾಚಾರ್ಯರು- ಈ ಮೂರು ಪಂಥದ ಅನುಯಾಯಿಗಳು ಪ್ರಧಾನವಾಗಿರುವುದನ್ನು ಕಾಣಬಹುದು. ಇಲ್ಲಿ ವೈಧಿಕಧರ್ಮ ೮ನೇ ಶತಮಾನದ ವೇಳೆಗೆ ಬೆಳಕಿಗೆ ಕಾಣಿಸಿಕೊಂಡಿತು. ಅಗ್ರಹಾರ ಸಂಸ್ಕೃತಿಯ ಬೆಳವಣಿಗೆಗೆ ಅಗತ್ಯವಾದ ಪರಿಸರವನ್ನೊದಗಿಸಿತು ಎಂಬುದಕ್ಕೆ ಇಲ್ಲಿನ ಶಾಸನಗಳು ಹಾಗೂ ದೇವಾಲಯಗಳು ಒಂದಿಷ್ಟು ಬೆಳಕನ್ನು ಚೆಲ್ಲುತ್ತವೆ. ಈ ಸಂಗತಿಗಳನ್ನು ಶಾಸನದಲ್ಲಿ ಉಲ್ಲೇಖಗೊಂಡಿರುವಂತೆ ಮುಂದೆ ವಿಶ್ಲೇಷಿಸಲಾಗಿದೆ. ಕ್ರಿ.ಶ. ೯೮೨ರಲ್ಲಿ ಮಲ್ಲಯ್ಯನು ಮಾಡಿಸಿದ ದೇಗುಲಕ್ಕೆ ಮಳೂರು ಸಾವಿರ ಬ್ರಾಹ್ಮಣರು ಭೂದಾನ ಮಾಡಿದ ಸಂಗತಿ ಪುಣಜನೂರು ಶಾಸನದಲ್ಲಿ ನಿರೂಪಿತವಾಗಿದೆ.[೧೦೦]

ಹೊಯ್ಸಳದೊರೆ ವಿಷ್ಣುವರ್ಧನನು ರಾಮಾನುಜರ ಪ್ರಭಾವಕ್ಕೆ ಒಳಗಾಗಿ ವಿಶಿಷ್ಟಾದ್ವೈತ ಮತವನ್ನು ಮಾನ್ಯಮಾಡಿ ಶ್ರೀ ವೈಷ್ಣವನಾದನು ಎಂಬುದು ಇತಿಹಾಸದ ಮೂಲಕ ತಿಳಿಯುತ್ತದೆ. ಈ ರಾಜವಂಶದ ಆಳ್ವಿಕೆಯಿಂದ ಮೈಸೂರು ಒಡೆಯರ ಕಾಲದವರೆಗಿನ ರಾಜವಂಶಗಳಿಂದ ವೈಷ್ಣವ ಧರ್ಮಕ್ಕೆ ಹೆಚ್ಚು ಪ್ರೋತ್ಸಾಹ ದೊರೆತು ಪ್ರವರ್ಧಮಾನಕ್ಕೆ ಬಂದಿತು ಹಾಗೂ ಈ ಅವಧಿಯಲ್ಲಿ ತಾಲೂಕನಲ್ಲಿ ಹಲವು ವೈಷ್ಣವ ದೇವಾಲಯಗಳು ನಿರ್ಮಾಣವಾದವು.

ಹರಳುಕೋಟೆಯ ಜನಾರ್ಧನ ದೇವಾಲಯವು ಕ್ರಿ.ಶ. ೧೧೬೭ರಲ್ಲಿ ಹೊಯ್ಸಳ ಒಂದನೆ ನರಸಿಂಹನ ಆಳ್ವಿಕೆಯಲ್ಲಿ ನಿರ್ಮಾಣ ಮಾಡಿದಂತೆ ಶಾಸನದಿಂದ ತಿಳಿದುಬರುತ್ತದೆ.[೧೦೧] ಕ್ರಿ.ಶ. ೧೨೧೬ರ ಶಾಸನವು ಎಚ್ಚಣ್ಣ ಐಕ್ಸ್ ಎಂಬುವನಿಗೆ ಮೇರೆಯ ದಣ್ಣಾಯಕ ಮತ್ತು ವಿಟ್ಟಲ ಎಂಬುವರು ೩೦ ಗದ್ಯಾಣಗಳನ್ನು ಕುಲಗಾಣದ ವಾಸುದೇವಾಲಯುದ ತಿರುನಡೈಮಾಳಿಗೈ(ಪ್ರದಕ್ಷಿಣಾಪಥ) ವನ್ನು ಕಟ್ಟಿಸಲು ದಾನ ನೀಡಿದ ವಿವರವನ್ನು ತಿಳಿಸುತ್ತದೆ.[೧೦೨]

ಕ್ರಿ.ಶ. ೧೨೬೨ರ ತಮಿಳು ಶಾಸನವೊಂದು ವಾಳೈಯುಮ್ಮುಗಿಯಾರೆಡುತ್ತಗ್ಗೈ ಅಳಗಿಯಾನ್ ಎಂಬ ದೇವಾಲಯದ ಶ್ರೀ ವೈಷ್ಣವರು ಗ್ರಾಮವೊಂದನ್ನು ದತ್ತಿಕೊಟ್ಟು ವಿಷಯವನ್ನು ವಿವರಿಸುತ್ತದೆ.[೧೦೩] ಹಳೇ ಆಲೂರಿನ ಶಾಸನವು ಕ್ರಿ.ಶ. ೧೯೪೪ರ ಕಾಲಮಾನದಾಗಿದ್ದು, ಅಲ್ಲಿನ ಚೆನ್ನಕೇಶವ ದೇವರಿಗೆ ಎರಡು ಗ್ರಾಮಗಳ ಆದಾಯವನ್ನು ಬಿಟ್ಟ ವಿಚಾರ ಪ್ರಸ್ತಾಪವಾಗಿದೆ.[೧೦೪]

ಹರದನಹಳ್ಳಿಯ ಶಾಸನವು ವೇಣುಗೋಪಾಲಸ್ವಾಮಿ ದೇವಾಲಯಕ್ಕೆ ತಗಡೂರು ಮಲ್ಲರಾಜ ಮಕ್ಕಳು ನಂಜರಾಜೈಯ್ಯನು ದೇವಾಪುತ್ರಿ ಪೂಜೆಗೆ ವಪ್ಪೊತ್ತಿನ ನೈವೇದ್ಯಕ್ಕೆ ಹೊಲ ಮತ್ತು ಗದ್ದೆಗಳನ್ನು ದಾನಬಿಟ್ಟ ವಿಚಾರವನ್ನು ಪ್ರಸ್ತಾಪಿಸುತ್ತದೆ.[೧೦೫]

ಕ್ರಿ.ಶ.೧೩೦೩ರ ಕೊತ್ತಲವಾಡಿಯ ಶಾಸನದಿಂದ ಹರದನಹಳ್ಳಿಯವನೇ ಆದ ಮಾದವ ದಣ್ಣಾಯಕ ವರದರಾಜ ಅಲ್ಲಾಳನಾಥ ದೇವರನ್ನು ಪ್ರತಿಷ್ಠಾಪಿಸಿ ದೇವರಿಗೆ ದತ್ತಿ ನೀಡಿದ ವಿಷಯ ತಿಳಿದುಬರುತ್ತದೆ. ಅಲ್ಲದೆ ಈತ ೧೩೧೬ರಲ್ಲಿ ವಿದ್ಯಾನಿಧಿ ಪ್ರಸನ್ನ ಕೇಶವಪುರ ಎಂಬ ಅಗ್ರಹಾರವನ್ನು ಸ್ಥಾಪಿಸಿದ ವಿಚಾರವು ತಿಳೀದುಬರುತ್ತದೆ. ಇದರಿಂದ ಈ ತಾಲೂಕಿನಲ್ಲಿ ವೈದಿಕ ಮತ್ತು ವೀರಶೈವ ಧರ್ಮಗಳೆರಡು ಜೊತೆ ಜೊತೆಗೆ ವ್ಯಾಪಕವಾಗಿ ಹರಡಿದ್ದಿರಬೇಕೆಂದು ಊಹಿಸಬಹುದು.[೧೦೬]

ಕ್ರಿ.ಶ. ೧೪೫೦ರ ಶಾಸನವು ಉಮ್ಮತ್ತೂರಿನ ರಂಗನಾಥ ದೇವಾಲಯದ ಪೂಜೆಗೆ ಮಕರ ಸಂಕ್ರಾಂತಿಯ ಪುಣ್ಯಕಾಲದಂದು ಗಂಗನಾಯಕರ ಕುಮಾರ ದಳವಾಯಿ ರಂಗನಾಯಕನು ದಾನ ನೀಡಿದ ಪ್ರಸ್ತಾಪವಿದೆ ಹಾಗೂ ಅದೇ ಶಾಸನದಲ್ಲಿ ಕಾಶೀಕ್ಷೇತ್ರಕ್ಕೆ ಸಮಾನವಾದ ತಿರುಮಕೂಡಲಿಗೆ ದಕ್ಷಿಣಭಾಗದ ಉಮ್ಮತ್ತೂರು ಗ್ರಾಮದ ರಂಗನಾಥದೇವರ ಸೇವೆಗೆ ಭೂಮಿದಾನ ಮಾಡಿದ ಪ್ರಸ್ತಾಪವಿದೆ.[೧೦೭]

ಕ್ರಿ.ಶ. ೧೬೭೭ರ ವೆಂಕಟಯ್ಯನಛತ್ರದ ಶಾಸನದಿಂದ ಹರದನಹಳ್ಳಿಯ ಛತ್ರ ನಿರ್ವಹಣೆಗಾಗಿ ಬ್ರಾಹ್ಮಣರಿಗೆ, ಮೈಸೂರಿನ ದೇವರಾಜ ಒಡೆಯರು ಬೊಮ್ಮನಹಳ್ಳಿ ಗ್ರಾಮವನ್ನು ದಾನವಿತ್ತ ಸಂಗತಿ ತಿಳಿದುಬರುತ್ತದೆ.[೧೦೮]

ಹಾಗೆಯೇ ''ಕಾಶಿಯಲ್ಲಿ ವಿಶ್ವೇಶ್ವರ ಮೊದಲಾದ ದೇವತೆಗಳಿಗೆ ಅಭಿಷೇಕ ಪೂಜೆ ಸಹಸ್ರನಾಮ ದೀಪಾರಾಧನೆ ನೈವೇದ್ಯ ವಿಶೇಷ ಪರ್ವಾಚರಣೆ ಕಾರ್ತಿಕ ಮಾಘ ವೈಶಾಖ ಈ ಮಾಸತ್ರಯದಲ್ಲಿ ಸ್ನಾನ ದಾನ ನಿತ್ಯದಲ್ಲಿ ನೂರು ಬ್ರಾಹ್ಮಣರಿಗೆ ಮೃಷ್ಟಾನ್ನ, ಛತ್ರ ಕಾಶಿವಾಳಿಗಳಿಗೆ ಗಂಗೆ ವರ್ಷಾಶನ ಪ್ರಯಾಗೆಯಲ್ಲಿ ಮಾಘಸ್ನಾನ ಮುಂತಾದ ಹಲವು ಸೇವೆಗಳಿಗೆ ಕಂಠೀರವ ನರಸರಾಜ ಒಡೆಯರು ಹೊಂಗನೂರನ್ನು ದಾನ ನೀಡಿದ ವಿಚಾರ ಶಾಸನದಿಂದ ತಿಳಿದುಬರುತ್ತದೆ.[೧೦೯]

ಉಲ್ಲೇಖಿಸಿರುವ ಶಾಸನಗಳು ಈ ತಾಲೂಕಿನಲ್ಲಿ ವೈದಿಕ ಧರ್ಮಕ್ಕೆ ರಾಜಮನೆತನಗಳು ನೀಡಿದ ಪ್ರೋತ್ಸಾಹದ ಬಗ್ಗೆ ಮತ್ತು ಈ ಧರ್ಮವು ೧೪ನೇ ಶತಮಾನದ ವೇಳೆಗೆ ಈ ತಾಲೂಕಿನಲ್ಲಿ ಪ್ರವರ್ಧಮಾನದಲ್ಲಿತ್ತು ಎಂಬುದಕ್ಕೆ ನಿದರ್ಶನಗಳಾಗಿವೆ.

ಪ್ರಸ್ತುವ ವೈದಿಕರು ಪರಂಪರಾಗತ ವೈದಿಕ ಮೌಲ್ಯಗಳಿಗೆ ಹೆಚ್ಚು ಒತ್ತು ಕೊಟ್ಟು ಬಾಳುತ್ತಿರುವರಾದರೂ ಸ್ಥಳೀಯ ಜನಪದ ಧರ್ಮವನ್ನು ನಿರ್ಲಕ್ಷಿಸಿ ಬದುಕುವುದು ಇವರಿಗೆ ಸಾಧ್ಯವಾಗಲಿಲ್ಲ. ತಮ್ಮ ದೈನಂದಿನ ಜೀವನಾವಶ್ಯಕ ವಸ್ತುಗಳಿಗೆ ಸಂಪೂರ್ಣವಾಗಿ ಜನಪದರನ್ನೇ ಅವಲಂಬಿಸಬೇಕಾಗಿರುವುದರಿಂದ ವೈದಿಕ ಸಂಪ್ರದಾಯಗಳೊಂದಿಗೆ ಸೌಹಾರ್ದತೆಯನ್ನು ಬೆಳೆಸಿಕೊಂಡು ಹೋಗುವುದು ಅನಿವಾರ್ಯವಾಗಿದೆ. ಇತ್ತೀಚೆಗೆ ಆಧುನಿಕ ಶಿಕ್ಷಣವನ್ನು ಪಡೆದ ಇವರು ಸಂಪ್ರದಾಯಸ್ಥರಿಗಿಂತ ಭಿನ್ನವಾಗಿರುವುದು ವಿಶೇಷ. ಹಿಂದೆ ಈ ತಾಲೂಕಿನಲ್ಲಿ ಸಾಕಷ್ಟು ವೈದಿಕ ಕುಟುಂಬಗಳಿದ್ದು ಈಗ ಉದ್ಯೋಗಕ್ಕಾಗಿ ಬೇರೆ ಬೇರೆ ಕಡೆ ಹೊರಟು ಹೋಗಿರುವುದರಿಂದ, ಇಂದು ಅವರ ಸಂಖ್ಯೆ ದಿನೇ ದಿನೇ ಕಡಿಮೆಯಾಗುತ್ತಿದೆ. ಹಾಗಾಗಿ ಉಳಿದ ವೈದಿಕರಿಗೂ ಹುಟ್ಟು, ಮದುವೆ, ಸಾವು ಮೊದಲಾದ ಕಾರ್ಯಗಳಿಗೆ ಹೊತ್ತಿಗೆ ನೋಡುವ, ಜೋತಿಷ್ಯ ಹೇಳುವ ಮುಂತಾದ ಪ್ರಮುಖ ಸಂದರ್ಭಗಳ ಜೊತೆಗೆ ವ್ಯಾವಹಾರಿಕ ಕಾರ್ಯಕಲಾಪ ಇತರೆ ವಿಚಾರಗಳಿಗೆ ಸ್ಪಂದಿಸುತ್ತ ಬರುವುದು ಅವರಿಗೆ ಅನಿವಾರ್ಯವಾಗಿದೆ. ತಾಲೂಕಿನ ಎಲ್ಲಾ ಪ್ರಮುಖ ದೇವಾಲಯಗಳಲ್ಲೂ ಇವರದ್ದೇ ಪ್ರಮುಖ ಪಾತ್ರ. ಇತ್ತೀಚೆಗೆ ವ್ಯವಸಾಯದಿಂದ ಹಿಡಿದು ಎಲ್ಲಾ ರೀತಿಯ ಔದ್ಯೋಗಿಕ ರಂಗಗಳಲ್ಲೂ ಇವರ ಅಸ್ತಿತ್ವವನ್ನು ಕಾಣಬಹುದು.

### ಇಸ್ಲಾಂ ಧರ್ಮ

ಪ್ರಪಂಚದ ಪ್ರಮುಖ ಧರ್ಮಗಳಲ್ಲಿ ಇದೂ ಒಂದು. ಇದು ಉಗಮವಾದದ್ದು ಅರಬ್ ಸ್ಥಾನದಲ್ಲಿ. ಈ ಧರ್ಮದ ಸ್ಥಾಪಕ ಮಹಮದ್ ಪೈಗಂಬರ್. ಅಲ್ಲಾವುದ್ದೀನ್ ಖಿಲ್ಜಿಯ ಕಾಲದಲ್ಲಿ ಈ ಧರ್ಮ ಹಿಂದೂಸ್ಥಾನಕ್ಕೆ ಕಾಲಿಟ್ಟಿತು.[೧೦೦] ೧೪ನೆ ಶತಮಾನದ ವೇಳೆಗೆ ಪ್ರಬಲವಾಗಿ ಬೆಳೆಯಿತು. ೧೭ನೇ ಶತಮಾನದ ವೇಳೆಗೆ ಮುಸ್ಲಿಂ ಧರ್ಮ ಮತ್ತು ಸಂಸ್ಕೃತಿ ಭಿನ್ನವಾಗಿದ್ದರೂ, ಅವರು ರಾಜಕೀಯ, ಆರ್ಥಿಕ, ಔದ್ಯೋಗಿಕ ವಿಷಯಗಳಲ್ಲಿ ಭಾರತೀಯರೊಡನೆ ಐಕ್ಯತೆವುಳ್ಳವರಾದರು. ಇವರು ಇದೇ ದೇಶದವರಾಗಿಯೂ ಉಳಿದುಕೊಂಡರು.

ಕರ್ನಾಟಕದಲ್ಲಿ ವಿಜಯನಗರ ಸಾಮ್ರಾಜ್ಯದ ಪ್ರತಿಸ್ಪರ್ಧಿಯಾಗಿ ಸ್ಥಾಪನೆಯಾದ ಬಹುಮನಿ ಸಾಮ್ರಾಜ್ಯ ಅವಧಿಯಲ್ಲಿ ಇಸ್ಲಾಂ ಧರ್ಮ ಪ್ರಬಲವಾಗಿ ಬೆಳೆಯಿತು. ಆರಂಭದಲ್ಲಿ ಉತ್ತರ ಕರ್ನಾಟಕದಲ್ಲಿ ಅತೀವ ಮನ್ನಣೆಗೆ ಪಾತ್ರವಾಗಿದ್ದ ಈ ಧರ್ಮ ಹೈದರ್ ಮತ್ತು ಟಿಪ್ಪುವಿನ ಕಾಲದಲ್ಲಿ ದಕ್ಷಿಣ ಕರ್ನಾಟಕಕ್ಕೆ ಕಾಲಿಟ್ಟಿತು. ಮೈಸೂರು ಅರಸರ ಕಾಲದಲ್ಲಿ ರಾಜಧಾನಿಯ ಮಹತ್ವವನ್ನು ಪಡೆದುಕೊಂಡ ಮೈಸೂರು

ಮತ್ತು ಶ್ರೀರಂಗಪಟ್ಟಣಗಳು ಮುಸ್ಲಿಂರ ಪ್ರಭಾವಕ್ಕೆ ಒಳಗಾದುದುಂಟು. ಆಗ ಹೆಚ್ಚು ಸಂಖ್ಯೆಯಲ್ಲಿ ಇಲ್ಲಿಗೆ ಮುಸ್ಲಿಂರು ಆಗಮಿಸಿದರು. ಎಲ್ಲ ಕ್ಷೇತ್ರಗಳಲ್ಲೂ ಪರಿಣಿತರಾದ ಇವರು ಸೈನ್ಯ, ಆನೆ, ಕುದುರೆ ಪೋಷಣೆ ಲಾಯಗಳ ಕಾಯುವಿಕೆ, ಬಂಡಿ ನಿರ್ಮಾಣ, ಕಬ್ಬಿಣದ ಕೈಗಾರಿಕೆ ಇತ್ಯಾದಿ ಕಸುಬುಗಳಲ್ಲಿ ನಿರತರಾದರು.

ಚಾಮರಾಜನಗರ ತಾಲೂಕಿನಲ್ಲಿ ಹೈದರಾಲಿ ಮತ್ತು ಆತನ ಮಗ ಟಿಪ್ಪುವಿನ ಕಾಲದಲ್ಲಿ ಮುಸ್ಲಿಂ ಧರ್ಮದ ಪ್ರಭಾವವನ್ನು ಗುರುತಿಸಬಹುದು. ಇಸ್ಲಾಂ ಮತಾನುಯಾಯಿಯಾದ ಟಿಪ್ಪುಸುಲ್ತಾನನು ತಾಲೂಕಿನಲ್ಲಿ(ಕ್ರಿ.ಶ. ೧೭೮೭ರಲ್ಲಿ) ಆಳ್ವಿಕೆ ನಡೆಸಿದ್ದಾನೆ. ಹಿಂದೂ ಜನಾಂಗ ಮತ್ತು ದೇವಾಲಯಗಳ ಬಗೆಗೆ ಉದಾರವಾಗಿ ನಡೆದುಕೊಂಡ ಈತ, ಆ ಕಾಲಕ್ಕಾಗಲೇ ಶ್ರೀಮಂತವಾಗಿದ್ದ ತಾಲೂಕಿನ ಹರದನಹಳ್ಳಿಯ ದಿವ್ಯಲಿಂಗೇಶ್ವರ ದೇವಾಲಯದ ಸಂಪತ್ತನ್ನು ತನ್ನ ಶ್ರೀರಂಗಪಟ್ಟಣದ ಖಜಾನೆಗೆ ಸೇರಿಸಿಕೊಂಡನೆಂದು ತಿಳಿದುಬರುತ್ತದೆ.[೧೧೧]

ಮೈಸೂರು ನಗರವನ್ನು ಬಿಟ್ಟರೆ, ಜಿಲ್ಲೆಯ ಯಾವ ಪಟ್ಟಣದಲ್ಲಿಯೂ ಚಾಮರಾಜನಗರದಲ್ಲಿ ಇರುವಷ್ಟು ಸಂಖ್ಯೆಯ ಮುಸ್ಲಿಮರು ಇಲ್ಲ. ಗ್ರಾಮಾಂತರ ಪ್ರದೇಶವನ್ನು ಬಿಟ್ಟು ಪಟ್ಟಣವೊಂದರಲ್ಲೇ ಸುಮಾರು ಒಂಭತ್ತು ಮಸೀದಿಗಳಿವೆ. ಮಸ್ಜಿದೆ ಅಜಂ, ಮದೀನಾ ಮಸ್ಜಿದೆ, ಮಸ್ಜಿದೆ ಅಲಾ, ಮಸ್ಜಿದೆ ಜೊಹರಾ ಇವು ಪ್ರಮುಖವಾದವು.[೧೧೨] ಚಿಕ್ಕ ಅಂಗಡಿ ಬೀದಿಯಲ್ಲಿರುವ ಜಾಮೀಯಾ ಮಸೀದಿಯೇ ಈ ಊರಿನ ಪುರಾತನವಾದ ಮಸೀದಿ. ಇತ್ತೀಚೆಗೆ ನವೀಕರಣಗೊಂಡಿರುವ ಮದೀನಾ ಮಸ್ಜಿದ್, ಈ ಊರಿನ ತುಂಬಾ ಭವ್ಯವಾದ ಹಾಗೂ ಆಧುನಿಕವಾದ ಮಸೀದಿಯಾಗಿದೆ. ನಗರ ಪ್ರದೇಶದಲ್ಲಿ ಮಾತ್ರವಲ್ಲದೆ ನಾಗವಳ್ಳಿ, ಚಂದಕವಾಡಿ, ಹೆಬ್ಬಸೂರು, ಕಾಗಲವಾಡಿ, ಹೊಂಗನೂರು, ಇರಸವಾಡಿ, ಹರದನಹಳ್ಳಿ, ಅಮಚವಾಡಿ, ಕಿಂಗಸೂರು ಗ್ರಾಮಗಳಲ್ಲಿ ಮಸೀದಿಗಳಿವೆ. ರಂಜಾನ್, ಈದ್-ಮಿಲಾದ್, ಬಕ್ರೀದ್ ಹಬ್ಬಗಳಲ್ಲಿ ಸ್ಥಳೀಯ ಹಾಗೂ ಹೊರಗಿನಿಂದ ಧರ್ಮಚಿಂತಕರನ್ನು ಕರೆಸಿ ಮುಸ್ಲಿಂ ಬಾಂಧವರಿಗೆ ಮಾರ್ಗದರ್ಶನ ಮಾಡಿಸಲಾಗುತ್ತದೆ.[೧೧೩]

ಈ ಧರ್ಮದ ಬಹುಪಾಲು ಜನ ವ್ಯಾಪಾರವನ್ನೇ ತಮ್ಮ ವೃತ್ತಿಯನ್ನಾಗಿ ಅವಲಂಬಿಸಿರುತ್ತಾರೆ. ಹಿಂದೆಲ್ಲಾ ಹೆಚ್ಚಾಗಿ ರೇಷ್ಮೆನೂಲು ತೆಗೆಯುವ ಉದ್ಯಮದಲ್ಲಿದ್ದರು. ಈಗ ಗ್ರಾನೈಟ್ ಮುಂತಾದ ಬೇರೆ ಬೇರೆ ಉದ್ಯಮಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ.

ಇಸ್ಲಾಂ ಧರ್ಮ ಭಾರತಕ್ಕೆ ಹೊರಗಿನಿಂದ ಬಂದಿದ್ದರು. ಇಲ್ಲಿನ ಅನುಯಾಯಿಗಳು ಈ ನೆಲದಲ್ಲಿ ಅನೇಕ ತಲೆಮಾರುಗಳಿಂದ ಬೆಳೆದು ಇಲ್ಲಿನ ಸಂಸ್ಕೃತಿಯ ಸಾರ ಪಡೆದವರಾದ್ದರಿಂದ, ಹಿಂದೂ ಧರ್ಮದ

ಸಂಸ್ಕೃತಿಯ ಲಕ್ಷಣಗಳನ್ನು ಅವರಲ್ಲಿ ಕಾಣಬಹುದು. ತಮ್ಮ ಧರ್ಮದ ಪ್ರಮುಖ ಹಬ್ಬಗಳಾದ ರಂಜಾನ್, ಮೊಹರಂ, ಈದ್ ಮಿಲಾದ್ ಹಬ್ಬಗಳನ್ನು ವಿಜೃಂಭಣೆಯಿಂದ ಆಚರಿಸುತ್ತಾರೆ. ವಿಗ್ರಹಾರಾಧನೆಯನ್ನು ಈ ಧರ್ಮ ತೀವ್ರವಾಗಿ ಖಂಡಿಸುತ್ತದೆ. ಇಲ್ಲಿ ಮುಸ್ಲಿಂ ಧರ್ಮೀಯರು ತಮ್ಮ ಧರ್ಮದ ಕಟ್ಟುಪಾಡುಗಳಿಗೆ ಹೆಚ್ಚು ಬೆಲೆ ಕೊಡುವುದರ ಜೊತೆಗೆ ಉಳಿದ ಧರ್ಮದವರೊಂದಿಗೆ ಮಧುರ ಬಾಂಧವ್ಯ ಹೊಂದಿದ್ದು, ಕೋಮು ಸಾಮರಸ್ಯಕ್ಕೆ ಎಡೆಯಾಗದಂತೆ ನಡೆದುಕೊಳ್ಳುತ್ತಿದ್ದಾರೆ. ಧರ್ಮದ ದೃಷ್ಟಿಯಿಂದ ಅಲ್ಪಸಂಖ್ಯಾತರಾದರೂ, ಎಲ್ಲ ಧರ್ಮೀಯರೊಂದಿಗೆ ಬೆರೆತು ಬದುಕುವ ಹೃದಯ ಸಂಪನ್ನತೆ, ಧರ್ಮ ಸಮನ್ವಯತೆಗಳೂ ನಿಜಕ್ಕೂ ಆದರ್ಶಪ್ರಾಯವಾದವು.

### ಕ್ರೈಸ್ತ ಧರ್ಮ

ಕೇವಲ ಬಾಹ್ಯಚಾರಗಳೇ ಸತ್ಯವೆಂದು ತಿಳಿದು ಅಂಧಕಾರದಲ್ಲಿ ತಪ್ಪು ಹೆಜ್ಜೆಯಿಡುತ್ತಿದ್ದ ಯಹೂದ್ಯರನ್ನು ಉದ್ಧರಿಸಲೆಂದು ಭಗವಾನ್ ಏಸುಕ್ರಿಸ್ತನು ಹುಟ್ಟು ಹಾಕಿದ ಧರ್ಮವೇ ಕ್ರೈಸ್ತಧರ್ಮ. ಭಾರತದಲ್ಲಿ ಕ್ರಿ.ಶ.ಒಂದನೆಯ ಶತಮಾನದಲ್ಲಿಯೇ ಕ್ರೈಸ್ತ ಧರ್ಮ ಸೇಂಟ್ ಥಾಮಸ್‌ನ ಮೂಲಕ ಬಂದು ಮಲಬಾರ್ ಮತ್ತು ವಾಯುವ್ಯಗಳಲ್ಲಿ ಹರಡಿತ್ತೆಂದು, ಕ್ರಿ.ಶ.೫ನೇ ಶತಮಾನದ ವೇಳೆಗೆ ಕೊಚ್ಚಿನ್ ಪ್ರದೇಶದಲ್ಲಿ ಪ್ರಾಮುಖ್ಯತೆ ಪಡೆಯಿತ್ತೆಂದು ಐತಿಹ್ಯಗಳಿವೆ. ಆದರೆ ಈ ಬಗ್ಗೆ ನಂಬಲರ್ಹ ಆಧಾರಗಳು ದೊರೆಯುವುದಿಲ್ಲ. ಆದರೆ ಕ್ರಿ.ಶ. ೧೫ನೇ ಶತಮಾನದ ಆದಿಯಲ್ಲಿ ಪೋರ್ಚುಗೀಸರ ಆಗಮನದೊಡನೆ ಭಾರತದಲ್ಲಿ ಕ್ರೈಸ್ತಧರ್ಮ ಆರಂಭವಾಯಿತ್ತೆನ್ನಬಹುದು.

ಈ ಧರ್ಮ ಕರ್ನಾಟಕವನ್ನು ಪ್ರವೇಶಿಸಿ ಹಲವು ಶತಮಾನಗಳೇ ಕಳೆದಿದ್ದರು, ನಿರ್ದಿಷ್ಟವಾಗಿ ಎಂದು ಪ್ರವೇಶಿಸಿತು? ಎಂದು ಖಚಿತವಾಗಿ ಹೇಳಲಾಗದು. ಇಲ್ಲಿ ಕ್ರೈಸ್ತಧರ್ಮದ ಸ್ಪಷ್ಟಗುರುತು ಸಿಗುವುದು ಪೋರ್ಚುಗೀಸರು ಭಾರತಕ್ಕೆ ಬಂದಾಗಿನಿಂದ, ಭಾರತದಲ್ಲಿ ಪೋರ್ಚುಗೀಶರ ರಾಜ್ಯಕ್ಕೆ ಭದ್ರವಾದ ತಳಹದಿ ಹಾಕಿದವನೆಂದರೆ ಅಲ್ಫೋನ್ಸ್ ಡಿ ಅಬ್ಬುಕರ್ಕ್. ಈತ ೧೫೧೦ರಲ್ಲಿ ಗೋವೆಯನ್ನು ತನ್ನ ವಶಕ್ಕೆ ತೆಗೆದುಕೊಂಡನು. ಇದರ ಪರಿಣಾಮವಾಗಿ ಮೈಸೂರು ಪ್ರಾಂತ್ಯದಲ್ಲಿ ಕ್ರೈಸ್ತಮತ ಚಟುವಟಿಕೆಗಳು ಆರಂಭವಾದವು.

ಕ್ರಿ.ಶ.೧೪೪೫ರಲ್ಲಿ ವಿಜಯನಗರ ಕಾಲದಲ್ಲಿ ಕ್ರೈಸ್ತ ದಿವಾನನೊಬ್ಬ ಇದ್ದನೆಂದು ಈತನ ಹೆಸರು ನಿಮ್ಮೈಫೆರಿಖರ್ ಎಂದು ಕನ್ನಡ ವಿಷಯ ವಿಶ್ವಕೋಶದಲ್ಲಿ ಉಲ್ಲೇಖಿಸಲಾಗಿದೆ.[೧೧೪] ಆದರೆ ಈ ಬಗ್ಗೆ ಹೆಚ್ಚಿನ ವಿವರಗಳು ಲಭ್ಯವಾಗುವುದಿಲ್ಲ.

ಮೈಸೂರಿನ ಪ್ರಭುಗಳಾಗಿದ್ದ ರಣಧೀರ ಕಂಠೀರವನರಸರಾಜ ಒಡೆಯರನು ಜೋಯಿಸರನ್ನು ಸಂದರ್ಶಿಸಿ ಅಚ್ಚಗನ್ನಡದಲ್ಲಿ ಮಾತನಾಡಿಸಿದಾಗ ರಾಜ ಒಡೆಯರು ಬೆರಗಾಗಿ ಮತ ಪ್ರಚಾರಕ್ಕೆ ಅನುಮತಿ ನೀಡಿದ್ದರೆಂಬುದಾಗಿ ತಿಳಿದುಬರುತ್ತದೆ. ಹೀಗೆ ಕ್ರೈಸ್ತಧರ್ಮ ಮೈಸೂರು ಪ್ರಾಂತ್ಯದಲ್ಲಿ ಬೆಳೆಯುತ್ತಾ ಹೋಗಿ

ಕ್ರಿ.ಶ. ೧೬೬೪ರ ಹೊತ್ತಿಗೆ ಈ ಭಾಗದಲ್ಲಿ ೧೧ ಚರ್ಚ್‌ಗಳು ತಲೆ ಎತ್ತಿದ್ದವು. ಇಂದು ಮೈಸೂರು ಜಿಲ್ಲೆಯ ಹೆಗ್ಗಡದೇವನಕೋಟೆ, ಹುಣಸೂರು, ನಾಗನಹಳ್ಳಿ, ಚಾಮರಾಜನಗರ ಜಿಲ್ಲೆ ಕೊಳ್ಳೇಗಾಲ, ಮಾರ್ಟಳ್ಳಿ, ಪಿ.ಜಿ.ಪಾಳ್ಯಗಳಲ್ಲಿ ಅಪಾರ ಸಂಖ್ಯೆಯಲ್ಲಿ ಕ್ರೈಸ್ತರಿದ್ದಾರೆ.

ಚಾಮರಾಜನಗರ ತಾಲೂಕಿಗೆ ಕ್ರೈಸ್ತಧರ್ಮದ ಆಗಮನ, ಈ ಶತಮಾನದ ಆದಿಭಾಗದಲ್ಲಾದ ಬಗ್ಗೆ ದಾಖಲೆಗಳಿವೆ. ೧೮೮೮ರಲ್ಲಿ ಕ್ರೈಸ್ತಧರ್ಮದ ಸಮಾಧಿ ಸ್ಥಳಕ್ಕಾಗಿ ಇಲ್ಲಿ ಗುಂಡ್ಲುಪೇಟೆ ರಸ್ತೆಯ ಉಕ್ಕಡದಬಳ್ಳಿ ಒಂದು ಎಕರೆ ಭೂಮಿಯನ್ನು ಸರ್ಕಾರ ಕೊಟ್ಟಿರುವ ಬಗ್ಗೆ ಕಂದಾಯ ಇಲಾಖೆ ದಾಖಲೆಗಳಿಂದ ತಿಳಿದುಬರುತ್ತದೆ.[೧೧೫]

ಚಾಮರಾಜನಗರ ಪ್ರಾಂತ್ಯದಲ್ಲಿ ಮೊದಲಿಗೆ ಧರ್ಮಪ್ರಸಾರ ಮಾಡಿದವರು ಪ್ರಾಟೆಸ್ಟೆಂಟರು. ೧೯೦೮ರಲ್ಲಿ ಇಲ್ಲಿನ ಮೂರು ಕುಟುಂಬಗಳು ಮೊದಲಿಗೆ ಪ್ರಾಟೆಸ್ಟೆಂಟ್ ಧರ್ಮಕ್ಕೆ ಮತಾಂತರಗೊಂಡವು. ಪಟ್ಟಣದ ವ್ಯಾಪ್ತಿಯಲ್ಲಿ ಸಿಂಹಳದಿಂದ ೧೯೨೦ರಲ್ಲಿ ಬಂದು ನೆಲೆಸಿದ ಜಾನ್ ಕಂಗಾಣಯ್ಯ ಎಂಬುವರ ಕುಟುಂಬವೇ ಮೊದಲ ಪ್ರಾಟೆಸ್ಟೆಂಟ್ ಕುಟುಂಬ. ಇವರ ಮೊಮ್ಮಗ ಪಾಡ್ರಾಕ್ ಎಂಬುವರು ಕ್ರೈಸ್ತಧರ್ಮದ ಕುಟುಂಬಗಳ ಶಿಕ್ಷಣದ ಉನ್ನತಿಗಾಗಿ ಶ್ರಮಿಸಿದವರಲ್ಲಿ ಒಬ್ಬರು. ಇತ್ತೀಚೆಗೆ ನಿವೃತ್ತರಾಗುವವರೆಗೂ ಇವರು ಕೆಸ್ತೂರು, ಮಾದಾಪುರ ಗ್ರಾಮಗಳ ಶಾಲೆಗಳಲ್ಲಿ ಶಿಕ್ಷಕರಾಗಿ ದುಡಿದರು.

ಪಶ್ಚಿಮ ಜರ್ಮನಿಯಿಂದ ೧೯೨೯ರಲ್ಲಿ ರೋಮುಲ್ಕಸ್ ಮೋಲ್ ಎಂಬ ಮಿಷನರಿ ತಾಳವಾಡಿ ಫಿರ್ಕಾದ ದೊಡ್ಡಗಾಜನೂರಿನ ಬಳಿಯ ಗದ್ದೆಯ ಸಾಲಿನಲ್ಲಿ ಬಂದು ನೆಲೆಸಿದರು. ಫ್ರಾನ್ಸಿಸ್ಕನ್ ಸಭೆಗೆ ಸೇರಿದ ಇವರು ಆ ಭಾಗದ ನಿಮ್ನ ವರ್ಗದವರ ಮಧ್ಯೆ ಕೆಲಸ ಮಾಡಿದರು. ಅನೇಕ ಮಕ್ಕಳಿಗೆ ವಿದ್ಯಾಭ್ಯಾಸ ಕೊಡಿಸಲು ಮುಂದಾದರು. ಇವರ ಕೀರ್ತಿ ಪಕ್ಕದ ಚಾಮರಾಜನಗರ ತಾಲೂಕಿಗೂ ಹರಡಿತು. ಇವರು ಬಿತ್ತಿದ ಬೀಜವೇ ೧೯೩೮ರಲ್ಲಿ ನಾಗವಳ್ಳಿಯಲ್ಲಿ ತಾಲೂಕಿನ ಮೊಟ್ಟಮೊದಲ ಚರ್ಚ್ ನಿರ್ಮಾಣಕ್ಕೆ ನಾಂದಿಯಾಯಿತು.[೧೧೬] ಈ ಚರ್ಚ್‌ಗೆ ದಕ್ಷಿಣ ಕನ್ನಡದಿಂದ ಬಂದ ಜೋಸೆಫ್ ಡಿ ಸೋಜಾ ಎಂಬುದರು ಮೊದಲ ಪಾದ್ರಿಯಾದರು. ಹಾಗೆಯೇ ಚಾಮರಾಜನಗರದ ಪಟ್ಟದಲ್ಲಿರುವ ಸೆಂಟ್ ಪಾಲ್ಸ್ ಚರ್ಚ್‌ನ್ನು ೧೯೬೬ರಲ್ಲಿ ಕಟ್ಟಲಾಯಿತು. ಇತ್ತೀಚೆಗೆ ಈ ಚರ್ಚ್ ಬೆಳ್ಳಿ ಹಬ್ಬ ಆಚರಿಸಿಕೊಂಡಿತು.

ತಾಲೂಕಿನ ಬೋಗಾಪುರ, ಮಾದಾಪುರ, ಕೆಸ್ತೂರು, ಕಿರಗಸೂರು, ಮೂಡ್ಲಾಕೂಡು, ಕೆರಹಳ್ಳಿ, ಹೆಗ್ಗವಾಡಿ, ನಾಗವಳ್ಳಿ, ಹಂಡರಕಳ್ಳಿ, ದೊಡ್ಡರಾಯಪೇಟೆ, ಉಗಣೇದಹುಂಡಿ, ದೇಸವಳ್ಳಿ, ಸಂತೇಮರಳ್ಳಿ, ಎಂ.ಹೊಸೂರು, ಮಂಗಲ ಈ ಗ್ರಾಮಗಳಲ್ಲಿ ಸಿ.ಎಸ್.ಐ.ಪಂಥದ ಕುಟುಂಬಗಳಿವೆ. ಅನೇಕ ಕಡೆ ಚರ್ಚ್‌ಗಳನ್ನು ಕಟ್ಟಲಾಗಿದೆ. ಪ್ರಾಟೆಸ್ಟೆಂಟರ ಒಟ್ಟು ಜನಸಂಖ್ಯೆ ೩ ರಿಂದ ೪ ಸಾವಿರದಷ್ಟಾಗಬಹುದು ಎಂದು ಒಂದು ಅಂದಾಜು. ಮಂಗಲ ಗ್ರಾಮದಲ್ಲಿ ಮಿಸ್ ಹೆಪ್ಸ್ ಎಂಬ ವಿದೇಶಿಮಹಿಳೆ ಸ್ಥಾಪಿಸಿದ ಆಸ್ಪತ್ರೆ

ಇಂದಿಗೂ ಕಾರ್ಯನಿರ್ವಹಿಸುತ್ತಿದೆ. ಚಾಮರಾಜನಗರದಲ್ಲಿ ರೆವರೆಂಡ್ ಹನ್ಸ್ ಇತ್ತೀಚೆಗೆ ಒಂದು ಸಿ.ಎಸ್ .ಐ.ಶಾಲೆ ಸ್ಥಾಪಿಸಿದರು. ವಿದ್ಯಾಕ್ಷೇತ್ರದಲ್ಲಿ ಈ ಶಾಲೆಯದು ಗಣನೀಯ ಪಾತ್ರ.[೧೧೬]

೧೯೬೪ರಲ್ಲಿ ರಾಮಸಮುದ್ರದ ಸಮೀಪ ಬ್ರದರ್ ರೋಮ್ಯೂಲಸ್ 'ಕಿಸ್ತರಾಜ ಬಾಲರಪಟ್ಟಣ' ಎಂಬ ದೊಡ್ಡ ಸಂಸ್ಥೆಯೊಂದನ್ನು ಸ್ಥಾಪಿಸಿದರು. ಈ ಉಚಿತ ವಿದ್ಯಾರ್ಥಿನಿಲಯದಲ್ಲಿ ಚಾಮರಾಜನಗರ ತಾಲೂಕಿನ ಗ್ರಾಮಾಂತರ ವಿದ್ಯಾರ್ಥಿಗಳು, ಅಲ್ಲದೆ ನೆರೆಯ ತಮಿಳುನಾಡಿನ ತಾಳವಾಡಿ, ನೀಲಗಿರಿಗಳಿಂದ ಮಕ್ಕಳು ಬಂದು ವಿದ್ಯಾಭ್ಯಾಸ ಮಾಡುತ್ತಿದ್ದಾರೆ. ಬ್ರದರ್ ರೋಮ್ಯುಲಸ್ ಗಟ್ಟಿ ತಳಪಾಯದ ಮೇಲೆ ನಿರ್ಮಿಸಿದ 'ಕ್ರಿಸ್ತರಾಜ ಬಾಲಪಟ್ಟಣ' ಈಗಲೂ ಶಿಕ್ಷಣ ಕ್ಷೇತ್ರದಲ್ಲಿ ಅದ್ವಿತೀಯ ಸಾಧನೆ ಮಾಡುತ್ತಿದೆ.

೧೯೪೦ರ ದಶಕದಲ್ಲಿ ಸಿಸ್ಟರ್ ಮ್ಯಾಗ್ಡಲೀನ್ ಮತ್ತು ಸಿಸ್ಟರ್ ದೂನಾಸಿಯನ್ ಸಹೋದರಿಯರು ಸ್ಥಾಪಿಸಿದ ಶಾಲೆಯೇ ಇಂದು ತಾಲೂಕಿನಲ್ಲಿ ಪ್ರಸಿದ್ಧಿಯಾಗಿರುವ 'ಸೆಂಟ್ ಜೋಸೆಫ್ ಕಾನ್ವೆಂಟ್' ಉತ್ತಮ ಶಿಕ್ಷಣದ ಕನ್ನಡ ಮಾಧ್ಯಮ ಶಾಲೆ ಎಂಬ ಹೆಗ್ಗಳಿಕೆ ಈಗಲೂ ಈ ಕಾನ್ವೆಂಟ್ ಇದೆ. ಇದರ ಜೊತೆಗೆ ಉತ್ತಮ ಸೌಲಭ್ಯವುಳ್ಳ ೫೦ ಹಾಸಿಗೆಯ ಆಸ್ಪತ್ರೆಯು ನಗರದಲ್ಲಿದೆ. ಅಲ್ಲದೆ ನೆರೆಯ ತಾಳವಾಡಿ ತಿಗಣಾರೆಗಳಲ್ಲಿ ಕುಷ್ಠರೋಗಿಗಳ ಸೇವಾ ಕೇಂದ್ರಗಳನ್ನು ತೆರೆದು ಉತ್ತಮ ವೈದ್ಯಕೀಯ ಸೇವೆ ಮಾಡುತ್ತಿದ್ದಾರೆ ಮತ್ತು ಚಾಮರಾಜನಗರ ತಾಲೂಕಿನಲ್ಲಿರುವ ಅಧಿಕ ಪ್ರಮಾಣದ ಕುಷ್ಠರೋಗಿಗಳಿಗೆ ಅನುಕೂಲವಾಗಲೆಂದು ೧೯೮೦ರಲ್ಲಿ ವೆಂಕಟಯ್ಯನ ಛತ್ರದಲ್ಲಿ ಆಸಿಸಿ ಸೇವಾಕೇಂದ್ರವನ್ನು ತೆರೆದರು. ಅದು ಈಗಲೂ ಉತ್ತಮವಾಗಿ ಕಾರ್ಯನಿರ್ವಹಿಸುತ್ತಿದೆ.[೧೧೮]

ಹೀಗೆ ಒಂದು ಶತಮಾನದಲ್ಲಿ ಹಿಂದೆಯೇ ಈ ತಾಲೂಕಿನಲ್ಲಿ ತಳವೂರಿನ ಕ್ರೈಸ್ತಧರ್ಮ ಇಂದು ದಟ್ಟ ಪ್ರಭಾವವನ್ನು ಬೀರಿದೆ. ನಾಡಿನ ಇತರೆಡೆಗಳಂತೆ ತಾಲೂಕಿನ ಶಿಕ್ಷಣ ಮತ್ತು ಆರೋಗ್ಯಕ್ಷೇತ್ರಗಳಲ್ಲಿ ಕ್ರೈಸ್ತಧರ್ಮೀಯರ ಸಾಧನೆ ಅವಿಸ್ಮರಣೀಯವಾದುದು.

ಅಡಿಟಿಪ್ಪಣಿಗಳು

೧. ಎ.ಕ.೪ ಚಾಮರಾಜನಗರ ೧೪೪, ಬಾಳಿಗ, ಪು.೬೫

೨. ಎ.ಕ.೪ ಚಾಮರಾಜನಗರ ೧೪೨, ಸಿಂಗನಪುರ, ಪು.೮೪

೩. ಎ.ಕ.೪ ಚಾಮರಾಜನಗರ ೧೯೫, ಹಳೆ ಆಲೂರು, ಪು.೧೨೦

೪. ಎ.ಕ.೪ ಚಾಮರಾಜನಗರ ೨೩.೨, ಹೊಂಡರಬಾಳು, ಪು.೧೪೩

೫. ಎ.ಕ.೪ ಯಳಂದೂರು ೨, ಪು.೨೩೨

೬. ಎ.ಕ.೪ ಚಾಮರಾಜನಗರ ೧೬೧, ಹೊಂಗನೂರು ಪು.೯

೭. ಶೇಷಗಿರಿ ಜೆ.ಆರ್.(ಸಂ), ಪೂಜ್ಯಪಾದ ಚರಿತ್ರೆ, ೮ನೇ ಸಂಧಿ ಪದ್ಯ ೫ ರಿಂದ ೧೧, ಮಾತಾ ಪ್ರಿಂಟರ್ಸ್, ಮೈಸೂರು, ೧೯೬೯, ಪು.೮೦

೮. ಅದೇ, ಸಂಧಿ ೮, ಪದ್ಯ ೧೮ ರಿಂದ ೨೧, ಪು.೮೧

೧೦. ಅದೇ, ಸಂಧಿ ೮, ಪದ್ಯ ೧೮ ರಿಂದ ೨೧, ಪು.೮೧

೧೧. ಭಾನುಮತಿ ವೈ.ಸಿ.(ಸಂ), ಶ್ರುತಕೀರ್ತಿಯ ವಿಜಯಕುಮಾರಿ ಚರಿತೆ, ಪದ್ಯ ೧೦೪, ನಂದಿ ಪ್ರಕಾಶನ, ಬೆಂಗಳೂರು, ೧೯೮೨, ಪು.೧೧

೧೨. ಅದೇ, ಪದ್ಯ ೧೦೫, ಪು.೧೧

೧೩. ಅದೇ, ಪದ್ಯ ೭೦೮, ಪು.೭೬

೧೪. ಅದೇ, ಪದ್ಯ ೧೪೫, ಪು.೧೬

೧೫. ಅದೇ, ಪದ್ಯ ೨೨೨, ಪು.೨೪

೧೬. ಅದೇ, ಪದ್ಯ ೨೨೪, ೨೨೫, ಪು.೨೪

೧೭. ಅದೇ, ಪದ್ಯ ೧೦೯೫, ೧೦೯೯, ಪು.೧೧೭

೧೮. ಸಣ್ಣಯ್ಯ ಬಿ.ಎಸ್.(ಸಂ), ರಾಜಾವಳೀ ಕಥಾಸಾರ, ಪು.೨೯೨-೨೯೯

೧೯. ಅದೇ, ಪು.೭

೨೦. ಅದೇ, ಪು.೭೬

೨೧. ಅದೇ, ಪು.೫೫

೨೨. ಅದೇ, ಪು.೩೦೮

೨೩. ಅದೇ, ಪು.೧೨೮

೨೪. ಅದೇ, ಪು.೩೦೩

೨೫. ಅದೇ, ಪು.೨೬೩

೨೬. ಅದೇ, ಪು.೨೦೮

೨೭. ಪುರುಷೋತ್ತಮ ಬಿಳಿಮಲೆ(ಸಂ), ಜನಪದ ಕೈಪಿಡಿ, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೧೯೯೨, ಪು.೮೨

೨೮. **Narayana Rao, Quoted in Vedic India,** New Delhi, P.179

೨೯. Rig Veda X90, 11-12 ಉಲ್ಲೇಖ ಜಿ.ಪಿ.ಅನಂತಕೃಷ್ಣ ಅಯ್ಯರ್, ಪು.೧೯೮

೩೦. ಪುರುಷೋತ್ತಮ ಬಿಳಿಮಲೆ(ಸಂ), ಜನಪದ ಕೈಪಿಡಿ, ಪು.೧೯೮

೩೧. ಶಿವಕುಮಾರಸ್ವಾಮಿ ಸಿ.ಎಸ್.(ಸಂ), ಕರ್ನಾಟಕ ಜಾತ್ರೆಗಳು, ಕನ್ನಡ ಅಧ್ಯಯನ ಸಂಸ್ಥೆ, ಸ್ನಾತಕೋತ್ತರ ಕೇಂದ್ರ, ಬಿ.ಆರ್.ಪ್ರಾಜೆಕ್ಟ್, ಮೈಸೂರು ವಿಶ್ವವಿದ್ಯಾನಿಲಯ, ೧೯೯೮, ಪು.೪

೩೨. ಆಂದೋಲನ ದಿನಪತ್ರಿಕೆ, ಆಗಸ್ಟ್ ೨೫, ೨೦೧೦

೩೩. ಬಸವರಾಜಶೆಟ್ಟಿ, ರಾಮಸಮುದ್ರ, ವಯಸ್ಸು ೬೦ ಇವರು ತಿಳಿಸಿದ ಮಾಹಿತಿ

೩೪. ಚಿಕ್ಕಮಾದಶೆಟ್ಟಿ, ಉಪ್ಪಾರರ ಸಂಘ, ಚಾಮರಾಜನಗರ ಪಟ್ಟಣ, ಕಾಳಶೆಟ್ಟಿ, ಹರದನಹಳ್ಳಿ, ರಾಜಶೆಟ್ಟಿ ಹರದನಹಳ್ಳಿ, ಚೆನ್ನೀಪುರದ ಮೋಳೆದ ಕಾಳಶೆಟ್ಟಿ ಇವರುಗಳಿಂದ ತಿಳಿದುಬಂದ ಮಾಹಿತಿ

೩೫. ನಿಂಗಯ್ಯ, ಚಂದಕವಾಡಿ ಇವರಿಂದ ಕ್ಷೇತ್ರಕಾರ್ಯ ಸಂದರ್ಭದಲ್ಲಿ ತಿಳಿದುಬಂದ ಮಾಹಿತಿ

೩೬. ಸಿದ್ಧನಾಯಕ ನಾಯಕರ ಸಂಘ, ಚಾಮರಾಜನಗರ ಪಟ್ಟಣ ಇವರು ಹೇಳಿದ ಮಾಹಿತಿ

೩೭. ರಾಮಯ್ಯ, ದೊಡ್ಡರಾಯಪೇಟೆ ಇವರಿಂದ ತಿಳಿದ ಮಾಹಿತಿ

೩೮. Thrusten E., **Caste and Tribes of Southern India**, Alfan Publication, Bangalore, 1909, P.337

೩೯. ಅನಂತಕೃಷ್ಣ ಅಯ್ಯರ್ ಎಲ್.ಕೆ., **The Mysore Tribes and Caste, Vol.III,** ಗೀತಾ ಬುಕ್‌ಹೌಸ್, ಮೈಸೂರು, ೧೯೯೦, ಪು.೩೩೬

೪೦. ಚಂದ್ರಶೇಖರ್, ಆದಿಕರ್ನಾಟಕ ಯುವಕರ ಸಂಘ, ಮಾದಾಪುರು ಇವರಿಂದ ಪಡೆದ ಮಾಹಿತಿ

೪೧. Census of India 19811, Vol.XXI, Mysore Part-I, P.168

೪೨. ಕಿಲಗೆರೆ ವೆಂಕಟರಾಜು ಇವರಿಂದ ತಿಳಿದುಬಂದ ಮಾಹಿತಿ

೪೩. ಸೈಯದ್ ಮಂಜೂರ್ ಅಹಮದ್, ನಾಗವಳ್ಳಿ ಇವರಿಂದ ಪಡೆದ ಮಾಹಿತಿ

೪೪. ಜಾಮೀಯಾ ಮಸೀದಿಯ ಮೌಲ್ವಿ ಅಬ್ದುಲ್ಲಾರಿವರಿಂದ ತಿಳಿದುಬಂದ ಮಾಹಿತಿ

೪೫. ೧೮೮೯ರಲ್ಲಿ ಕ್ರೈಸ್ತಧರ್ಮದವರಿಗೆ ಸಮಾಧಿ ಸ್ಥಳಕ್ಕಾಗಿ ಚಾಮರಾಜನಗರದ ಗುಂಡ್ಲುಪೇಟೆ ರಸ್ತೆ ಬಳಿ ೧ ಎಕರೆ ಭೂಮಿಯನ್ನು ಸರ್ಕಾರದಿಂದ ಕೊಟ್ಟ ಬಗ್ಗೆ ಕಂದಾಯ ಇಲಾಖೆಯಲ್ಲಿ ದಾಖಲಿಸಿದೆ.

೪೬. ಸಿಲ್ವ ಎ.ಡಿ ಚಾಮರಾಜನಗರ ಇವರಿಂದ ತಿಳಿದುಬಂದ ಮಾಹಿತಿ

೪೭. ಥಿಯೋಡರ್ ಲೂಥರ್, ಮಾದಾಪುರ ಇವರು ತಿಳಿಸಿದ ಮಾಹಿತಿ

೪೮. ಪುಣಜನೂರಿನ ಗ್ರಾಮಪಂಚಾಯತಿ ಕಾರ್ಯದರ್ಶಿ ಶ್ರೀ ಮಾದಪ್ಪನವರಿಂದ ಪಡೆದ ಮಾಹಿತಿ

೪೯. ಬೇಡಗುಳಿ ಎಸ್ಟೇಟ್ ಮಾರಿಗುಡಿ ಪೋಡಿನ ಜಡೆಸ್ವಾಮಿ ಕ್ಷೇತ್ರಕಾರ್ಯ ಸಂದರ್ಭದಲ್ಲಿ ತಿಳಿಸಿದ ಮಾಹಿತಿ

೫೦. ಈ ಅಪಹರಣ ವಿವಾಹದ ಬಗ್ಗೆ ಮಾಹಿತಿ ನೀಡಿದವರು ಗೋಡೆ ಮಡುವಿನ ದೊಡ್ಡಿಯ ಹೊಸಪೋಡು ಹಾಗೂ ಶ್ರೀನಿವಾಸಪುರ ಜಡೇಗೌಡ, ರಂಗೇಗೌಡ

೫೧. ಕ್ಯಾತೆಮಾದಮ್ಮ, ಬೇಡಗುಳಿ ಎಸ್ಟೇಟ್ ಅವರಿಂದ ಸಂಗ್ರಹಿಸಿದ ಮಾಹಿತಿ

೫೨. ಋತುಮತಿ ಆಚರಣೆ ಬಗ್ಗೆ ಮಾಹಿತಿ ನೀಡಿದವರು ಮಾರಿಗುಡಿ ಪೋಡಿನ ಮಾದಮ್ಮ ಮತ್ತು ಸಿದ್ದೇಗೌಡ

೫೩. ನಂಜೇಗೌಡ, ತುಂಬೇಗೌಡ, ಬೇಡಗುಳಿ ಎಸ್ಟೇಟ್, ಚಾಮರಾಜನಗರ, ಸೋಲಿಂಗರ ಶವಸಂಸ್ಕಾರದ ಬಗ್ಗೆ ಮಾಹಿತಿ ನೀಡಿದವರು

೫೪. ನಂಜುಂಡಯ್ಯ ಹೆಚ್.ವಿ. ಮತ್ತು ಅನಂತಕೃಷ್ಣ ಅಯ್ಯರ್(ಸಂ), **Mysore Tribes and Caste,** ಪು.೨೯೨

೫೫. ಈ ಮಾಹಿತಿ ನೀಡಿದವರು ಹೊಸ ಪೋಡಿನ ಮಾದೇಗೌಡ, ಸಿದ್ದೇಗೌಡ ಮತ್ತು ಮಾದಮ್ಮ

೫೬. ಗಾಂಗ್ಲಿಬಾಯಿ ಹೊಸಪಾಳ್ಯ, ಟೋಕ್ಲಿಬಾಯಿ ಮೂಕನಪಾಳ್ಯ, ಡೊಂಸಿಬಾಯಿ ಹೊನ್ನಮೇಣಿ, ಚಿನ್ನಸ್ವಾಮಿ ನಾಯಕ್ ವೀರಯನಪುರ, ಥಾವುನಾಯ್ಕ ಮೂಡಹಳ್ಳಿ ಇವರಿಂದ ದೊರೆತ ಮಾಹಿತಿ

೫೭. ಉಮಾಬಾಯಿ, ಚಿಕ್ಕನಾಯ್ಕ ಕೋಳಿಪಾಳ್ಯ, ಕಾಳಿಬಾಯಿ ಕೃಷ್ಣನಾಯ್ಕ ಮೂಕನಪಾಳ್ಯ ಇವರಿಂದ ತಿಳಿದುಬಂದ ಮಾಹಿತಿ

೫೮. ಭಾನುಮತಿ ವೈ.ಸಿ.(ಸಂ), ಮಲೆನಾಡ ಶೈವ ಒಕ್ಕಲಿಗರು ಜಾನಪದೀಯ ಅಧ್ಯಯನ, ಸುನಂದ ಪ್ರಕಾಶನ, ಬೆಂಗಳೂರು, ೧೯೯೪, ಪು.೪೭

೫೯. ನಾಯಕ್ ಡಿ.ಬಿ.(ಸಂ), ಲಂಬಾಣಿ ಸಂಸ್ಕೃತಿ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ಪು.೨೬

೬೦. ಕ್ಷೇತ್ರಕಾರ್ಯ ಸಂದರ್ಭದಲ್ಲಿ ತಿಳಿದುಬಂದ ಮಾಹಿತಿ

೬೧. ಗುಂಡ್ಯನಾಯ್ಕ ಕೋಳಿ ಪಾಳ್ಯದ ಪೂಜಾರಿಯಿಂದ ದೊರೆತ ಮಾಹಿತಿ

೬೨. ಕೃಷ್ಣರಾವ್ ಎಂ.ವಿ. ಮತ್ತು ಕೇಶವಭಟ್ಟ ಎಂ.(ಸಂ), ಕರ್ನಾಟಕ ಇತಿಹಾಸ ದರ್ಶನ, ಇತಿಹಾಸ ಅಕಾಡೆಮಿ, ಬೆಂಗಳೂರು, ೨೦೦೩, ಪು.೭೦೯

೬೩. ಚಿದಾನಂದಮೂರ್ತಿ ಎಂ.(ಸಂ), ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೧೯೬೬, ಪು.೧೩೨

೬೪. ಕೃಷ್ಣರಾವ್ ಎಂ.ವಿ. ಮತ್ತು ಕೇಶವಭಟ್ಟ ಎಂ.(ಸಂ), ಪೂರ್ವೋಕ್ತ, ಪು.೭೧೧

೬೫. ಸಣ್ಣಯ್ಯ ಬಿ.ಎಸ್.(ಸಂ), ಪೂರ್ವೋಕ್ತ, ಪು.೧೩೪-೧೪೫

೬೬. ಚಿದಾನಂದಮೂರ್ತಿ ಎಂ.(ಸಂ), ಪೂರ್ವೋಕ್ತ, ಪು.೭೫

೬೭. ರೈಸ್ ಬಿ.ಎಲ್.(ಸಂ), ಎ.ಕ.೭-೧, ಶಿವಮೊಗ್ಗ ೧೦, ಕ್ರಿ.ಶ.೧೦೮೫, ಪು.೧೯

೬೮. ಎ.ಕ.೪, ಚಾಮರಾಜನಗರ ೩೪೭, ಕುಲಗಾಣ, ಪು.೨೨೦

೬೯. ಎ.ಕ.೪, ಚಾಮರಾಜನಗರ ೨, ಚಾಮರಾಜನಗರ, ಪು.೫

೭೦. ಎ.ಕ.೪ ಚಾಮರಾಜನಗರ ೩೪೩, ಕುಲಗಾಣ, ಪು.೨೧೭

೭೧. ಎ.ಕ.೪ ಚಾಮರಾಜನಗರ ೩೯೦, ಹರವೆ, ಪು.೨೫೭

೭೨. ಎ.ಕ.೪ ಚಾಮರಾಜನಗರ ೩೮೯, ಹರವೆ, ಪು.೨೫೭

೭೩. ಸಣ್ಣಯ್ಯ ಬಿ.ಎಸ್.(ಸಂ), ಪೂರ್ವೋಕ್ತ, ಪು.೨೬೮

೭೪. ಎ.ಕ.೪, ಚಾಮರಾಜನಗರ ೧೪೪, ಕೆಂಪನಪುರ, ಪು.೮೬

೭೫. ಅದೇ, ಪು.೧೧೭

೭೬. ಅದೇ, ಪು.೮೬

೭೭. ಅದೇ, ಕೊಳ್ಳೇಗಾಲ ೭, ಕಂತೂರು, ಪು.೪೦೦

೭೮. ಅದೇ, ಚಾಮರಾಜನಗರ ೨೯೨, ಹರದನಹಳ್ಳಿ, ಪು.೧೮೭

೭೯. ಎ.ಕ.೧೧, ಕುಣಿಗಲ್ ೪೯, ಎಡೆಯೂರು ಪು.೪೨

೮೦. ಎ.ಕ.೪, ಚಾಮರಾಜನಗರ ೨೧೭, ಪು.೧೩೨

೮೧. ಎ.ಕ.೪ ಚಾಮರಾಜನಗರ ೨೧೬, ಮೇಲುಮಾಳ, ಪು.೧೩೧

೮೨. ಎ.ಕ.೪ ಚಾಮರಾಜನಗರ ೧೬೩, ಹೊಂಗನೂರು, ಪು.೧೦೦

೮೩. ಎ.ಕ.೪ ಯಳಂದೂರು ೧೭೦, ಮೇಲ್ಹಾರಪಾಳ್ಯ, ಪು.೩೭೨

೮೪. ಬಸಪ್ಪ ಎಸ್.(ಸಂ), ಲಕ್ಕಣ್ಣದಂಡೇಶನ ಶಿವತತ್ವ ಚಿಂತಾಮಣಿ ಸಂಧಿ ೩೮, ಪು.೪೦೪ ೪೧೦

೮೫. ರಹಮತ್ ತರೀಕೆರೆ(ಸಂ), ಕರ್ನಾಟಕ ನಾಥಪಂಥ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು.೨೭

೮೬. ಉಮಾಪತಿಶಾಸ್ತ್ರಿ ಜಿ.ಎಂ.(ಸಂ), ವಿವೇಕಚಿಂತಾಮಣಿ, ಪು.೧೩

೮೭. ಹಿರೇಮಠ ಆರ್.ಸಿ.(ಸಂ), ಅಲ್ಲಮ ಪ್ರಭುದೇವರ ವಚನಗಳು, ವಚನ.೧೦೨೮

೮೮. ಅದೇ, ಚನ್ನಬಸವಣ್ಣನ ವಚನಗಳು, ವಚನ.೫೪೫

೮೯. ವಿರೂಪಾಕ್ಷ ಕುಲಕರ್ಣಿ(ಅನು), ಕಾಪಾಲಿಕರು ಮತ್ತು ಕಾಳಮುಖರು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು.೨೯೧

೯೦. ಎ.ಕ.೪, ಚಾಮರಾಜನಗರ ೧೪೪, ಕೆಂಪನಪುರ, ಪು.೮೬

೯೧. ಚಿದಾನಂದಮೂರ್ತಿ ಎಂ.(ಸಂ), ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು.೧೮೪

೯೨. ಎ.ಕ.೪,ಚಾಮರಾಜನಗರ ೧೪೯, ಪುಣಜನೂರು, ಪು.೯೨

೯೩. ಎ.ಕ.೪ ಚಾಮರಾಜನಗರ ೨೨೨, ಹರಳಕೋಟೆ, ಪು.೧೩೫

೯೪. ಎ.ಕ.೪ ಚಾಮರಾಜನಗರ ೩೨೨, ಕುಲಗಾಣ, ಪು.೨೦೮

೯೫. ಎ.ಕ.೪ ಚಾಮರಾಜನಗರ ೬೨, ಪುಣಜನೂರು, ಪು.೩೮

೯೬. ಎ.ಕ.೪ ಚಾಮರಾಜನಗರ ೬೨, ಹಳೆ ಆಲೂರು, ಪು.೧೧೧

೯೭. ಎ.ಕ.೪ ಚಾಮರಾಜನಗರ ೨೮೮, ಹರದನಹಳ್ಳಿ, ಪು.೧೭೫

೯೮. ಎ.ಕ.೪ ಚಾಮರಾಜನಗರ ೩೦೯, ಕೊತ್ತಲವಾಡಿ, ಪು.೨೦೧

೯೯. ಎ.ಕ.೪ ಚಾಮರಾಜನಗರ ೮೯, ಉಮ್ಮತ್ತೂರು, ಪು.೫೧

೧೦೦. ಎ.ಕ.೪ ಚಾಮರಾಜನಗರ ೨೪೯, ವೆಂಕಟಯ್ಯನ ಛತ್ರ, ಪು.೧೫೨

೧೦೧. ಎ.ಕ.೪ ಚಾಮರಾಜನಗರ ೧೭೨, ಹೊಂಗನೂರು, ಪು.೧೦೪

೧೦೨. ಶ್ರೀಕಂಠಯ್ಯ ಬಿ.ಎಂ.(ಸಂ), ಕನ್ನಡನಾಡಿನ ಚರಿತ್ರೆ ೨, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೯೨, ಪು.೧೭೩

೧೦೩. ಹಯವದನರಾವ್ ಸಿ, ಎಂ.ವಿ.ಆರ್.ವರದಿ, ಚಾಮರಾಜನಗರ, ೧೯೩೦

೧೦೪. ಮಲೆಯೂರು ಗುರುಸ್ವಾಮಿ(ಸಂ), 'ಬಯಲು' ಆದಿಜಗದ್ಗುರು ಶ್ರೀ ಶಿವರಾತ್ರೀಶ್ವರ ಭಗವತ್ಪಾದರ ೧೦೩೬ನೆಯ ಜಯಂತಿ ಮಹೋತ್ಸವ ಸ್ಮರಣ ಸಂಚಿಕೆ, ಪು.೯೨

೧೦೫. ವಕ್ತೃಶ್ರೀ ಸೈಯದ್ ಮನ್ಸೂರ್ ಅಹಮದ್‌ರವರಿಂದ ಪಡೆದ ಮಾಹಿತಿ

೧೦೬. ಕನ್ನಡ ವಿಷಯ ವಿಶ್ವಕೋಶ, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ಪು.೪೨೪

೧೦೭. ಮಲೆಯೂರು ಗುರುಸ್ವಾಮಿ(ಸಂ), 'ಬಯಲು' ಆದಿಜಗದ್ಗುರು ಶ್ರೀ ಶಿವರಾತ್ರೀಶ್ವರ ಭಗವತ್ಪಾದರ ೧೦೩೬ನೆಯ ಜಯಂತಿ ಮಹೋತ್ಸವ ಸ್ಮರಣ ಸಂಚಿಕೆ, ಪು.೧೧೬

೧೦೮. ವಕ್ತೃ ಸಿಲ್ವ ಎ.ಡಿ., ಚಾಮರಾಜನಗರ ಅವರಿಂದ ಪಡೆದ ಮಾಹಿ

೧೦೯. ವಕ್ತೃ ಪಾಧರ್ ಜೋಸೆಫ್ ಎಸ್.ಡಿ., ನಾಗವಳ್ಳಿ ಅವರಿಂದ ಪಡೆದ ಮಾಹಿತಿ

೧೧೦. ವಕ್ತೃಗಳಾದ ಸಿಸ್ಟರ್ ವಿನಯ್, ಸಿಸ್ಟರ್ ಜೆಪ್ರೊದ್ ಮತ್ತು ಸಿಸ್ಟರ್ ರೀಟಾ ಅವರುಗಳಿಂದ ತಿಳಿದುಬಂದ ಮಾಹಿತಿ

ಬಹುರೂಪಿ ಸಂಸ್ಕೃತಿ, ಸಂಪ್ರದಾಯಗಳು ಇನ್ನೂ ಜೀವಂತಿಕೆ ಉಳಿಸಿಕೊಂಡಿವೆ ಎಂದರೆ ಅದು ಗ್ರಾಮೀಣ ಪ್ರದೇಶಗಳಲ್ಲಿ ಮಾತ್ರ. ಸ್ತರ ವಿನ್ಯಾಸ ಸಾಮಾಜಿಕ ಸ್ಥಿತಿಗತಿಗಳ ನಡುವೆ ಮುಗ್ಧ ಜನರು ಸಾಂಸ್ಕೃತಿಕ ಐಕ್ಯತೆ ಸಾಧಿಸುವಲ್ಲಿ ಸೂಕ್ಷ್ಮ ಪ್ರಜ್ಞೆ ಹೊಂದಿದ್ದಾರೆ. ಹಬ್ಬ ಹರಿದಿನ ಜಾತ್ರೆ-ಉತ್ಸವಗಳಲ್ಲಿ ಮೂಲ ವ್ಯವಸ್ಥೆಯನ್ನು ಒಪ್ಪಿಕೊಂಡೇ ಆಚರಣೆಗಳಲ್ಲಿ ಸಮಾನ ಪಾಲುದಾರಿಕೆ ಪಡೆಯುತ್ತಿರುವುದು ವಿಶೇಷ ಅದೊಂದು ಸಾಂಸ್ಕೃತಿಕ ಸಾಮರಸ್ಯದ ಬೆಸುಗೆ.

ನೂರಾರು ವರ್ಷಗಳ ಇತಿಹಾಸ ಹೊಂದಿರುವ ಈ ಆಚರಣೆಗಳು ಜನರ ಸಾಕ್ಷಿ ಪ್ರಜ್ಞೆಯಿಂದ ಅನೂಚನವಾಗಿ ನಡೆಯಲ್ಪಡುತ್ತಾ ಭೌತಿಕ ಸ್ವರೂಪವನ್ನು ಉಳಿಸಿಕೊಂಡು ಬಂದಿವೆ. ಇತ್ತೀಚೆಗೆ ಆಧುನಿಕತೆಯ ಸ್ಪರ್ಶದ ಫಲವಾಗಿ ಮೂಲ ಸ್ವರೂಪ ಸ್ವಲ್ಪ ಪ್ರಮಾಣದಲ್ಲಿ ಕಡಿತಗೊಳ್ಳುತ್ತಿರುವುದು, ಸಾಂಸ್ಕೃತಿಕ ಪರಂಪರೆಗೆ ಒದಗಿಬರುತ್ತಿರುವ ದೊಡ್ಡ ಅಪಾಯ. ಮೂಲ ಸಂಸ್ಕೃತಿ ಹಾಗೂ ಆಧುನಿಕ ಸಂಸ್ಕೃತಿಗಳ ನಡುವೆ ಸಂಘರ್ಷ ಇದ್ದೇ ಇದೆ. ಜಾತ್ಯಾತೀ ನಿಲುವು ಪುರಸ್ಕರಿಸುವಲ್ಲಿ ಇಂಥ ತಿಕ್ಕಾಟಗಳ ಪಾತ್ರ ಪ್ರಮುಖ. ಭಾರತದ ಸಂಸ್ಕೃತಿ ಎಂದರೆ ಅದು ನಮ್ಮ ಹಳ್ಳಿಗಳು ಒಟ್ಟು ಸಂಸ್ಕೃತಿ. ಏಕಾಂಗಿತನ ಅನುಭವಿಸುವ ಮನುಷ್ಯ ತನಗರಿವಿಲ್ಲದೆಯೇ ಮಾನಸಿಕ ಕ್ಷೋಭೆಗೆ ಈಡಾಗುತ್ತಾನೆ. ಇಂಥ ಕ್ಷೋಭೆಗಳಿಂದ ಪಾರಾಗಲು ಅವನಿಗಿರುವ ಸುಲಭ ದಾರಿಯೆಂದರೆ ಸಂಸ್ಕೃತಿ ಆಚರಣೆ ಮತ್ತು ಒಳಗೊಳ್ಳುವಿಕೆ.

ವ್ಯಕ್ತಿ ಎಲ್ಲಾ ವೇಳೆಯಲ್ಲೂ ಒಂದೇ ತರನಾದ ಭಾವನೆಗಳಿಗೆ ಪಕ್ಕಾವಾಗುವುದಿಲ್ಲ. ವರ್ಷವಿಡೀ ಕೃಷಿ ಚಟುವಟಿಕೆಯಲ್ಲಿ ತೊಡಗಿ ಲಾಭ ನಷ್ಟಗಳನ್ನು ಅನುಭವಿಸಿ, ಲಾಭವಾದಾಗ ಖುಷಿಗೊಂಡು ನಷ್ಟವಾದಾಗ ಉದ್ರೇಕ ಸ್ಥಿತಿ ತಾಳಿ ಸರಿದೂಗಿಸುತ್ತಾ ಬದುಕುತ್ತಾನೆ. ತನ್ನ ಜಂಜಾಟಗಳಿಂದ ನೆಮ್ಮದಿ ಪಡೆಯಲು ದೇವರ ಹೆಸರಿನಲ್ಲಿ ಜಾತ್ರೆ ಉತ್ಸವಗಳ ಕಡೆ ಮನಸ್ಸು ತಿರುಗಿಸುತ್ತಾನೆ. ಆಚರಣೆ ಅಂಗವಾಗಿ ನೆಂಟರಿಷ್ಟರನ್ನು, ಬಂಧು ಬಾಂಧವರನ್ನು ಕೂಡಿಸಿ ಮೃಷ್ಟಾನ್ನ ಮಾಡಿಸಿ ಹರ್ಷಿಸುತ್ತಾನೆ. ಮೆರವಣಿಗೆ ಉತ್ಸವಗಳಲ್ಲಿ ವೈವಿಧ್ಯಮಯವಾದ ಸಾಂಸ್ಕೃತಿಕ ತಾಳಮೇಳಗಳಲ್ಲಿ ಪಾಲ್ಗೊಂಡು ಸಂಸ್ಕೃತಿಗೆ ಮೆರಗು ನೀಡುತ್ತಾನೆ.[೧]

ಸಂಸ್ಕೃತಿ ಆಚರಣೆ ಹಾಗೂ ಸಂಪ್ರದಾಯ ಪಾಲನೆಗಳಲ್ಲಿ ಚಾಮರಾಜನಗರ ಜಿಲ್ಲೆ ಅಗ್ರಸ್ಥಾನ ಪಡೆದಿದೆ. ಅದರಲ್ಲೂ ಚಾಮರಾಜನಗರ ತಾಲೂಕಿನಲ್ಲಿ ಆಚರಿಸಲ್ಪಡುವ ಕೆಲವು ಹಬ್ಬ, ಜಾತ್ರೆ, ಉತ್ಸವಗಳು ವಿಶೇಷ ಕ್ರಿಯೆಗಳಿಂದ ಕೂಡಿವೆ. ವಿಷಯಕ್ಕೆ ಸಂಬಂಧಿಸಿದಂತೆ ಚಾಮರಾಜನಗರ ತಾಲೂಕಿನ ಕೆಲವು ಪ್ರಮುಖ ಜಾತ್ರೆಗಳು ಬಹಳ ಪ್ರಾಮುಖ್ಯತೆಯನ್ನು ಪಡೆದಿವೆ.

## ಬೆಂಡರವಾಡಿ ಜಾತ್ರೆ

ಲಕ್ಷ್ಮೀದೇವಿ ಹೆಸರಿನಲ್ಲಿ ಈ ಜಾತ್ರೆ ಸಮಾವೇಶಗೊಂಡರೂ ನಮ್ಮ ಸುತ್ತಿನ ಬೆಂಡರವಾಡಿ ಜಾತ್ರೆಯೆಂದೇ ಹೆಸರಾಗಿದೆ. ಶಿವರಾತ್ರಿ ಕಳೆದ ಹನ್ನೆರಡನೆ ದಿನಕ್ಕೆ ಕೊಂಡ ಹಾಗೂ ತೇರು ಹರಿಯುವ ಪದ್ಧತಿಯಿದೆ. ಜಾತ್ರೆಗೆ ಮುನ್ನ ಚಿಕ್ಕಮಾರಮ್ಮ, ದಂಡಿನ ಮಾರಮ್ಮ ಹಾಗು ಪಟ್ಟಲದಮ್ಮನ ಹಬ್ಬಗಳು ಕ್ರಮವಾಗಿ ಜರುಗಲೇಬೇಕು. ಚಿಕ್ಕಮಾರವ್ವಳ ಹಬ್ಬದಲ್ಲಿ ಲಿಂಗಾಯಿತ ಕೋಮಿನ ತಮಡಿಯೆ ಮಡೆ ಬೇಯಿಸಿ ಚಿಕ್ಕಮಾರವ್ವಳ ಹೆಸರಿಗೆ ಧೂಪ ಹಾಕಿ ಗ್ರಾಮದ ಎಲ್ಲಾ ಕೋಮಿನ ಪ್ರತಿ ಮನೆಗೂ ತಪ್ಪದೆ ಮಡೆ ಪ್ರಸಾದ ಹಂಚಬೇಕು. ಹಂಚಿ ಉಳಿದ ಪ್ರಸಾದವನ್ನು ಕೇಲ್ ಹೊರುವ ಉಪ್ಪಾರ ಕುಟುಂಬಕ್ಕೆ, ಹರಿಜನ ಕೇರಿಯ ಹೆಬ್ಬರೆ ಕುಲದೇವರಿಗೆ, ಮಡಿ ಹಾಸುವ ಮಡಿವಾಳರಿಗೆ ಹಂಚಬೇಕು. ನಂತರ ದಂಡಿನ ಮಾರಮ್ಮ ಹಾಗೂ ಪಟ್ಟಲದಮ್ಮನವರ ಹಬ್ಬ ಆಚರಿಸುತ್ತಾರೆ.

ಈ ಹಬ್ಬಗಳು ಕಳೆದು ಜಾತ್ರೆಗೆ ಹದಿನೈದು ದಿನಗಳು ಬಾಕಿ ಇರುವ ಮೊದಲ ದಿನ ಕರ್ಟ್ನ ಸೇವೆ. ಮೊದಲು ರಾತ್ರಿ ಮೊದಲು ಹನ್ನೆರಡು ಗಂಟೆಗೆ ಆಡುಮಾರಿ ಬಲಿ ಕೊಟ್ಟು ಹುರಿದು ಬೇಯಿಸಿದ ಉಳ್ಳಿಕಾಳಿನ ಜೊತೆ ರಕ್ತ ಬೆರಸಿ ಊರಿನ ಸುತ್ತ ಎರಚುವುದು. ಜಾತ್ರೆ ಕಟ್ಟುವ ಮೂರು ದಿನಗಳ ಮುಂಚೆ ಶುಕ್ರವಾರದ ದಿನ ಬಿ.ಮಲ್ಲಯ್ಯನಪುರ, ಮೇಗಲಹುಂಡಿ ಮತ್ತು ಬೆಂಡರವಾಡಿ ಗ್ರಾಮಗಳ ಸರ್ವ ಕೋಮಿನ ಜನರು ದೇವಾಲಯದ ಮುಂಭಾಗ ನೆರೆಯುತ್ತಾರೆ. ಲಿಂಗಾಯಿತ ತಮಡಿಯ ಮೈ ಮೇಲೆ ದೇವರು ಕರೆಯುತ್ತಾರೆ. ಸರದಿ ಪ್ರಕಾರ ಲಕ್ಷ್ಮೀದೇವಿ, ಮಾದೇಶ್ವರ, ಕೊಂಗಳ್ಳಿ ಮಲ್ಲಪ್ಪ, ಬಸವೇಶ್ವರ ಹಾಗೂ ನಾರಾಯಣಸ್ವಾಮಿ ಎಂಬ ಐದೂ ದೇವರುಗಳು ಆ ತಮಡಿಯೊಬ್ಬನ ಮೇಲೆ ಬಂದು ಒಪ್ಪಿಗೆ ಸೂಚಿಸಿದ ನಂತರವೇ ಜಾತ್ರೆಯ ಸಿದ್ಧತೆಗಳು ಆರಂಭ. ಮಾರನೆ ಬೆಳಿಗ್ಗೆಯ ದೇವಸ್ಥಾನಕ್ಕೆ ಸುಣ್ಣ ಬಣ್ಣ ಹೊಡೆಯುತ್ತಾರೆ. ಹೆಂಗಸರು ಮನೆ ತೊಳೆದು ಹಬ್ಬದ ತಯಾರಿ ನಡೆಸುತ್ತಾರೆ.

ಭಾನುವಾರ ಮಧ್ಯಾಹ್ನ ಮೂರು ಗಂಟೆಗೆ ಕೊಂಡದ ಗುಡಿಗೆ ಹೆಬ್ಬರೆ ವಾದ್ಯದೊಂದಿಗೆ ಮುಂಗೊಂಡ ಹಾಯುವ ತಮ್ಮಡಿ ಗುದ್ದಲಿ ಪೂಜೆ ಸಲ್ಲಿಸುತ್ತಾನೆ. ಅನಂತರವೇ ಕೊಂಡದ ಸೌದೆ ತರಲು ಹೊರಡುವುದು. ಇದರ ಜವಾಬ್ದಾರಿ ಬಿ.ಮಲ್ಲಯ್ಯಪುರ ಗ್ರಾಮಸ್ಥರದು. ಅದರಲ್ಲಿಯೂ ರಸ್ವಾರದ(ಪೀಕಿ) ಮರವೇ ಕೊಂಡಕ್ಕೆ ಹಾಕುವ ವಾಡಿಕೆ. ಇವರು ಕೊಂಡದ ಸೌದೆ ಸಿದ್ದಗೊಳಿಸಿದರೆ ಕೆರಳ್ಳಿ ಗ್ರಾಮದ ತಮ್ಮಡಿಗಳು ಕೊಂಡ ಬೇಯಿಸಿ ಸೋಮವಾರ ಬೆಳಗಿನ ಆರು ಗಂಟೆಗೆ ತಮ್ಮ ಕಾರ್ಯ ಮುಗಿಸುತ್ತಾರೆ.

ಗುದ್ದಲಿ ಪೂಜೆ ನಂತರ ಹೆಬ್ಬರೆಯವರ ಜೊತೆ ಉಪ್ಪಾರರು ಸುತ್ತಿಗೆ ಸೂರೆಪಾನಿ ಹೊತ್ತು ತಮ್ಮ ಕೇರಿಯ ಚಾವಡಿ ಅಂಗಳಕ್ಕೆ ಬಂದು ಕುಣಿಯುತ್ತಾರೆ. ಅನಂತರ ವೀರಶೈವ ತಮಡಿ ಕೂಡಿ ಕೊಂಡು ಕೇಲ್ ತರಲು ಬೆಂಡರವಾಡಿ ಕೆರೆಗೆ ಬಂದು ಪೂಜೆ ಸಲ್ಲಿಸಿ ಉತ್ಸವ ಹೊರಡುತ್ತದೆ. ತಮ್ಮಡಿ ಕೇಲ್ ಹೊರುತ್ತಾನೆ.

ಹರಕೆ ಹೊತ್ತ ಉಪ್ಪಾರ ಜನಾಂಗ ಬಾಯಿಬೀಗ, ಕಾಯಿ ಪವಾಡ ಪ್ರದರ್ಶಿಸುತ್ತಾ ಸಾಗುತ್ತಾರೆ. ಹೆಣ್ಣು ಮಕ್ಕಳೆ ಹರಕೆ ಹೊತ್ತು ಬಾಯಿಬೀಗ ಪವಾಡ ಪ್ರದರ್ಶಿಸುತ್ತಾ ಸಾಗುತ್ತಾರೆ. ಹೆಣ್ಣು ಮಕ್ಕಳೆ ಹರಕೆ ಹೊತ್ತು ಬಾಯಿಬೀಗ ಪವಾಡ ನಡೆಸಿಕೊಡುವುದು ಇಲ್ಲಿನ ವಿಶೇಷ. ಉಳಿದವರು ಡೋಲು ತಮಟೆ ತಾಳಕ್ಕೆ ಕುಣಿದು ಮುನ್ನಡೆಯುತ್ತಾರೆ.

ಕೇಲ್ ಹೊತ್ತ ಉತ್ಸವ ಕೊಂಡದ ಬಳಿ ಬಂದಾಗ ಮುಂಗೊಂಡಕ್ಕೆ ಬಲಿಕೊಡಲು ೫೦ ರಿಂದ ೬೦ ಆಡುಮರಿಗಳು ಸಿದ್ಧವಾಗಿರುತ್ತವೆ. ಉಪ್ಪಾರ ಜನಾಂಗ ಬಲಿ ನೀಡುತ್ತಾರೆ. ಬಲಿ ನಂತರ ಕೇಲ್ ತಮ್ಮಡಿ ಮುಂಗೊಂಡ ಹಾಯುತ್ತಾನೆ. ಆ ಮೇಲೆ ಬಾಯಿ ಬೀಗದ ಹರಕೆ ಹೊತ್ತ ಶೆಟ್ಟರು ಹಾಗೂ ಹರಕೆ ಹೊತ್ತ ಹೆಣ್ಣು ಮಕ್ಕಳು ಕೊಂಡ ಹಾಯುತ್ತಾರೆ. ನಂತರ ನಾಯಕರು, ಇತರೆ ಜನಾಂಗದವರು ಕೊಂಡ ಹಾಯಬಹುದು.

ಅದೇ ದಿನ ಮಧ್ಯಾಹ್ನ ತೇರು ಉತ್ಸವ, ತೇರೆಳೆದ ಮೇಲೆಯೇ ಭಕ್ತಾದಿಗಳಿಗೆಲ್ಲ ಹಣ್ಣುಕಾಯಿ ಪೂಜೆ ನಡೆಸಲಾಗುತ್ತದೆ. ಲಕ್ಷ್ಮೀದೇವಿಗೆ ಪೂಜಾರಿಗಳು ಇದೇ ಊರಿನ ಬ್ರಾಹ್ಮಣರು, ಊರಲ್ಲಿರುವ ನಾಲ್ಕು ಬ್ರಾಹ್ಮಣ ಕುಟುಂಬಗಳಲ್ಲೆ, ವರ್ಷಕ್ಕೊಮ್ಮೆ ಎಲ್ಲಾ ಕೋಮಾರಿನವರು ಸೇರಿ ಪೂಜಾರಿ ಬದಲಾಯಿಸುತ್ತಾರೆ. ತಲತಲಾಂತರಗಳಿಂದಲೂ ಈ ಕ್ರಮ ನಡೆದುಬಂದಿದೆ. ಕೊಂಡಕ್ಕೆ ಬಲಿಕೊಟ್ಟ ಮರಿಗಳನ್ನು (ಕುರಿ) ಉಪ್ಪಾರ ಜನಾಂಗದವರು ತಮ್ಮ ಬೀದಿಯ ಚಾವಡಿ ಹತ್ತಿರ ತೆಗೆದುಕೊಂಡು ಹೋಗಿ ಸುಲಿದು ಮಂಗಳವಾರದ ಬೆಳಿಗ್ಗೆ ಪರ ಮಾಡುತ್ತಾರೆ. ಉಣ್ಣುವ ತಿನ್ನುವ ಜಾತಿ ಜನಾಂಗವೆಲ್ಲ ಇದೊಂದು ದೇವರ ಪ್ರಸಾದವೆಂದು ಪಂಕ್ತಿಯಲ್ಲಿ ಕುಳಿತು ಊಟ ಮಾಡುತ್ತಾರೆ. ಇಲ್ಲಿ ಸಹಪಂಕ್ತಿ ಭೋಜನದ ವ್ಯವಸ್ಥೆಯಿದೆ. ಬುಧವಾರ ಜಾತ್ರೆಯ ಕೊನೆಯ ದಿನ, ಮರಿಜಾತ್ರೆ ಆಚರಿಸುತ್ತಾರೆ. ಪೂಜೆ ಸಲ್ಲಿಸಿ ದೇವತೆ ಮೈಗೆ ತೊಡಿಸಿದ ಆಭರಣಗಳನ್ನು ಕಳಚಿ ಉಪ್ಪಾರ ಜನಾಂಗದ ಪಾರುಪತ್ಯದಾರರ ಮನೆಯಲ್ಲಿ ಇಡಲಾಗುತ್ತದೆ. ಅಂದಿಗೆ ಜಾತ್ರೆ ಮುಗಿಯುತ್ತದೆ. ಪ್ರಮುಖವಾಗಿ ಬೆಂಡರವಾಡಿ ಜಾತ್ರೆ ಮೇಗಲಹುಂಡಿ, ಬಿ.ಮಲ್ಲಯ್ಯನಪುರ ಹಾಗೂ ಬೆಂಡರವಾಡಿ ಗ್ರಾಮಗಳಿಗೆ ಸೇರಿದುದಾಗಿದೆ. ಆದರೂ ಪಾಳ್ಯ ಹೆಗ್ಗೋವಾಡಿ, ಕೋಣನಪುರ, ಕೋಣನೂರು, ಕೆರಳ್ಳಿ, ಭುಜಗನಪುರ, ಸಣ್ಣೇಗೌಡನ ಹುಂಡಿ ಗ್ರಾಮಗಳವರು ಹಬ್ಬ ಆಚರಿಸುತ್ತಾರೆ. ಜಾತ್ರೆಯಲ್ಲಿ ಪಾಲ್ಗೊಳ್ಳುತ್ತಾರೆ.[೨]

### ಚಂದಕಡ್ಡಿ (ಚಂದಕವಾಡಿ) ಮಾರಮ್ಮನ ಜಾತ್ರೆ

ಚಾಮರಾಜನಗರದ ಸುತ್ತಮುತ್ತ ಚಂದಕಡ್ಡಿ ಜಾತ್ರೆ ಕುರಿತ ಜಾನಪದ ಹಾಡೊಂದು ಪ್ರಸಿದ್ಧವಾಗಿದೆ.

ಚಂದಕಡ್ಡಿ ಜಾತ್ರೆ ಚಂದಾಯ್ತಮ್ಮ
ಲಕ್ಕಿ ಕಡ್ಡಿ ಏಟು ಘನವಾಯ್ತಮ್ಮೆ
ನಾ ತಂದ ತಿಂಡಿ ತೀರೊಯ್ತಮ್ಮೆ
ಒಂದೇ ಮಾರ್ ಹೂವು ಒಣಗೊಯ್ತಮ್ಮ

ಇದು ಲಕ್ಷ್ಮೀದೇವಿ ಜಾತ್ರೆಯಾದ್ದರಿಂದ ಈ ಜಾತ್ರೆಗೂ ಹೆಂಗಸರಿಗೂ ಪಾರಂಪರಿಕ ನಂಟಿದೆಯೆಂದೇ ಅರ್ಥ.

ವಾಸ್ತವವಾಗಿ ಇದು ಚಂದಕವಾಡಿಯ ಲಕ್ಷ್ಮೀದೇವಿ ಜಾತ್ರೆಯಾಗಿದೆ. ಆದರೆ ನಮ್ಮ ಗ್ರಾಮೀಣ ಜನತೆಯ ಬಾಯಲ್ಲಿ ಚಂದಕಡ್ಡಿ ಮಾರಮ್ಮನ ಜಾತ್ರೆಯೆಂದೇ ಬಳಸಲ್ಪಡುತ್ತಿದೆ. ಶಿವರಾತ್ರಿ ಹಬ್ಬದ ಎರಡು ದಿನ ಹಿಂದಕ್ಕೆ ಅಥವಾ ಮುಂದಕ್ಕೆ ಜಾತ್ರೆ ಸಮಾವೇಶಗೊಳ್ಳುತ್ತದೆ. ಜಾತ್ರೆಗೆ ಒಂದು ತಿಂಗಳು ಮುಂಚೆಯೇ ದೊಡ್ಡ ಪೂಜೆ, ದೇವತೆಗೆ ಚಿನ್ನಾಭರಣ ತೊಡಿಸಿ ಹೊಳೆಯಿಂದ ದೇವರು ತರಲಾಗುವುದು. ಲಿಂಗಾಯಿತ ತಮಡಿ ದೇವರ ಹೊತ್ತು ಮೆರವಣಿಗೆ ಸಾಗುತ್ತದೆ. ಗಾಣಿಗರ ದೊಡ್ಡ ಸತ್ತಿಗೆ, ಹಾಲು ಮತಸ್ಥರ ಕಾಳಮ್ಮ ದೇವಿಯ ಮೆರವಣಿಗೆ ಆಕರ್ಷಣೀಯ. ಉಳಿದಂತೆ ಕೋಡಿ ಮೋಳೆಯ ಉಪ್ಪಾರ ಜನಾಂಗದವರು ಚಾವಡಿ ಹೊಡೆದುಕೊಳ್ಳುತ್ತ ದೇವರನ್ನು ಆಲುವುದು ಕೂಗುವುದು ಮಾಡುತ್ತಾರೆ.

ದೊಡ್ಡ ಪೂಜೆಯಾದ ೧೫ ದಿನಕ್ಕೆ ಚಿಕ್ಕ ಪೂಜೆ, ದೊಡ್ಡ ಪೂಜೆಯ ವಿಧಿ ವಿಧಾನಗಳೇ ಮುಂದುವರಿಯುತ್ತವೆ. ನಂತರದ ಒಂದು ವಾರಕ್ಕೆ ಸರಿಯಾಗಿ ನಾಯಕರು, ಹರಿಜನರು ಸೇರಿ ಕರ್ಕ್ನ್ಯ ಇಡುತ್ತಾರೆ. ಮೊದಲು ದೇವಸ್ಥಾನ ಮೂರು ಸುತ್ತು ಹಾಕಿ, ಆ ಮೇಲೆ ಊರಿನ ಸುತ್ತಾ ಸುತ್ತಾಡಿ ರಸಮುದ್ದೆ ಇಟ್ಟು, ಹೊಳೆ ಪಕ್ಕವಿರುವ ಹಳೆದೇವಿ ಆಲಯ, ಹೊಸದೇವಿ ಆಲಯಗಳಿಗೆ ಪೂಜೆ ಸಲ್ಲಿಸಿ ದೇವಸ್ಥಾನದ ಒಳಗೆ ಹಿಂದಿರುಗುತ್ತಾರೆ. ದೇವಸ್ಥಾನದ ಮುಂಭಾಗದ ಕುರ್ಜಿನಲ್ಲಿ ಆಡುಮರಿ ಕಟ್ಟಿ ಹಾಕಿ ಅಲ್ಲೆ ಮಲಗಿದ್ದು ಕಲ್ಲು ನೀರು ಕರಗೋ ವೇಳೆಯಲ್ಲಿ ಬಲಕೊಟ್ಟು ತಮ್ಮ ಕೇರಿಗೆ ಹೊತ್ತೊಯ್ಯುತ್ತಾರೆ.

ಕರ್ಕ್ನ್ಯ ಇಟ್ಟ ಒಂದು ವಾರದ ನಂತರ ಸೋಮವಾರದ ದಿನ ಬೆಳಿಗ್ಗೆ ದೇವರ ತಲೆ ಮೆಲೆ ಹೂವಿಟ್ಟು ಬಲಗಡೆ ಪ್ರಸಾದ ಪಡೆದು ಹಬ್ಬದ ಕ್ರಿಯಾವಳಿಗೆ ತೊಡಗುತ್ತಾರೆ. ಆ ತಕ್ಷಣ ಆ ಜಾತಿ ಈ ಜಾತಿ ಎನ್ನದೇ ಎಲ್ಲರೂ ಕೊಂಡದ ಸೌದೆ ತರಲು ಹೊರಡುತ್ತಾರೆ. ಕಗ್ಗಲೀ ಮರದ ಸೌದೆಯನ್ನೇ ಇಲ್ಲಿ ಕೊಂಡಕ್ಕೆ ಬಳಸುವ ರೂಢಿ. ಗಾಡಿ ಕಟ್ಟಿ ಸೌದೆ ತರುವಂತಿಲ್ಲ. ಒಬ್ಬ ವ್ಯಕ್ತಿ ತನ್ನ ಹೆಗಲ ಮೇಲೆ ಎಷ್ಟು ಭಾರ ಹೊರಬಹುದು ಅಷ್ಟನ್ನು ಮಾತ್ರ ತರಬೇಕು.

ಚಂದಕವಾಡಿ, ಹಂಚಿತಾಳಪುರ ಹಾಗೂ ಕೋಡಿಮೋಳೆ ಈ ಮೂರು ಗ್ರಾಮದವರು ಒಟ್ಟಿಗೆ ಸೇರಿ ಜಾತ್ರೆ ನಡೆಸುತ್ತಾರೆ. ಜಾತ್ರೆಗೆ ತಗಲುವ ಖರ್ಚು ವೆಚ್ಚಕ್ಕೆ ಮೂರು ಊರುಗಳ ಕುಲ ಮೇರ್ಮೆ ಹಣದ ಸರದಿ ಹಾಕುತ್ತಾರೆ.

ಬಲಗಡೆ ಪ್ರಸಾದ ಸಿಕ್ಕಿ ಗಂಡಸರೆಲ್ಲ ಸೌದೆ ತರಲು ಹೊರಟರೆ ಹೆಂಗಸರೆಲ್ಲ ಮನೆ-ಕೋಣೆ ತೊಳೆಯಲು ಆರಂಭಿಸುತ್ತಾರೆ. ಮಂಗಳವಾರ ೧೨ ಗಂಟೆಗೆ ಕೊಂಡಕ್ಕೆ ಬೆಂಕಿ ಹಚ್ಚುತ್ತಾರೆ. ಲಿಂಗಾಯಿತ ಕೋಮಿನವರು ಕೊಂಡ ಬೇಯಿಸಿ ಬೆಳಗಿನ ಆರು ಗಂಟೆಗೆ ಸಿದ್ಧಪಡಿಸುತ್ತಾರೆ.

ಇತ್ತ ಬುಧವರ ಬೆಳಗಿನ ಜಾವ ನಾಲ್ಕು ಗಂಟೆಗೆ ದೇವರ ತರಲು ಹೊಳೆ ಹತ್ತಿರಕ್ಕೆ ಹೋಗುತ್ತಾರೆ. ತಮಡಿ ಕೇಲ್ ಹೊರುತ್ತಾನೆ. ಮಂಟೆಸ್ವಾಮಿ ಗುಡ್ಡಪ್ಪ, ಗಾಣಿಗರ ದೊಡ್ಡ ಸತ್ತಿಗೆ, ಕಾಳಮ್ಮನ ದೇವರ ಮೆರವಣಿಗೆ ಮುಖ್ಯ ರಸ್ತೆ ಬಳಸಿ ಬೆಳಗಿನ ೬ ಗಂಟೆಗೆ ದೇವಸ್ಥಾನದ ಹತ್ತಿರ ಬರುತ್ತಾರೆ. ನಾಯಕ ಜನಾಂಗ ಪಂಜು ಹಿಡಿದು ಮಡಿವಾಳರು ಮಡಿ ಹಾಕುತ್ತಾರೆ. ಉಪ್ಪಾರ ಜನಾಂಗದವರು ಕತ್ತಿ ಪವಾಡ, ಚಾವಟಿ ಪವಾಡ, ಕಾಯಿ ಪವಾಡ, ಬಾಯಿ ಬೀಗ ಪ್ರದರ್ಶನ ನೀಡುತ್ತಾರೆ.

ಮುಂಗೊಂಡ ಹಾಯುವ ಮೊದಲು ಗಾಣಿಗರ ದೊಡ್ಡ ಸತ್ತಿಗೆಗೆ ಆಡು ಮರಿಬಲಿ ಕೊಡಲಾಗುತ್ತದೆ. ನಂತರವೇ ತಮಡಿ ಕೊಂಡ ಹಾಯುತ್ತಾನೆ. ಅವನ ಹಿಂದೆ ಮಂಟೆ ಸ್ವಾಮಿ ಗುಡ್ಡಪ್ಪ, ನಂತರ ಮೂರು ಜನರ ಗುಡ್ಡರು ಕೊಂಡ ಹಾಯುತ್ತಾರೆ. ಇವರಾದ ಮೇಲೆ ಮತ್ಯಾರು ಕೊಂಡ ಹಾಯುವುದಿಲ್ಲ.

ಗುರುವಾರ ದೊಡ್ಡ ಜಾತ್ರೆ ಕಟ್ಟುತ್ತದೆ. ಬೆಳಗಿನ ಹೊತ್ತಿಗೆ ದೇವರ ಆವೇಶ ಬಂದು ತಮಡಿ ಮರದ ತೊಟ್ಟಿಲಲ್ಲಿ ಕುಳಿತು ಉಯ್ಯಾಲೆ ಸೇವೆ ನಡೆಯುತ್ತದೆ. ಆದಾದ ನಂತರ ಮಡೆ ಕಾರ್ಯಕ್ರಮ ತಮ್ಮಡಪ್ಪನೆ ಮುಮ್ಮಡೆ ಬೇಯಿಸಿ ದೇವರಿಗೆ ನೈವೇದ್ಯ ಇಡುತ್ತಾನೆ.

ಅದೇ ದಿನ ಎತ್ತಿನ ಜಾತ್ರೆ ಕೂಡುವುದು ಜಾತ್ರೆಗೆ ಒಂದು ವಿಶೇಷ ಮೆರುದು ಹರಕೆ ಹೊತ್ತ ರೈತರು ತಮ್ಮ ತಮ್ಮ ಎತ್ತುಗಳನ್ನು ತೊಳೆದು ಶೃಂಗರಿಸಿ ಪ್ರದರ್ಶಿಸುತ್ತಾರೆ. ಕುಂಕುಮಾರ್ಚನೆ ಕೂಡ ನಡೆಯುತ್ತದೆ. ಊರಲ್ಲಿರುವ ಬ್ರಾಹ್ಮಣ ಕುಟುಂಬದವರು ಮಾತ್ರ ಈ ಪೂಜಾ ವಿಧಿ ನಡೆಸುತ್ತಾರೆ.

ಶುಕ್ರವಾರ ಹಬ್ಬದ ಕೊನೆಯ ದಿನ. ಸಂಜೆ ರಥೋತ್ಸವ ಲಿಂಗಾಯಿತ ಶೆಟ್ಟರು ತೇರುಗೆಯ್ದು ಸಿದ್ಧಪಡಿಸಿರುತ್ತಾರೆ ರಥಕ್ಕೆ ಪೂಜೆ ಪುರಸ್ಕಾರಗಳನ್ನು ನೆರವೇರಿಸಿ ಅಲ್ಲಿ ನೆರೆದ ಎಲ್ಲಾ ಕೋಮಿನ ಜನರು ಒಟ್ಟಾಗಿ ಕೂಡಿ ರಥ ಎಳೆಯುತ್ತಾರೆ ಅಲ್ಲಿಗೆ ಜಾತ್ರೆ ಮುಗಿಯುತ್ತದೆ.[*]

## ಮಂಟೇಸ್ವಾಮಿ ಕೊಂಡ

ಪಟ್ಟಣದ ಉತ್ತರ ಭಾಗದ ಆದಿಶಕ್ತಿ ದೇವಸ್ಥಾನದ ಎದುರು ವಾಸಿಸುವ ಉಪ್ಪಾರ ಜನಾಂಗದವರು ಪ್ರತಿ ವರ್ಷ ಮಂಟೇಸ್ವಾಮಿ ಕೊಂಡೋತ್ಸವ ಆಚರಿಸುತ್ತಾರೆ. ಯುಗಾದಿ ಹಬ್ಬ ಆದ ನಂತರ ಹಬ್ಬದ ಸಿದ್ಧತೆ ಆರಂಭ. ಕೇರಿಯ ಮುಖಂಡರು ತೀರ್ಮಾನಿಸಿದ ಪ್ರಕಾರ ಜಿಲ್ಲೆಯಾದ್ಯಂತ ೪೦ ಗ್ರಾಮಗಳು ತಮ್ಮ ಜನಾಂಗಕ್ಕೆ ವೀಳ್ಯೆ ನೀಡಿ ಕೊಂಡೋತ್ಸವದಲ್ಲಿ ಪಾಲ್ಗೊಳ್ಳಲು ಆಹ್ವಾನಿಸುತ್ತಾರೆ.

ಯುಗಾದಿ ಹಬ್ಬ ಕಳೆದ ಒಂದು ತಿಂಗಳಿನ ನಂತರದ ಗುರುವಾರದಂದೇ ಹಬ್ಬ ಪ್ರಾರಂಭವಾಗುತ್ತದೆ. ಹದಿನೈದು ದಿನಗಳ ಮುಂಚಿತವಾಗಿಯೇ ಕೊಂಡದ ಸೌದೆ ತಂದು ಜೋಡಿಸಲಾಗುತ್ತದೆ. ಬೀದಿಯ ಮುಖಂಡರಾದ ನಂಜುಂಡಶೆಟ್ಟರವರ ಪ್ರಕಾರ ಎರಡು ತಲೆಮಾರುಗಳಿಂದಲೂ ಈ ಹಬ್ಬ ತಪ್ಪದೆ ಆಚರಣೆಯಾಗುತ್ತ ಬಂದಿದೆ. ಕೊಂಡಕ್ಕೆ ಮರವೊಂದನ್ನು ಖರೀದಿಸಿ ಪೂಜೆ ಸಲ್ಲಿಸಿ ತರಿದು ಅಲಂಕರಿಸಿದ

ಎತ್ತಿನ ಗಾಡಿಗಳಿಗೆ ತುಂಬಿಕೊಂಡು ವಾದ್ಯ ಗೋಷ್ಠಿಗಳ ಸಂಭ್ರಮದೊಡನೆ ಸೌದೆ ತರುವುದು ವಾಡಿಕೆ.

ಗುರುವಾರದಂದು ಮಧ್ಯಾಹ್ನದ ವೇಳೆಗೆ ಆಹ್ವಾನಿತ ಬಂಧುಗಳೆಲ್ಲ ತಮ್ಮ ಗ್ರಾಮಗಳ ಸತ್ತಿಗೆ ಸೂರೆ ಪಾನಿಗಳೊಡನೆ ಚಾಮರಾಜನಗರಕ್ಕೆ ಬಂದು ಹಳೇ ಬಸ್ ಸ್ಟಾಂಡಿನ ಮಾರಮ್ಮನ ಗುಡಿಯ ಬಳಿ ಜಮಾಯಿಸಿ ಕೇರಿಗೆ ಸುದ್ದಿ ಕಳುಹಿಸುತ್ತಾರೆ. ಕೇರಿಯ ಯಜಮಾನರುಗಳು ವಾದ್ಯಗೋಷ್ಠಿಗಳ ಸಮೇತರ ಅವರ ಬಳಿಗೆ ಬಂದು ಹಾರ ತುರಾಯಿಗಳ ಗೌರವ ಸಮರ್ಪಿಸಿ ಮಂಟೇಸ್ವಾಮಿ ದೇವಸ್ಥಾನದ ಪ್ರಾಂಗಣಕ್ಕೆ ಕರೆದುಕೊಂಡು ಹೋಗುತ್ತಾರೆ. ಇತರ ತಮ್ಮ ದೇವಸ್ಥಾನದ ಕಂಡಾಯ ಹೊತ್ತು ಅತಿಥಿ ಕಲಾವಿದರ ಜೊತೆಗೂಡಿ ತಮ್ಮ ಜನಾಂಗದ ಎಲ್ಲಾ ಬೀದಿಗಳಲ್ಲೂ ಮೆರವಣಿಗೆ ಮಾಡಿ ಕೊಂಡದ ಗುಳಿಯ ಸಮೀಪ ಬಂದು ಪೂಜೆ ಸಲ್ಲಿಸಿ ಶುಭಲಗ್ನದ ವೇಳೆಗೆ ಕೊಂಡಕ್ಕೆ ಬೆಂಕಿ ಇಕ್ಕುತ್ತಾರೆ. ಆ ಮೇಲೆ ಅತಿಥಿಗಳೆಲ್ಲರನ್ನು ಮನೆ ಮನೆಗೆ ಇಂತಿಷ್ಟು ಜನರೆಂದು ಗೊತ್ತುಪಡಿಸಿ ಊಟಕ್ಕೆ ಕಳುಹಿಸುತ್ತಾರೆ. ರಾತ್ರಿ ದೇವರಿಗೆ ಒಂದು ಕೋಳಿ ಬಲಿ ಕೊಟ್ಟು ಅಡಿಗೆ ಸಿದ್ಧಪಡಿಸಿ ಯಡೆ ಇಟ್ಟು ಭಂಗಿ ಸೇವೆ ನಡೆಸುತ್ತಾರೆ. ಆ ದಿನ ರಾತ್ರಿ ಕೊಂಡ ಬೇಯುತ್ತದೆ.

ಶುಕ್ರವಾರ ಬೆಳಗ್ಗೆ ೬ ಗಂಟೆಗೆ ಕೇಲ್ ತರಲು ದೊಡ್ಡರಸನ ಕೊಳಕ್ಕೆ ಹೊರಡುತ್ತಾರೆ. ಅರವತ್ತರಿಂದ ಎಪ್ಪತ್ತು ಜನ ಮಂಟೇಸ್ವಾಮಿ ಗುಡ್ಡರು ಉತ್ಸವದಲ್ಲಿ ಸಾಲಾಗಿ ಮುನ್ನಡೆಯುತ್ತಾರೆ. ಗುಡ್ಡನೊಬ್ಬ ಕೇಲ್ ಹೊತ್ತರೆ, ಮೂವರು ಗುಡ್ಡರು ಹೂಹೊಂಬಾಳೆ ಚಿತ್ರಿಸಿದ ಕಂಡಾಯ ಹೊರುತ್ತಾರೆ. ಉಳಿದ ಎಲ್ಲಾ ಗುಡ್ಡರು ಬೆತ್ತ, ಜೋಳಿಗೆ ಹೊತ್ತು ಜಾಗಟೆ ಬಾರಿಸುತ್ತಾ ಸಾಗುತ್ತಾರೆ. ಮಡಿವಾಳ ಬೀದಿಯವರು ಮಡಿ ಹಾಸುತ್ತಾರೆ. ನಡೆಮಡಿಯ ಮೇಲೆ ಹೊರಟ ಮೆರವಣಿಗೆ ನಾಗಪ್ಪಶೆಟ್ಟರ ಚೌಕಕ್ಕೆ ಬಂದು ದೊಡ್ಡಂಗಡಿ ಬೀದಿಗೆ ಸೇರುತದೆ. ೪೦ ಗ್ರಾಮಗಳಿಂದ ಆಗಮಿಸಿದ ಕಲಾ ಬಂಧುಗಳು ೪೦ ಸತ್ತಿಗೆಗಳ ಮೆರೆಸುತ್ತಾರೆ. ದೊಣ್ಣೆವರೆ, ಪಟವರಸೆ, ಕೋಲಾಟ, ಕಂಸಾಳೆ ಕುಣಿತ, ಗಾಡಿಗೊಂಬೆ ಮುಂತಾದ ವಿವಿಧ ಕಲಾ ಸಂಸ್ಕೃತಿ ಪ್ರದರ್ಶನಗೊಳ್ಳುತ್ತದೆ.

೬೦ ರಿಂದ ೭೦ ಜನ ಗುಡ್ಡರಲ್ಲಿ ಕಂಡಾಯ ಹೊತ್ತ ನಾಲ್ಕು ಜನ ಮಾತ್ರ ಮಧ್ಯಾಹ್ನ ೧೨ ಗಂಟೆ ವೇಳೆಗೆ ಕೊಂಡ ಹಾಯುತ್ತಾರೆ. ಆ ನಾಲ್ಕು ಜನರಿಗೂ ಕ್ರಮವಾಗಿ ಮಂಟೇಸ್ವಾಮಿ, ಸಿದ್ದಪ್ಪಾಜಿ, ದೊಡ್ಡಮ್ಮ ತಾಯಿ ಹಾಗೂ ರಾಚಪ್ಪಾಜಿ ದೇವರುಗಳು ಮೈಮೇಲೆ ಬಂದಿರುತ್ತವೆ. ಅನಂತರ ಮುತ್ತಾರು ಕೊಂಡ ಹಾಯುವಂತಿಲ್ಲ.

ಹರಕೆ ಹೊತ್ತವರು ಸತ್ತಿಗೆಗಳಿಗೆ ಚೌಕ(ವಸ್ತ್ರ) ಕಟ್ಟುತ್ತಾರೆ. ಕೊಂಡಕ್ಕೆ ಎಳ್ಳು, ಹರಳು ಸುರಿಯುತ್ತಾರೆ. ಈ ನಾಲ್ಕೂ ಜನ ಗುಡ್ಡರೂ ಬುಧವಾರ ಬೆಳಿಗ್ಗೆಯಿಂದಲೇ ಒಪ್ಪತ್ತು ಆಚರಿಸುತ್ತಾ ದಿನಕ್ಕೆರಡು ಸಲ ಸ್ನಾನ ಮಡಿ ಮಾಡಿಕೊಂಡು, ದಿನಕ್ಕೆ ಒಂದೇ ಒಂದು ಲೋಟ ಹಾಲು ಸೇವಿಸುತ್ತಾ ಕೊಂಡ ಹಾಯುವ ತನಕ ಉಪವಾಸ ವ್ರತ ಕೈಗೊಂಡಿರುತ್ತಾರೆ.

ಕೊಂಡ ಹಾಯ್ದ ನಂತರ ಊಟೋಪಚಾರ, ಸಿಹಿ ಊಟ ಮಾತ್ರ ಅದೇ ದಿನ ಮತ್ತೆ ಮೂರು ಗಂಟೆಗೆ ಮೆರವಣಿಗೆ ಹೊರಡುತ್ತದೆ. ಗುಂಡ್ಲುಪೇಟೆ ವೃತ್ತದ ಪಕ್ಕ ವಾಸವಿರುವ ಮೇಲುಗಡೆ ಉಪ್ಪಾರಬೀದಿಗೆ ಹೋಗಿ ಮನೆ ಮನೆ ಪೂಜೆ ಪಡೆಯಲಾಗುತ್ತದೆ. ದೊಡ್ಡಂಗಡಿ ಬೀದಿಯ ವ್ಯಾಪಾರಿಗಳು ಕೂಡ ಹಣ್ಣು ಕಾಯಿ ಪೂಜೆ ಕೊಡುತ್ತಾರೆ. ಅಲ್ಲಿಂದ ನೇರವಾಗಿ ದೊಡ್ಡಮ್ಮ ತಾಯಿ ದೇವಸ್ಥಾನಕ್ಕೆ ಆಗಮಿಸಿ, ಕಂಡಾಯ ಇಟ್ಟು ಪೂಜೆ ಸಲ್ಲಿಸಿ ತಮ್ಮ ಬೀದಿಯ ಮನೆ ಮನೆಗೆ ಪೂಜೆಯ ಸೇವೆ ಪಡೆಯಲು ಹೊರಡುತ್ತಾರೆ. ಈ ಪೂಜಾ ಕಾರ್ಯ ಮುಗಿದ ಸಾಯಂಕಾಲ ಅತಿಥಿಗಳನ್ನೆಲ್ಲಾ ತಾಂಬೂಲ ನೀಡಿ ಬೀಳ್ಕೊಡುತ್ತಾರೆ.

ಶನಿವಾರ ಬೆಳಿಗ್ಗೆ ರಾಮನ ವಿಗ್ರಹವಿಟ್ಟ ಗರುಡ ವಾಹನದ ಮೆರವಣಿಗೆ, ಹುಡುಗರಿಗೆ ಓಕುಳಿ ಆಡುವ ಅವಕಾಶ. ವಾಹನ ಹೊತ್ತವರಿಗೆ ಮನೆ ಮನೆಗಳಲ್ಲಿ ಅರಿಶಿನ ಕುಂಕುಮ ಬೆರೆಸಿದ ನೀರು ಹುಯ್ಯುತ್ತಾರೆ.

ಭಾನುವಾರ ಓಕುಳಿ ಮುಂದುವರಿಯುತ್ತದೆ. ಇಂದಿನ ವಿಶೇಷವೆಂದರೆ ಹೆಂಗಸರು ಮಾತ್ರ ಓಕುಳಿ ಆಡಬೇಕು; ಬಣ್ಣ ಕಲಿಸಿ ಓಕುಳಿ ಹಾಕುವಂತಿಲ್ಲ. ಬರಿ ನೀರಿನ ಓಕುಳಿ ಮಾತ್ರ. ಈ ಹೆಂಗಸರು ಸಲ್ಲುವ ಮೋರೆಯ ತಮ್ಮ ಭಾವಂದಿರು ಮಾವಂದಿರಿಗೆ ನೀರು ಎರಚಬಹುದು. ಅದೇ ಗಂಡಸರ್ಯಾರು ಸಲುಮೋರೆ ಎಂದು ತಿರುಗಿ ನೀರು ಎರಚುವಂತಿಲ್ಲ. ಅತ್ತಿಗೆ ನಾದಿನಿಯರು ಪರಸ್ಪರ ಓಕುಳಿ ಆಡಲು ಅಭ್ಯಂತರವಿಲ್ಲ.

ಸೋಮವಾರ ಹಬ್ಬದ ಕೊನೆಯ ದಿನ ಬಂದಿರುವ ನೆಂಟರಿಷ್ಟರಿಗೆ ಒಳ್ಳೆಯದು, ಕೆಟ್ಟದ್ದೆಲ್ಲ, ಅಡಿಗೆ ಮಾಡಿ ಉಣ್ಣಿಸಿ ತಿನ್ನಿಸಿ ಸಡಗರ ಸಂಭ್ರಮಗಳಿಂದ ಬೀಳ್ಕೊಡುತ್ತಾರೆ. ಅಲ್ಲಿಗೆ ಹಬ್ಬ ಮುಗಿಯುತ್ತದೆ.[೪]

**ಕೆಂಪನಪುರದ ಮಾರಿಹಬ್ಬ**

ಶಿವರಾತ್ರಿ ಹಬ್ಬ ಕಳೆದ ಒಂದು ವಾರದ ನಂತರ ಬುಧವಾರದ ದಿನ ಕರ್ಕ್ಲು ಇಡಲಾಗುತ್ತದೆ. ಆಡುಮರಿ ಕತ್ತರಿಸಿ ಅದಕ್ಕೆ ಅದರ ರಕ್ತ ಬೆರಸಿ ಉರಸುತ್ತ ರಸಮುದ್ದೆ ಇಡುತ್ತಾರೆ. ರಸಮುದ್ದೆ ಇರುವವರು ಮಾತಾಡುವಂತಿಲ್ಲ. ಜೊತೆ ಇರುವವರು ತಮಟೆ ಸದ್ದು ಮಾಡುತ್ತಾ ಅಬ್ಬರಿಸುತ್ತಾ ಹಿಂದೆ ಹಿಂದೆ ಹೋಗಬೇಕು ಮತ್ತೆ ಒಂದು ವಾರದ ನಂತರದ ಬುಧವಾರದಂದು ಊರ ಮಧ್ಯೆ ಇರುವ ಮಾರಮ್ಮನ ದೇವಸ್ಥಾನದ ಮುಂಭಾಗ, ಹರಿಜನ ಬೀದಿಯವರು ನೀಡಿದ ಹೊಸ ಮಡಕೆ ಹಾಗೂ ಅಕ್ಕಿ ತೆಗೆದುಕೊಂಡು ಉಪ್ಪಾರ ಜನಾಂಗದವರು ಮಡೆ ಬೇಯಿಸುತ್ತಾರೆ. ಬೇಯಿಸಿದ ಮಡೆಗೆ ಮಾರಿಗುಡಿಯ ಪೂಜೆ ಸಲ್ಲಿಸಿ ಹರಿಜನರಿಗೆ ವಾಪಸ್ಸು ನೀಡಲಾಗುತ್ತದೆ.

ಮಂಗಳವಾರವೆ 'ತಮಡಿ' ಕೇಳ್ ಹಟ್ಟಿಯಲ್ಲಿ ಮಲಗಿ ಬಿಡುತ್ತಾರೆ. ಬುಧವಾರ ಆರತಿ. ಮೂರು ಗಂಟೆಗೆ ಊರಿನ ಎಲ್ಲಾ ಕೋಮಾರಿನ ಜನರು ಡೋಲು, ತಮಟೆ ಬಾರಿಸಿಕೊಂಡು ಅಲ್ಕಂಡ್ ಕೂಕ್ಕಂಡು ಕೇಲ್ ಹಟ್ಟಿಗೆ ಹೋಗಿ ತಮಡಿಯನ್ನು ಎಬ್ಬಿಸುತ್ತಾರೆ. ಆತ ಎದ್ದ ಆವೇಶಭರಿತವಾಗಿ ಅಲ್ಲಿಂದ ಓಡುತ್ತಲೇ ನೇರವಾಗಿ ಮಾರಮ್ಮನ ದೇವಸ್ಥಾನಕ್ಕೆ ಬರುತ್ತಾನೆ. ಜೊತೆಗೆ ಉಪ್ಪಾರ ಜನಾಂಗದವರು ಸತ್ತಿಗೆ ಸೂರೆಪಾನಿ

ಮೆರೆದು ಕುಣಿದು ಸಾಗುತ್ತಾರೆ. ದೇವರನ್ನು ದೇವಸ್ಥಾನದ ಒಳಗಡೆಗೆ ಸೇರಿಸಿದ ಮೇಲೆ ಮಡೆಗೆ ಪೂಜೆ ಸಲ್ಲಿಸಿ ವಾಪಸ್ಸು ನೀಡುವುದು. ಮನೆ ಮಂದಿಯಲ್ಲ ತಪ್ಪದೆ ಪ್ರಸಾದವೆಂದು ಸ್ವೀಕರಿಸುತ್ತಾರೆ.

ಎರಡು ಗಂಟೆ ಹೊತ್ತಿಗೆ ಕೋಮಿನ ಜನರು ಹಣ್ಣು ಕಾಯಿ ಪೂಜೆ ಸಲ್ಲಿಸುತ್ತಾರೆ. ಆ ತನಕ ಹೆಂಗಸರಿಲ್ಲ ಉಪವಾಸ ವ್ರತ ಕೈಗೊಂಡಿರುತ್ತಾರೆ. ಅಂದು ಬೆಳಿಗ್ಗೆಯೇ ಹರಿಜನ ಬೀದಿಯವರು ಕೋಳಿ ಬಲಿಕೊಟ್ಟು ಅಡಿಗೆ ಮಾಡಿಟ್ಟಿರುತ್ತಾರೆ. ರಾತ್ರಿ ಮಡೆ ಪ್ರಸಾದ ಸ್ವೀಕರಿಸಿದ ಮೇಲೆ ದೂಪ ಹಾಕಿ ಊಟ ಸೇವಿಸುತ್ತಾರೆ.

ರಸಮುದ್ದೆ ಇಟ್ಟು ೧೦ ದಿನಗಳ ತನಕ ಹರಿಜನ ಬೀದಿಯವರನ್ನು ಬಿಟ್ಟರೆ ಉಳಿದ ಯಾವ ಜನಾಂಗದವರು ಅಡಿಗೆ ತಯಾರಿಸಿದರೂ ಒಗ್ಗರಣೆ ಹಾಕುವಂತಿಲ್ಲ. ಭಾನುವಾರದ ನಂತರ ಈ ವ್ರತ ಕೊನೆಗೊಳ್ಳುತ್ತದೆ.

ಓಕುಳಿ : ಶನಿವಾರ ಮಧ್ಯಾಹ್ನ ಓಕುಳಿ, ಉಪ್ಪಾರರು ಮತ್ತು ಹರಿಜನರು ಮಾತ್ರ ಓಕುಳಿ ಆಡುತ್ತಾರೆ. ಮಾರಮ್ಮನ ದೇವಸ್ಥಾನದ ಮುಂಭಾಗ ೧೦ ಅಡಿ ಆಳ, ೮ ಅಡಿ ಅಗಲ, ೮ ಅಡಿ ಉದ್ದದ ಒಂದು ಹೊಂಡಕ್ಕೆ ನೀರು ತುಂಬಲಾಗುತ್ತದೆ. ಮೊದಲು ಕೆಂಪನಪುರ ಹಾಗೂ ಉಳ್ಳಿಕೆಬ್ಬೆಮೋಳೆ ಶೆಟ್ಟರು ಜೊತೆಗೂಡಿ ತಮ್ಮ ಬೀದಿಯಿಂದ ಮೆರವಣಿಗೆ ಹೊರಟು ಕುಣಿದು ಕುಪ್ಪಳಿಸುತ್ತಾ ದೇವಸ್ಥಾನದ ಬಳಿಗೆ ಬಂದು ದೇವರಿಗೆ ಪೂಜೆ ಸಲ್ಲಿಸಿ ಓಕುಳಿ ಗುಳಿಗೆ ಬೀಳುತ್ತಾರೆ. ಇವರಾದ ಮೇಲೆ ಓಕುಳಿ ಬೀಳುವ ಸರದಿ ಹರಿಜನರದ್ದು.

ಇವರ ಓಕುಳಿಯಾಟ ಮಾತ್ರ ವಿಶೇಷ ಆಕರ್ಷಣೆಯಿಂದ ಕೂಡಿದೆ. ಒಬ್ಬ ಪಡ್ಡೆ ಹುಡುಗ ಬಟ್ಟೆ ದಾಳ ಧರಿಸಿ ಕುದುರೆ ಮೇಲೆ ಕುಳಿತು ಸಿಗರೇಟು ಸೇದುತ್ತ ವಾದ್ಯ ಸದ್ದುಗಳ ಜೊತೆಗೆ ತಮ್ಮ ಕೇರಿಯಿಂದ ಮೆರವಣಿಗೆ ಹೊರಡುತ್ತಾನೆ. ಬೀದಿಯಲ್ಲಿ ಮೂರು ಸುತ್ತು ಹಾಕಿ ನಾಯಕರ ಬೀದಿಯತ್ತ ಹೊರಟು ಅಲ್ಲಿಂದ ನೇರವಾಗಿ ದೇವಸ್ಥಾನದ ಬಳಿ ಬಂದು ತೀರ್ಥ ಇಡಿಸಿಕೊಂಡು, ಈಗಾಗಲೇ ಉಪ್ಪಾರ ಜನರು ಓಕುಳಿ ಬಿದ್ದುರಾಡಿಯಾಗಿರುವ ಹೊಂಡಕ್ಕೆ ಬೀಳಲು ಹುಡುಗರೆಲ್ಲ ಸಜ್ಜಾಗಿರುತ್ತಾರೆ. ಆ ವೇಳೆಗೆ ಮಾರಮ್ಮನ ಒಕ್ಕಲಿಗೆ ಸೇರಿದ ಒಬ್ಬ ಹುಡುಗ ದೊಡ್ಡ ಮೀಸೆ ಬಿಟ್ಟುಕೊಂಡು, ಕಪ್ಪುಬಣ್ಣ ಬಳೆದುಕೊಂಡು ಒಡಾಳದ ಕಿರೀಟ ಧರಿಸಿ ಬೇವಿನಸೊಪ್ಪಿನ ಪಲ್ಲಕ್ಕಿಯ ಮೇಲೆ ನಿಂತು ಬಣ್ಣ ಎರಚಿಕೊಂಡು ಓಕುಳಿ ಬೀಳುತ್ತಾರೆ. ಯಾರಿಗೂ ಕೂಡ ಉಗುರು ಮೊನೆಯಷ್ಟು ನೋವಾಗುವುದಿಲ್ಲ. ಓಕುಳಿ ಬಿದ್ದು ಮನೆಗೆ ಹೋಗಿ ಧೂಪ ಹಾಕಿದ ನಂತರವೆ ಬಂದ ನೆಂಟರಿಷ್ಟರಿಗೆಲ್ಲ ಊಟ ಬಡಿಸುವುದು.

ಅದೇ ಶನಿವಾರ ರಾತ್ರಿ ಉಪ್ಪಾರ ಜನಾಂಗದವರು ಸತ್ತಿಗೆ ಸೂರಿ ಪಾನಿ ಮೆರೆದುಕೊಂಡು ಊರಿನ ಅಂಕದ ಬಾಗಿಲಿಗೆ ಬರುತ್ತಾರೆ. ಅಲ್ಲಿಗೆ ಲಿಂಗಾಯಿತ ಕೋಮಿನವರು ತಂಪು ಸೇವೆಗೆ ದೇವಸ್ಥಾನದ ಬಳಿ ಬಂದು ಪೂಜೆ ಸಲ್ಲಿಸುತ್ತಾರೆ. ಹರಿಜನರು ಕುಣಿಯುತ್ತಾರೆ. ಶೆಟ್ಟರು ಚಾವಣಿ ಸೇವೆ, ಬಾಯಿ ಬೀಗ ಹಾಕು

ತ್ತಾರೆ. ಆ ಮೆರವಣಿಗೆ ದೇವಸ್ಥಾನವನ್ನು ಬಳಸಿ ಕೊನೆಗೊಳ್ಳುತ್ತದೆ. ಭಾನುವಾರದಿಂದ ಆಚೆಗೆ ಉಳಿದ ಎಲ್ಲಾ ಜಾತಿಯ ಜನರು ಒಗ್ಗರಣೆ ಹಾಗೂ ಮಾಂಸದ ಅಡುಗೆ ಮಾಡಬಹುದಾಗಿದೆ."

## ಮುಂಗಲದ ಎತ್ತಿನ ಹಬ್ಬ

ಶಿವರಾತ್ರಿ ಹಬ್ಬ ಕಳೆದ ೯ನೇ ದಿನಕ್ಕೆ ಎತ್ತಿನ ಹಬ್ಬದ ಪೂರ್ವ ಸಿದ್ಧತೆಗಳು ಆರಂಭ. ಹಬ್ಬಕ್ಕೆ ಇನ್ನೂ ೨೫ ದಿನಗಳು ಬಾಕಿ ಇರುವಾಗಲೇ ಊರ ಸುತ್ತ ಕರ್ಕ್ಯ ಇಡಲಾಗುತ್ತದೆ. ರಾತ್ರಿ ಹನ್ನೆರಡು ಗಂಟೆಗೆ ಊರ ಮಧ್ಯೆ ಇರುವ ಮಾರಮ್ಮನ ದೇವಸ್ಥಾನದ ಬಯಲಲ್ಲಿ ಆಡು ಮರಿಯೊಂದು ಬಲಿ ಕೊಟ್ಟು, ಅದರ ರಕ್ತವನ್ನು ಅನ್ನದ ಜೊತೆ ಕಲಸಿ, ಉಪ್ಪಾರ ಜನಾಂಗದವರು ಮುಂದೆ ಮುಂದೆ ರಸಮುದ್ದೆ ಇಡುತ್ತಾ ಹೋದರೆ ಅವರ ಹಿಂದೆ ಹರಿಜನ ಬೀದಿಯವರು ತಮಟೆ ಬಡಿದು ಅಬ್ಬರಿಸುತ್ತ ಮರಿಯ ಶವವನ್ನು ಎಳೆದುಕೊಂಡು ಹೋಗುತ್ತಾರೆ.

ಇದಾದ ಐದನೇ ದಿನಕ್ಕೆ ಉಪ್ಪಾರ ಜನಾಂಗದ ಮಹಿಳೆಯರು ದೇವಸ್ಥಾನದ ಮುಂಭಾಗ ಮಡ ಬೇಯಿಸುತ್ತಾರೆ. ಹರಿಜನರು ಹೊಸ ಮಡಕೆ, ಅಕ್ಕಿ ನೀಡಿದರೆ ಅದನ್ನು ಬೇಯಿಸಿ ದೇವರಿಗೆ ಪೂಜೆಯಿಕ್ಕಿ ಪ್ರಸಾದವೆಂದು ಹಿಂತಿರುಗಿ ಕೊಡುತ್ತಾರೆ.

ಕರ್ಕ್ಯ ಇಟ್ಟ ೨೦ ದಿನಗಳ ತನಕವು ಹರಿಜನ ಕೇರಿಯ ಹೆಬ್ಬರೆ ಕುಲದವರು ದಿನ ಸಾಯಂಕಾಲ ೭ ಗಂಟೆಗೆ ತಮ್ಮ ಬೀದಿಯ ಮಕ್ಕಳನ್ನು ಕೂಡಿಕೊಂಡು ಹೆಬ್ಬರೆ ಬಡಿಯುತ್ತಾ ದೇವಸ್ಥಾನದ ಬಳಿಗೆ ಬಂದು ಪೂಜೆ ಸಲ್ಲಿಸಿ ಕೈ ಮುಗಿದು ಹಿಂತಿರುಗಬೇಕು. ೨೦ನೇ ದಿನಕ್ಕೆ ಊರವರೆಲ್ಲಾ ಸೇರಿಕೊಂಡು ಮಾರಿ ಗುಡಿಯ ಮುಂದೆ ಸಿದ್ಧಪಡಿಸಿಟ್ಟ ಹುಲ್ಲು, ಕಡ್ಡಿಗಳ ಎಂಟ್ಹತ್ತು ಮೆದೆಗಳಿಗೂ ಬೆಳಗಿನ ಜಾವ ಆರು ಗಂಟೆಗೆ ಬೆಂಕಿ ಹಾಕುತ್ತಾರೆ.

ಕಿಚ್ಚು ಉರಿಸಿದ ಐದನೆ ದಿನಕ್ಕೆ ಶನಿವಾರದಂದು ಎತ್ತಿನ ಹಬ್ಬ ಪ್ರಾರಂಭ. ಶನಿವಾರ ಮತ್ತು ಭಾನುವಾರ ಎರಡು ದಿನಗಳ ಹಬ್ಬ ಇದಾಗಿದೆ. ಶನಿವಾರ ಬೆಳಿಗ್ಗೆ ಹರಿಜನ ಬೀದಿಯ ಪಡ್ಡೆಗಳೆಲ್ಲ ತಮಟೆ ವಾದ್ಯ ಸಮೇತ ಊರಿನ ಎಲ್ಲಾ ಬೀದಿಗಳಲ್ಲು ಕುಣಿದು ಮೆರೆದು ದೇವಸ್ಥಾನದ ಮುಂಭಾಗಕ್ಕೆ ಬರುತ್ತಾರೆ. ಅಲ್ಲಿ ಅವರಿಗಾಗಿ ಓಕುಳಿ ಆಡಲು ನೀರಿನ ಹೊಂಡ ಸಿದ್ಧವಾಗಿರುತ್ತದೆ. ಹರಿಜನ ಬೀದಿಯವರು ಓಕುಳಿ ಆಡಿದ ನಂತರವೆ ಇತರ ಕೋಮಾರಿನವರು ಅಡಿಗೆ ಮಾಡಲು ತಮ್ಮ ಮನೆಗಳಲ್ಲಿ ಒಲೆ ಹಚ್ಚುವುದು. ಅಂದು ಸಾಯಂಕಾಲ ೪ ಗಂಟೆಗೆ ಎತ್ತಿನ ಉಂಡೆ, ಅಂದರೆ ದೇವಸ್ಥಾನದ ಬಯಲಲ್ಲಿ ಎತ್ತುಗಳನ್ನು ಒಂದೊಂದಾಗಿ ಉರ್ಜಿ ಹಗ್ಗಕ್ಕೆ ಕಟ್ಟಿ ಓಡಿಸುವುದಾಗಿದೆ. ಕರ್ಕ್ಯ ಇಟ್ಟ ಮರಿಯ ಚರ್ಮವನ್ನು ಸಜ್ಜದ ಗಳವೊಂದರ ತುದಿಗೆ ಉಂಡೆ ಮಾಡಿಕಟ್ಟಿರುತ್ತಾರೆ. ದಪ್ಪನಾದ ಉರ್ಜಿ ಹಗ್ಗವನ್ನು ಎತ್ತಿಗೆ ಸಿಕ್ಕಿಸಿ ಎರಡೂ ಕಡೆ ಐದೈದು ಜನರು ಹಗ್ಗ ಹಿಡಿದು ಕೊಂಡಿರುತ್ತಾರೆ. ಗಳದ ಉಂಡೆಯಿಂದ ಎತ್ತಿನ ಮೂತಿಗೆ ತಿವಿದು ತಿವಿದು ಅದಕ್ಕೆ ರೋಷ

ಬರಿಸಿ ಅಬ್ಬರಿಸುತ್ತಾ ಓಡಿಸುತ್ತಾ ಖುಷಿ ಪಡುತ್ತಾರೆ. ಮೊದಲು ಕಟ್ಟುವ ಎತ್ತ ವೀರಶೈವ ಜನಾಂಗದವರಿಗೆ ಸೇರಿದ್ದು. ಆನಂತರ ಯಾವ ಜಾತಿಯವರ ಮನೆಯ ಎತ್ತುಗಳನ್ನಾದರೂ ಚೀಟಿ ಪ್ರಕಾರ ಉರ್ಜಿ ಕಟ್ಟಿ ಓಡಿಸಬಹುದಾಗಿದೆ. ಅಂದಿನ ಹರಿಜನ ಕೇರಿಯವರ ಹಬ್ಬ ಮುಗಿಯುತ್ತದೆ. ಇದೇ ವಿಧಿ ವಿಧಾನಗಳನ್ನು ಅನುಸರಿಸಿ ಭಾನುವಾರದಂದು ಊರಿನ ಇತರೇ ಜನಾಂಗದವರು ಹಬ್ಬ ಮುಂದುವರಿಸುತ್ತಾರೆ.[೬]

## ಕಸ್ತೂರ್ ಬಂಡಿ ಜಾತ್ರೆ

ಕಸ್ತೂರಿಗೆ ಸೇರಿದ ದೊಡ್ಡಮ್ಮ ತಾಯಿ ಹೆಸರಿನಲ್ಲಿ ಆಚರಿಸಲ್ಪಡುವ ಹಬ್ಬ ಕಸ್ತೂರು ಬಂಡಿ ಜಾತ್ರೆಯೆಂದೇ ನಮ್ಮ ಸುತ್ತಮುತ್ತಲ ಗ್ರಾಮಗಳಲ್ಲಿ ಪ್ರಸಿದ್ಧ ಪಡೆದಿದೆ. ಈ ಹಬ್ಬವನ್ನು ಒಟ್ಟು ೧೬ ಗ್ರಾಮಗಳ ಜನತೆ ಆಚರಿಸುತ್ತಾರೆ. ಕಸ್ತೂರು ಪುಟ್ಟ ಗೌಡನಹುಂಡಿ, ಹೊನ್ನೆಗೌಡನ ಹುಂಡಿ, ಸಪ್ಪಯ್ಯನಪುರ, ಕೆ.ಮೂಕಳ್ಳಿ, ಭೋಗಾಪುರ, ಕಿರಗಸೂರು, ಕಲ್ಲಂಬಳ್ಳಿ, ಮರಿಯಾಲ, ಅಂಕುಶಯರಾಯನ ಪುರ, ಚಿಕ್ಕಹೊಮ್ಮ, ದೊಡ್ಡ ಹೊಮ್ಮ, ದಾಸನೂರು, ತೊರವಳ್ಳಿ, ಹೆಗ್ಗವಾಡಿ, ಕೆ.ಬಸವನಪುರ. ಡಿಸೆಂಬರ್ ಕೊನೆಯ ವಾರ ಕಸ್ತೂರು ಗ್ರಾಮದ ಊರಗೌಡ ಜನವರಿ ತಿಂಗಳ ಮೊದಲನೆಯ ಅಥವಾ ಎರಡನೆಯ ಭಾನುವಾರದಂದು ಜಾತ್ರೆ ನಡೆಸಲು ಸುತ್ತಲ ಹದಿನಾರು ಹಳ್ಳಿಗೂ ಕಾಗದ ಕಳುಹಿಸುತ್ತಾನೆ.

ಆ ಪ್ರಕಾರ ಹಬ್ಬದ ದಿನ ಭಾನುವಾರ ಬೆಳಿಗ್ಗೆ ಕಸ್ತೂರು ಗ್ರಾಮದಲ್ಲಿರುವ ದೊಡ್ಡಮ್ಮ ತಾಯಿ ವಿಗ್ರಹವನ್ನು ಕಸ್ತೂರಿನ ತಮ್ಮಡಿ(ಶಿವಾರ್ಚಕರು) ಜನಾಂಗದವರು ಹೊತ್ತು ಓಲಗದ ಸಮೇತ ಕುಣಿದು ಮೆರೆಯುತ್ತಾ ಊರಾಚೆ ಬಯಲಲ್ಲಿರುವ ದೇವಸ್ಥಾನಕ್ಕೆ ಹೋಗಿ ಇಳಿಸುತ್ತಾರೆ. ಈ ಮೆರವಣಿಗೆಯಲ್ಲಿ ಬಹುಮುಖ್ಯವಾಗಿ ಕಸ್ತೂರು, ಪುಟ್ಟೇಗೌಡನಹುಂಡಿ ಹಾಗೂ ಹೊನ್ನೇಗೌಡನಹುಂಡಿ ಗ್ರಾಮಸ್ಥರು ಪಾಲ್ಗೊಳ್ಳುತ್ತಾರೆ.

ಕಸ್ತೂರು ಗೌಡರು ಕಾಗದ ಮತ್ತು ವೀಳ್ಯೆ ಕಳುಹಿಸಿದ ಮೇರೆಗೆ ಹದಿನಾರು ಗ್ರಾಮಸ್ಥರು ತಮ್ಮ ತಮ್ಮ ಊರುಗಳಲ್ಲಿ ಕುರ್ಜು ಬಂಡಿಯ ಸಿದ್ಧತೆ ಮಾಡಿಕೊಳ್ಳುತ್ತಾರೆ. ಹರಿಸಿಕೊಂಡು ಆಯಾ ಊರಿನ ಭಕ್ತಾದಿಗಳು ಬಂಡಿಗೆ ಕಟ್ಟಲು ಬಾಳೆಗೊನೆ, ಎಳನೀರಿನ ತಾರು. ದೊಡ್ಡ ಗಾತ್ರದ ಹೂವಿನ ಹಾರ, ಹೊ ಹೊಂಬಾಳೆಯನ್ನು ತಂದು ಕೊಡುತ್ತಾರೆ. ಮಧ್ಯಾಹ್ನ ೧೨ ಗಂಟೆ ಹೊತ್ತಿಗೆ ಎಲ್ಲಾ ಊರಿನ ಬಂಡಿಗಳು ಜಾತ್ರೆ ಮಾಳಕ್ಕೆ ಸರ್ವಾಲಂಕೃತಗೊಂಡು ಬರುತ್ತವೆ. ಒಂದೊಂದು ಬಂಡಿಯ ಮುಂದೆ ಓಲಗದವರು ಸದ್ದು ಮಾಡುತ್ತ ದೊಡ್ಡಮ್ಮ ತಾಯಿ ದೇವಸ್ಥಾನವನ್ನು ಒಂದು ಸುತ್ತು ಹಾಕಿಸಿ ಪೂಜೆ ಸಲ್ಲಿಸುತ್ತಾರೆ. ಹರಸಿಕೊಂಡವರು ಬಂಡಿಯಗಾಲಿಗೆ ಇಡುಗಾಯಿ ಹೊಡೆಯುತ್ತಾರೆ. ನಂತರ ದೇವಸ್ಥಾನದ ದಕ್ಷಿಣ ದಿಕ್ಕಿಗಿರುವ ಬಯಲಿಗೆ ತಂದು ಓಡಿಸುತ್ತಾರೆ.

ಹದಿನಾರು ಊರುಗಳ ಹದಿನಾರು ಬಂಡಿಯ ಜೊತೆಗೆ ಎರಡು ಹರಕೆಯ ಬಂಡಿಗಳು ಪ್ರತ್ಯೇಕವಾಗಿ ಸೇರುತ್ತವೆ. ಮರಿಯಾಲ ಗ್ರಾಮದಲ್ಲಿ ಗ್ರಾಮದ ಬಂಡಿಯ ಜೊತೆ ಹರಕೆ ಬಂಡಿಯೊಂದು ಸಾಗುತ್ತದೆ. ಹಾಗೆಯೇ ಕಸ್ತೂರಿನಲ್ಲಿಯೂ ಕೂಡ. ಹದಿನಾರು ಊರುಗಳ ಬಂಡಿಗಳಲ್ಲಿ ವಿಶೇಷ ಬಂಡಿ ಎಂದರೆ ಸಪ್ಪಯ್ಯನಪುರದ ಸೊಪ್ಪಿನ ಬಂಡಿ. ಮರದ ಸಪ್ಪಿನ ತೋರಣಗಳಿಂದಲೇ ಬಂಡಿ ಸಿದ್ಧಪಡಿಸುವುದು ಇಲ್ಲಿನ ವಿಶಿಷ್ಟ ಆಚರಣೆ.

ಸಾವಿರಾರು ಜನ ಭಕ್ತಾದಿಗಳು ಹರಕೆ ಸಲ್ಲಿಸಲು ಇಲ್ಲಿಗೆ ಆಗಮಿಸುತ್ತಾರೆ. ಹೆಂಗಸರು ಗಂಡಸರೆನ್ನದೆ ಹರಕೆ ಹೊತ್ತವರು ಪಂಜಿನ ಸೇವೆ ಮಾಡುತ್ತಾರೆ. ದನಕರುಗಳಿಗೆ ಹರಸಿಕೊಂಡವರು ತಮ್ಮ ಎತ್ತುಗಳ ಕೊಂಬಿಗೆ ಉರವ ಪಂಜು ಕಟ್ಟಿಸಿ ದೇವಸ್ಥಾನವನ್ನು ಸುತ್ತು ಹಾಕಿಸುತ್ತಾರೆ.

ಪೂಜೆಯ ನಂತರ ತಮ್ಮ ತಮ್ಮ ಊರುಗಳಿಗೆ ಹೊರಟ ಬಂಡಿಗಳು ಆಯಾಯ ಊರುಗಳಲ್ಲಿ ರಾತ್ರಿಯಿಡೀ ಮೆರವಣಿಗೆ ಉತ್ಸವ ನಡೆಸುತ್ತಾರೆ. ಹಬ್ಬದ ಪ್ರಯುಕ್ತ ಕೆಲವು ಗ್ರಾಮಗಳವರು ರಾತ್ರಿ ನಾಟಕ ಹಮ್ಮಿಕೊಳ್ಳುತ್ತಾರೆ. ಹೊಸ ಬಟ್ಟೆ ಧರಿಸಿ ಸಂಭ್ರಮ ಸಡಗರದಿಂದ ಬಂದ ನೆಂಟರಿಷ್ಟರಿಗೆ ಊಟ ತಿಂಡಿ ಬಡಿಸಿ ಖುಷಿಗೊಳ್ಳುತ್ತಾರೆ. ಈ ಜಾತ್ರೆ ನಂತರದ ಭಾನುವಾರ ಮರಿಜಾತ್ರೆ ನಡೆಯುತ್ತದೆ. ಅಂದು ಬಂಡಿಜಾತ್ರೆಯ ದಿನ ಪಾಲ್ಗೊಳ್ಳದ ಹದಿನಾರು ಹಳ್ಳಿಗಳ ಹೆಂಗಸರು ಮಕ್ಕಳು ದೇವಸ್ಥಾನಕ್ಕೆ ಬಂದು ಪೂಜೆ ಸಲ್ಲಿಸುತ್ತಾರೆ.[೬]

## ಹರದನಹಳ್ಳಿಯ ಕುಂಟಮ್ಮ ತಾಯಿ ಜಾತ್ರೆ

ಕುಂಟಮ್ಮ ತಾಯಿ ಕೊಂಡ ಹಬ್ಬವನ್ನು ಪ್ರಮುಖವಾಗಿ ನಡೆಸಿಕೊಡುವವರು ನಾಯಕ ಜನಾಂಗದವರು. ಆದರೂ ಇತರೆ ಜನಾಂಗದವರೂ ಹಬ್ಬ ಆಚರಿಸುವ ವಾಡಿಕೆಯಿದೆ. ಹಬ್ಬದ ಹಿಂದಿನ ದಿನ ಊರಿನ ಬೀದಿಗಳಲ್ಲಿ ಕಂಡಾಯದ ಮೆರವಣಿಗೆ ಪ್ರತಿ ಮನೆಯವರು ಹಣ್ಣು ಕಾಯಿ ಪೂಜೆ ಸಲ್ಲಿಸಿ ಕಪ್ಪುಧೂಳ್ತ ಪಡೆಯುತ್ತಾರೆ. ಮೂರು ದಿನಗಳ ನಂತರ ಕುಂಟಮ್ಮ ತಾಯಿ, ಮಂಟೇಸ್ವಾಮಿ, ಕೋಟೆ ಬಸಪ್ಪ ಕಾಳಮ್ಮ ತಾಯಿ ದೇವರುಗಳು ಮೈ ಮೇಲೆ ಬಂದು ಬೀದಿಯಲ್ಲೆಲ್ಲಾ ಮೆರವಣಿಗೆ ಮಾಡಲಾಗುತ್ತದೆ. ಉತ್ಸವದ ಉದ್ದಕ್ಕೂ ದೊಣ್ಣೆ ವರಸೆ, ಕತ್ತಿವರಸೆ, ಗೊರವರ ಕುಣಿತ, ಕಂಸಾಳೆ ಕುಣಿತ, ಗಾರುಡಿಗೊಂಬೆ ಪ್ರದರ್ಶನ ಇರುತ್ತದೆ. ಉತ್ಸವದ ಹಿಂದೆ ಸತ್ತಿಗೆ ಸೂರೆಪಾನಿ ಹಿಡಿದು ಜನರು ಬರುತ್ತಿರುತ್ತಾರೆ. ಹೀಗೆ ಹೊರಟ ಮೆರವಣಿಗೆ ಊರಾಚೆ ಇರುವ ಕುಂಟಮ್ಮ ಹಾಗೂ ಮಂಟೇಸ್ವಾಮಿ ದೇವಸ್ಥಾನದ ಮುಂಭಾಗಕ್ಕೆ ಬಂದು ನಿಲ್ಲುತ್ತದೆ.

ದೇವಸ್ಥಾನದ ಮುಂಭಾಗ ೨೦ ಅಡಿ ಉದ್ದದ ಕೊಂಡ ಬೆಂದು ಹಾಯಲು ಸಿದ್ಧವಾಗಿರುತ್ತದೆ. ಇಲ್ಲಿನ ವಿಶೇಷ ಆಕರ್ಷಣೆ ಹಾಗೂ ಆಚರಣೆಯೆಂದರೆ ಹರಕೆಯ ಕುರಿಯೊಂದು ಮುಂಗೊಂಡ ಹಾಯುತ್ತದೆ.

ಹಾಯ್ದು ಬಂದ ಕುರಿಯನ್ನು ಬಲಿಕೊಟ್ಟ ಮೇಲೆ ಮೈ ಮೇಲೆ ದೇವರು ಬಂದ ನಾಲ್ಕು ಜನರು ಕೊಂಡ ಹಾಯುತ್ತಾರೆ. ನಂತರ ಪೂಜೆ ಪುನಸ್ಕಾರಗಳು ನಡೆಯುತ್ತದೆ.[೬]

### ಹರದನಹಳ್ಳಿಯ ಮಾರಿಹಬ್ಬ

ಇದು ಗ್ರಾಮದ ಎಲ್ಲಾ ಜಾತಿಯ ಜನಾಂಗವೂ ಒಟ್ಟಾಗಿ ಸೇರಿ ಆಚರಿಸುವ ಹಬ್ಬವಾಗಿದೆ. ಯುಗಾದಿ ಹಬ್ಬದ ಹತ್ತಿರದ ಮಾರ್ಚ್ ೯ ತಿಂಗಳಿನ ಮಂಗಳವಾರದಂದೇ ಹಬ್ಬ ಕಳೆ ಕಟ್ಟುವುದು. ಒಂದು ವಾರಕ್ಕೆ ಮುನ್ನ ಮಾರಿಗುಡಿಯ ಬಳಿ ಎಲ್ಲಾ ಕೋಮಿನ ಯಜಮಾನರು ನೆರೆದು ಹಬ್ಬದ ದಿನ ನಿಗಧಿಗೊಳಿಸುತ್ತಾರೆ. ಮೂರು ದಿನ ಮುಂಚೆ ಕರ್ಫ್ಯೂ ಇಡುತ್ತಾರೆ. ಶನಿವಾರ ರಾತ್ರಿ ೧೨ ಗಂಟೆಗೆ ಕೋಮವಾರು ಯಜಮಾನರುಗಳ ದೇವಸ್ಥಾನ ಬಳಿ ಕೂಡಿ ನಾಯಕ ಜನಾಂಗದ ವ್ಯಕ್ತಿಯೊಬ್ಬನ ಮೇಲೆ ದೇವರು ಕರೆಯುತ್ತಾರೆ. ದೇವರ ಆದೇಶ ಬಂದ ಮೇಲೆ ಆಡುಮರಿ ಬಲಿಕೊಟ್ಟು ಅದರ ರಕ್ತವನ್ನು ಅನ್ನಕ್ಕೆ ಕಲಸಿ ಊರಿನ ಬೀದಿಗಳಿಗೆ ರಸಮುದ್ದೆ ಎರಚುತ್ತಾರೆ. ಅದರ ಹಿಂದೆ ಹರಿಜನ ಬೀದಿಯ ಕುಳವಾಡಿ ಮರಿ ದೇಹವನ್ನು ಸೊಂಟಕ್ಕೆ ಕಟ್ಟಿಕೊಂಡು ಎಳೆದುಕೊಂಡು ಹೋಗುತ್ತಾನೆ. ಅಷ್ಟರ ತನಕವೂ ಕೋಮುವಾರು ಯಜಮಾನರುಗಳು ಅಲ್ಲೇ ಕುಳಿತಿರಬೇಕು. ಹಬ್ಬದ ದಿನ ಮಂಗಳವಾರ ನಾಯಕ ಜನಾಂಗದ ಮಹಿಳೆಯರು ಮಣ್ಣಿನ ಪಾತ್ರೆಯನ್ನು ಹೊತ್ತು ತಂದು ದೇವಸ್ಥಾನದ ಮುಂಭಾಗ ಒಲೆ ಸಿದ್ಧಪಡಿಸಿ ಮಡೆ ಬೇಯಿಸುತ್ತಾರೆ.

ದೇವರ ಉತ್ಸವ ದೇವಸ್ಥಾನದಿಂದ ಹೊರಟು ದಿವ್ಯ ಲಿಂಗೇಶ್ವರ ಗುಡಿಯ ಹತ್ತಿರ ಸಾಗಿ ಅಲ್ಲಿಂದ ಕೊಂಗೇರಿ (ಕೊಂಗರ ಕೇರಿ) ಬೀದಿಯಲ್ಲಿ ಮುನ್ನಡೆದು ತಿರುಗಿ ದೇವಸ್ಥಾನದ ಬಳಿಗೆ ಬರುತ್ತದೆ. ಹರಕೆ ಹೊತ್ತ ಜನರು ಸತ್ತಿಗೆಯ ಮೇಲಕ್ಕೆ ಚಿಲ್ಲರೆ ಕಾಸು ಎಸೆಯುತ್ತಾರೆ. ಇನ್ನು ಕೆಲವು ದೇವರ ಹೆಸರಿಗೆ ಕೋಳಿ ಮರಿ ಹರಕೆ ಹೊತ್ತು ಸತ್ತಿಗೆ ಮೇಲಕ್ಕೆ ಎಸೆಯುತ್ತಾರೆ. ಅಂದು ಬೆಳಗ್ಗೆಯಿಂದ ಸಂಜೆವರೆಗೆ ಪೂಜೆ ಪುನಸ್ಕಾರಗಳು ವಿಜೃಂಭನೆಯಿಂದ ನಡೆಯುತ್ತವೆ. ಸಾಯಂಕಾಲ ಆಡುಮರಿಗಳನ್ನು ಬಲಿಕೊಟ್ಟು ದೇವಸ್ಥಾನದ ಪೂಜಾ ವಿಧಿಗಳನ್ನು ಮುಗಿಸುತ್ತಾರೆ.[೭]

### ಉಮ್ಮತ್ತೂರಿನ ಉರುಕಾತೇಶ್ವರಿ ರಥೋತ್ಸವ

ಕರ್ನಾಟಕದ ಇತಿಹಾಸದಲ್ಲಿ ಉಮ್ಮತ್ತೂರು ಪಾಳೆಗಾರಿಕೆ ಮೈಸೂರು ಒಡೆಯರ ಆಡಳಿತಕ್ಕೆ ಒಳಪಟ್ಟಿತ್ತು. ಹಾಗಾಗಿ ಇದು ಐತಿಹಾಸಿಕವಾಗಿ ತಮ್ಮದೇ ಆದ ವಿಶೇಷ ಅಂಶಗಳನ್ನು ಒಳಗೊಂಡು ಮಹತ್ತರವೆನಿಸಿದೆ. ಈ ಊರಿನ ಜನತೆ ತಲೆತಲಾಂತರಗಳ ಕಾಲದಿಂದಲೂ ಗ್ರಾಮ ದೇವತೆಯಾದ ಉರುಕಾತೇಶ್ವರಿಯ ಹೆಸರಿನಲ್ಲಿ ರಥೋತ್ಸವ ನಡೆಸಿಕೊಂಡು ಬಂದಿದ್ದಾರೆ.

ಕಸ್ತೂರು ಬಂಡಿ ಜಾತ್ರೆ ಮುಗಿದ ಎರಡನೇ ದಿನದ ಮಂಗಳವಾರದಂದು ಹಬ್ಬ ಆರಂಭಗೊಳ್ಳುತ್ತದೆ. ಅದಕ್ಕಿಂತ ೨೦ ದಿನಗಳ ಮುನ್ನ ಊರಿನಲ್ಲಿ ನೆಲೆಸಿರುವ ೯ ದೇವರುಗಳ ಹೆಸರಿನಲ್ಲಿ ಬಂಡಿಗಳ ಉತ್ಸವ

ನಡೆಯುತ್ತದೆ. ಉರುಕಾತೇಶ್ವರಿ ಬಂಡಿ, ಮಾರಮ್ಮ ಬಂಡಿ, ಕೊಳದ ಬಸಪ್ಪನ ಬಂಡಿ, ಮೊದಲ ಬಸಪ್ಪನಬಂಡಿ, ಸಿದ್ದೇಶ್ವರನ ಬಂಡಿ, ಮರಳಯ್ಯನ ಬಂಡಿ, ಭುಜಂಗೇಶ್ವರನ ಬಂಡಿ, ವೀರಭದ್ರೇಶ್ವರನ ಬಂಡಿ, ಕೊಟ್ಟೂರು ಬಸವೇಶ್ವರನ ಬಂಡಿಗಳನ್ನು ಊರಿನಲ್ಲಿ ವಾಸಿಸುವ ಆಯಾ ದೇವರುಗಳ ಒಕ್ಕಲಿಗ ಸೇರಿದ ಜನರು ಸಿದ್ಧಪಡಿಸಿ ಉತ್ಸವ ನಡೆಸುತ್ತಾರೆ.

ಅವುಗಳಲ್ಲಿ ಮೊದಲ ಬಂಡಿ ಉರುಕಾತೇಶ್ವರಿಯ (ಊರುಕಾರ್ತಿ) ಬಂಡಿ. ಕೊಟ್ಟೂರು ಬಸವೇಶ ಗುಡಿಯಿಂದ ಮಂಟೇಸ್ವಾಮಿ ದೇವಸ್ಥಾನದ ತನಕ ಉತ್ಸವವಾಗಿ ವಾಪಸ್ಸಾಗುತ್ತದೆ. ಸಿದ್ದೇಶ್ವರ, ಕೊಳದ ಬಸಪ್ಪ, ಕೊಟ್ಟೂರ ಬಸವೇಶ್ವರ ಹಾಗೂ ವೀರಭದ್ರೇಶ್ವರರ ಬಂಡಿಗಳ ಜೊತೆಗೆ ಆಯಾ ದೇವರುಗಳ ವಿಗ್ರಹವನ್ನು ಹೊತ್ತು ಮೆರವಣಿಗೆ ಮಾಡಲಾಗುತ್ತದೆ. ಮೆರವಣಿಗೆಯಲ್ಲಿ ಮಹಂತಾಳಪುರದಿಂದ ಆಹ್ವಾನಿಸಿದ ಬೀರೆದೇವರ ಕುಣಿತವೂ ಸೇರುತ್ತದೆ.

ಸುಬ್ರಹ್ಮಣ್ಯ ಷಷ್ಠಿ ಆಚರಣೆಯಾದ ನಂತರದ ಶನಿವಾರದಂದು ಗ್ರಾಮದ ಎಲ್ಲಾ ಜಾತಿಯ ಮುಖಂಡರುಗಳು ಉರುಕಾತೇಶ್ವರ ದೇವಸ್ಥಾನದ ಮುಂಭಾಗ ಸೇರಿ ಬಂಡಿಯನ್ನು ಕಟ್ಟುವ ದೇವರ ಒಕ್ಕಲಿನವರಿಗೆ ವೀಳ್ಯ ಕೊಡುತ್ತಾರೆ. ನಂತರದ ಶನಿವಾರವೇ ಮೇಲೆ ಹೇಳಿರುವ ಬಂಡಿ ಉತ್ಸವ. ಅದೇ ದಿನ ಸಾಯಂಕಾಲ ನಾಲ್ಕು ಗಂಟೆ ವೇಳೆಗೆ ಬಂಡಿ ಬೀದಿಯಲ್ಲಿ ಬಂಡಿಗಳಿಗೆ ಎತ್ತುಗಳನ್ನು ಕಟ್ಟಿಸಿ ಓಡಿಸುವ ಪ್ರದರ್ಶನ ಏರ್ಪಡುತ್ತದೆ. ಉರುಕಾತೇಶ್ವರಿ ಬಂಡಿಯನ್ನುಳಿದು ಇತರೆ ಎಲ್ಲಾ ಬಂಡಿಗಳು ಓಡುತ್ತವೆ. ಸಾಯಂಕಾಲದ ವೇಳೆ ಪೂಜೆ ಮಾಡಿ ತೇರು ಹರಿಯುವ ಚೌಬೀದಿಯಲ್ಲಿ ಧೂಳು ಬಂಡಿಯನ್ನು ಹರಿಸುತ್ತಾರೆ. ಅಕ್ಕ ಪಕ್ಕದ ಮನೆಗಳವರು ಹಣ್ಣುಕಾಯಿ ಪೂಜೆ ಸಲ್ಲಿಸುತ್ತಾರೆ.

ಬಂಡಿ ಉತ್ಸವ ನಡೆದ ಹನ್ನೆರಡು ದಿನಕ್ಕೆ ಮಾರಮ್ಮನ ಕೊಂಡ. ಹಿಂದೆ ಲಿಂಗಾಯಿತರು ಸೌದೆ ತಂದು ಕೊಂಡದ ಸಿದ್ಧತೆ ಮಾಡಿಕೊಡುತ್ತಿದ್ದರು. ಪರಿವಾರದವರು ಹಬ್ಬದ ವಿಧಿ ನೆರವೇರಿಸುತ್ತಿದ್ದರು. ಆದರೆ ಈಗ ಪರಿವಾರ ಜನರೇ ಕೊಂಡದ ಸಿದ್ಧತೆ ಮಾಡಿಕೊಳ್ಳುತ್ತಾರೆ. ಪರಿವಾರದ ಕೇರಿಯ ತಮಡಿ ಮನೆಯಿಂದ ಮಾರಮ್ಮ ದೇವರು ಹೊತ್ತ ಮೆರವಣಿಗೆ ದೇವಸ್ಥಾನದ ಕಡೆಗೆ ಹೊರಡುತ್ತದೆ. ಮೆರವಣಿಗೆಯಲ್ಲಿ ಹರಿಜನ ಬೀದಿಯ ನಾಲ್ಕು ಹೆಬ್ಬರೆಗಳು, ಉಪ್ಪಾರದ ಬೀದಿಯ ಕೊಂಬುವಾದ್ಯ, ಆದಿಜಾಂಬವರ ತಮಟೆ ವಾದ್ಯ ಪ್ರಮುಖವಾಗಿ ಪಾಲ್ಗೊಳ್ಳುತ್ತವೆ. ಊರಿನ ಎಲ್ಲಾ ಜನಾಂಗದ ಜನರು ಉತ್ಸವದಲ್ಲಿ ನೆರೆಯುತ್ತಾರೆ. ರಾತ್ರಿ ೯ ಗಂಟೆ ವೇಳೆಗೆ ತಮಡಿ ಕೊಂಡ ಹಾಯುತ್ತಾನೆ.

ಉರಿ ಪೂಜೆ : ಕೊಂಡವಾದ ಒಂದು ವಾರಕ್ಕೆ ಉರಿಕಾತೇಶ್ವರಿ ದೇವಸ್ಥಾನದ ಮುಂದೆ ರಂಗ ಹಾಕಿ ಲಿಂಗಾಯುತ ಕೋಮಿನವರು ನೀಡಿದ ಒಂದು ಆಡು ಮರಿಯನ್ನು ಹರಿಜನ ಬೀದಿಯವರು ಬಲಿಕೊಟ್ಟು ತಮ್ಮ ಮನೆಗೆ ಕೊಂಡೊಯ್ಯುತ್ತಾರೆ. ಮರಿ ಬಲಿ ಕೊಡುವುದಕ್ಕೂ ಉರುಕಾತೇಶ್ವರಿ ದೇವಸ್ಥಾನದ ಬಾಗಿಲು

ತೆರೆಯುವುದಕ್ಕೂ ಒಂದೇ ಆಗಬೇಕು. ಏಕೆಂದರೆ ವರ್ಷಕ್ಕೆ ಒಂದೇ ದಿನ ಆ ಬಾಗಿಲು ತೆರೆಯುವುದು. ಈ ಕಾರ್ಯ ರಾತ್ರಿ ೧೦ ಗಂಟೆ ವೇಳೆಗೆ ನಡೆಯುತ್ತದೆ. ಇದನ್ನು ಉರಿ ಪೂಜೆ ಎಂದು ಕರೆಯುತ್ತಾರೆ.

**ಒದೆ ಹಬ್ಬ**

ಮತ್ತೆ ಶುಕ್ರವಾರದಂದು ಒದೆ ಹಬ್ಬ. ಬಾಗಳಿ ಗ್ರಾಮಕ್ಕೆ ಹೋಗುವ ದಾರಿಯಲ್ಲಿ ಹೀಂಡಿ ಸೊಪ್ಪಿನ ಮಾರಮ್ಮನ ದೇವಸ್ಥಾನವಿದೆ. ಆ ದೇವತೆಯ ಹೆಸರಿನಲ್ಲಿ ಒದೆ ಹಬ್ಬ ಆಚರಿಸಲಾಗುತ್ತದೆ. ಹರಿಜನ ಬೀದಿಯ ಹೆಬ್ಬರ ಕುಲದವರು ನಾಲ್ಕು ಹೆಬ್ಬರೆ ಬಡಿದುಕೊಂಡು ಬೆಳಗಿನ ಸಮಯ ಮೂರು ಗಂಟೆಗೆ ದೇವಸ್ಥಾನದ ಹತ್ತಿರ ಹೋಗುತ್ತರೆ. ಅಲ್ಲಿ ದೇವರನ್ನು ತೊಳೆದು ಹೂವು ಗಂಧ ಅರಿಶಿನ ಕುಂಕುಮಗಳಿಂದ ಅಲಂಕರಿಸಿ, ಪೂಜೆ ಸಲ್ಲಿಸಿ, ಊರೊಳಗಿನ ಎಲ್ಲಾ ಬೀದಿಗಳಲ್ಲು ಮೆರವಣಿಗೆ ಮಾಡಿ ಉರುಕಾತಮ್ಮನ ದೇವಸ್ಥಾನಕ್ಕೆ ಹೋಗಿ ಪೂಜೆ ಸಲ್ಲಿಸಿ ವಾಪಸ್ಸು ತಮ್ಮ ಕೇರಿಗೆ ಬರುತ್ತಾರೆ. ಆ ಮೆರವಣಿಗೆಯ ಸಂದರ್ಭ ಎಲ್ಲಾ ಜಾತಿಯ ಮನೆಯವರು ಹೆಬ್ಬಾರೆಗೆ ಅಕ್ಕಿ-ಎಣ್ಣೆ ಎರೆಯುತ್ತಾ ಪೂಜೆ ಸಲ್ಲಿಸುತ್ತರೆ.

ಒದೆ ಹಬ್ಬ ಮುಗಿದ ೧೨ನೇ ದಿನಕ್ಕೆ ದೊಡ್ಡ ಹಬ್ಬ ಮಂಗಳವಾರದಂದೇ ಆರಂಭಗೊಂಡು ಗುರುವಾರದ ರಥೋತ್ಸವ ನಡೆಯುವತನಕ ಒಟ್ಟು ಮೂರು ದಿನಗಳು ಹಬ್ಬ ಆಚರಿಸಲ್ಪಡುತ್ತದೆ. ಮೊದಲ ದಿನ ರಾತ್ರಿ ೧೦ ಗಂಟೆಗೆ ಹಾಲರವಿ ಉತ್ಸವ. ಕಂಬಾರ ಶೆಟ್ಟರ ಬೀದಿಯಲ್ಲಿ ಮನೆದೇವಮ್ಮ ದೇವಿ ದೇವಸ್ಥಾನವಿದೆ. ಅಲ್ಲಿಂದ ತಮಡಿಗಳು ಹಾಲರವಿ ಹೊತ್ತು. ಉರುಕಾತಮ್ಮಳ ದೇವಸ್ಥಾನದ ಕಡೆಗೆ ಉತ್ಸವ ಸಾಗುತ್ತದೆ. ಉಪ್ಪಾರ ಜನಾಂಗದ ಸತ್ತಿಗೆ ಸೂರಿ ಪಾನಿ, ಕೊಂಬು ಕಹಳೆ ಧ್ವನಿ ಮೊಳಗುತ್ತಿರುತ್ತದೆ. ಉತ್ಸವ ಮುಂದೆ ಹರಿಜನ ಬೀದಿಯ ಹೆಬ್ಬರೆ ಹೊರಟಿರುತ್ತದೆ. ಹರಕೆ ಹೊತ್ತ ಲಿಂಗಾಯಿತ ಮಹಿಳೆಯರು ಉತ್ಸವದಲ್ಲಿ ಪಾಲ್ಗೊಂಡು ಬಾಯಿ ಬೀಗ ಹಾಕಿಕೊಳ್ಳುವುದು ವಿಶೇಷ. ದೀವಟಿಗೆ(ಪಂಜಿನ ಸೇವೆ) ಸೇವೆಯನ್ನು ಎಲ್ಲಾ ವರ್ಗದ ಜನರು ಸಲ್ಲಿಸುತ್ತಾರೆ. ಆದಿ ಜಾಂಬವರ ತಮಟೆ, ಚರಿಬರಿಯ ನಾದ ತಾರಕಕ್ಕೇರಿ ಭಕ್ತಿಯ ಆವೇಶವನ್ನು ತುಂಬುತ್ತವೆ. ರಾತ್ರಿ ೧೧ಗಂಟೆಗೆ ಶುರುವಾಗುವ ಈ ಉತ್ಸವ ಬೆಳಗಿನ ೨ ಗಂಟೆ ತನಕ ನಡೆಯುತ್ತದೆ. ಅದೇ ರೀತಿ ರಾತ್ರಿ ೧೦ ಗಂಟೆಗೆ ಕಂಬಾರ ಜನಾಂಗದವರು ಉರುಕಾತಿ ದೇವಸ್ಥಾನದ ಮುಂದೆ ಕೋಳಿ ಬಲಿ ನೀಡುತ್ತಾರೆ. ಪರಿವಾರದವರು ಕಂಬದ ಮರಿ ತರಿದರೆ, ಹರಿಜನರು ರಂಗದ ಮರಿ ತರಿಯುತ್ತಾರೆ. ಅಲ್ಲೇ ತಮಡಿಗಳು ಬೇಯಿಸಿದ ಮಡೆಗೆ ಕೋಳಿ ರಕ್ತವನ್ನು ಬೆರೆಸಿ ಕುಂಬಾರ ಶೆಟ್ಟರು ಮೇಲಕ್ಕೆ ಮೂರು ಬಾರಿ ರಸ ಮುದ್ದೆ ಎಸೆಯುತ್ತಾರೆ. ಪ್ರತೀತಿಯಂತೆ ಮೇಲಕ್ಕೆಸೆದ ರಸಮುದ್ದೆಯ ಒಂದು ಅಗಳೂ ಕೆಳಗಡೆ ಬೀಳುವುದಿಲ್ಲ. ಬಿದ್ದಿತೆಂದು ಇದುವರೆಗೆ ಯಾರೂ ಹೇಳಿಲ್ಲವಂತೆ.

ಆ ದಿನ ಹರಿಜನ ಬೀದಿಯವರು ಅಡುಗೆ ತಯಾರಿಸಿ ಯಡೆ ಹಾಕದೆ ಕಾಯುತ್ತಾರೆ. ರಂಗದ ಮರಿ ತಲೆ ಬಿದ್ದ ತಕ್ಷಣ ಕುಳವಾಡಿ ಕೇರೆಗೆ ಸುದ್ದಿ ತಲುಪಿಸಿದಸಾಗ ಕೇರಿಯವರು 'ಯಡೆ'ಯಿಟ್ಟು ಊಟೋಪಚಾರ ಸ್ವೀಕರಿಸುತ್ತಾರೆ.

ಬುಧವಾರದಂದು ಮಡೆ ಕಾರ್ಯಕ್ರಮ. ಅಂದು ಬೆಳಗ್ಗೆ ಮಾಂಸಾಹಾರ ತಿನ್ನುವ ಎಲ್ಲಾ ಜಾತಿಗಳವರು ಬೆಳಿಗ್ಗೆ ೯ ಗಂಟೆಗೆ ತಮ್ಮ ತಮ್ಮ ಮನೆಗಳಲ್ಲಿ ಮರಿ, ಕೋಲಿ ಕುಯ್ದು ಕೊಂಡು ಮಾಂಸ ಸಿದ್ಧಪಡಿಸುತ್ತಾರೆ. ಬೆಳಿಗ್ಗೆಯಿಂದಲೇ ಒಪ್ಪೊತ್ತು ಆಚರಿಸುವ ಮನೆಯ ಹೆಂಗಸರು ಮಧ್ಯಾಹ್ನ ಉರುಕಾತಮ್ಮಳ ದೇವಸ್ಥಾನಕ್ಕೆ ಹೋಗಿ ಹಣ್ಣು ಕಾಯಿ ಪೂಜೆ ಸಲ್ಲಿಸಿ ವಾಪಸ್ಸು ಮನೆಗೆ ಬಂದ ಮೇಲೆಯೇ ಅಡಿಗೆ ಮಾಡಲು ಒಲೆ ಹಚ್ಚುವುದು. ಅದೇ ದಿನ ಸಾಯಂಕಾ ೪ ಗಂಟೆಗೆ ಪರಿವಾರದವರು, ಕಂಬಾರರು, ಉಪ್ಪಾರರು ದೇವಸ್ಥಾನದ ಮುಂಭಾಗ ಮಡೆ ಬೇಯಿಸಿ ಪೂಜೆ ಸಲ್ಲಿಸುತ್ತಾರೆ.

ಗುರುವಾರದ ದಿನ ಮಧ್ಯಾಹ್ನ ೨ ಗಂಟೆ ನಂತರ, ಸಾಯಂಕಾಲ ೬ ಗಂಟೆ ತನಕ ರಥೋತ್ಸವ ನಡೆಯುತ್ತದೆ. ಕುಂಬಾರ ಶೆಟ್ಟರು ಬಿದಿರಚ್ಚೆಗಳಿಂದ ತೇರುಗೆಯ್ದು, ಬಣ್ಣದ ಕಾಗದಗಳ ಅಂಟಿಸಿ ಹೂ ಹೊದಿಸಿ ತೇರನ್ನು ಶೃಂಗರಿಸುತ್ತಾರೆ. ವೀರಶೈವರು ಆ ತೇರಿಗೆ ಕಳಸ ಕೂರಿಸುತ್ತಾರೆ. ಮಧ್ಯಾಹ್ನ ೨ ಗಂಟೆಗೆ ಎಲ್ಲಾ ಕೋಮಾರುಗಳು ಸೇರಿ ಉರುಕಾತೇಶ್ವರಿ ದೇವಸ್ಥಾನದಿಂದ ತೇರನ್ನು ಎಳೆಯುತ್ತಾರೆ. ಅಲ್ಲಿಂದ ಹೊರಟು ಮುಖ್ಯ ರಸ್ತೆ ದಾಟಿ ನಾಯಕರ ಬೀದಿಯಲ್ಲಿ ಹರಿಯುತ್ತದೆ. ಮುಂದೆ ಸಾಗಿದಂತೆ ಹರಿಜನ ಬೀದಿಯ ಅಂಕದ ಬಾಗಿಲ ಬಳಿಯ ಅರಳೀ ಮರದ ರಸ್ತೆಯಲ್ಲಿ ಸಾಗಿ, ಪಶ್ಚಿಮ ದಿಕ್ಕಿಗಿರುವ ಲಿಂಗಾಯಿತರ ಬೀದಿಯಲ್ಲಿ ನುಗ್ಗಿ ಉತ್ತರ ದಿಕ್ಕಿಗಿರುವ ದೇವಸ್ಥಾನ ತಲುಪುತ್ತದೆ. ಆ ತೇರಿನ ಗಾಲಿಗೆ ಎಣ್ಣೆ ಅಗತ್ಯವಿದ್ದು, ವೀರಶೈವರು ಹರಳು ಕೊಟ್ಟರೆ ಹರಿಜನರು ಉರಿಕಾತಿ ದೇವಸ್ಥಾನದ ಮುಂಭಾಗವೇ ಅರೆದು ಬೇಯಿಸಿ ಯರೆ ಎಣ್ಣೆ ತಯಾರಿಸಿ ಗಾಲಿಗೆ ಹಾಕುತ್ತಾರೆ.

ಶುಕ್ರವಾರ ಹಬ್ಬದ ಕೊನೆಯ ದಿನ. ಪರಿವಾರದ ಕೇರಿಯವರು ಒಂದು ಗಾಲಿಯ ಮೇಲೆ ಜೋಡಿ ಕುದುರೆಗಳ ವಿಗ್ರಹ ಅಲಂಕರಿಸಿ ಗಾಲಿಯೆಳೆದು ಮೆರವಣಿಗೆ ಮಾಡುತ್ತಾರೆ. ಆ ಸಮಯದಲ್ಲಿ ಲಿಂಗಾಯಿತರು ಹಾಗೂ ಪರಿವಾರದವರು ಓಕುಳಿ ಆಡುತ್ತಾರೆ. ಜೋಡಿ ಕುದುರೆಗಳ ಮೆರವಣಿಗೆ ಉರುಕಾತೇಶ್ವರಿ ದೇವಸ್ಥಾನದ ಮುಂಭಾಗ ಕೊನೆಗೊಳ್ಳುತ್ತದೆ. ಅಲ್ಲಿಗೆ ಹಬ್ಬ ಮುಗಿಯುತ್ತದೆ.[೧೦]

### ಬಿಸಲವಾಡಿ ಲಕ್ಷ್ಮೀದೇವಿ ಜಾತ್ರೆ

ಯುಗಾದಿ ಹಬ್ಬವಾದ ಒಂದು ತಿಂಗಳ ಆಜುಬಾಜುವಿನ ದಿನಗಳಲ್ಲಿ ಲಕ್ಷ್ಮೀದೇವಿ ಜಾತ್ರೆ ಜಮಾಯಿಸುತ್ತದೆ. ಜಾತ್ರೆಗೆ ಒಂದು ತಿಂಗಳು ಮುಂಚೆಯೆ ಊರಿನ ಎಲ್ಲಾ ಜಾತಿಯ ಮುಖಂಡರು ದೇವಸ್ಥಾನದಲ್ಲಿ ಸೇರುತ್ತಾರೆ. ಪಟೇಲರ ಮನೆತನದವರು ಪ್ರಮುಖ ಪಾತ್ರ ನಿರ್ವಹಿಸುವರು.

ದೇವರನ್ನು ಗುಡಿಗೆ ಕಳುಹಿಸುವುದು : ಹನ್ನೆರಡನೇ ದಿಸಕ್ಕೆ ಮುನ್ನ ದೇವತೆಯ ವಿಗ್ರಹವನ್ನು ತೊಳೆದು, ಗರ್ಭಗುಡಿಯನ್ನು ಸ್ವಚ್ಛಗೊಳಿಸಿ ದೇವತೆಗೆ ಚಿನ್ನಾಭರಣಗಳನ್ನು ತೊಡಿಸಿ ಅಲಂಕರಿಸುವುದು. ಇದನ್ನೆ ದೇವರನ್ನು ಗುಡಿಗೆ ಕಳುಹಿಸುವ ವಿಧಿ ಎನ್ನಲಾಗಿದೆ. ಅಂದಿನಿಂದ ಹಬ್ಬ ನಡೆಯುವ ತನಕ ಪ್ರತಿ

ದಿನವೂ ಬೆಳಗಿನಿಂದ ಸಂಜೆಯ ತನಕ ಪಂಚಾಮೃತ ಸೇವೆ ಹಾಲಿನಭಿಷೇಕ ಮುಂತಾದ ವಿಶೇಷ ಪೂಜೆಗಳು ಸಾಂಗೋಪಾಂಗವಾಗಿ ನಡೆಯಬೇಕು. ಅಲ್ಲದೆ ರಥೋತ್ಸವದ ದಿನದ ಹಿಂದಿನ ದಿನದ ತನಕ ಊರಿನ ಯಾವ ಜಾತಿಯವರ ಮನೆಗಳಲ್ಲು ಒಗ್ಗರಣೆ ಕೊಡುವಂತಿಲ್ಲ. ಮಾಂಸ ಬೇಯಿಸುವಂತಿಲ್ಲ.

ತೇರು ರಚಿಸಲು ಬೇಕಾಗುವ ಬಿದಿರು ಬಂಬುಗಳನ್ನು ತರುವ ಪದ್ಧತಿ ಹರಿಜನರಿಗೆ ಬಿಟ್ಟಿದ್ದು. ಮೂಡು ಸೀಮೆಯ ಕಾಡಿಗೆ ಹೋಗಿ ಬಿದಿರು ತಂದುಕೊಡುತ್ತಾರೆ. ವೀರಶೈವರು ತೇರು ನಿರ್ಮಿಸಿ ತೆರಬಣ್ಣ ತೆರೆಬಾವುಟಗಳ ಕಟ್ಟಿ ಹೂಹಾರಗಳಿಂದ ಸಜ್ಜುಗೊಳಿಸುತ್ತಾರೆ.

ಲಕ್ಷ್ಮೀದೇವಿಗೆ ಪೂಜೆ ಮಾಡು ತಮ್ಮಡಿಗಳು ಕುರುಬ ಜನಾಂಗದವರು. ತಲೆತಲಾಂತರದಿಂದಲೂ ಈ ಪದ್ಧತಿಯಂತೆ ಕುರುಬರೆ ತಮ್ಮಡಿ ಕಾಯಕ ನಡೆಸುತ್ತಾ ಬಂದಿದ್ದಾರೆ. ಊರಿನ ಹಿರಿಯರ ಪ್ರಕಾರ ಆ ಜನಾಂಗದವರಿಗೆ ದೇವತೆಗೆ ಒಲಿದಿದ್ದಾಳೆ. ಅವರೇ ಪೂಜಾ ವಿಧಿ ನಡೆಸಬೇಕೆಂಬುದು ದೇವತೆಯ ಅಭೀಷ್ಟೆಯಂತೆ.

ರಥೋತ್ಸವದ ಹಿಂದಿನ ಸೋಮವಾರ ರಾತ್ರಿ ಹಾಲರವಿ ಉತ್ಸವ ೨೦ ರಿಂದ ೩೦ ಜನರು ಹಾಲರವಿ ತರಲು ನಿಗಧಿಪಡಿಸಿರುತ್ತಾರೆ. ಹರಿಜನರು. ಆದಿಜಾಂಬವರು ಹಾಗೂ ಭೋವಿ ಜನಾಂಗಗಳ ಹೊರತುಪಡಿಸಿ ಉಳಿದ ಎಲ್ಲಾ ಜಾತಿಯ ಜನರು ಈ ಕ್ರಿಯೆಯಲ್ಲಿ ಸಕ್ರಿಯ ಪಾಲು ಪಡೆಯುತ್ತಾರೆ. ಹೂ ಹೊಂಬಾಳೆ ಚಿತ್ರಿಸಿದ ಕುಂಭಗಳನ್ನು ತಮ್ಮಡಿಗಳು ಹೊರುತ್ತಾರೆ. ಪೆಟ್ಟಿಗೆಯಲ್ಲಿ ದೇವರನ್ನು ಲಿಂಗಾಯಿತರು ತರುತ್ತಾರೆ. ಸತ್ತಿಗೆ ಸೂರಿಪಾನಿ ಉಪ್ಪಾರ ಶೆಟ್ಟರು ಮೆರೆಯುತ್ತಾರೆ. ಮಂಟೆಸ್ವಾಮಿ ಕಂಡಾಯ ಕರಗ ಮುಂತಾದ ಸಾಂಸ್ಕೃತಿಕ ಮೇಳಗಳು ಮೆರಗು ನೀಡುತ್ತವೆ.

ಹಾಲರವಿಯ ಹಿಂದೆ ಕೊನೆಯಲ್ಲಿ ಲಿಂಗಾಯಿತರ ಬೀದಿಯ ಬಸವವಾಹನ ಹರಿಜನ ಕುದುರೆ ವಾಹನ ಮೆರೆದು ಸಾಗುತ್ತವೆ. ಈ ಹಾಲರವಿ ಉತ್ಸವಕ್ಕೆ ತಮಿಳುನಾಡಿಗೆ ಸೇರಿದ ಪಕ್ಕದ ಗ್ರಾಮವಾದ ಅರಳವಾಡಿಯ ಡೋಲು ವಾದ್ಯವೇ ಆಗಬೇಕು. ಇಲ್ಲದಿದ್ದರೆ ಉತ್ಸವ ಮುಂದಕ್ಕೆ ಹೋಗುವುದಿಲ್ಲ. ಅಲ್ಲದೆ ಅರಳವಾಡಿಯ ವಾದ್ಯದವರು ಪ್ರತಿಜಾತ್ರೆಗೂ ವಾದ್ಯ ಸೇವೆ ಮಾಡುತ್ತೇವೆಂದು ಹರಕ್ಕೆ ಹೊತ್ತಿದ್ದಾರಂತೆ. ಊರಾಚೆ ದಕ್ಷಿಣಕ್ಕಿರುವ ದೊಡ್ಡ ಕೆರೆಯಿಂದ ಹೊರಟ ಉತ್ಸವ ಬೆಳಗಿನ ಜಾವಕ್ಕೆ ಊರೊಳಗೆ ಮುಖ್ಯ ರಸ್ತೆ ಬದಿಯಲ್ಲಿರುವ ಮೊಂಡ ಬಸಪ್ಪನ ಗುಡಿ ತನಕ ಬಂದು ಕೊನೆಗೊಳ್ಳುತ್ತದೆ. ಅಲ್ಲಿ ಮದ್ದು ಸುಡುತ್ತಾರೆ. ಪಟಾಕಿ, ಬಾಣ ಬಿರುಸು, ಹೂ ಕಂಡ ಎಲ್ಲವನ್ನು ಹಚ್ಚಿ ಬಾನಂಗಳಲ್ಲಿ ಬಣ್ಣ ಬಣ್ಣದ ಚಿತ್ತಾರ ಮೂಡಿಸುತ್ತಾರೆ.

ಮಂಗಳವಾರ ಬೆಳಿಗ್ಗೆ ಹರಿಜನ ಬೀದಿಯವರು ಹರಕೆಯ ಆಡು ಮರಿಗಳನ್ನು ಬಲಿಕೊಡಲು ವಾದ್ಯಸಮೇತರಾಗಿ ಕುಣಿದು ಮೆರೆದು ದೇವಸ್ಥಾನದ ಅಂಗಳಕ್ಕೆ ಬರುತ್ತಾರೆ. ಮೊದಲು ದೇವತೆಗೆ ಪೂಜೆ ಸಲ್ಲಿಸಿ ಬಲಿಗಾಗಿಯೇ ಸಿದ್ಧಪಡಿಸಿದ ಹೆಗ್ಗತಿಗಳ ಮೂಲಕ ಒಂದೊಂದೇ ಏಟಿಗೆ ಆಡು ಮರಿಯ ರುಂಡ

ಮುಂಡಗಳ ಛೇದಿಸುತ್ತಾರೆ. ಸುಮಾರು ೪೦ ರಿಂದ ೫೦ ಮರಿಗಳು ಬಲಿ ಬೀಳುತ್ತವೆ. ಬಲಿ ಬೀಳನ್ನು ಹೊತ್ತುಕೊಂಡು ವಾಪಸ್ಸು ಮೆರವಣಿಗೆಯಲ್ಲೆ ತಮ್ಮ ಕೇರಿಗೆ ತಲುಪುತ್ತಾರೆ.

ಬಲಿ ನಂತರವಷ್ಟೇ ದೇವಸ್ಥಾನದೊಳಗಿರುವ ಲಕ್ಷ್ಮೀದೇವಿ ವಿಗ್ರಹವನ್ನು ತಂದು ರಥದ ಒಳಗಡೆ ಪ್ರತಿಷ್ಠಾಪಿಸುವುದು. ಆ ಸಮಯದಲ್ಲಿ ಸರ್ವಕೋಮಿನ ಯಜಮಾನರುಗಳು ಅಲ್ಲಿ ನೆರೆದು ೧೦ ಗಂಟೆ ವೇಳಗೆ ರಥಕ್ಕೆ ಪೂಜೆ ಸಲ್ಲಿಸಿ ಈಡುಗಾಯಿ ಹೊಡೆದು ರಥ ಎಳೆಯುತ್ತಾರೆ. ದೇವಸ್ಥಾನವನ್ನು ಒಂದು ಸುತ್ತು ಬಳಸಿ ಮುಖ್ಯ ರಸ್ತೆಯಲ್ಲಿ ಬೀರೆದೇವರ ಕುಣಿತ, ವೀರಗಾಸೆ, ಗಾಡಿಗೊಂಬೆ ಕೊಂಬು ಕಹಳೆ, ಸತ್ತಿಗೆ ಸೂರೆ ಪಾನಿ, ಹುಲಿವಾಹನ, ಬಸವವಾಹನ, ಕುದುರೆ ವಾಹನ, ತಮಟೆ, ಡೋಲು, ಬ್ಯಾಂಡು ಮುಂತಾದ ವಿಜೃಂಭಣೆಯಿಂದ, ಜನರೆಲ್ಲ ಹರ್ಷೋದ್ಗಾರ ಗೈಯುತ್ತ ತೇರು ಉತ್ಸವ ಮೊಂಡಬಸಪ್ಪನ ಗುಡಿಯ ಬಳಿಗೆ ಬಂದು ನಿಲ್ಲುತ್ತದೆ. ನಂತರವೆ ಬಂದ ನೆಂಟರಿಷ್ಟರಿಗೆ ತಮತಮಗೆ ಬೇಕಾದ ಅಡುಗೆ ಮಾಡಿ ಬಡಿಸುತ್ತಾರೆ.

ಲಕ್ಷ್ಮೀದೇವಿ ಇಲ್ಲಿ ಪ್ರತಿಷ್ಠಾಪನೆಗೊಂಡಿರುವುದಕ್ಕೆ ಊರಿನ ಹಳೆಯ ತಲೆಗಳು ಹೀಗೊಂದು ಕತೆ ಹೇಳುತ್ತಾರೆ. ಬಹಳ ಹಿಂದೆ ಊರಿಗೆ ದಟ್ಟ ದಾರಿದ್ರ್ಯ ಹಿಡಿದಿತ್ತಂತೆ. ಅದನ್ನು ಹೋಗಲಾಡಿಸಲು ಪಡುವಣ ಸೀಮೆಯಿಂದ ಲಕ್ಷ್ಮೀದೇವಿ ಹಾಯ್ದು ಒಂದು ಈಗಿರುವ ತಾಣದಲ್ಲಿ ನೆಲೆಗೊಂಡಳಂತೆ. ಆ ದಿಕ್ಕಿನಿಂದ ಆಕೆ ಬರುವಾಗ ಊರಿನ ಹೆಜ್ಜೆ ಗುರುತು ಊರಿನ ಪಶ್ಚಿಮ ಭಾಗದ ಬಂಡೆಯ ಮೇಲೆ ಈಗಲೂ ಇದೆ. ಅದನ್ನು ಜನರೂ ನಂಬಿಕೊಂಡು ಪೂಜೆ ಸಲ್ಲಿಸುತ್ತಾ ಬಂದಿದ್ದಾರೆ. ಅದೇ ದಿಕ್ಕಿನಲ್ಲಿ ಒಂದು ಬೇವಿನ ಮರವಿದೆ. ನಾಲ್ಕೈದು ತಲೆಮಾರಿನಿಂದಲೂ ಉಳಿದು ಬೆಳೆದು ಬಂದಿರುವ ಹಳೆಯ ದೊಡ್ಡಮರ ಲಕ್ಷ್ಮೀದೇವಿ ಆ ಮರದಲ್ಲಿ ವಾಸ ಮಾಡುತ್ತಾಳೆಂದು ಜನ ನಂಬುತ್ತಾರೆ. ಅದರ ಮೇಲೆ ಯಾರಿಗೆ ಒಡೆತನವಿಲ್ಲ. ಯಾರೂ ಕೂಡ ಆ ಮರದಿಂದ ಒಂದು ಚೆಕ್ಕೆಯನ್ನೂ ತೆಗೆಯುವುದಿಲ್ಲ. ಅದಕ್ಕೆ ಒಂದು ನಿಜ ಘಟನೆಯನ್ನು ಉದಾಹರಿಸುತ್ತಾರೆ.

ಹಿಂದೆ ಒಂದು ದಿನ ಒಬ್ಬ ದನಕಾಯೋ ಹುಡುಗ ಮರ ಹತ್ತಿ ಸೌದೆ ತರಿಯಲು ಹೋದಾಗ ಆತ ಅನಾಮತ್ತಾಗಿ ಮರದಿಂದ ಕೆಳಗೆ ಬಿದ್ದು ಪ್ರಾಣ ಬಿಟ್ಟನಂತೆ. ಈ ಆಧಾರದ ಮೇಲೆ ಆ ಮರ ಲಕ್ಷ್ಮೀದೇವಿಯ ಆವಾಸಸ್ಥಾನವೆಂದು ನಂಬಿ ಆ ಮರದ ತಂಟೆಗೆ ಹೋಗದೆ ಕೈ ಮುಗಿದು ಗೌರವ ಸಲ್ಲಿಸುತ್ತಾರೆ. ಹೀಗೆ ಕಾಡಿನ ಎಲ್ಲಾ ಮರಗಳಲ್ಲೂ ದೇವತೆಗಳು ವಾಸವಾಗಿದ್ದಾರೆಂದು ಜನರು ನಂಬಿದರು ಪ್ರಕೃತಿ ಉಳಿಯುತ್ತದೆಯಲ್ಲವೆ?

ಪ್ರಸ್ತುತ ಅಸ್ತಿತ್ವ ಪಡೆದಿರುವ ದೇವಸ್ಥಾನ ಸುಮಾರು ೩೫೦ ವರ್ಷಗಳ ಹಿಂದೆ ಕಟ್ಟಿರುವುದಾಗಿದೆ. ಅದಕ್ಕಿಂತ ಹಿಂದೆ ಜನರು ಒಂದು ಮಟ್ಟಾಳೆ ಸದ್ದು(Shed) ಕಟ್ಟಿ ಪೂಜೆ ಸಲ್ಲಿಸುತ್ತಿದ್ದರು. ಹೀಗೆ ಆರೇಳು ತಲೆಮಾರಿನಿಂದಲೂ ರಥೋತ್ಸವ ಜರುಗುತ್ತಾ ಬಂದಿದೆ.

ರಥೋತ್ಸವ ಜರುಗಿದ ನಂತರದ ಸೋಮವಾರ ರಾತ್ರಿ, ತಾಳವಾಡಿ ಫಿರ್ಕಾಕ್ಕೆ ಸೇರಿದ ತಾಳವಾಡಿ, ಗಾಜನೂರು, ತಾಳವಾಡಿ ಹೊಸೂರು ಮುಂತಾದ ಸುತ್ತಮುತ್ತಲ ಗ್ರಾಮದ ಬಿಸಲವಾಡಿ ಲಕ್ಷ್ಮಿದೇವಿಯ ಒಕ್ಕಲಿನವರು ಪರ ಮಾಡಲು ಅಲ್ಲಿಗೆ ಬರುತ್ತಾರೆ. ದೇವಸ್ಥಾನವನ್ನು ತೊಳೆದು ಸಗಣೆಯಿಟ್ಟು, ರಂಗೋಲಿ ಬಿಟ್ಟು ಪೂಜೆ ಮಾಡಿ ರಾತ್ರಿ ವೇಳೆ ಪರ(ಪರ್ವ) ಮಾಡಿ ಬೆಳಗಿನ ಸೂರ್ಯೋದಯಕ್ಕೆ ಮುನ್ನ ತಾವುಗಳ ಊಟ ಆಡಿ ಉಳಿದದ್ದನ್ನು ಊರಿನವರಿಗೆ ಹಂಚಿಕೆ ಮಾಡಿ ಮಂಗಳವಾರ ಬೆಳಿಗ್ಗೆ ೯ ಗಂಟೆಗೆ ವಾಪಸ್ಸು ತಮ್ಮ ಊರುಗಳಿಗೆ ಹೋಗುತ್ತಾರೆ. ಅಲ್ಲಿಗೆ ರಥೋತ್ಸವದ ವಿಧಿ ವಿಧಾನಗಳೆಲ್ಲ ಮುಕ್ತಾಯಗೊಳ್ಳುತ್ತವೆ.[೧೧]

## ಅಷಾಢ ಮಾಸದ ಚಾಮರಾಜೇಶ್ವರ ಜಾತ್ರೆ

ಒಬ್ಬ ವ್ಯಕ್ತಿ ತನ್ನ ಹೆಸರಿಗೆ ಈಶ್ವರ ಎಂಬ ಪದವನ್ನೋ ಭಟ್ಟಾರಕ ಎಂಬ ಪದವನ್ನೋ ಸೇರಿಸಿ ಆ ಹೆಸರಿನಲ್ಲಿ ದೇವರನ್ನು ಪ್ರತಿಷ್ಠಾಪಿಸುವ ಸಂಗತಿ ಹಲವು ಶಾಸನಗಳಿಂದ ತಿಳಿದುಬರುತ್ತದೆ. ಅದಕ್ಕೆ ಕಾರಣ ಅಂತಹ ದೇವಸ್ಥಾನವನ್ನು ಕಟ್ಟಿಸಿದವನ ಹೆಸರು ದೇವರಿಗೆ ಬರುವುದೆಂದು, ಕಟ್ಟಿಸಿದವನು ಶಿವನೇ ಆಗಿ ಬಿಡುತ್ತಾನೆಂದು ಆ ಕಾಲದ ಜನ ನಂಬಿದ್ದರು. ಈ ಸಂಪ್ರದಾಯ ಮೈಸೂರು ಒಡೆಯರ ಕಾಲದವರೆಗೆ ಉಳಿದುಕೊಂಡು ಬಂದಿದ್ದು ಚಾಮರಾಜನಗರದಲ್ಲಿ ಚಾಮರಾಜ ಒಡೆಯರ ಹೆಸರಿನಲ್ಲಿ ಚಾಮರಾಜೇಶ್ವರ ದೇವಸ್ಥಾನ ನಿರ್ಮಾಣವಾಯಿತು.

ಈ ದೇವಾಲಯವನ್ನು ಮುಮ್ಮಡಿ ಕೃಷ್ಣರಾಜ ಒಡೆಯರು ೧೮೨೮ರಲ್ಲಿ ಕಟ್ಟಿಸಿದರು. ಇವರ ತಂದೆ ಚಾಮರಾಜ ಒಡೆಯರು ೧೭೭೪ರಲ್ಲಿ ಚಾಮರಾಜನಗರದಲ್ಲಿ ಜನಿಸಿದರು. ಆಗ ಊರಿನ ಹೆಸರು ಅರಿಕುಠಾರ ಎಂದಿತ್ತು. ತಮ್ಮ ತಂದೆಯ ನೆನಪಿಗಾಗಿ ಕೃಷ್ಣರಾಜ ಒಡೆಯರು ಊರಿನ ಹೆಸರಿನ್ನು ಚಾಮರಾಜನಗರವೆಂದು ಬದಲಾಯಿಸಿ ಇಲ್ಲಿ ಚಾಮರಾಜೇಶ್ವರ ದೇವಸ್ಥಾನವನ್ನು ಕಟ್ಟಿಸಿದರು. ಶೈವಾಗಮ ಶಾಸ್ತ್ರರೀತ್ಯಾನುಸಾರವಾಗಿ ರಚನೆಯಾದ ಈ ದೇವಸ್ಥಾನದಲ್ಲಿ ಶಿವ ಪ್ರತಿಷ್ಠಾಪನೆಗಾಗಿ ಕಾಶಿಯಿಂದ ತಂದ ಲಿಂಗವೇ ಬೇಕೆಂದು ಶೃಂಗೇರಿ ಸ್ವಾಮಿಗಳಲ್ಲಿ ಬಿನ್ನವಿಸಿದಾಗ ಆಗಿನ ಶ್ರೀಗಳು ಶೃಂಗೇರಿ ಮಠದಲ್ಲಿದ್ದ ರಕ್ತವರ್ಣದ ಅನಾದಿಯಾದ ನರ್ಮದ ಲಿಂಗವನ್ನು ಅನುಗ್ರಹಿಸಿ ಮಹಾರಾಜರ ಕೋರಿಕೆಯಂತೆ ರಾಜಕತ್ವ ಮತ್ತು ಈಶ್ವರತ್ವಗಳ ಸಮ್ಮಿಲನದ ಕುರುಹಾಗಿ ಚಾಮರಾಜೇಶ್ವರ ಎಂಬ ನಾಮಧ್ಯೇಯದಿಂದ ಪ್ರತಿಷ್ಠಾಪಿಸುವಂತೆಯೂ ಮತ್ತು ಊರಿಗೂ ಚಾಮರಾಜನಗರ ಎಂದು ನಾಮಕರಣ ಮಾಡುವಂತೆಯೂ ಆಶೀರ್ವದಿಸದರೆಂದು ದೇವಾಲಯದ ಕೈಪಿಡಿಯಿಂದ ತಿಳಿದು ಬರುತ್ತದೆ.[೧೨] ಹೀಗೆ ಗರ್ಭಗುಡಿಯಲ್ಲಿ ಚಾಮರಾಜ ಹೆಸರಿನಲ್ಲಿ ಲಿಂಗ ಪ್ರತಿಷ್ಠಾಪಿತವಾದರೆ, ಅದರ ಎಡಭಾಗದಲ್ಲಿ ತಾಯಿ ಕೆಂಪನಂಜಾಂಬ ಅಮ್ಮನ ವಿಗ್ರಹ ಮತ್ತು ಬಲಭಾಗದಲ್ಲಿ ತಮ್ಮ ಕುಲದೇವತೆಯಾದ ಚಾಮುಂಡೇಶ್ವರಿ ವಿಗ್ರಹಗಳಿವೆ.

ಈ ದೇವಾಲಯದ ವಿಶೇಷವೆಂದರೆ ಅಷಾಡ ಮಾಸದಲ್ಲಿ ಜಾತ್ರೆ ನಡೆಯುವುದು. ಸಾಮಾನ್ಯವಾಗಿ ಅಷಾಡ ಮಾಸವು ಮೂಲ ಮಾಸವೆಂದು, ಶುಭಕಾರ್ಯಗಳು ನಿಷೇಧಿಸಲ್ಪಡುತ್ತವೆ. ಆದರೆ ಇದಕ್ಕೆ ಅಪವಾದವೆಂಬಂತೆ ಈ ಮಾಸದಲ್ಲಿ ಇಲ್ಲಿ ರಥೋತ್ಸವ ನಡೆಯುತ್ತದೆ. ಇದು ಅಷಾಡಮಾಸದ ಪೂರ್ವಾಷಾಡ ನಕ್ಷತ್ರದಲ್ಲಿ ಹುಣ್ಣಿಮೆಯಂದು ನಡೆಯುತ್ತದೆ. ಅದಕ್ಕೆ ಕಾರಣ ದೇವಾಲಯದ ನಿರ್ಮಾಪಕರಾದ ಕೃಷ್ಣರಾಜರು, ಅಷಾಡಮಾಸದ ಶ್ರಾವಣ ನಕ್ಷತ್ರದಲ್ಲಿ ಜನಿಸಿದರಾದ್ದರಿಂದಲೂ, ಶ್ರಾವಣ ನಕ್ಷತ್ರದಲ್ಲಿ ತೀರ್ಥಸ್ನಾನ ಮಾಡುವ ದಿನಕ್ಕೆ ಒಂದೆರಡು ದಿನ ಮುಂಚೆ ರಥೋತ್ಸವ ಜರುಗಬೇಕಾಗಿರುವುದರಿಂದಲೂ ಅಷಾಡಮಾಸದಲ್ಲೇ ಚಾಮರಾಜೇಶ್ವರ ರಥ ನಡೆಯುತ್ತದೆ. ಇತ್ತೀಚಿನ ಸಂಪ್ರದಾಯವೆಂದರೆ ಈ ಜಾತ್ರೆಯೂ ಹೊಸದಾಗಿ ಮದುವೆಯಾದವರ ಜಾತ್ರೆ ಎಂಬುದಾಗಿ ಬಿಂಬಿತವಾಗಿದೆ. ಈ ಜಾತ್ರೆಯಲ್ಲಿ ಹೊಸದಾಗಿ ಮದುವೆಯಾದ ನವ ಜೋಡಿಗಳು ಆಗಮಿಸಿ ತೇರಿಗೆ ತಪ್ಪದೇ ಹಣ್ಣು-ಜವನ ಎಸೆಯುತ್ತಾರೆ. ಇದು ನಮಗೆ ಹಣ್ಣಿನ ಫಲದಂತೆ ಹಾಗೂ ಜವನದ ಪುಷ್ಪದಂತೆ ಮಕ್ಕಳನ್ನು ಕೊಡು ಎಂಬುದರ ಸಂಕೇತವಾಗಿದೆ.

ಈ ಜಾತ್ರೆಯೂ ತಾಲೂಕಿನ ದೊಡ್ಡ ಜಾತ್ರೆಯಾಗಿದ್ದು ಸುಮಾರು ಹನ್ನೆರಡು ದಿನಗಳವರೆಗೂ ನಡೆಯುತ್ತದೆ. ಈ ದೇವಾಲಯವು ಮುಜರಾಯಿ ಇಲಾಖೆಗೆ ಸೇರಿರುವುದರಿಂದ ಊರಿನ ಜನರಿಗೆ ಖರ್ಚು ವೆಚ್ಚಗಳೇನು ಬರುವುದಿಲ್ಲ. ಆದರೆ ಊರಿನ ಎಲ್ಲಾ ಕೋಮಿನ ಜನರು ಸೇರಿ ಮುಜರಾಯಿ ಅಧಿಕಾರಿಗಳ ನೇತೃತ್ವದಲ್ಲಿ ಸಭೆ ಸೇರಿ ತೀರ್ಮಾನ ತೆಗೆದುಕೊಂಡು ಅದರಂತೆ ಜಾತ್ರೆ ಆಚರಿಸುತ್ತಾರೆ.

ಈ ದೇವಸ್ಥಾನದಲ್ಲಿ ಪಂಚರಥಗಳಿದ್ದು ಉತ್ಸವದಲ್ಲಿ ಮೊದಲನೆಯ ರಥವಾಗಿ ಗಣಪತಿ ರಥ, ಎರಡನೆಯದಾಗಿ ಸುಬ್ರಮಣ್ಣೇಶ್ವರ ರಥ, ಮೂರನೆಯದಾಗಿ ಮಹಾರಾಜರ ರಥ, ನಾಲ್ಕನೆಯದಾಗಿ ದೊಡ್ಡ ರಥ ಮತ್ತು ಐದನೆಯದಾಗಿ ಅಮ್ಮನವರ ರಥ ಹೀಗೆ ಉತ್ಸವದಲ್ಲಿ ಐದು ರಥಗಳು ಪಾಲ್ಗೊಳ್ಳುತ್ತವೆ. ದೇವರ ಮೂರ್ತಿಯನ್ನು ದೊಡ್ಡ ರಥದ ಮೇಲಿಟ್ಟು ಹೂ ಮತ್ತು ವಸ್ತ್ರಗಳಿಂದ ಅಲಂಕಾರ ಮಾಡಿರುತ್ತಾರೆ. ಈ ತೇರಿಗೆ ಹಣ್ಣು-ಜವನ ಎಸೆಯುವುದೇ ಭಕ್ತರಿಗೆ ವಿಶೇಷ. ಬೆಳಿಗ್ಗೆ ಶುಭ ಮೂಹರ್ತಕ್ಕೆ ಅನುಗುಣವಾಗಿ ತೇರು ದೇವಾಲಯದಿಂದ ಹೊರಟು ಹಳೆ ಬಸ್‌ನಿಲ್ದಾಣದ ಮಾರ್ಗವಾಗಿ ಚಲಿಸಿ ಸಂಜೆ ೩ಗಂಟೆಗೆ ಹಿಂತಿರುಗಿ ಬರುತ್ತದೆ.

ದೇವಾಲಯದ ಸುತ್ತ ಅಸಂಖ್ಯಾತ ಜನಸ್ತೋಮ, ಅವರಸರಿಂದ ರಥಕ್ಕೆ ಗೋದಮ ಕೋಡುವವರು ಹಾಗೂ ನಗಾರಿ, ತಮಟೆ, ಮದ್ದಳೆ, ಕಹಳೆ, ನಂದಿಕಂಬ, ಗೋರವರಕುಣಿತ, ವೀರಭದ್ರಕುಣಿತ, ವಾದ್ಯ ಸಂಗೀತ ಇವೇ ಮುಂತಾದವುಗಳ ಕಳೆ ಕಣ್ಣಿಗೆ ಕಟ್ಟುತ್ತದೆ. ಎಲ್ಲಾ ಸಮುದಾಯದವರು ಕೈಜೋಡಿಸಿ ರಥ ಎಳೆಯುವ ಬಾರಿ ಹಗ್ಗವನ್ನು ಮುಖ್ಯಮಂತ್ರಿ ಕೆಂಗಲ್ ಹನುಮಂತಯ್ಯನವರ ಕಾಲದಲ್ಲಿ ಬೆಂಗಳೂರಿನ ಕೇಂದ್ರ ಕಾರಾಗೃಹದ ಕೈದಿಗಳು ಹೆಣೆದು ಮಾಡಿದ್ದಾರೆ. ಹಾಗಾಗಿ ಈ ತೇರಿಗೆ ಅವರ ಕೊಡುಗೆಯು ಸಹ ಇದೆ.

ಸಾಮಾನ್ಯ ದಿನಗಳಲ್ಲಿ ಈ ದೇವಸ್ಥಾನದ ಒಳಗೆ ಹೋದಾಗ ಶಾಂತ ವಾತಾವರಣವಿರುತ್ತದೆ. ಭಕ್ತರ ಸಂಖ್ಯೆ ಬಹಳ ವಿರಳವಾಗಿ ಇಡೀ ದೇವಸ್ಥಾನವೇ ಬಣಗುಟ್ಟುತ್ತಿದೆಯೋ ಎಂದು ಅನಿಸುತ್ತದೆ. ಆದರೆ ೪೦ ವರ್ಷಗಳ ಹಿಂದೆ ಹೀಗಿರಲಿಲ್ಲವಂತೆ, ಯಾವಾಗಲೂ ಜನರಿಂದ ತುಂಬಿರುತ್ತಿತ್ತು ಎಂಬುದು ವಕ್ತವ್ಯೊಬ್ಬರ ಅಭಿಪ್ರಾಯ, ಅರ್ಚಕರು, ಮಂತ್ರ ಪುಷ್ಪದವರು, ಶ್ರೀಪಾದವರು, ವಾದ್ಯದವರು, ಪರಿಚಾರಕರು, ಬ್ರಾಹ್ಮಣರು ಮತ್ತು ಇತರೆ ವರ್ಗದವರು ಸೇರಿ ಸುಮಾರು ೧೦೪ ಮಂದಿ ಸಿಬ್ಬಂದಿಯವರಿದ್ದರಂತೆ. ಅಲ್ಲದೆ ದೇವಾಲಯದಲ್ಲಿಯೇ ಸಂಸ್ಕೃತ ಮತ್ತು ಉಪನಿಷತ್‌ಗಳನ್ನು ಕಲಿಸುವ ಪಾಠಶಾಲೆಯಿದ್ದು, ಅದಕ್ಕೆ ಅಧ್ಯಕ್ಷರಾಗಿದ್ದವರಲ್ಲಿ ಹಿಂದಿ ಶಾಲೆಯ ಚಕ್ರವರ್ತಿ ರಾಜಗೋಪಾಲಾಚಾರ್ಯರೂ ಒಬ್ಬರು. ಪಾಠಶಾಲೆ ವಿದ್ಯಾರ್ಥಿಗಳಿಗೆ ದೇವರ ನೈವೇದ್ಯಕ್ಕೆ ಮತ್ತು ಚಾಮರಾಜನಗರಕ್ಕೆ ಬರುವ ಯಾತ್ರಿಕರಿಗೆ ಊಟದ ವ್ಯವಸ್ಥೆಯನ್ನು ಶಿವಕೂಟ ಎಂಬ ಹೆಸರಿನಲ್ಲಿ ನಡೆಸುತ್ತಿದ್ದರಂತೆ. ದೇವಾಲಯದ ಈ ಎಲ್ಲಾ ಖರ್ಚುಗಳಿಗಾಗಿ ಮುಮ್ಮಡಿ ಕೃಷ್ಣರಾಜರು ೧೩ ಗ್ರಾಮಗಳನ್ನು ದತ್ತು ಬಿಟ್ಟಿದ್ದರು.

ಈ ದೇವಾಲಯಕ್ಕೆ ಆರ್ಥಿಕವಾಗಿ ಪೆಟ್ಟುಬಿದ್ದದ್ದು ಭೂಹಿಡುವಳಿಯ ಕಾಯ್ದೆಯಿಂದ. ಗ್ರಾಮಗಳಿಂದ ಬರುತ್ತಿದ್ದ ಆದಾಯ ನಿಂತು ಹೋಯಿತು. ಬದಲಿ ವ್ಯವಸ್ಥೆಯನ್ನು ಸೂಕ್ತವಾಗಿ ಮಾಡಲಾಗಲಿಲ್ಲ. ಇದರಿಂದ ಸಿಬ್ಬಂದಿಗೆ ಸಂಬಳ ಕೊಡಲು, ದೇವರಿಗೆ ನೈವೇದ್ಯ ಮಾಡಲು ಸಹ ತೊಂದರೆಯಾಯಿತು. ಇದರಿಂದಾಗಿ ದೇವಾಲಯದ ನೌಕರರು ಬೇರೆ ಬೇರೆ ಕೆಲಸವನ್ನು ಹಿಡಿದರು. ಮತ್ತೆ ಕೆಲವರು ಉದ್ಯೋಗಕ್ಕಾಗಿ ಮೈಸೂರು ಬೆಂಗಳೂರಿನ ಕಡೆ ಹೋದರೆ ಕೆಲವರು ಮಾತ್ರ ತೀರ ಬಡತನದಲ್ಲೂ, ದುಸ್ಥಿತಿಯಲ್ಲೂ ದೇವರ ಸೇವೆ ಮಾಡಿಕೊಂಡು ಮೌನದಿಂದ ಬದುಕುತ್ತಿದ್ದಾರೆ. ಒಟ್ಟಿನಲ್ಲಿ ಈ ಜಿಲ್ಲೆ ಐತಿಹಾಸಿಕವಾಗಿ, ಧಾರ್ಮಿಕವಾಗಿ, ಶ್ರೀಮಂತವಾಗಿರುವುದಲ್ಲದೆ, ಸಾಂಸ್ಕೃತಿಕವಾಗಿಯೂ ವೈಶಿಷ್ಟತೆಯಿಂದ ಕೂಡಿರುವುದಕ್ಕೆ ಈ ಅಷಾಡಮಾಸದ ಜಾತ್ರೆ ಹಾಗೂ ಈ ತಾಲೂಕಿಗೆ ಹೆಗ್ಗುರುತಾಗಿರುವ ಈ ದೇವಸ್ಥಾನ ನಿದರ್ಶನವಾಗಿದೆ.

## ಬಲಿಯು ಸೋಂಕಿಲ್ಲದ ಕನಕಗಿರಿಯ ಮಾರಿಹಬ್ಬ

ಚಾಮರಾಜನಗರದ ಪಶ್ಚಿಮಕ್ಕೆ ೨೩ ಕಿ.ಮೀ. ದೂರದಲ್ಲಿ ಕನಕಗಿರಿ ಗ್ರಾಮವಿದೆ. ಈ ಗ್ರಾಮ ಪ್ರಾಚೀನ ಜೈನ ಕೇಂದ್ರಗಳಲ್ಲೊಂದು. ಮಲೆಯೂರಿನ ಪೂರ್ವಕ್ಕೆ ಹರವೆ, ಪಶ್ಚಿಮಕ್ಕೆ ಕುಲಗಾಣ, ದಕ್ಷಿಣಕ್ಕೆ ಮೂಡ್ನಾಕೂಡು, ಉತ್ತರಕ್ಕೆ ಮುಕ್ಕಡಹಳ್ಳಿ ಗ್ರಾಮಗಳಿವೆ. ಮಲೆಯೂರು ಜೈನಯಾತ್ರಾಸ್ಥಳ ಮಾತ್ರವಲ್ಲದೆ, ಅನೇಕ ಕವಿಗಳ ಪಂಡಿತರ ತಾಯ್ನಾಡಾಗಿದೆ. ಸು.೧೫೦೦ ವರ್ಷಗಳಷ್ಟು ಪ್ರಾಚೀನವಾದ ಗುಹೆಗಳು, ಬಸದಿಗಳು, ೨೪ ತೀರ್ಥಂಕರರ ಚರಣ ಸನ್ನಿಧಿಗಳು, ಶ್ರೀ ಪೂಜ್ಯಪಾದರ ನಿಷಧಿ ಮಂಟಪಗಳು ಕನಕಗಿರಿಯ ಸೌಂದರ್ಯವನ್ನು ಹೆಚ್ಚಿಸಿವೆ. ಇಲ್ಲಿರುವ ಪಾರ್ಶ್ವನಾಥ ಬಸದಿಯೂ ಅದಿಪುರಾತನವಾದ ಹಾಗೂ ಸುಂದರವಾದ ಬಸದಿಯಾಗಿದೆ. ಇದರ ಕಾಲ ೧೦ ಶತಮಾನ. ಇದು ಪೂಜ್ಯಪಾದ ಮಹರ್ಷಿಗಳ ಹಾಗೂ ನಾಗಾರ್ಜುನರ ತಪೋಭೂಮಿಯಾಗಿದೆ. ಈ ಕ್ಷೇತ್ರದ ಇತಿಹಾಸವೂ ಶಿಲಾಶಾಸನಗಳಿಂದಲೂ, ತಾಮ್ರಶಾಸನಗಳಿಂದೂ,

ಸ್ಥಳಪುರಾಣಗಳಿಂದಲೂ ತಿಳಿದುಬರುತ್ತದೆ. ದೇವಚಂದ್ರ ಕವಿಯ ವಂಶಿಕರು ಇಲ್ಲಿ ಈಗಲೂ ಇದ್ದು ವಂಶದ ಹಿರಿಯರು ಆಯುರ್ವೇದ ಪಂಡಿತರಾಗಿದ್ದು, ಈಗಲೂ ಆಯುರ್ವೇದ ಚಿಕಿತ್ಸಾ ಪದ್ಧತಿಯನ್ನು ನಡೆಸುತ್ತಿದ್ದಾರೆ. ಹಸ್ತಿಮಲ್ಲಿ ಶೇಣಾಚಾರ್ಯರೇ ಮೊದಲಾದ ಅನೇಕ ಜೈನಗುರುಗಳು ಈ ಕ್ಷೇತ್ರದಲ್ಲಿ ತಪಸ್ಸನ್ನಾಚರಿಸಿ ಈ ಕ್ಷೇತ್ರದ ಮಹಿಮೆಯನ್ನು ಹೆಚ್ಚಿಸಿದ್ದಾರೆ.

ಮಾರಿಹಬ್ಬದ ಆಚರಣೆ : ಪ್ರತಿ ವರ್ಷ ಶಿವರಾತ್ರಿ ಹಬ್ಬಕ್ಕೆ ಎರಡು ವಾರ ಮುನ್ನ ಇಲ್ಲಿ ಮಾರಿ ಹಬ್ಬವನ್ನು ಆಚರಿಸುತ್ತಾರೆ. ಹಬ್ಬಕ್ಕೆ ಹತ್ತುದಿನ ಮುಂಚಿತವಾಗಿ ಕನಕಗಿರಿ ಬೆಟ್ಟದ ತಪ್ಪಲಿನಿಂದ(ಗೌನಕಟ್ಟೆ) ದೇವರ ಕರೆತರುವುದರೊಂದಿಗೆ ಈ ಹಬ್ಬ ಆರಂಭವಾಗುತ್ತದೆ. ಉಪ್ಪಾರರು, ನಾಯಕರು, ಸತ್ತಿಗೆಯನ್ನು ಹೊತ್ತು ದೇವರು ತಂದರೆ ವೀರಶೈವರು ಗುಂಬ(ಕಳಸ) ಹೊತ್ತು ದೇವರನ್ನು ಊರಿನ ಮಾರಿಗುಡಿಗೆ ಕರೆತರುತ್ತಾರೆ. ಛತ್ರಿ, ಚಾಮರ, ತಮಟೆ, ಹೆಬ್ಬರ ಮತ್ತು ಸೂರಪಾನಿಗಳನ್ನು ಶುದ್ಧಗೊಳಿಸಿ ಮೆರವಣಿಗೆಯ ಮೂಲಕ ದೇವರನ್ನು ಕರೆತರುವ ವಿಧಾನ ರಮಣೀಯವಾಗಿದೆ. ಇದಾದ ಒಂದು ವಾರದೊಳಗೆ ಊರಿನ ಎಲ್ಲಾ ವರ್ಗದವರು ಸೇರಿ 'ಗದ್ದದ ಮಾರಮ್ಮನ' ಹಬ್ಬ ಆಚರಿಸುತ್ತಾರೆ. ಈ ಮಾರಮ್ಮನ ಗುಡಿ ಊರಿನ ಹೊರಗೆ ಇದ್ದು ಮಡ ಉಯ್ಯುವುದೇ ಈ ಹಬ್ಬದ ವಿಶೇಷ. ಗಂಟಲು, ಗದ್ದ ಅಥವಾ ಕೆನ್ನೆಗೆ ಸಂಬಂಧಿಸಿದ ಕೆಲವು ಭಯಾನಕ ರೋಗಗಳು ಹಿಂದೆ ಜನರನ್ನು ಕಾಡುತ್ತಿದ್ದವು. ಈ ಮಾರಿಗೆ ಹರಕೆ ಹೊತ್ತರೆ ರೋಗದಿಂದ ನಮ್ಮನ್ನು ಕಾಪಾಡುತ್ತಾಳೆ ಎಂಬುದು ಜನಪದರ ನಂಬಿಕೆಯಾಗಿತ್ತು. ಅದು ಈಗಲೂ ಮುಂದುವರೆದುಕೊಂಡು ಬಂದಿದೆ. ಹೆಬ್ಬರಸಾರುವುದು, ಮಡಉಯ್ಯುವುದು, ಬಾಯಿಬೀಗ ಹಾಕಿಕೊಳ್ಳುವುದು, ತಲೆಮೇಲೆ ಕಾಯಿ ಒಡೆಸಿಕೊಳ್ಳುವುದು, ಮಾರಮ್ಮನಿಗೆ ತಂಪು ಪೂಜೆ ಮಾಡುವುದು, ರಥೋತ್ಸವ, ಬಂಗಾರ ಇಳಿಸುವುದು ಈ ಊರಿನ ಮಾರಿಹಬ್ಬದ ವಿಶೇಷ ಆಚರಣೆಗಳಾಗಿವೆ.

ರಥೋತ್ಸವ: ಈ ಊರಿನ ಮಾರಿಹಬ್ಬದ ಪ್ರಮುಖ ಆಚರಣೆ ಎಂದರೆ ರಥೋತ್ಸವ. ರಥವನ್ನು ಸಿದ್ಧಗೊಳಿಸುವವರು, ವೀರಶೈವರಾದರೆ, ರಥವನ್ನು ಬಿಚ್ಚುವವರು ಉಪ್ಪಾರರು. ಆದರೆ ರಥವನ್ನು ಊರಿನ ಎಲ್ಲಾ ಜನರು ಸಾಮೂಹಿಕವಾಗಿ ಎಳೆಯುವವರು. ರಥದ ಮುನ್ನ ದಿನವೇ ಅದರ ಅಲಂಕಾರ ಆರಂಭವಾಗುತ್ತದೆ. ರಥಕ್ಕೆ ಅಲಂಕಾರ ಮಾಡುವ ಮೊದಲು ಪೂಜೆ ಸಲ್ಲಿಸಿ ಆಮೇಲೆ ಅಲಂಕಾರ ಮಾಡುವರು. ಚೆಂಡುಮಲ್ಲಿಗೆ, ಕನಕಾಂಬರ, ಮಲ್ಲಿಗೆ ಹಾಗೂ ಬಿಲ್ವಪತ್ರೆ ಮೊದಲಾದ ಹೂವುಗಳಿಂದ ರಥವನ್ನು ಶೃಂಗರಿಸಿ ಅದರ ನಾಲ್ಕು ಮೂಲೆಯಲ್ಲಿ ಎಳನೀರನ್ನು, ಬಾಳೆಕಂದನ್ನು ಕಟ್ಟಿರುತ್ತಾರೆ. ಅಲ್ಲದೆ ಕಬ್ಬಿನ ಸೋಗು, ಮಾವಿನ ಎಲೆ, ಬಣ್ಣಬಣ್ಣದ ಬಾವುಗಳಿಂದ ತೇರನ್ನು ಕಣ್ಣಮನಸ್ಸು ಸೂರೆಗೊಳ್ಳುವಂತೆ ಶೃಂಗರಿಸುತ್ತಾರೆ. ತೇರಿನ ತುದಿಯಲ್ಲಿ ಕಳಶವಿಟ್ಟಿರುತ್ತಾರೆ. ಈ ರಥವನ್ನು ಎಳೆಯಲು ಸಾವಿರಾರು ಭಕ್ತರು ಮುಂದೆ ಬರುತ್ತಾರೆ. ಹಾಗೆಯೇ ಅನೇಕ ಜನರು ಹರಕೆಯನ್ನು ಹೊತ್ತುಕೊಂಡಿರುತ್ತಾರೆ. ಅದನ್ನು ತೀರಿಸಲು ಕಾಯಿಹೊಡೆಯುವುದು, ಬಾಳೆಹಣ್ಣು ಎಸೆಯುವುದು, ಕಾಸು ಎರಚುವುದು ಸಾಮಾನ್ಯ. ರಥ ಎಳೆಯುವಾಗ ಭಕ್ತಾದಿಗಳ ಸಂತೋಷಕ್ಕೆ ತಡೆಯಿಲ್ಲ.

ಎಲ್ಲರೂ ಉಘೇ ಉಘೇ ಎಂದು ಕೂಗುತ್ತಾ ರಥವನ್ನು ಎಳೆಯುವರು. ರಥೋತ್ಸವವನ್ನು ನೋಡಲು ಅಕ್ಕ ಪಕ್ಕ ಊರುಗಳಿಂದ ಅಪಾರ ಸಂಖ್ಯೆಯಲ್ಲಿ ಜನ ಬಂದಿರುತ್ತಾರೆ. ಒಟ್ಟಾರೆ ಈ ಸಂಭ್ರಮದ ರಥೋತ್ಸವದೊಂದಿಗೆ ಮಾರಿಹಬ್ಬ ಭಾಗಶಃ ಮುಗಿದಂತಾಗುತ್ತದೆ.

ಬಂಗಾರ ಇಳುಕುವುದು: ಇದು ಈ ಊರಿನ ಮಾರಿಹಬ್ಬದ ಕೊನೆಯ ಹಂತ. ಹಬ್ಬ ಆರಂಭವಾದಾಗ, ಮಾರಿ ಮುಖವಾಡ ಚಿನ್ನದ ಆಭರಣ, ರೇಷ್ಮೆ ಉಡುಗೆಗಳೊಂದಿಗೆ ಮಾರಿದೇವತೆಯನ್ನು ಅಲಂಕರಿಸಿರುತ್ತಾರೆ. ಹಬ್ಬದ ಕೊನೆಯಲ್ಲಿ ಮಾರಿಗೆ ಪೂಜೆ ಸಲ್ಲಿಸಿ ಆಭರಣ ತೆಗೆಯುವುದೇ ಬಂಗಾರ ಇಳುಕುವುದು. ಜಾತ್ರೆಯ ಕೊನೆಯ ಕಾರ್ಯಕ್ರಮ, ಇದನ್ನು ಭಾನುವಾರ ರಾತ್ರಿ ೧೨ ಗಂಟೆ ಮೇಲೆ(ಅದನ್ನು ಕಲ್ಲು ನೀರು ಕರಗುವ ಸಮಯ ಎನ್ನುವರು) ತೆಗೆಯುವರು. ಈ ಸಂದರ್ಭದಲ್ಲಿ ಮಾರಿಗುಡಿ ಬಳಿ ಹೆಂಗಸರು ಇರಬಾರದಂತೆ. ಹಾಗೆ ಬಳಿ ಸದ್ದು ಕೇಳಬಾರದಂತೆ ಎಂಬ ನಂಬಿಕೆ ಈ ಊರಿನ ಜನಸಮುದಾಯಕ್ಕಿದೆ. ಈ ಕಾರ್ಯದೊಂದಿಗೆ ಕನಕಗಿರಿಯ ಮಾರಿಹಬ್ಬ ಕೊನೆಗೊಳ್ಳುತ್ತದೆ.

ಕನಕಗಿರಿಯ ಮಾರಿಹಬ್ಬದ ವಿಶೇಷ: ಸಾಮಾನ್ಯವಾಗಿ ಮಾರಿಹಬ್ಬವೆಂದರೆ ಹತ್ತಾರು ಕುರಿ, ಕೋಳಿ, ಕೋಣ ಮೊದಲಾದ ಪ್ರಾಣಿಗಳನ್ನು ಬಲಿಕೊಡುವುದು ವಿಶೇಷ. ಆದರೆ ಈ ಊರಿನ ಮಾರಿಹಬ್ಬದಲ್ಲಿ ಬಲಿಯ ಯಾವ ಸೋಂಕು ಇಲ್ಲದೆ ಮಾರಿಹಬ್ಬ ಆಚರಿಸುತ್ತಾರೆ. ವೀರಶೈವರು, ಉಪ್ಪಾರರು, ನಾಯಕರು, ವಡ್ಡರು ಮತ್ತು ಕುಂಬಾರರು ಮೊದಲಾದ ಹಲವಾರು ವರ್ಗದವರು ಸೇರಿ ಈ ಮಾರಿ ಹಬ್ಬವನ್ನು ಆಚರಿಸಿದರು ಸಹ ಯಾರ ಮನೆಯಲ್ಲೂ ಒಂದು ವಾರ ಮಾಂಸದ ಅಡುಗೆಯಾಗಲೀ, ಹಿಂಸೆಯ ಆಚರಣೆಯಾಗಲೀ ಇರುವುದಿಲ್ಲ. ಇಡೀ ಮಾರಿ ಹಬ್ಬದ ಆಚರಣೆಯಲ್ಲಿ ಬಾಯಿಬೀಗ ಹಾಕಿಸಿಕೊಳ್ಳುವುದು ಮತ್ತು ತಲೆಯ ಮೇಲೆ ಕಾಯಿ ಹೊಡೆಸಿಕೊಳ್ಳುವ ಎರಡು ಆಚರಣೆಯನ್ನು ಹೊರತುಪಡಿಸಿದರೆ ಮತ್ತೆಲ್ಲಿಯೂ ಹಿಂಸಾತ್ಮಕವಾದ ಆಚರಣೆಗಳು ಕಿಂಚಿತ್ತು ಇಲ್ಲ.

ಸಾಮಾನ್ಯವಾಗಿ ಮಾರಿಹಬ್ಬಗಳಲ್ಲಿ ಕೊಂಡೋತ್ಸವವಿರುತ್ತದೆ. ಆದರೆ ಇಲ್ಲಿ ಕೊಂಡಕ್ಕೆ ಬದಲು ರಥೋತ್ಸವವಿದೆ. ಇದಕ್ಕೆ ಕಾರಣ ಮಲೆಯೂರು ಅಥವಾ ಕನಕಗಿರಿ ಮೂಲತಃ ಜೈನಧರ್ಮ ಕೇಂದ್ರ. ಹಾಗಾಗಿ ಇಲ್ಲಿನ ಮಾರಿಹಬ್ಬದ ಆಚರಣೆಯಲ್ಲಿ ದಟ್ಟವಾದ ಜೈನಧರ್ಮದ ಪ್ರಭಾವ ಎದ್ದು ಕಾಣುತ್ತದೆ. ಜೊತೆಗೆ ಈ ಪ್ರಾಂತ್ಯದ ಜನ ಜೀವನ ವಿಧಾನ, ಆಚಾರ ವಿಚಾರ, ಸಂಪ್ರದಾಯಗಳಲ್ಲೂ ಜೈನಧರ್ಮದ ಛಾಯೆಯನ್ನು ಕಾಣಬಹುದು. ಪ್ರತಿಷ್ಠೆಗಾಗಿ ನೂರಾರು ಪ್ರಾಣಿಗಳನ್ನು ಬಲಿಕೊಟ್ಟು ಮೌಢ್ಯವನ್ನು ಪ್ರದರ್ಶಿಸುವ, ಹಸುಗೂಸುಗಳನ್ನು ಕೊಂಡದಲ್ಲಿ ಮಲಗಿಸುವ, ಸಿಡಿತಲೆ ಏರುವ ಇತ್ಯಾದಿ ಹತ್ತಾರು ಬಗೆಯ ಕ್ರೂರ ಆಚರಣೆಗಳನ್ನು ಮಾಡುವ ಬೇರೆ ಕಡೆಯ ಮಾರಿಹಬ್ಬಗಳಿಗಿಂತ ಹಿಂಸಾತ್ಮಕವಾದ ಆಚರಣೆಗಳಿಲ್ಲದೆ, ಬಲಿಯ ಸೋಂಕಿಲ್ಲದೆ ನಡೆಯುವ ಕನಕಗಿರಿಯ ಮಾರಿಹಬ್ಬ ಆದರ್ಶಪ್ರಾಯವೂ, ಮಾದರಿಯೂ ಆಗಿದೆ.

## ಕುದೇರು ಗ್ರಾಮದ ಸ್ವರ್ಣಗೌರಿ ಮಹೋತ್ಸವ

ಪ್ರತಿಯೊಂದು ಗ್ರಾಮವೂ ತನ್ನದೇ ಆದ ವಿಶೇಷತೆಯೊಂದಿಗೆ ತನ್ನ ಹೆಸರನ್ನು ಗುರುತಿಸಿಕೊಂಡಿರುತ್ತದೆ. ಆಯಾ ಗ್ರಾಮಗಳಲ್ಲಿ ನಡೆಯುವ ವಿಶೇಷವಾದ ಜಾತ್ರೆ, ಹಬ್ಬ, ಕೊಂಡೋತ್ಸವ, ತೇರು ಹೀಗೆ ಅವುಗಳದ್ದೇ ಆದ ಆಕರ್ಷಣೆಯ ಜೊತೆ ಮೌಲ್ಯವನ್ನು ಸುತ್ತಮುತ್ತಲ ಗ್ರಾಮಗಳಿಗೆ ಹರಡುವಂತಹ ಕೆಲಸ ಮಾಡುತ್ತಿರುತ್ತವೆ. ಇದೇ ರೀತಿಯಲ್ಲಿ ಚಾಮರಾಜನಗರ ತಾಲೂಕಿನಾದ್ಯಂತ ಯಾವ ಗ್ರಾಮವೂ ಆಚರಿಸದಂತಹ ವಿಶೇಷವಾದ ಒಂದು ಉತ್ಸವವನ್ನು ಕುದೇರು ಗ್ರಾಮ ಆಚರಿಸುತ್ತಾ ಬಂದಿದೆ. ಅದೇ ಸ್ವರ್ಣಗೌರಿ ವಿಸರ್ಜನಾ ಮಹೋತ್ಸವ.

ಗೌರಿ ಗಣೇಶ ಚತುರ್ಥಿಯ ಹಬ್ಬದ ೧೫ ದಿನಗಳ ಹಿಂದೆಯೇ ಗ್ರಾಮದ ಎಲ್ಲಾ ಕೋಮಿನ ಮುಖಂಡರು, ಪಟೇಲರು, ಗೌಡರು, ಅರ್ಚಕರು, ಮುಖ್ಯವಾಗಿ ವೀರಶೈವ ಸಮುದಾಯದವರು ದೇವಾಲಯದ ಆವರಣದಲ್ಲಿ ಸಭೆ ಸೇರಿ ಉತ್ಸವದ ಬಗ್ಗೆ ಮಾತುಕತೆ ಆಡಿದ ನಂತರದಿಂದ ಉತ್ಸವದ ಕಾರ್ಯಕ್ರಮಗಳು ಆರಂಭವಾಗುತ್ತದೆ. ಗಣೇಶನ ಚತುರ್ಥಿಯ ದಿನ ಅಷ್ಟೇನು ಪ್ರಾಮುಖ್ಯತೆ ಪಡೆದುಕೊಳ್ಳದೆ ಗೌರಿಯು ಗ್ರಾಮಕ್ಕೆ ಕಾಲಿಟ್ಟ ತದ ನಂತರವೇ ತವರು ಮನೆಗೆ ಮಗಳನ್ನು ಹೇಗೆ ಆದರದಿಂದ ಕರೆತರುತ್ತಾರೋ ಅದೇ ರೀತಿಯಲ್ಲಿ ಬ್ರಾಹ್ಮೀ ಮುಹೂರ್ತದಲ್ಲಿ ಯಮುನಾ ತಡಿಯಲ್ಲಿ(ಊರಿನ ಕೆರೆ) ಗೌರಿಯನ್ನು ಮಣ್ಣಿನಿಂದ ಮಾಡಿ, ಪ್ರತಿಷ್ಠಾಪಿಸಿ, ಪೂಜಾಕಾರ್ಯಗಳನ್ನು ವಿಧಿ ವಿಧಾನಗಳಿಂದ ನೆರವೇರಿಸಿ ನಂತರ ಹೂವಿನ ಪಲ್ಲಕ್ಕಿಯಲ್ಲಿ ಗೌರಿಯನ್ನು ಕುಳ್ಳಿರಿಸಿ, ಕೊಂಬು, ಕಹಳೆ, ಓಲಗಗಳ ಜೊತೆಯಲ್ಲಿ ಸ್ವರ್ಣಗೌರಿ ಮಂದಿರಕ್ಕೆ ಕರೆದೊಯ್ಯಲಾಗುತ್ತದೆ. ಈ ಎಲ್ಲಾ ಕಾರ್ಯಗಳನ್ನು ಬ್ರಾಹ್ಮಣ ಸಮುದಾಯದವರು ನೆರವೇರಿಸುವುದು ವಾಡಿಕೆ.

ಗೌರಿಯನ್ನು ಪಲ್ಲಕ್ಕಿಯಲ್ಲಿ ತರುವ ಮಾರ್ಗದಲ್ಲಿ ತಳಿರು ತೋರಣಗಳಿಂದ ಕೂಡಿದ ಸುಮಾರು ೨೦ ರಿಂದ ೨೫ ಚಪ್ಪರಗಳು ಗೌರಿಗೆ ಸ್ವಾಗತವನ್ನು ಕೋರುತ್ತವೆ. ಅಂತೆಯೇ ಗೌರಿಗೆ ಸುಮಂಗಲಿಯರು ಬಾಗಿನ ಕೊಡುವುದರ ಮೂಲಕ ಗ್ರಾಮದೇವತೆಯನ್ನು ಬರಮಾಡಿಕೊಳ್ಳುತ್ತಾರೆ. ಅಲ್ಲಿ ನಡೆಯುವ ಸಡಗರ ಸಂಭ್ರಮ ಮನೆಮಗಳನ್ನು ಗಂಡನ ಮನೆಯಿಂದ ತವರುಮನೆಗೆ ಕರೆತರುವ ನಿಟ್ಟಿನಲ್ಲಿರುತ್ತದೆ. ಗೌರಿಹಬ್ಬ ಎಂದಾಕ್ಷಣ ಎಲ್ಲೆಡೆ ಗೌರಿ ಗಣೇಶ ವಿಗ್ರಹ ಪ್ರತಿಷ್ಠಾಪಿಸಿ ವಿಸರ್ಜಿಸುವುದು ವಾಡಿಕೆ. ಆದರೆ ಗ್ರಾಮದಲ್ಲಿ ಸ್ವರ್ಣಗೌರಿಗೆ ದೇವಾಲಯವನ್ನು ನಿರ್ಮಾಣ ಮಾಡಲಾಗಿದ್ದು, ಗ್ರಾಮದ ಜನತೆಯೂ ವೈಶಿಷ್ಟ್ಯಪೂರ್ಣವಾಗಿ ಗೌರಿಹಬ್ಬ ಆಚರಿಸುತ್ತಾರೆ. ಈ ಊರಿನಲ್ಲಿ ಗೌರಿಗಷ್ಟೇ ಪ್ರಾಮುಖ್ಯತೆ. ಗಣೇಶನಿಗೆ ಇಲ್ಲಿ ಆದ್ಯತೆಯಿಲ್ಲ. ಗೌರಿಯನ್ನು ಹನ್ನೆರಡು ದಿನಗಳ ಕಾಲ ವಿಭಿನ್ನವಾಗಿ ಪೂಜಿಸುತ್ತಾರೆ.

ಪ್ರಾರಂಭದಲ್ಲಿ ಕಡಲೆಹಿಟ್ಟಿನ ಗೌರಮ್ಮ ಎಂದು ಪೂಜಿಸಲಾಗುತ್ತಿತ್ತು. ನಂತರ ಇದನ್ನು ಊರ ಹಬ್ಬವಾಗಿ ಆಚರಿಸಲು ತೀರ್ಮಾನಿಸಿ ವಿಗ್ರಹಕ್ಕೆ ಚಿನ್ನದ ಕವಚ ಹಾಗೂ ಆಭರಣಗಳನ್ನು ತೊಡಿಸಿದರು. ಅಂದಿನಿಂದ ಇದು ಸ್ವರ್ಣಗೌರಿಯೆಂದು ಪ್ರಸಿದ್ಧಿ ಪಡೆಯಿತು. ೧೯೧೨ರಲ್ಲೇ ಈ ಊರಿನಲ್ಲಿ ಗೌರಿ

ದೇವಾಲಯವನ್ನು ನಿರ್ಮಿಸಲಾಯಿತು. ಇಷ್ಟಾರ್ಥಗಳು ಸಿದ್ಧಿಯಾಗುತ್ತದೆಂದು ನಂಬಿದ್ದ ಜನತೆ ವರಹಗೌರಿ ಎಂದು ಕರೆಯುವುದುಂಟು. ಗೌರಿ ಪಟ್ಟದ ಮೇಲೆ ಕೂತ ದಿನದಿಂದ ಹಲವಾರು ಗ್ರಾಮದ ಮಹಿಳೆಯರು ನವ ವಿವಾಹಿತೆಯರು, ಮಕ್ಕಳು, ಗೌರಿ ದೇವಾಲಯಕ್ಕೆ ಆಗಮಿಸಿ ತಮ್ಮ ಹರಕೆಯನ್ನು ಸಲ್ಲಿಸಿ ತಾಯಿ ಕೃಪೆಗೆ ಪಾತ್ರರಾಗುತ್ತಾರೆ. ಮಕ್ಕಳಾಗದವರು, ವಿವಾಹವಾಗದವರು ಇತರೆ ಸಮಸ್ಯೆಗಳಿಂದ ಬಳಲುತ್ತಿರುವವರು ಗೌರಿಗೆ ತೊಟ್ಟಿಲು, ಮಾಂಗಲ್ಯ, ಮೂಗುತಿ, ಕನ್ನಡಿ ಹೀಗೆ ಹರಕೆಯನ್ನು ಕಟ್ಟಿಕೊಂಡು ಹೋಗುವುದು ಅಷ್ಟೇ ಸಾಮಾನ್ಯ. ಅದು ನೇರವೇರಿದಾಗ ತಮ್ಮ ಹರಕೆಯನ್ನು ದೇವಿಗೆ ಅರ್ಪಿಸುತ್ತಾರೆ.

ಗ್ರಾಮದ ಎಲ್ಲಾ ಜನಾಂಗದವರು ಅವರವರ ಸಂಪ್ರದಾಯಕ್ಕೆ ತಕ್ಕಂತೆ ಗೌರಿಯನ್ನು ಆರಾಧಿಸುವುದನ್ನು ಈ ಗ್ರಾಮದಲ್ಲಿ ಕಾಣಬಹುದಾಗಿದೆ. ಎಲ್ಲಾ ಜಾತಿ ಜನಾಂಗದವರು ತಮ್ಮ ಕೋಮಿನ ಒಂದು ಚಪ್ಪರವನ್ನು ಹಾಕುವುದು ವಾಡಿಕೆ. ಈ ರೀತಿಯಲ್ಲಿ ವೀರಶೈವ ಸಮುದಾಯದವರು ಎಂಟು ಚಪ್ಪರವನ್ನು ಹಾಕುವುದು ವಿಶೇಷ. ಒಂದೊಂದು ಚಪ್ಪರವು ಒಂದೊಂದು ರೀತಿಯಲ್ಲಿ ಅಲಂಕೃತವಾಗಿರುತ್ತವೆ. ಉದಾಹರಣೆಗೆ ಹಸಿರು ಚಪ್ಪ, ಹೂವಿನ ಚಪ್ಪರ, ಬಾಳೇದಿಂಡಿನ ಚಪ್ಪ, ವಿದ್ಯುತ್ ದೀಪಾಲಂಕೃತ ಚಪ್ಪರ ಹೀಗೆ ಹಲವಾರು ರೀತಿಯಲ್ಲಿ ಅಲಂಕಾರ ಮಾಡಲಾಗಿರುತ್ತದೆ. ಅದೇ ರೀತಿ ಬ್ರಾಹ್ಮಣ ಸಮುದಾಯ ದೇವಾಲಯದ ಮುಂದೆ ಅವರ ಕುಲಕ್ಕೆ ಒದಗುವ ಚಪ್ಪರವನ್ನು ಹಾಕಿರುತ್ತಾರೆ. ಅಂತೆಯೇ ಮುಖ್ಯ ಬೀದಿಯಲ್ಲಿ ಕುರುಬ ಸಮುದಾಯ, ನಾಯಕರು, ಮಡಿವಾಳರು, ದರ್ಜಿಗಳು ಅವರವರ ಸಮುದಾಯಕ್ಕೆ ಒಂದೊಂದು ಚಪ್ಪರವನ್ನು ಹಾಕಿರುತ್ತಾರೆ. ಈ ರೀತಿಯಲ್ಲಿ ಗ್ರಾಮವೆಲ್ಲ ಚಪ್ಪರಗಳಿಂದ ಕಂಗೊಳಿಸುತ್ತಿರುತ್ತದೆ.

ಗ್ರಾಮದ ಎಲ್ಲಾ ದೇವಾಲಯಗಳು, ಮಠಗಳು, ಮನೆಗಳು ಸುಣ್ಣಬಣ್ಣಗಳಿಂದ ನವವಧುವಿನಂತೆ ಸಿಂಗಾರಗೊಂಡು ನಳನಳಿಸುವಂತಹ ದೃಶ್ಯ ಗ್ರಾಮದಲ್ಲಿರುತ್ತದೆ. ಗೌರಿಯು ಪಟ್ಟಕ್ಕೆ ಬಂದ ಮೊದಲನೆಯ ದಿನದಿಂದ ೧೫ನೇ ದಿನದವರೆಗೂ ಒಂದೊಂದು ವಿಶೇಷ ಪೂಜೆಯೊಂದಿಗೆ ವಿಶೇಷ ಅಲಂಕಾರದೊಂದಿಗೆ ನಳನಳಿಸುತ್ತಾಳೆ. ಮೊದಲನೇ ದಿನದಿಂದ ಐದನೆಯ ದಿನದ ಮುಂಜಾನೆ ಬ್ರಾಹ್ಮೀ ಮುಹೂರ್ತದವರೆಗೆ ಮರಳಿನ ಗೌರಿಯಿದ್ದು ಐದನೇ ದಿನ ಬ್ರಾಹ್ಮೀ ಮುಹೂರ್ತಕ್ಕೆ ಸರಿಯಾಗಿ ಸ್ವರ್ಣ ಕವಚದೊಂದಿಗೆ ಸ್ವರ್ಣಗೌರಿಯಾಗುತ್ತಾಳೆ. ಗೌರಿಗೆ ಸ್ವರ್ಣ ಕವಚ ಧರಿಸಿದ ದಿನ ವಿಶೇಷವಾದ ಪೂಜೆ ಏರ್ಪಡಿಸುತ್ತಾರೆ. ಈ ಸಂದರ್ಭದಲ್ಲಿ ಗ್ರಾಮದ ಎಲ್ಲಾ ಭಕ್ತಾದಿಗಳು ಹಾಜರಿದ್ದು ಆ ಸುವರ್ಣ ಸಮಯವನ್ನು ಸವಿಯುತ್ತಾರೆ. ಪ್ರತಿಯೊಂದು ಮನೆಯವರು ತಮ್ಮ ಸಂಬಂಧಿಕರು, ನೆಂಟರಿಷ್ಟರನ್ನು ಕರೆದು ಹಬ್ಬದ ಅಡುಗೆಯನ್ನು ಮಾಡಿ ತೃಪ್ತಿಪಡುತ್ತಾರೆ. ಸಿಹಿ ತಿನಿಸುಗಳು ವಿಶೇಷವಾದ ಗಮನವನ್ನು ಸೆಳೆಯುತ್ತವೆ. ಮನೆಗೆ ಬಂದ ನೆಂಟರಿಷ್ಟರು, ಮನೆ ಮಗಳು ಹೀಗೆ ಎಲ್ಲಾ ಹೋಗಿ ಕೊನೆಯದಾಗಿ ಗೌರಿಯ ದರ್ಶನವನ್ನು ಪಡೆದು ಬಾಗಿನ ಅರ್ಪಿಸಿ ಗಂಡನ ಮನೆಗೆ ಕಳುಹಿಸಿ ಕೊಡುತ್ತಾರೆ.

ಆದಿಕಾಲದಿಂದಲೂ ಮನೆಗೆ ಬಂದ ಸುಮಂಗಲಿಯರಿಗೆ ಕುಂಕುಮ ನೀಡಿ ನಿಮ್ಮ ಮಾಂಗಲ್ಯ ಸುಮಂಗಲಿ ಭಾಗ್ಯ ದೀರ್ಘವಾಗಿರಲೆಂದು ಹಾರೈಸಿ ಕಳುಹಿಸುವುದು ವಾಡಿಕೆ. ಅದೇ ರೀತಿ ದೇವತೆಗಳಿಗೂ ಬಾಗಿನ ಅರ್ಪಿಸುವ ಸಂಪ್ರದಾಯವು ಪೂರ್ವದಿಂದಲೂ ಬೆಳೆದುಬಂದಿದೆ. ನಮ್ಮ ನಾಡಿನ ನದಿಗಳು ತುಂಬಿದಂತಹ ಸಂದರ್ಭದಲ್ಲಿ ಗಂಗಾ ದೇವಿಗೆ ಬಾಗಿನ ಅರ್ಪಿಸುವಂತೆ, ಕುದೇರು ಗ್ರಾಮದಲ್ಲಿ ಕೂಡಾ ಸ್ವರ್ಣಗೌರಿಯು ಗ್ರಾಮಕ್ಕೆ ಬಂದಂತಹ ಸಂದರ್ಭದಲ್ಲಿ ತೌವರುಮನೆಗೆ ಮಗಳು ಬರುತ್ತಿದ್ದಾಳೆ. ಅವಳ ಮುತ್ತೈದೆತನ ದೀರ್ಘವಾಗಿರಲಿ ಎಂದು ಹಾರೈಸಿ ಬಾಗಿನ ಅರ್ಪಿಸುವುದರ ಜೊತೆಗೆ ತಮ್ಮ ಒಂದು ಸುಮಂಗಲಿತನ ದೀರ್ಘವಾಗಿರಲಿ, ಶಾಶ್ವತವಾಗಿರಲಿ ಎಂದು ಬೇಡಿಕೊಳ್ಳುವಂತಹ ವಿಶಿಷ್ಟವಾದ ಸಂಪ್ರದಾಯವು ಇದಾಗಿದೆ. ಈ ಬಾಗಿನಕ್ಕೆ ಪ್ರಧಾನವಾಗಿ ಬಿದಿರಿನಿಂದ ಮಾಡಿದ ಮೊರಗಳನ್ನು ಬಳಸುತ್ತಾ. ಈ ಮೊರಗಳನ್ನು ಒಂದರ ಮೇಲೆ ಒಂದರಂತೆ ತಲೆಕೆಳಕಾಗಿ ಕಟ್ಟಿ ಅದರೊಳಗೆ ನವಧಾನ್ಯಗಳು, ಹಣ್ಣುಗಳು, ಬಳೆ, ಅರಸಿನ, ಕುಂಕುಮ, ಬಿಚ್ಚೋಲೆ, ಕರಿಮಣಿ, ಅಕ್ಷತೆಗಳನ್ನು ಹಾಕಿ ಹಳದಿ ದಾರದಿಂದ ಕಟ್ಟಿರುತ್ತಾರೆ. ಇದನ್ನು ಸ್ವರ್ಣಗೌರಿಯ ಎದುರಿಗೆ ಇಟ್ಟು ಮುತ್ತೈದೆಯರು ತೊಟ್ಟ ಹೊಸ ಸೀರೆಯ ಸೆರಗಿನ ತುದಿಯಿಂದ ಅರ್ಪಿಸುವುದು ವಿಶೇಷ.

ಕುದೇರು ಗ್ರಾಮದಲ್ಲಿ ಆಚರಿಸುವ ಎರಡು ಪ್ರಮುಖ ಹಬ್ಬಗಳಲ್ಲೂ ಹರಕೆಗಳು ಪ್ರಧಾನವಾಗಿ ಗೋಚರಿಸುತ್ತವೆ. ಮೊದಲನೆಯದು ಊರು ಕಾಯುವ ಮಾರಿಕಾಂಬೆಗೆ ಅರ್ಪಿಸುವ ಹರಕೆಗಳು, ಮತ್ತೊಂದು ಗ್ರಾಮದೇವತೆಯಾದ ಸ್ವರ್ಣಗೌರಿಗೆ ಅರ್ಪಿಸುವ ಹರಕೆಗಳು. ಮಾರಿಕಾಂಬೆಯ ಹಬ್ಬದ ದಿನ ಉಪವಾಸವಿದ್ದು ಮಡೆಯನ್ನು ತಾಯಿಗೆ ಎಡೆಯಿಟ್ಟು, ಕೋಳಿ, ಕುರಿ ಬಲಿಕೊಟ್ಟು ಹರಕೆಯನ್ನು ತೀರಿಸಿಕೊಂಡರೆ ಸ್ವರ್ಣಗೌರಿ ತಮ್ಮನ್ನು ತಾವು ಶಿಕ್ಷಿಸಿಕೊಳ್ಳುವ ಹರಕೆಯನ್ನು ಹೊತ್ತು ಅರ್ಪಿಸುತ್ತಾರೆ. ಅದೆಂದರೆ ಬಾಯಿಬೀಗ ಹಾಕಿಸಿಕೊಳ್ಳುವುದು. ಬೆನ್ನಿಗೆ ಕೊಂಡಿ ಸಿಕ್ಕಿಸಿಕೊಂಡು ತೊಟ್ಟಿಲು ಎಳೆಯುವುದು ಇತ್ಯಾದಿ.

ಸ್ವರ್ಣಗೌರಿ ವಿಸರ್ಜನಾ ಮಹೋತ್ಸವಕ್ಕೆ ಮುನ್ನಾ ದಿನದಂದ ಎಲ್ಲಾ ಸಮುದಾಯದ ಮುಖಂಡರು ಮತ್ತೊಮ್ಮೆ ದೇವಾಲಯದಲ್ಲಿ ಸಭೆ ಸೇರಿ ಶಾಂತಿ ಸೌಹಾರ್ದತೆಯ ಬಗ್ಗೆ ಚರ್ಚಿಸುವುದರ ಜೊತೆಗೆ ತಮ್ಮ ತಮ್ಮ ಜನಾಂಗಕ್ಕೆ ಉತ್ಸವದಲ್ಲಿ ಯಾವ ಕೆಲಸ ನಿರ್ವಹಿಸಬೇಕೆಂಬ ನಿರ್ಧಾರಕ್ಕೆಗೊಂಡು, ಅದನ್ನು ಅಚ್ಚುಕಟ್ಟಾಗಿ ನಡೆಸಿಕೊಡುವಂತಹ ನಿಟ್ಟಿನಲ್ಲಿ ಕಾರ್ಯನಿರತರಾಗುತ್ತಾರೆ. ಹೀಗೆ ಗ್ರಾಮದಲ್ಲಿರುವ ಎಲ್ಲಾ ಕೋಮುಗಳವರು ತಮ್ಮ ತಮ್ಮ ಕೆಲಸಗಳಿಗೆ ಏನು ಸಿದ್ಧತೆ ಬೇಕು ಎಂಬುದನ್ನು ಮುಖಂಡರ ಸಮ್ಮುಖದಲ್ಲಿ ಚರ್ಚಿಸಿ ಅದನ್ನುನಿರ್ವಹಿಸುತ್ತಾರೆ. ಮಡಿವಾಳ ಜನಾಂಗವು ಪಂಜಿನ ಸೇವೆಯನ್ನು, ಪರಿಶಿಷ್ಟರು ವಿದ್ಯುತ್ ದೀಪ ಹೊರುವ ಕೆಲ, ವೀರಶೈವ ಲಿಂಗಾಯರು ಪಲ್ಲಕ್ಕಿ ಕಟ್ಟುವುದು ಹಾಗೂ ದೇವಾಲಯದ ಕೆಲಸಗಳನ್ನು ಮಾಡುವುದು, ಲಿಂಗಾಯಿತ ಶೆಟ್ಟಿಗಳು ಪಲ್ಲಕ್ಕಿಗೆ ಬೇಕಾದ ಹೂವು, ಮಿಂಚು ಮೊದಲಾದ ಅಲಂಕಾರ ಸಾಮಗ್ರಿಗಳನ್ನು ಒದಗಿಸುವುದು, ನಾಯಕ ಸಮುದಾಯ ಪಲ್ಲಕ್ಕಿ ಹೊರುವುದು, ವಿಶೇಷವೆಂದರೆ

ಗೌರಿಪಲ್ಲಕ್ಕಿಯನ್ನು ಕುರುಬ ಸಮುದಾಯದವರು ಹೊರುವುದು, ಅರ್ಚಕರು ಪೂಜೆ ಮಾಡುವುದು ಹೀಗೆ ಆಯಾ ವರ್ಗಗಳು ಆಯಾ ಕೆಲಸವನ್ನು ಅನ್ಯೋನ್ಯತೆಯಿಂದ ನಿರ್ವಹಿಸುವುದನ್ನು ಕಾಣಬಹುದು.

ವಿಶೇಷವೆಂದರೆ ಎಲ್ಲಾ ಕೆಲಸಗಳ ಉಸ್ತುವಾರಿಯನ್ನು ಊರಿನ ಗೌಡರೆ ವಹಿಸಿಕೊಂಡಿರುವುದು. ಪಲ್ಲಕಿಯನ್ನು ಹಿಂದಿನಿಂದಲೂ ಮಠದ ಹತ್ತಿರ ಕಟ್ಟುತ್ತಾರೆ. ಉತ್ಸವದ ಹಿಂದಿನ ದಿನವೇ ಪಲ್ಲಕ್ಕಿಯ ವಸ್ತುಗಳನ್ನು ಮಡಿವಸ್ತ್ರದ ಮೇಲೆ ಇಟ್ಟು ಪೂಜೆ ಮಾಡಿ ತದನಂತರದಲ್ಲಿ ಪಲ್ಲಕ್ಕಿಯ ಸಿದ್ಧತೆಯಾಗುತ್ತದೆ. ಪಲ್ಲಕ್ಕಿಯನ್ನು ಕಟ್ಟಲು ಬಿದಿರು, ಬಾಳೆಯಪಟ್ಟೆ, ಹೂವು, ಮಿಂಚುಗಳನ್ನು ಬಳಸುತ್ತಾರೆ. ಹೀಗೆ ಸಿಂಗರಿಸಿದ ಹೂವಿನ ಅಡ್ಡಪಲ್ಲಕ್ಕಿಯನ್ನು ದೇವಾಲಯಕ್ಕೆ ತಂದು ದೇವರ ತೀರ್ಥವನ್ನು ಪ್ರೋಕ್ಷಿಸಿ ಸಕಲ ವಿಧಿ ವಿಧಾನಗಳೊಂದಿಗೆ ಉತ್ಸವಮೂರ್ತಿಯನ್ನು ಪಲ್ಲಕ್ಕಿಯಲ್ಲಿರಿಸಿ ಮಹಾಮಂಗಳಾರತಿಯನ್ನು ಮಾಡುತ್ತಾರೆ. ತದನಂತರದಲ್ಲಿ ವೀರಶೈವ ಲಿಂಗಾಯತ ಸಮುದಾಯದವರು ಅಂದರೆ ಗ್ರಾಮದ ಗೌಡರು ಉತ್ಸವಕ್ಕೆ ಚಾಲನೆಯನ್ನು ನೀಡುತ್ತಾರೆ. ಆ ಸಂದರ್ಭದಲ್ಲಿ ಪಟೇಲರು, ಗ್ರಾಮದ ಮಠಗಳ ಸ್ವಾಮೀಜಿಗಳು ಮುಖಂಡರುಗಳು ಹಾಜರಿರುತ್ತಾರೆ. ಇದನ್ನು ವೀಕ್ಷಿಸಲು ಸುತ್ತಮುತ್ತಲ ಗ್ರಾಮದ ಗ್ರಾಮಸ್ಥರು, ಭಕ್ತಾದಿಗಳು ಹಾಗೂ ಜಿಲ್ಲೆಯ ನಾನಾ ಭಾಗಗಳಿಂದಲೂ ಆಗಮಿಸುತ್ತಾರೆ.

ಕುರುಬ ಸಮುದಾಯವೂ ಹೊತ್ತ ಸ್ವರ್ಣಗೌರಿ ಅಮ್ಮನವರ ಪಲ್ಲಕಿಯೂ ಸಕಲ ಕಲಾತಂಡಗಳ ಜೊತೆಯಲ್ಲಿ ವಿಶೇಷವಾಗಿ ಮದ್ದುಗುಂಡು, ಬಾಣಬಿರುಸು, ಹೂಕುಂಡಾ ಪಟಾಕಿಗಳ ಸದ್ದಿನಲ್ಲಿ ಕೆರೆತಡಿಗೆ ಬರುತ್ತದೆ. ಈ ಸಂದರ್ಭದಲ್ಲಿ ಕೆರೆಯು ವಿದ್ಯುತ್ ದೀಪಗಳಿಂದ ಅಲಂಕಾರಗೊಂಡಿರುತ್ತದೆ. ಬಾಣಬಿರುಸು ಮದ್ದುಗುಂಡುಗಳ ವಿಶೇಷ ಪ್ರದರ್ಶನ ನಡೆಯುತ್ತೆದೆ. ಹೂವಿನ ಪಲ್ಲಕ್ಕಿಯಲ್ಲಿ ಬಂದ ಗೌರಿಗೆ ಜನರು ಕೊನೆಯ ಪೂಜೆ ನೆರವೇರಿಸಿ ಬ್ರಾಹ್ಮಣ ಸಮುದಾಯದವರ ಸ್ವರ್ಣಗೌರಿಯನ್ನು ಯಮುನಾ(ಕೆರೆ) ತಡಿಯಲ್ಲಿ ವಿಸರ್ಜಿಸುತ್ತಾರೆ. ಸ್ವರ್ಣಗೌರಿಯನ್ನು ವಿಸರ್ಜಿಸಿದ ಬಳಿಕ ಬೆಳ್ಳಿ ತಂಬಿಗೆಯಲ್ಲಿ ಗಂಗೆಯನ್ನು ತುಂಬಿ ಅದಕ್ಕೆ ಪೂಜೆ ಸಲ್ಲಿಸಿ ಅದನ್ನು ಸಕಲ ವಿಧಿವಿಧಾನಗಳಿಂದ ಅದೇ ಪಲ್ಲಕ್ಕಿಯ ಮೇಲೆ ಗೌರಿಮಂದಿರಕ್ಕೆ ಕೊಂಡೊಯ್ದು ಮೂರು ದಿನಗಳ ಕಾಲ ವಿಶೇಷ ಪೂಜೆಗಳನ್ನು ಸಲ್ಲಿಸಿ ಮತ್ತೆ ಅದನ್ನು ಯಾವುದದರೂ ಹರಿಯುವ ನೀರಿಗೆ ಬಿಡುವುದು ವಾಡಿಕೆ, ಸಂಪ್ರದಾಯ. ಈ ಎಲ್ಲಾ ಕಾರ್ಯಗಳ ಜೊತೆಗೆ ಹಬ್ಬಕ್ಕೆ ಅಂತಿಮವಾದ ತೆರೆ ಬೀಳುತ್ತದೆ.[೧೫೫]

## ಮಂಗಲ ಹೊಸೂರು ಗ್ರಾಮದ ಮಾರಮ್ಮನ ಜಾತ್ರೆ

ಮಂಗಲದ ಹೊಸೂರು ಚಾಮರಾಜನಗರ ತಾಲೂಕಿನಲ್ಲಿರುವ ಒಂದು ಗ್ರಾಮ. ಈ ಗ್ರಾಮವು ಚಾಮರಾಜನಗರದಿಂದ ಸುಮಾರು ೧೨ ಕಿ.ಮೀ ದೂರದಲ್ಲಿದೆ. ಇಲ್ಲಿ ಲಿಂಗಾಯತರು, ಕುರುಬರರು, ಹೊಲೆಯರು, ಶೆಟ್ಟರು, ಸೋಲಿಗರು, ಮೊದಲಾದ ಜಾತಿಯವರಲ್ಲದೆ ಕ್ರಿಶ್ಚಿಯನ್ನರು, ಮುಸ್ಲಿಂಮರು

ನೆಲೆಸಿದ್ದಾರೆ. ವ್ಯವಸಾಯವೇ ಇವರ ಪ್ರಧಾನ ಕಸುಬಾಗಿದ್ದರೂ, ರೇಷ್ಮೆ ನೂಲಿನ ವ್ಯಾಪಾರದಿಂದ ಗ್ರಾಮದ ಬಹುಸಂಖ್ಯಾತರ ಆರ್ಥಿಕ ಜೀವನ ಉತ್ತಮವಾಗಿದೆ.

ಪ್ರತಿವರ್ಷವೂ ಯುಗಾದಿ ಹಬ್ಬದೆರಡು ಅಥವಾ ಮೂರು ವಾರಗಳ ಮುಂಚೆಯೇ ಈ ಊರಿನಲ್ಲಿ ಶಿವನಸಮುದ್ರದ ಮಾರಮ್ಮನ ಹಬ್ಬವನ್ನು ವಿಜೃಂಭಣೆಯಿಂದ ಆಚರಿಸುತ್ತಾರೆ. ಈ ಗ್ರಾಮದಲ್ಲಿ ನೆಲೆಸಿ ಪೂಜೆಗೊಳ್ಳುವ ಶ್ರೀ ಶಿವನಸಮುದ್ರ ಮಾರಮ್ಮನು ಈ ಗ್ರಾಮಕ್ಕೆ ಬಂದು ನೆಲೆಸಿದ ಬಗ್ಗೆ ಅಲ್ಲಿನ ಹಿರಿಯರು ಒಂದು ಪುರಾಣವನ್ನೇ ಹೇಳುತ್ತಾರೆ. ಇದು ಇವತ್ತಿಗೂ ಸಹ ಒಂದು ರೀತಿಯ ಸಾಂಸ್ಕೃತಿಕ ಕಥೆಯಾಗಿ ಕಂಡುಬರುತ್ತದೆ. ಸುಮಾರು ಮುನ್ನೂರು ವರ್ಷಗಳ ಹಿಂದೆ ಈ ಊರಿನ ಜನ ಮಳವಳ್ಳಿ ತಾಲೂಕಿನ ಶಿವನಸಮುದ್ರದ ಕಡೆ ಕೂಲಿಗಾಗಿ, ವ್ಯಾಪಾರಕ್ಕಾಗಿ ಹೋಗುತ್ತಿದ್ದರು. ಹಾಗೆ ಹೋಗುತ್ತಿದ್ದವರಲ್ಲಿ ಒಬ್ಬ ಅದ್ಭುತವಾದ ಕೊಳಲುವಾದಕ ಇದ್ದನು. ಅವನು ರಾತ್ರಿ ಶಿವನಸಮುದ್ರದಲ್ಲಿ ತಂಗಿದ್ದಾಗ ಬೇಜಾರು ಕಳೆಯಲು ಕೊಳಲು ನುಡಿಸುತ್ತಿದ್ದ. ಅವನ ಕೊಳಲಿನ ನಾದಕ್ಕೆ ಮಾರು ಹೋದ ಅಲ್ಲಿನ ಮಾರಿದೇವತೆ ಅವನ ಜೊತೆಯಲ್ಲಿಯೇ ಬಂದು ಇಲ್ಲಿ ನೆಲೆಸಿದಳು. ಅಲ್ಲಿಂದ ಬಂದು ನೆಲೆಸಿದ ದೇವತೆಯಾದ್ದರಿಂದ ಈಕೆಗೆ ಶಿವನಸಮುದ್ರದ ಮಾರಮ್ಮ ಎಂದು ಹೆಸರಾಯಿತ್ತೆಂದು ಆ ಊರಿನ ಹಿರಿಯರು ಹೇಳುತ್ತಾರೆ.

ಈ ಊರಿನ ಮಾರಿಹಬ್ಬವು ಮೂರು ದಿನಗಳ ಕಾಲ ನಡೆಯುತ್ತದೆ. ಇದು ಮೂಲತಃ ಹೊಲೆಯನೊಬ್ಬನ ಕೊಳಲು ನಾದಕ್ಕೆ ಮೆಚ್ಚಿಬಂದ ದೇವತೆ. ಇದರಿಂದ ಅಂದು ಆ ಪ್ರಾಂತ್ಯದಲ್ಲಿ ಅದರಲ್ಲೂ ಕೆಳಸ್ತರವರ್ಗದವರಲ್ಲಿದ್ದ ಸಾಹಿತ್ಯ ಮತ್ತು ಸಂಗೀತದ ಅಭಿವ್ಯಕ್ತಿಗೆ ನಿದರ್ಶನವಾಗಿದೆ. ಹಾಗೂ ವಿವಿಧತೆಯಲ್ಲಿ ಏಕತೆ ಎಂಬಂತೆ ಇಂದು ಈ ಮಾರಿಹಬ್ಬವನ್ನು ಎಲ್ಲಾ ಜಾತಿಯ ಜನರು ಪೂಜಿಸುತ್ತಾರೆ.

ಸಾಮಾನ್ಯವಾಗಿ ಮಾರಿಹಬ್ಬವನ್ನು ಮೇಲ್ವರ್ಗದವರು ಆಚರಿಸುವುದಿಲ್ಲ. ಕೆಳವರ್ಗದವರು ಮಾತ್ರ ವಿಶೇಷವಾಗಿ ಆಚರಿಸುತ್ತಾರೆ. ಆದರೆ ಮಂಗಲದ ಮಾರಿಹಬ್ಬದಲ್ಲಿ ಶೆಟ್ಟರ ಜಾತಿಯ ಪೂಜಾರಿಯೂ ಪ್ರಮುಖ ಪಾತ್ರವಹಿಸುತ್ತಾನೆ. ಹಬ್ಬದ ಸಂದರ್ಭದಲ್ಲಿ ಸ್ತ್ರೀರೂಪವನ್ನು ತಾಳುತ್ತಾನೆ. ಗಡ್ಡ ಮೀಸೆಯನ್ನು ತೆಗೆದು ತಲೆಯನ್ನು ಬಾಚಿ ಜಡೆ ಕಟ್ಟುತ್ತಾನೆ. ಹಣೆಗೆ ಕುಂಕುಮ, ಕಣ್ಣಿಗೆ ಕಣ್ಣುಕಪ್ಪು, ಮುಖಕ್ಕೆ ಅರಿಸಿನ, ಕೊರಳಿಗೆ ತಾಳಿಸರ ಹಾಕಿಕೊಳ್ಳುತ್ತಾನೆ. ಬಣ್ಣ ಬಣ್ಣದ ಸೀರೆಯನ್ನುಟ್ಟು ತಂಬಡಪ್ಪ ಮಾರಮ್ಮನ ಕೇಲು ಹೊತ್ತು ಬೀದಿಗೆ ಬಂದನೆಂದರೆ ಇಡೀ ಜನ ಸಮೂಹವೇ ಬೆಚ್ಚಿ ಬೆರಗಾಗಿ ಹೋಗುತ್ತದೆ. ಅವನ ನೋಟ, ಅವನಾಕುವ ಹೆಜ್ಜೆ ಎಲ್ಲರಿಗೂ ಭಯ ಹುಟ್ಟಿಸುವಂತದ್ದು. ಇಡೀ ಗ್ರಾಮದ ಜನರು ಅವನ ಅರ್ಭಟಕ್ಕೆ ನಡುಗಿ ಹೋಗುತ್ತಾರೆ. ಇದೇ ಸಂದರ್ಭದಲ್ಲಿ ಕೇಲು ಹೊತ್ತು ಮಾರಮ್ಮನ ರೂಪವನ್ನು ತಾಳಿರುವ ತಂಬಂಡಪ್ಪನಲ್ಲಿ ಜನರು ತಮ್ಮ ಕಷ್ಟ ಕಾರ್ಪಣ್ಯಗಳನ್ನು ಮತ್ತು ತೊಂದರೆಗಳನ್ನು ನಿವಾರಿಸುವಂತೆ ಆ ಮಾರಮ್ಮನಲ್ಲಿ ಕೇಳಿಕೊಳ್ಳುವುದುಂಟು. ಆ ಮಾರಮ್ಮ ಒಪ್ಪಿಗೆ ಕೊಟ್ಟರೆ ತಮ್ಮ ಕಷ್ಟ ನಷ್ಟಗಳು ಪರಿಹಾರವಾಗುತ್ತದೆಂದು ಇಂದಿಗೂ ಇಲ್ಲಿನ ಜನರು ನಂಬುತ್ತಾರೆ. ಈ ಹಬ್ಬದಲ್ಲಿ ತಂಬಡಪ್ಪ ಕೇಲು

ಹೊತ್ತು ಮೆರೆಯುವುದು ಮುಖ್ಯವಾಗಿ ಮಾರಮ್ಮನನ್ನು ಪ್ರತಿನಿಧಿಸುತ್ತದೆ. ಇವನು ಧರಿಸುವ ವೇಷ ಸಾಕ್ಷಾತ್ ಶಿವನಸಮುದ್ರದ ಮಾರಮ್ಮನ ಪ್ರತಿರೂಪವೆಂದು ಜನರು ಭಾವಿಸುತ್ತಾರೆ ಮತ್ತು ಭಯಭಕ್ತಿಯಿಂದ ನಡೆದುಕೊಳ್ಳುತ್ತಾರೆ. ಇವನ ಪಾತ್ರವೂ ಹಬ್ಬ ಪ್ರಾರಂಭವಾಗುವ ದಿನದಿಂದ ಹಿಡಿದು ಮುಗಿಯುವ ತನಕ ಬಹುಮುಖ್ಯವಾದದ್ದು.

ಈ ಊರಿನ ಮಾರಿಹಬ್ಬದ ಅತ್ಯಂತ ಪ್ರಮುಖವಾದ ಘಟ್ಟವೆಂದರೆ ತಲೆಯ ಮೇಲೆ ಕಾಯಿ ಹೊಡೆಸಿಕೊಳ್ಳುವುದು. ತಲೆಯ ಮೇಲೆ ಕಾಯಿ ಹೊಡೆಯಿಸಿಕೊಳ್ಳುವವರು ಮತ್ತು ಹೊಡೆಯುವವರು ತುಂಬ ಕಟ್ಟುನಿಟ್ಟಿನಿಂದ ಆಚರಣೆಯನ್ನು ಮಾರಮ್ಮನ ಹೆಸರಿನಲ್ಲಿ ಮಾಡಬೇಕಾಗುತ್ತದೆ. ಅದರಲ್ಲಿ ಮುಖ್ಯವಾಗಿ ಹೊಲೆಯರ ಕುಟುಂಬದಿಂದ ಕಾಯಿ ತರಲು ತೆರಿಗೆಯನ್ನು ಹಾಕಿ, ಅದರಿಂದ ಕಾಯಿ ತಂದು ಹೆಡೆದು ಸ್ವಲ್ಪವೂ ಮಟ್ಟೆ ಚೂರುಗಳಿರದಂತೆ ನುಣುಪು ಮಾಡಿ ನಂತರ ಕಾಯಿ ಹೊಡೆಸಿಕೊಳ್ಳುವವರು ಹಬ್ಬ ಆರಂಭವಾದಗಿನಿಂದ ಮುಗಿಯುವ ತನಕ ಊಟೋಪಾಚಾರಗಳನ್ನು ಮಾಡದೆ, ಅಪರಿಚಿತ ಸ್ತ್ರೀಯರನ್ನು ಅದರಲ್ಲೂ ಋತುಮತಿಯಾದವರನ್ನು ಮಾತನಾಡಿಸಬಾರದು ಹಾಗೂ ಅವರಿಂದ ಯಾವುದೇ ರೀತಿಯ ವಸ್ತುಗಳನ್ನು ಪಡೆದುಕೊಳ್ಳಬಾರದು. ಈ ರೀತಿಯ ಆಚರಣೆಗಳನ್ನು ಆಚರಿಸಿ ತುಂಬಾ ಕಟ್ಟುನಿಟ್ಟಾಗಿದ್ದರೆ ಕಾಯಿ ಯಾವ ಅಪಾಯವಾಗದಂತೆ ಎರಡು ಹೋಳಗಾವುದು ಎಂಬುದು ಇವರ ನಂಬಿಕೆ. ಈ ಸಂದರ್ಭದಲ್ಲಿ ಮಾರಮ್ಮನಿಗೆ ಸಂಬಂಧಿಸಿದ ಕೆಲವು ಗೀತೆಗಳನ್ನು ಹಾಡಿಕೊಂಡಾಡುತ್ತಾರೆ. ಹೀಗೆ ಹಬ್ಬ ಮುಗಿಯುವವರೆಗೆ ಆರುಕಾಯಿಗಳನ್ನು ತಲೆಯ ಮೇಲೆ ಹೊಡೆಸಿಕೊಳ್ಳುತ್ತಾರೆ.

ಮಂಗಲದ ಊರಿನ ಹೊರಗೆ ಇರುವ ಬೊಮ್ಮಪ್ಪನ ಗುಡಿಯ ಬೊಮ್ಮಪ್ಪದೇವರು ಶಿವಸಮುದ್ರದ ಮಾರಮ್ಮನ ಗಂಡ. ಈತ ಇದೇ ಊರಿನವನು. ಹೊಸದಾಗಿ ಊರಿಗೆ ಬಂದಮಾರಮ್ಮನ ಸೌಂದರ್ಯಕ್ಕೆ ಮರುಳಾಗಿ ಈಕೆಯನ್ನು ಮದುವೆಯಾಗುತ್ತಾನೆ. ತುಂಬಾ ಸೊಗಸಾಗಿ ಸಂಸಾರವನ್ನು ಸಾಗಿಸುತ್ತಿದ್ದ ಈ ದಂಪತಿಗಳ ಬದುಕಿನಲ್ಲಿ ಒಂದು ಸಣ್ಣ ವಿಷಯಕ್ಕೆ ವೈಮನಸ್ಸು ಉಂಟಾಗಿ ಗಂಡ ಹೆಂಡತಿಯ ಸಹವಾಸವೇ ಬೇಡ ಎಂದು ಊರಿನ ಹೊರಗಡೆ ಒಂದು ಮರದಡಿಯಲ್ಲಿ ಕೂರುತ್ತಾನೆ. ಹಬ್ಬದ ದಿನ ಮಾರಮ್ಮ ತಂಬಂಡಪ್ಪನ ರೂಪದಲ್ಲಿ ತನ್ನ ಗಂಡನನ್ನು ನೋಡಲು ಊರಿನ ಹೊರಗಡೆಯಿರುವ ಬೊಮ್ಮಪ್ಪನ ಗುಡಿಗೆ ಹೋಗುತ್ತಾಳೆ. ಅಲ್ಲಿ ಬೊಮ್ಮಪ್ಪನಿಗೆ ಪೂಜೆ ಮಾಡಿ ಆ ತೀರ್ಥವನ್ನು ಮಾರಮ್ಮನ ಮೇಲೆ ಎರಚಿದಾಗ ಆತನಿಗೆ ಪ್ರೀತಿ ಇದ್ದರೆ ಆ ಮಾರಮ್ಮನು ಆತನ ಕಡೆ ಮುಖಮಾಡಿ ಬರುತ್ತಾಳೆ. ಒಂದು ವೇಳೆ ಆತನಿಗೆ ಪ್ರೀತಿಯಿಲ್ಲದಿದ್ದರೆ ಆತನಿಗೆ ವಿರುದ್ಧವಾಗಿ ತಿರುಗುತ್ತಾಳೆ. ಹೋಗುವಾಗ ನಿಧಾನವಾಗಿ ಹೋಗುವ ಮಾರಮ್ಮ ಬರುವಾಗ ವೇಗವಾಗಿ ಬಂದು ಗುಡಿ ಸೇರುತ್ತಾಳೆ. ಗುಡಿಗೆ ಬಂದ ತಂಬಡಪ್ಪ ಸುಸ್ತಾಗಿ ಮಲಗುತ್ತಾನೆ. ಎಲ್ಲರೂ ಅವನನ್ನು ಎತ್ತಿಕೊಂಡು ಗುಡಿಯಲ್ಲಿ ಪೂಜೆಮಾಡಿ ತೀರ್ಥ ಹಾಕಿದ ತಂಬಡಪ್ಪ ಮಾಮೂಲಿನ

ಹಾಗೆ ಎದ್ದು ಒಬ್ಬನೆ ಮನೆಗೆ ಹೋಗುತ್ತಾನೆ. ಅಲ್ಲಿಗೆ ಅವನಿಂದ ದೇವರು ಸಂಪೂರ್ಣವಾಗಿ ದೂರವಾಯಿತ್ತೆಂದು ಜನರು ನಂಬುತ್ತಾರೆ.

ಈ ಊರಿನ ಮಾರಿಹಬ್ಬದಲ್ಲಿ ಹೆಂಗಸರ ಪಾತ್ರವೂ ಬಹಳ ಪ್ರಮುಖವಾಗಿರುತ್ತದೆ. ಇಡೀ ಮನೆಯನ್ನು ಹಬ್ಬಕ್ಕೆ ಸ್ವಚ್ಛಗೊಳಿಸುವುದು, ಹಬ್ಬಕ್ಕೆ ಬೇಕಾದ ಮಡಿಕೆಗಳನ್ನು ತರುವುದು(ಮಡಹುಯ್ಯಲು) ಮನೆ ಕೆಲಸ ಹಾಗೂ ಪೂಜಾ ಕಾರ್ಯಕ್ಕೆ ಬೇಕಾಗುವ ಹೊಸ ಮಡಿಕೆಗಳನ್ನು ಒದಗಿಸುವುದು ಹಬ್ಬದ ಆರಂಭದ ದಿನದಿಂದ ಮುಗಿಯುವವರೆಗೆ ಕರಕ್ಲು ಹಾಕುವುದು, ಬಟ್ಟೆ ಸುಡುವುದು, ಅಡುಗೆ ಮಾಡುವಾಗ ಒಗ್ಗರಣೆ ಹಾಕುವುದು ಇವೆ ಮೊದಲಾದ ನಿಯಮಗಳನ್ನು ಉಲ್ಲಂಘನೆ ಮಾಡದೆ ಒಂದು ವಾರದ ತನಕ ತುಂಬಾ ಕಟ್ಟುನಿಟ್ಟಾಗಿ ನೋಡಿಕೊಳ್ಳಬೇಕಾದುದು ಮಹಿಳೆಯರ ಪ್ರಮುಖ ಕೆಲಸವಾಗಿರುತ್ತದೆ.

ಬಣ್ಣಾಂತರ ಸೇರಿವುದು, ಕರಕ್ಲು ಹಾಕುವುದು, ಕೇರು ತರುವುದು, ಮಡೇ ಬೇಯಿಸುವುದು, ಓಕಳಿಗೆ ಬೀಳುವುದು, ಕಟ್ಟು ಒಡೆಯುವುದು, ತಂಪು ತರುವುದು ಮೊದಲಾದವು ಈ ಊರಿನ ಮಾರಿಹಬ್ಬದ ವಿಶೇಷಗಳಾಗಿವೆ. ಒಟ್ಟಿನಲ್ಲಿ ಹಬ್ಬ ಅಥವಾ ಜಾತ್ರೆಗಳನ್ನು ನಡೆಸುವುದೇ ದುಸ್ತರವಾಗಿರುವ ಇಂದಿನ ಆಧುನಿಕ ಯುಗದಲ್ಲೂ ಬಹಳಷ್ಟು ದೀರ್ಘಕಾಲ ವ್ಯವಸ್ಥಿತವಾಗಿ, ಅನ್ಯೋನ್ಯತೆಯಿಂದ ತಮ್ಮದೇ ಆದ ಸ್ಥಳೀಯ ಕಲ್ಪನೆಗಳ ಹಿನ್ನೆಲೆಯಲ್ಲಿ ಆಚರಿಸಿಕೊಂಡು ಹೋಗುತ್ತಿರುವ ಮಂಗಲದ ಮಾರಿಹಬ್ಬವು ಈ ಪ್ರಾಂತ್ಯದ ಜನಪದ ಸಂಸ್ಕೃತಿಗೆ ಹಿಡಿದ ಕೈಗನ್ನಡಿಯಾಗಿದೆ ಎನ್ನಬಹುದು.[೨]

## ದೊಡ್ಡರಾಯಪೇಟೆಯ ಕಿವುಡು ಮಾರಮ್ಮನ ಜಾತ್ರೆ

ಪ್ರತಿಯೊಂದು ಊರಿನಲ್ಲೂ ಒಂದು ಗ್ರಾಮದೇವತೆಯ ಹಬ್ಬವಿರುವುದು ಸಾಮಾನ್ಯ. ಆದರೆ ದೊಡ್ಡರಾಯಪೇಟೆಯಲ್ಲಿ ಕಿವುಡು ಮಾರಮ್ಮ ಬಿಸಲಮಾರಮ್ಮ ಮತ್ತು ಉರುಕಾತಮ್ಮ ಎಂಬ ಮೂರು ಗ್ರಾಮದೇವತೆಗಳಿರುವುದು ವಿಶೇಷ. ಸಾಮಾನ್ಯವಾಗಿ ದೇವತೆಗಳ ಹುಟ್ಟಿಗೆ ಮನುಷ್ಯನ ಭಯವೇ ಕಾರಣ. ಹಾಗೆಯೇ ಇಲ್ಲಿಯೂ ಕೂಡ ಕಾಲರಾ,ಸಿಡುಬು ಮುಂತಾದ ಸಾಂಕ್ರಾಮಿಕ ರೋಗಗಳು ಗ್ರಾಮದಲೆಲ್ಲಾ ಹರಡಿ ಹಲವರನ್ನು ಬಲಿ ತೆಗೆದುಕೊಂಡಿತಂತೆ. ಇದರಿಂದ ಭಯಭೀತರಾದ ಜನ ಇದಕ್ಕೆ ದುಷ್ಟಶಕ್ತಿಗಳು ಕಾರಣವೆಂದು ಭಾವಿಸಿ ಅವುಗಳ ನಾಶಕ್ಕೆ ಗ್ರಾಮದೇವತೆಗಳನ್ನು ಪ್ರತಿಷ್ಠಾಪಿಸಬೇಕೆಂದು ಗ್ರಾಮದ ಹಿರಿಯರೆಲ್ಲ ನಿರ್ಧರಿಸಿ ಗ್ರಾಮದೇವತೆಗಳೆಂದು ಮೂರು ಕಲ್ಲಿನ ಶಿಲೆಗಳನ್ನು ಪ್ರತಿಷ್ಠಾದರು. ಆ ದೇವತೆಗಳೆಂದರೆ ಕಿವುಡು ಮಾರಮ್ಮ, ಬಿಸಿಲಮಾರಮ್ಮ, ಉರುಕಾತಮ್ಮ ಈ ಗ್ರಾಮದೇವತೆಗಳನ್ನು ಪ್ರತಿಷ್ಠಾಪಿಸಿದ ಮೇಲೆ ಗ್ರಾಮವನ್ನು ಕಾಡುತ್ತಿದ್ದ ಸಾಂಕ್ರಾಮಿಕ ರೋಗಗಳು ನಿವಾರಣೆಯಾದವಂತೆ. ಇದು ಇಲ್ಲಿನ ಜನರ ನಂಬಿಕೆ. ಕಾಲಾನಂತರದಲ್ಲಿ ಈ ಗ್ರಾಮದಲ್ಲಿ ಚೌಡೇಶ್ವರಿದೇವಿ, ಮುನೇಶ್ವರ ಸ್ವಾಮಿ, ವೀರಭದ್ರೇಶ್ವರ ದೇವಾಲಯಗಳು ಹುಟ್ಟಿಕೊಂಡು ಅದಕ್ಕೆ ಪೂರ್ವಕವಾಗಿ ಹಬ್ಬಗಳು ಆಚರಣೆಯಾಗುತ್ತಿವೆ.

ದೊಡ್ಡರಾಯನಪೇಟೆಯಲ್ಲಿ ಮೂರು ಗ್ರಾಮ ದೇವತೆಗಳಿದ್ದರು ಕಿವುಡು ಮಾರಮ್ಮ ಗ್ರಾಮದ ಅಧಿದೇವತೆಯಾಗಿದ್ದು, ಈ ಮಾರಮ್ಮನ ಹಬ್ಬದ ಆಚರಣೆ ಮತ್ತು ಉತ್ಸವ ಬಹಳ ಪ್ರಮುಖವಾದದ್ದಾಗಿದೆ. ಈ ಹಬ್ಬವನ್ನು ಗ್ರಾಮದ ಜನತೆ ಭಯ ಭಕ್ತಿಯಿಂದಾಚರಿಸುತ್ತಾ ಬಂದಿದ್ದಾರೆ. ಈ ಹಬ್ಬವನ್ನು ನಿಷ್ಠೆಯಿಂದ ಆಚರಿಸುತ್ತಿರುವುದರಿಂದ ನಮ್ಮ ಗ್ರಾಮಕ್ಕೆ ಯಾವುದೇ ಅಪಾಯ ತಗಲದೆ ಕ್ಷೇಮದಿಂದ ಗ್ರಾಮ ಸುಭೀಕ್ಷವಾಗಿದೆ ಎಂಬುದು ಇಲ್ಲಿನ ಜನಪದರ ನಂಬಿಕೆಯಾಗಿದೆ. ಜಾತಿಮತ ಬೇದವಿಲ್ಲದೆ ಸಮನ್ವಯದಿಂದ ನಡೆಯುವ ಈ ಹಬ್ಬ ಪ್ರತಿವರ್ಷ ಮಾರ್ಚ್ ತಿಂಗಳಲ್ಲಿ ಯುಗಾದಿಗೂ ಮುನ್ನ ಆಚರಣೆಯಾಗುತ್ತದೆ. ಹಬ್ಬದ ದಿನಾಂಕ ನಿಗದಿಗೊಂಡ ನಂತರ ಕರಕಲು ಸುಡುವ ಕಾರ್ಯಕ್ರಮದಿಂದ ಹಬ್ಬ ಆರಂಭವಾಗುತ್ತದೆ. ಒಂದು ಕುರಿ ಅಥವಾ ಮೇಕೆಯನ್ನು ಬಿಸಿಲ ಮಾರಿಗುಡಿ ಬಳಿ ಬಲಿಕೊಟ್ಟು ಅನ್ನದೊಡನೆ ರಕ್ತವನ್ನು ಮತ್ತು ಹುರಿದ ಧಾನ್ಯಗಳನ್ನು ತಮಟೆ ವಾದ್ಯ ಸಮೇತ ಪಂಜಿನ ಬೆಳಕಿನಲ್ಲಿ ಇಡೀ ಗ್ರಾಮದ ಸುತ್ತ ಚೆಲ್ಲುವ ಕಾರ್ಯಕ್ರಮವೇ ಕರಕಲು. ಇದರ ಉದ್ದೇಶ ಕ್ಷುದ್ರದೇವತೆಗಳ ಕೋಪ ಶಮನ ಮತ್ತು ಗ್ರಾಮದ ಸುತ್ತ ಈ ರೀತಿ ಮಾಡುವುದರಿಂದ ಗ್ರಾಮಕ್ಕೆ ಶಾಂತಿ, ನೆಮ್ಮದಿ ಬರುತ್ತದೆ ಎಂಬುದು ಈ ಜನರ ಸಂಪ್ರದಾಯ. ಇದು ಹಬ್ಬದ ಆಚರಣೆಯ ಮುನ್ನಾ ದಿನ ನಡೆಯುತ್ತದೆ. ಇದಲ್ಲದೆ ಹಬ್ಬದ ಸಂದರ್ಭದಲ್ಲಿ ಯಾರ ಮನೆಯಲ್ಲಾದರೂ ಮುಟ್ಟು ಸಂಭವಿಸಿದರೆ, ಅಂದರೆ ಸಾವು ಅಥವಾ ಜನನವಾದರೆ ಆ ಕುಟುಂಬದವರು ದೋಷ ನಿವಾರಣೆಗಾಗಿ ಒಂದು ಬಲಿ ಕೊಡಬೇಕಾಗುತ್ತದೆ.

ಈ ಮಾರಿಹಬ್ಬದಲ್ಲಿ ಪ್ರಮುಖ ಪಾತ್ರ ಉಪ್ಪಾರ ಜನಾಂಗದ ೯ ರಿಂದ ೧೦ವರ್ಷದ ಒಬ್ಬ ಕನ್ಯೆ. ಆ ಹೆಣ್ಣು ಮಗುವಿಗೆ ಮೂರು ದಿನಗಳ ಕಾಲ ಕೇವಲ ದ್ರವರೂಪದ ಆಹಾರವನ್ನು ಮತ್ತು ಎಳನೀರನ್ನು ಕೊಟ್ಟು ಆಕೆಯನ್ನು ಮಾನಸಿಕವಾಗಿ ಸಿದ್ಧಗೊಳಿಸಲಾಗುತ್ತದೆ. ಹಬ್ಬದ ದಿನ ಗುರುವಾರ ಬೆಳಗಿನ ಜಾವ ಈ ಕನ್ಯೆಯನ್ನು ಬಿಸಿಲಮಾರಮ್ಮನ ಗುಡಿಗೆ ಕರೆತರಲಾಗುತ್ತದೆ. ಆಗಲೇ ಅಲ್ಲಿ ಊರ ಜನ ಜಮಾಯಿಸಿರುತ್ತಾರೆ. ಮೂಡಲ ಮೋಳೆಯ ಗ್ರಾಮದ ಜನ ವಿಶೇಷವಾಗಿ ಮಹಿಳೆಯರು, ಮಕ್ಕಳು ವೀಳ್ಯ, ತಂಬಿಟ್ಟಿನ ಆರತಿ, ಅರಿಶಿನ ಕುಂಕುಮಗಳೊಡನೆ ಮಾರಿ ತರುವ ಕನ್ಯೆಯೊಡನೆ ಬರುತ್ತಾರೆ. ಆನಂತರ ಇಲ್ಲಿ ಪೂಜೆ ನೆರವೇರಿಸಿ ಕಳಸ ಅಥವಾ ಅಲಂಕೃತ ಮಣ್ಣಿನ ಗುಂಬವನ್ನು ಕನ್ಯೆಯ ತಲೆಯ ಮೇಲೆ ಹೊರಿಸಿ ಪೂಜೆ, ಪುರಸ್ಕಾರ ಆರತಿಗಳನ್ನು ಎತ್ತುತ್ತಾರೆ. ಇಲ್ಲಿ ಕನ್ಯೆಗೆ ದೇವರ ಅವಗಹನೆಯಾಗುತ್ತದೆ ಮತ್ತು ಈಕೆಗೆ ಕಿವಿ ಕೇಳಿಸದಂತಾಗುತ್ತದೆ ಯಲ್ಲದೇ ಪ್ರಜ್ಞೆ ತಪ್ಪುತ್ತದೆ. ಈ ಕಾರ್ಯಕ್ಕೆ ಪೂರಕವಾಗಿ ಕೊಂಬು,ತಮಟೆ, ವಾದ್ಯ, ಜಾಗಟೆಗಳ ಸದ್ದು ಮೊಳಗುತ್ತದೆ. ಎಳನೀರಿನಿಂದ ಹಚ್ಚಿದ ದೀಪವನ್ನು ಕನ್ಯೆಯ ತಲೆಯ ಮೇಲೆ ಹೊರಿಸಿ ಹೊಂಬಾಳೆಯಿಂದ ಅಲಂಕೃತವಾದ ಮಣ್ಣಿನ ಗುಂಬ ಹೊರಿಸುತ್ತಾರೆ. ಜನರು ಉದ್ವೇಗ, ಭಯ, ಭಕ್ತಿಗಳಿಂದ ಉಘೇ ಮಾರಮ್ಮ ಉಘೇ ಮಾರಮ್ಮ ಎಂದು ಏರು ಧ್ವನಿಯಲ್ಲಿ ಕೂಗುತ್ತಾರೆ. ವಾದ್ಯ ಘೋಷಗಳು ಮೊಳಗುತ್ತವೆ.

ಇಲ್ಲಿ ಒಂದು ವಿಶೇಷವೆಂದರೆ ಈ ದೇವತೆ ಕಿವುಡಾಗಿರುವುದರಿಂದಾಗಿ ಜೋರು ಶಬ್ದದೊಂದಿಗೆ ಕೂಗಿದರೆ ಮಾತ್ರ ಮುಂದೆ ಸಾಗುತ್ತಾಳೆ. ಇಲ್ಲವೆಂದರೆ ಹಿಮ್ಮುಖವಾಗಿ ಚಲಿಸಲಾರಂಭಿಸುತ್ತಾಳೆ. ಅದಕ್ಕಾಗಿ ಜನರು ಜೋರಾಗಿ ಕೂಗುತ್ತಾ ಇರಬೇಕಾಗುತ್ತದೆ. ಮೆರವಣಿಗೆಯ ವೀಕ್ಷಣೆಗಾಗಿ ಬಿಸಿಲಮಾರಮ್ಮನ ಗುಡಿಯಿಂದ ಹಿಡಿದು ಕಿವುಡ ಮಾರಮ್ಮನ ಗುಡಿವರೆಗೆ ಒಂದು ಕಿ.ಮೀ.ವರೆಗೆ ಜನ ಸಂದಣಿಯುಂಟಾಗುತ್ತದೆ. ಗ್ರಾಮದ ಅಬಾಲವೃದ್ಧರಾದಿಯಾಗಿ ಎಲ್ಲರೂ ಮಾರಮ್ಮನಿಗೆ ವೀಳ್ಯದೆಲೆ ನೈವೇದ್ಯ ಸಮರ್ಪಿಸುತ್ತಾರೆ. ಹೆಣ್ಣುಮಕ್ಕಳು ತಂಬಿಟ್ಟಿನಾರತಿ ಅಥವಾ ತಂಪಾರತಿ ಎತ್ತುವುದು ವಿಶೇಷ. ಇವುಗಳಲ್ಲದೆ ಅಂದೇ ಗ್ರಾಮದ ಯುವಕರು ಗೊಂಬೆಗಳ ನೃತ್ಯ, ಕತ್ತಿವರಸೆ, ಕೋಲುವರಸೆ, ದೊಣ್ಣೆವರಸೆ ಇತ್ಯಾದಿ ಜನಪದ ಕಲೆಗಳ ಪ್ರದರ್ಶನ ನಡೆಸುತ್ತಾರೆ. ಸಂಗೀತಕ್ಕೆ ತಕ್ಕ ಹಾಗೆ ನರ್ತಿಸುವ ಯುವಕರ ದಂಡು, ಪಟಾಕಿ, ಬಾಣ, ಬಿರುಸು, ಹೂ ಕುಂಡಗಳ ಸುರಿಮಳೆ ಇತ್ಯಾದಿ ಮನೋರಂಜನೀಯವಾದ ಕಾರ್ಯಕ್ರಮ ಹಾಗೂ ನಾಟಕ ಪ್ರದರ್ಶನಗಳು ನಡೆಯುತ್ತವೆ.[೮]

ಒಟ್ಟಾರೆಯಾಗಿ ಗ್ರಾಮೀಣ ಪ್ರದೇಶಗಳಲ್ಲಿ ನಡೆಯುವ ಜಾತ್ರೆ, ರಥೋತ್ಸವ ಹಬ್ಬ ಹರಿದಿನಗಳು ಹಲವು ವಿಧದ ಸೂಕ್ಷ್ಮ ಸಂಸ್ಕೃತಿಯನ್ನು ಒಳಗೊಂಡಿರುವುದಕ್ಕೆ ಸಾಮಾಜಿಕ ವೈಶಿಷ್ಟ್ಯವೂ ಒಂದು ಕಾರಣ. ಇಂಥ ಸಾಂಸ್ಕೃತಿಕ ಕೂಡುಕೊಳ್ಳುವಿಕೆಯಿಂದಾಗಿ ಅಲ್ಪಸ್ವಲ್ಪ ಸಮೈಕ್ಯತೆಯ ಲಕ್ಷಣಗಳು ಕಂಡುಬರುತ್ತವೆ. ಆಧುನಿಕ ಸಂಸ್ಕೃತಿ ಪ್ರಭಾವ ಇತ್ತೀಚೆಗಂತೂ ಶೀಘ್ರಗತಿಯಲ್ಲಿ ಯುವಕರನ್ನು ಸಂಮ್ಮೋಹನಗೊಳಿಸುತ್ತಾ ಮೂಲ ಸಂಸ್ಕೃತಿಯನ್ನು ಮರೆ ಮಾಡುತ್ತಿರುವ ಹುನ್ನಾರ ತೀಕ್ಷ್ಣವಾಗಿದೆ. ಹಾಗಾಗಿ ದೇಶದ ಉಳಿವು ದೇಶೀಯ ಸಂಸ್ಕೃತಿಯ ಉಳಿವು ಎಂಬುದು ಹೆಚ್ಚು ಅರ್ಥಪೂರ್ಣ.

ಅಡಿಟಿಪ್ಪಣಿಗಳು

೧. ಸ್ವಾಮಿ ಹರ್ಷನಂದ, ಹಿಂದು ಹಬ್ಬಗಳು ಮತ್ತು ಉತ್ಸವಗಳು, ಹರ್ಷ ಪ್ರಕಾಶನ, ಮೈಸೂರು, ೧೯೯೯, ಪು.೪೨

೨. ಗುರುಪಾದಪ್ಪ, ಬೆಂಡರವಾಡಿ ಇವರಿಂದ ತಿಳಿದು ಬಂದ ಮಾಹಿತಿ

೩. ಗೌಡರ ಮಹದೇವಪ್ಪ, ಚೆಂದಕವಾಡಿ ಇವರಿಂದ ತಿಳಿದುಬಂದ ಮಾಹಿತಿ

೪. ನಂಜುಂಡಶೆಟ್ಟಿ, ಚಾಮರಾಜನಗರ ಇವರಿಂದ ತಿಳಿದುಬಂದ ಮಾಹಿತಿ

೫. ಶೇಷಗಿರಿರಾವ್, ದೇವಸ್ಥಾನದ ಅರ್ಚಕರು, ಕೆಂಪನಪುರ ಇವರಿಂದ ತಿಳಿದುಬಂದ ಮಾಹಿತಿ

೬. ಮಂಜುನಾಥಸ್ವಾಮಿ, ಮಂಗಲ ಇವರಿಂದ ತಿಳಿದುಬಂದ ಮಾಹಿತಿ

೭. ಪುಟ್ಟಸ್ವಾಮಪ್ಪ, ಅರ್ಚಕರು, ಕಸ್ತೂರುಬಂಡಿ ಇವರಿಂದ ತಿಳಿದುಬಂದ ಮಾಹಿತಿ

೮. ಕ್ಷೇತ್ರಕಾರ್ಯ ಸಂದರ್ಭದಲ್ಲಿ ಶ್ರೀ ವೆಂಕಟರಾಮು ಮತ್ತು ಕೃಷ್ಣಶೆಟ್ಟಿಯವರಿಂದ ಸಂಗ್ರಹಿಸಿದ ಮಾಹಿತಿ

೯. ನಂಜುಂಡಸ್ವಾಮಿ, ಹರದನಹಳ್ಳಿ ದರ್ಶನ, ದೇಗುಲ ಪ್ರಕಾಶನ, ಚಾಮರಾಜನಗರ, ೧೯೯೯, ಪು.೧೯

೧೦. ಸಿದ್ದಮಲ್ಲಪ್ಪ ಮತ್ತು ಚನ್ನಶೆಟ್ಟಿ, ಉಮ್ಮತ್ತೂರು ಇವರಿಂದ ತಿಳಿದುಬಂದ ಮಾಹಿತಿ

೧೧. ಚೆಲುವರಾಜು, ಮಾಜಿ ಗ್ರಾಮ ಪಂಚಾಯಿತಿ ಸದಸ್ಯರು, ಬಿಸಲವಾಡಿ ಇವರಿಂದ ತಿಳಿದುಬಂದ ಮಾಹಿತಿ

೧೨. ದೇವಾಲಯ ಕೈಪಿಡಿ, ೧೮.೧೦.೧೯೬೧

೧೩. ಪಂಡಿತ ನಾಗರಾಜ ದೀಕ್ಷಿತ್ ದೇವಸ್ಥಾನದ ಅರ್ಚಕರು, ಚಾಮರಾಜನಗರ ಇವರಿಂದ ತಿಳಿದುಬಂದ ಮಾಹಿತಿ

೧೪. ಗೌಡಿಕೆ ಸ್ವಾಮಿ, ಮಲೆಯೂರು ಇವರಿಂದ ತಿಳಿದುಬಂದ ಮಾಹಿತಿ

೧೫. ಶಿವಾಗಪ್ಪ ಶಾಸ್ತ್ರಿಗಳು, ಕುದೇರು ಇವರಿಂದ ತಿಳಿದುಬಂದ ಮಾಹಿತಿ

೧೬. ಮಹಾದೇವಶೆಟ್ಟಿ, ಹಿರಿಯ ಮುಖಂಡರು, ಮಂಗಲ ಇವರಿಂದ ತಿಳಿದುಬಂದ ಮಾಹಿತಿ

೧೭. ಶ್ರೀಮತಿ ಗೀತಾ, ದೊಡ್ಡರಾಯಪೇಟೆ ಇವರಿಂದ ತಿಳಿದುಬಂದ ಮಾಹಿತಿ

ಕರ್ನಾಟಕ ರಾಜ್ಯದ ದಕ್ಷಿಣ ತುದಿಯಲ್ಲಿರುವ ಚಾಮರಾಜನಗರ ಜಿಲ್ಲೆ ಭವ್ಯವಾದ ಇತಿಹಾಸ ಪರಂಪರೆಗಳಿಂದ ಕೂಡಿದೆ. ಕರ್ನಾಟಕ ಸಾಂಸ್ಕೃತಿಕ ಪರಂಪರೆಯನ್ನು ಇಂದಿಗೂ ಮುಂದುವರಿಸಿಕೊಂಡು ಬಂದಿರುವ ಅನೇಕ ತಾಲೂಕುಗಳ ಪೈಕಿ ಚಾಮರಾಜನಗರವೂ ಒಂದು.

ಚಾಮರಾಜನಗರ ತಾಲೂಕಿನ ಇತಿಹಾಸವನ್ನು ಗಮನಿಸಿದರೆ ಅಲ್ಲಿನ ಜನಪದರ ಸಂಸ್ಕೃತಿಯನ್ನು ಬಿಂಬಿಸುವ, ಪೋಷಿಸುವ, ಅಂತಃಸತ್ವದ ವಾಹಿನಿಗಳಾಗಿ ಎರಡು ಪ್ರಮುಖ ಅಂಶಗಳು ಕಂಡುಬರುತ್ತವೆ. ಅವುಗಳಲ್ಲಿ ಮೊದಲನೆಯದು ಇಲ್ಲಿನ ದೇಶಿಯ ಆರಾಧ್ಯ ದೈವಗಳಾದ ಮಲೆಮಹದೇಶ್ವರ, ಮಂಟೇಸ್ವಾಮಿ, ಸಿದ್ದಪಾಜಿ ಹಾಗೂ ಬಿಳಿಗಿರಿರಂಗಪ್ಪನ ಪ್ರಭಾವ. ಮತ್ತೊಂದು ಅಂಶ ತಾಲೂಕಿನ ಸುತ್ತಲೂ ಆವರಿಸಿರುವ ವಿಶಿಷ್ಟವಾದ ಭೌಗೋಳಿಕ ಪರಿಸರ, ಗ್ರಾಮಾಂತರ ಪ್ರದೇಶಗಳಾದಿಯಾಗಿ ಇಡೀ ತಾಲೂಕಿನ ಅಭಿವೃದ್ಧಿ ಕೀರ್ತಿ ಎಲ್ಲವೂ ಈ ಎರಡು ಅಂಶಗಳ ಮೇಲೆ ಅವಲಂಬಿತವಾಗಿವೆಯೆಂದು ಹೇಳಬಹುದು.

ಇತಿಹಾಸ ಮತ್ತು ಪುರಾತತ್ವ ಕ್ಷೇತ್ರಕ್ಕೆ ಸಂಬಂಧಿಸಿದಂತೆ ಹಲವಾರು ಅಧ್ಯಯನಗಳು ನಡೆದಿವೆ. ಆದರೆ ಚಾಮರಾಜನಗರ ತಾಲೂಕಿನ ಇತಿಹಾಸ, ಸ್ಥಳನಾಮ, ಶಾಸನಗಳು, ದೇವಾಲಯ ಕುರಿತಂತೆ ಪ್ರಸ್ತುತ ಅಧ್ಯಯನವು ಬಹುಮುಖ್ಯವಾಗಿವೆ. ಅಲ್ಲದೇ ಈ ತಾಲೂಕಿನ ಪರಿಸರದಲ್ಲಿ ಪಾರಂಪರಿಕವಾಗಿ ನಡೆದ ಬಂದಿರುವ ಸಾಮಾಜಿಕ ಮತ್ತು ಧಾರ್ಮಿಕ ಆಚರಣೆ, ಜಾತ್ರೆ-ಉತ್ಸವ ಬಗ್ಗೆ ಅಧ್ಯಯನ ಮಾಡಿದಾಗ ಅನೇಕ ಮೌಖಿಕ ಮತ್ತು ಚಾರಿತ್ರಿಕಾಂಶಗಳು ಬೆಳಕಿಗೆ ಬಂದಿದ್ದನ್ನು ಗಮನಿಸಬಹುದು. ಈ ತಾಲೂಕಿನ ಇತಿಹಾಸ ಮತ್ತು ವಿಶೇಷಣಾತ್ಮಕ ಹಾಗೂ ವಿವರಣಾತ್ಮಕವಾಗಿ ಕ್ಷೇತ್ರಕಾರ್ಯದ ಮೂಲಕ ಕಟ್ಟಿಕೊಡುವ ಪ್ರಯತ್ನವನ್ನು ಪ್ರಸ್ತುತ ಅಧ್ಯಯನದಲ್ಲಿ ಮಾಡಲಾಗಿದೆ.

ಒಂದು ಪ್ರದೇಶದ ಉನ್ನತಿಗೆ ಅಲ್ಲಿನ ಭೌಗೋಳಿಕ ಪರಿಸರ ಕೂಡ ಬಹುಮುಖ್ಯವಾಗುತ್ತದೆ. ಮಾನವನ ಅಲೆಮಾರಿ ಜೀವನದಿಂದ ಹಿಡಿದು ಕ್ರಮೇಣ ಬಂದು ಸುಸಂಬದ್ಧವಾದ ಸಾಮಾಜಿಕ ವ್ಯವಸ್ಥೆ ನಿರ್ಮಾಣವಾಗುವಲ್ಲಿ ಅಲ್ಲಿನ ಪರಿಸರ ಬಹಳ ಮುಖ್ಯ. ಭೌಗೋಳಿಕವಾಗಿ ಸಮೃದ್ಧಿಯನ್ನು ಪಡೆದಿರುವ ಇಲ್ಲಿನ ಬೆಟ್ಟಗುಡ್ಡ, ಕಾಡು, ನೀರು ಮೊದಲಾದ ನೈಸರ್ಗಿಕ ಸಂಪತ್ತು ತೀಕ್ಷ್ಣವಾಗಿ ನಾಗರಿಕತೆಯತ್ತ ದಾಪುಗಾಲನ್ನಿಡಲು ಕಾರಣವಾಯಿತು. ಬಿಳಿಗಿರಿರಂಗನ ಬೆಟ್ಟ, ಗೋಪಾಲಸ್ವಾಮಿ ಬೆಟ್ಟ, ಕರಿವರದರಾಜಸ್ವಾಮಿ ಬೆಟ್ಟ ಹಾಗೂ ಮಂಗಲ ಶಂಕರದೇವರ ಗುಡ್ಡಗಳ ನಡುವೆ ಇರುವ ಈ ತಾಲೂಕಿನ ಭೌಗೋಳಿಕ ಪರಿಸರವು ಬಹಳ ವಿಶಿಷ್ಟವಾಗಿವೆ. ಪ್ರಾಗಿತಿಹಾಸಕಾಲದಿಂದ ಬೃಹತ್ ಶಿಲಾಯುಗದವರೆಗಿನ ಅವಶೇಷಗಳು ಕಡಿಮೆ ಪ್ರಮಾಣದಲ್ಲಿರುವುದರಿಂದ ಆ ಕಾಲದ ಸಂಪೂರ್ಣ ಚಿತ್ರಣ ಬಹಳ ಕಡಿಮೆ. ಅಂದು ಪ್ರಾಚೀನ ಜನವರ್ಗದ

ಸಾಮಾಜಿಕ ಕಟ್ಟುಪಾಡುಗಳಿಗೆ ಒಳಗಾಗಿದ್ದ ಜನವರ್ಗ ವಾಸವಾಗಿತ್ತೆಂಬುದನ್ನು ಅಲ್ಲಗಳೆಯಲಿಕ್ಕಾಗದು, ಮುಖ್ಯವಾಗಿ ಬೃಹತ್ ಶಿಲಾ ಸಂಸ್ಕೃತಿ ಹಂತದಲ್ಲಿ ಸತ್ತವರಿಗಾಗಿ ವಿಶಿಷ್ಟ ಬಗೆಯ ಗೋರಿಗಳ ನಿರ್ಮಾಣ ಕಾರ್ಯ ನಡೆಯಿತ್ತು. ಅವುಗಳ ನಿರ್ಮಾಣದಲ್ಲಿ ಬಳಸಿದ ತಂತ್ರ ಮತ್ತು ಶವಸಂಸ್ಕಾರ ಪದ್ಧತಿಗಳನ್ನು ಗಮನಿಸಿದರೆ, ಅವರಲ್ಲಿ ವಿಶಿಷ್ಟ ಬಗೆಯ ನಂಬಿಕೆಗಳ ಆಚರಣೆಯಲ್ಲಿದ್ದುದನ್ನು ಗಮನಿಸಬಹುದು. ಚಾರಿತ್ರಿಕವಾಗಿ ಗಂಗರಸರಿಂದ ಆದಿಯಾಗಿ ಮೈಸೂರು ಅರಸರವರೆಗೆ ಈ ತಾಲೂಕನ್ನು ಆಳಿದ ರಾಜವಂಶ ಗಳನ್ನು, ನೀಡಿದ ದಾನ-ದತ್ತಿ ವಿಚಾರಗಳನ್ನು ಆಡಳಿತ ವೈಖರಿಯನ್ನು, ಸಾಂಸ್ಕೃತಿಕ ಕೊಡುಗೆಯನ್ನು, ಚಾಮರಾಜನಗರ ತಾಲೂಕಿನೊಡನೆ ಈ ರಾಜವಂಶಗಳು ಹೊಂದಿದ್ದ ಸಂಬಂಧದ ಸ್ವರೂಪವನ್ನು ಕುರಿತು ವಿಶ್ಲೇಷಿಸಲಾಗಿದೆ.

ಯಾವುದೇ ಪ್ರದೇಶದ ಚರಿತ್ರೆಯನ್ನು ಕುರಿತು ಅಧ್ಯಯನ ಮಾಡುವಾಗ ಅಲ್ಲಿನ ಸ್ಥಳನಾಮ ಕುರಿತು ವಿವೇಚಿಸುವುದು ಬಹಳ ಅವಶ್ಯಕ. ಭೌಗೋಳಿಕವಾಗಿ ಇಲ್ಲಿ ಬೆಟ್ಟ, ಗುಡ್ಡ, ಅನೇಕ ನದಿ, ತೊರೆ, ಹಳ್ಳ ಕೊಳ್ಳ ಅರಣ್ಯ ಪ್ರದೇಶಗಳು ಕಂಡುಬರುವುದರಿಂದ ಆದಿ ಮಾನವನ ಪ್ರಾಗೈತಿಹಾಸಿಕ ಕಾಲಘಟ್ಟದಿಂದ, ಚಾರಿತ್ರಿಕ ಕಾಲದ ಚಾಮರಾಜನಗರ ತಾಲೂಕಿನ ರಾಜರು ಹಾಗೂ ಪಾಳೇಗಾರರ ಆಳ್ವಿಕೆ ಮಾಡಿದ ಪ್ರಾಚೀನ ಕುರುಹುಗಳು ಈ ಭಾಗದಲ್ಲಿ ಗುರುತಿಸಲು ಇಲ್ಲಿನ ಸ್ಥಳನಾಮಗಳ ಹಿನ್ನೆಲೆಯಿಂದಲೇ ನಿಷ್ಪನ್ನಗೊಂಡಿವೆ. ಸ್ಥಳನಾಮಗಳನ್ನು ಬಹಳ ಮುಖ್ಯವಾಗಿ ಪ್ರಾಕೃತಿಕ ಹಾಗೂ ಸಾಂಸ್ಕೃತಿಕ ಸ್ಥಳನಾಮಗಳು ಎಂಬುದಾಗಿ ವಿಭಾಗಿಸಿಕೊಂಡು ತಾಲೂಕಿನಲ್ಲಿ ಬರುವ ಸ್ಥಳಗಳನ್ನು ಶಾಸನ, ಚಾರಿತ್ರಿಕ ದಾಖಲೆ, ಪ್ರಾಕ್ಚಾರಿತ್ರಿಕ ಕುರುಹುಗಳು, ಭೌಗೋಳಿಕ ಲಕ್ಷಣಗಳ ಮೂಲಕ ವಿಶ್ಲೇಷಿಸಲಾಗಿದೆ.

ಯಾವುದೇ ಒಂದು ಪ್ರದೇಶದ ಇತಿಹಾಸವನ್ನು ಪುನರಚಿಸಲು ಇರುವ ಪ್ರಾಕ್ತಾನಾಧಾರ ಆಧಾರಗಳಲ್ಲಿ ಶಾಸನಗಳು ಬಹಳಮುಖ್ಯ. ಚಾಮರಾಜನಗರ ತಾಲೂಕಿನ ಚಾರಿತ್ರಿಕ ಹಾಗೂ ಸಾಂಸ್ಕೃತಿಕ ಅಧ್ಯಯನಕ್ಕೆ ಅಮೂಲ್ಯವಾದ ಸಂಪತ್ತು ಶಾಸನಗಳು. ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಪೂರಕ ಮಾಹಿತಿಗಳನ್ನು ಕಲೆ ಹಾಕುವಾಗ ಅನೇಕ ಕೊರತೆಗಳು ಕಂಡುಬಂದವು. ಎಷ್ಟೋ ವೇಳೆ ಸೂಕ್ತ ಮಾಹಿತಿಯೇ ದೊರೆಯದೆ ಹೋದಂತಹ ಸಂದರ್ಭಗಳು ಎದುರಾದವು. ಸತತ ಪ್ರಯತ್ನ ಹಾಗೂ ಶಾಸನಗಳ ಅಧ್ಯಯನದ ಮೂಲಕ ಈ ಕೊರತೆಯನ್ನು ಆದಷ್ಟು ತುಂಬಿ ಕೊಡಲಾಗಿದೆ. ಒಟ್ಟಾರೆ ಶಾಸನಗಳ ಹಿನ್ನೆಲೆ ಹಾಗೂ ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಸಿಕ್ಕಂತಹ ಮಾಹಿತಿಗಳನ್ನು ಆಧರಿಸಿ ಚಾಮರಾಜನಗರ ತಾಲೂಕಿನ ರಾಜಕೀಯ, ಸಾಮಾಜಿಕ, ಧಾರ್ಮಿಕ, ಸಾಂಸ್ಕೃತಿಕ ಹಾಗೂ ದಾನದತ್ತಿಗಳ ಬಗ್ಗೆ ಚರ್ಚಿಸಲಾಗಿದೆ.

ಸಮಾಜದ ಎಲ್ಲ ಕ್ಷೇತ್ರಗಳ ಮೇಲೆ ಪ್ರಭಾವ ಬೀರಿದ್ದು ಧರ್ಮ. ಚಾಮರಾಜನಗರ ತಾಲೂಕಿಲ್ಲಿ ಬೌದ್ಧ, ಜೈನ, ವೈಷ್ಣವ, ಶೈವ ಧರ್ಮಗಳು ಪ್ರಮುಖ ಸ್ಥಾನದಲ್ಲಿತ್ತು. ದೇವಾಲಯಗಳಿಗೆ ಸಂಬಂಧಿಸಿದಂತೆ ಕ್ಷೇತ್ರ ವೀಕ್ಷಣೆಯ ಮೂಲಕ ವಾಸ್ತು ವಿನ್ಯಾಸವನ್ನು ಗಮನಿಸಲಾಗಿದೆ. ಈ ತಾಲೂಕಿನಲ್ಲಿ ಅಧಿಕ ಸಂಖ್ಯೆಯಲ್ಲಿ

ದೇವಾಲಯಗಳಿದ್ದರೂ, ಕೆಲವೇ ದೇವಾಲಯಗಳು ಕಲಾ ಶ್ರೇಷ್ಠತೆಯನ್ನು ಪಡೆದಿವೆ. ಮಲೆಯೂರು, ಉಮತ್ತೂರು, ಕುದೇರು ಮೊದಲಾದ ಗ್ರಾಮಗಳಲ್ಲಿರುವ ಪ್ರಾಚೀನ ಜೈನ ಬಸದಿಗಳು, ಹರಳಕೋಟೆ, ಹರದನಹಳ್ಳಿ, ಉಮತ್ತೂರು, ಕುಣಗಾಲ ಮೊದಲಾದ ಕಡೆಯಿರುವ ವೈಷ್ಣವ ದೇವಾಲಯಗಳು. ನರಸ ಮಂಗಲ, ಆಲೂರು, ಚಾಮರಾಜನಗರ ಪಟ್ಟಣದಲ್ಲಿರುವ ಸಾವಿರಾರು ವರ್ಷಗಳಷ್ಟು ಪ್ರಾಚೀನವಾದ ಶೈವದೇವಗಳು. ಕೆಲವು ದೇವಾಲಯಗಳು ಪೂಜೆ, ಪುನಸ್ಕಾರ, ಜೀರ್ಣೋದ್ಧಾರಗಳಿಂದ ವಂಚಿತವಾಗಿ ಕನಿಷ್ಠ ಸ್ಥಿತಿಯಲ್ಲಿದ್ದು, ಅದರಲ್ಲೂ ಕೆಲವು ಜೈನ ಬಸದಿಗಳು ಶೈವ ದೇವಾಲಯಗಳಾಗಿ ಪರಿವರ್ತನೆಗೊಂಡಿವೆ. ನಮ್ಮ ಅಧ್ಯಯನ ವ್ಯಾಪ್ತಿಗೆ ಬರುವ ತಾಲೂಕುಗಳಲ್ಲಿ ಪ್ರಚಲಿತದಲ್ಲಿದ್ದ ಪ್ರಧಾನ ವಾಸ್ತು ಕಲೆ ಎಂದರೆ ದ್ರಾವಿಡ ಮತ್ತು ಚೋಳರ ವಾಸ್ತು ಕಲೆಯನ್ನು ವಿವಿಧ ಲಕ್ಷಣಗಳಿಂದ ಕೂಡಿದೆ.

ಚಾಮರಾಜನಗರ ತಾಲೂಕಿನ ದೇವಾಲಯಗಳ ವಾಸ್ತುಕಲೆಯ ಪ್ರಾರಂಭ ಯಾವ ರೀತಿ ಆಯಿತೆಂದು ತಿಳಿಯಲು ಪ್ರಯತ್ನಿಸಲಾಗಿದೆ. ಇವರ ಕಾಲದಲ್ಲಿ ಗಂಗ ರಾಜ್ಯದಲ್ಲಿ, ಯಾವ ರೀತಿ ದೇವಾಲಯ ವಾಸ್ತು ಕಲೆ ಪ್ರಾರಂಭವಾಯಿತು, ಅವುಗಳ ಸ್ವರೂಪ ಏನಿತ್ತು, ವಾಸ್ತು ಮಾಧ್ಯಮ ಯಾವುದಿತ್ತು ಎಂಬುದನ್ನು ಹೇಳಲಾಗಿದೆ. ಚೋಳರ ಕಾಲದಲ್ಲಿ ವಾಸ್ತುಕಲೆಯ ಬೆಳವಣಿಗೆಯು ಚಾಮರಾಜನಗರ ತಾಲೂಕಿನಲ್ಲಿ ಯಾವಾಗ ಪ್ರವೇಶ, ಅವರ ರಾಜ್ಯಭಾರ, ಅವರು ಕಟ್ಟಿದಂತಹ ದೇವಾಲಯಗಳು, ಅವುಗಳ ಸ್ವರೂಪ, ಮುಖ್ಯ ಲಕ್ಷಣಗಳ ಹಾಗೂ ಚೋಳ ಸಂಸ್ಕೃತಿಯಿಂದ ಈ ತಾಲೂಕಿಗೆ ಆದ ಪ್ರಯೋಜನಗಳ ಹಾಗೂ ಮಹತ್ವಗಳನ್ನು ಚರ್ಚಿಸಲಾಗಿದೆ. ವಿಜಯಗರದ ಕಾಲದಲ್ಲಿ ವಾಸ್ತುಕಲೆಯ ಪ್ರಾರಂಭ, ಅವರು ನಿರ್ಮಿಸಿರುವ ದೇವಾಲಯಗಳು, ದೇವಾಲಯಗಳ ಲಕ್ಷಣಗಳನ್ನು ಚರ್ಚಿಸಲಾಗಿದೆ. ಈ ಅಧ್ಯಯನ ಚಾಮರಾಜನಗರ ತಾಲೂಕಿನ ವ್ಯಾಪ್ತಿಯಲ್ಲಿ ಇರುವ ಸಂಪೂರ್ಣ ವಿಜಯನಗರ ಕಾಲದ ದೇವಾಲಯಗಳು ಬಹಳ ಕಡಿಮೆ. ಈ ದೇವಾಲಯಗಳ ಕಾಲದ ಮುಖ್ಯ ಲಕ್ಷಣಗಳು ಇಲ್ಲಿನ ದೇವಾಲಯಗಳಲ್ಲಿ ಹೇಗೆ ಪ್ರತಿಫಲಿತವಾಗಿದೆ ಎಂದು ಚರ್ಚಿಸಲಾಗಿದೆ.

ಶುದ್ಧ ಗ್ರಾಮೀಣ ಸಂಸ್ಕೃತಿಯನ್ನು ಹೊಂದಿರುವ ಚಾಮರಾಜನಗರ ತಾಲೂಕಿನ ಅನೇಕ ಸಮುದಾಯಗಳು ವಾಸವಾಗಿದ್ದು, ಅವರ ಸಂಪ್ರದಾಯ ಆಚರಣೆಗಳಲ್ಲಿ ವೈವಿಧ್ಯತೆಯನ್ನು ವಿಶೇಷತೆಯನ್ನು ಕಾಣಬಹುದಾಗಿದೆ. ಸಮಾಜದಲ್ಲಿ ದುಡಿಯುವ ವರ್ಗ ತುಂಬಾ ಶ್ರಮ ಜೀವಿಗಳಾಗಿದ್ದರಿಂದ ಕಾಲ ಕಾಲಕ್ಕೆ ಈ ಪ್ರದೇಶ ಸಾಂಸ್ಕೃತಿಕವಾಗಿ ಶ್ರೀಮಂತವಾಗುತ್ತ ಬಂದಿದೆ. ಕುಟುಂಬ ವ್ಯವಸ್ಥೆಯಲ್ಲಿ ಪುರುಷರು, ಮಹಿಳೆಯರು ಸದಸ್ಯರಾಗಿ ತಮ್ಮ ಜೀವನದ ಸ್ಥಳದಲ್ಲಿ ಕಂಡುಕೊಳ್ಳುವ ಹಂತಗಳ ಬಗ್ಗೆ ಶಾಸನಗಳು ವಿವರಿಸುತ್ತವೆ. ಸಮಾಜದಲ್ಲಿ ಬ್ರಾಹ್ಮಣರು ತಮ್ಮನ್ನು ಉನ್ನತ ಸ್ಥಾನದಲ್ಲಿಟ್ಟುಕೊಂಡು ಸಾಮಾಜಿಕ ವ್ಯವಸ್ಥೆಯನ್ನು ರೂಪಿಸುತ್ತಿದ್ದರು. ಜೀವನ ಚಕ್ರದ ಪ್ರಮುಖ ಸೋಪಾನಗಳಾದ ಜನ್ಮ ಸಂಸ್ಕಾರ, ಪ್ರೌಢ ಸಂಸ್ಕಾರ, ಮದುವೆ ಹಾಗೂ ಮರಣ ಸಂಸ್ಕಾರಗಳಲ್ಲಿ ಅನುಸರಿಸುವ ಸಂಪ್ರದಾಯ ವಿಶೇಷತೆಗಳನ್ನು ಕುರಿತು ಸಾಮಾಜಿಕ

ಅಧ್ಯಯನದಲ್ಲಿ ವಿಶ್ಲೇಷಿಸಲಾಗಿದೆ. ನಗರ ಮತ್ತು ಗ್ರಾಮೀಣ ಪ್ರದೇಶಗಳಲ್ಲಿರುವ ಸಮಾಜ ವ್ಯವಸ್ಥೆ, ಕೌಟಂಬಿಕ ವ್ಯವಸ್ಥೆ, ಉಡುಗೆ ತೊಡುಗೆ, ಜಾತಿ ಮತ್ತು ಆಡಳಿತ ವ್ಯವಸ್ಥೆ ಮೊದಲಾದ ಅಂಶಗಳನ್ನು ಲಭ್ಯವಿರುವ ಶಾಸನಗಳು, ಸಾಹಿತ್ಯ ಕೃತಿಗಳು ಹಾಗೂ ಕ್ಷೇತ್ರಕಾರ್ಯದ ಅನುಭವದ ಹಿನ್ನೆಲೆಯಲ್ಲಿ ಸುದೀರ್ಘವಾಗಿ ವಿವೇಚಿಸಲಾಗಿದೆ.

ಚಾಮರಾಜನಗರ ತಾಲೂಕಿನ ಸಂಪ್ರದಾಯ, ಆಚರಣೆಗಳು, ಜಾತ್ರೆ ಮತ್ತು ಉತ್ಸವಗಳು ಪ್ರಾದೇಶಿಕತೆಗೆ ಅನುಗುಣವಾಗಿ ನಡೆಯುವಂತಹುಗಳಾಗಿವೆ. ಸೀಮಿತದ ಈ ಪ್ರದೇಶದಲ್ಲಿ ನಡೆಯುವ ಚಾಮರಾಜನಗರ ತಾಲೂಕಿನ ಜಾತ್ರೆ ಮತ್ತು ಉತ್ಸವಗಳು ಸಾಂಸ್ಕೃತಿಕವಾಗಿ ಬಹಳ ವೈಶಿಷ್ಟತೆಯನ್ನು ಹೊಂದಿದೆ. ಜಾತ್ರೆಯ ಅಂಗವಾಗಿ ನಡೆಯುವ ವಿವಿಧ ಸೇವೆಗಳು, ಸುಲಭ ಮತ್ತು ಸರಳ ಪರಿಕರಗಳಿಂದ ನಡೆಸುವಂತಹುಗಳಾಗಿವೆ ಹಾಗೂ ಆಕರ್ಷಕವೂ ಕುತೂಹಲಭರಿತವು ಆದ ಧಾರ್ಮಿಕ ಸೇವೆಗಳಾಗಿವೆ.

ಸಾಂಸ್ಕೃತಿಕ ಪರಂಪರೆಯ ಹಿನ್ನೆಲೆಯಲ್ಲಿ ಬೆಳೆದಿರುವ ಚಾಮರಾಜನಗರ ತಾಲೂಕಿನಲ್ಲಿ ಅನೇಕ ಗ್ರಾಮಗಳಿಗೂ ಊರು ಮತ್ತು ದೇವರುಗಳು ಇದ್ದೇ ಇರುತ್ತದೆ. ಎಲ್ಲಿ ಮನುಜರು ಅಲ್ಲಿ ದೇವರು, ಎಲ್ಲಿ ದೇವರು ಅಲೆಲ್ಲ ಜನ ಸಮೂಹ, ಜಾತ್ರೆ ಇದ್ದೇರುತ್ತದೆ. ಜನರ ಭಕ್ತಿಯ ಪ್ರೀತಿಯ, ಮನರಂಜನೆಯ ಕುರುಹಗಳಾಗಿ ಇವೆಲ್ಲಾ ಜರುಗುತ್ತವೆ. ಯಾವ ದೇವರ ಹೆಸರಲ್ಲಿ ಏನೇ ಮಾಡಿದರು ಭಕ್ತಿಯೇ ಮೂಲಕವಾಗಿರುತ್ತದೆ. ಯಾವುದೇ ನದಿಯು ಎಲ್ಲಿಯೇ ಹರಿದರೂ ಹೋಗಿ ಸೇರುವುದು ಸಾಗರವನ್ನೇ ಎಂಬಂತೆ, ಈ ತಾಲೂಕಿನಲ್ಲಿ ಜಾತ್ರೆ ಮತ್ತು ಉತ್ಸವಗಳು ನಡೆಯುವುದು ನಂಬಿಕೆಯಾಗಿದೆ, ಭಕ್ತಿಯ ದ್ಯೋತಕಗಳಾಗಿವೆ. ಪುಷ್ಪ ಜಾತಿ ಹಲವು ಆದರೆ ವಾಸನೆ ಮಾತ್ರ ಒಂದೇ ಹೋಗೋ ಹಾಗೆಯೇ ನೂರು ದೇವರುಗಳಾದರೂ ಭಕ್ತಿ ಮಾತ್ರ ಒಂದೇ ಆಗಿದೆ. ಆದರೆ ಆಚರಿಸುವಲ್ಲಿ ವೈವಿಧ್ಯತೆಯಿಂದ ಕೂಡಿದ್ದು, ಹಲವು ಕುತೂಹಲಕರ ಮಾಹಿತಿಗಳನ್ನು ಕಲೆ ಹಾಕಿ ವಿಶ್ಲೇಷಿಸಲಾಗಿದೆ.

ಪ್ರಸ್ತುತ ಮಹಾಪ್ರಬಂಧವು ಪರಿಪೂರ್ಣವೆನ್ನುವಂತೆ ರಚಿಸಿದ್ದೇನೆ ಎಂದು ಹೇಳಲಾಗದು. ಪರಿಪೂರ್ಣತೆ ಎನ್ನುವುದು ಆದರ್ಶವೇ ಹೊರತು ಪ್ರಾಯೋಗಿಕವಾಗಿ ಕಷ್ಟಸಾಧ್ಯದ ಸಂಗತಿ. ತಾಲೂಕಿನಾದ್ಯಂತ ಲೇಖನಗಳನ್ನು, ಗ್ರಂಥಗಳನ್ನು ಪರಾಮರ್ಶಿಸಿ ಸಾಧ್ಯವಾದಷ್ಟು ಮಟ್ಟಿಗೆ ನನ್ನ ಇತಿಮಿತಿಯಲ್ಲಿ ಸಮಗ್ರವಾಗಿ ಈ ಮಹಾಪ್ರಬಂಧವನ್ನು ರಚಿಸಿದ್ದೇನೆ.

ಈ ಪ್ರಬಂದಲ್ಲಿ ನೀಡಿರುವ ಮಾಹಿತಿಗಳು ಪ್ರಾದೇಶಿಕ ವಿಸ್ತೃತ ಅಂತರ್‌ಶಿಸ್ತಿಯ ಅಧ್ಯಯನಕ್ಕೆ ಉಪಯುಕ್ತ ಮಾಹಿತಿಗಳಾಗಬಹುದು. ಈ ಹಿನ್ನೆಲೆಯಲ್ಲಿ ಎಲ್ಲ ತಾಲೂಕುಗಳನ್ನೊಳಗೊಂಡ ಇಡೀ ಜಿಲ್ಲೆಯ ಸಾಂಸ್ಕೃತಿಕ ಇತಿಹಾಸ ರಚನೆಯಾಗಬೇಕಾಗಿದೆ.

# ಅನುಬಂಧಗಳು

೧. ಪರಾಮರ್ಶನ ಗ್ರಂಥಗಳು

೨. ತಳನಕ್ಷೆ

೩. ಛಾಯಾಚಿತ್ರಗಳು

## ೧. ಪರಾಮರ್ಶನ ಗ್ರಂಥಗಳು


೧. ಅಬ್ದುಲ್ ಬಷೀರ್ ಜಿ., ಸಾಮಾಜಿಕ ಚಿಂತನೆಗಳು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೦೨

೨. ಅರವಿಂದ ಮಾಲಗತ್ತಿ, ದಲಿತಯುಗ ಮತ್ತು ಕನ್ನಡ ಸಾಹಿತ್ಯ ಚೇತನ ಬುಕ್ ಹೌಸ್, ಬೆಂಗಳೂರು, ೧೯೯೯

೩. ಅರ್ಜುನ ಗೊಳಸಂಗಿ, ದಲಿತರ ಬದುಕು ಮತ್ತು ಸಂಸ್ಕೃತಿ, ವಿಮೋಚನಾ ಪ್ರಕಾಶನ, ಅಥಣಿ, ೨೦೦೦

೪. ಅಂಬಳಿಕೆ ಹಿರಿಯಣ್ಣ, ಮಲೆನಾಡಿನ ವೈಷ್ಣವ ಒಕ್ಕಲಿಗರ ಸಂಸ್ಕೃತಿ, ಮೈಸೂರು, ೧೯೯೯

೫. ಅಶ್ವತ್ಥನಾರಾಯಣ ಎನ್., ಅರಳಿದ ಅರಿಕುಠಾರ, ಚಾಮರಾಜನಗರ, ೨೦೦೭

೬. ಅರ್ವಿಯಸ್ ಸುಂದರಂ, ತಾರಾನಾಥ ಎನ್.ಎಸ್., ಸಂಶೋಧನಾ ಪಥ, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೨೦೦೬

೭. ಚನ್ನಣ್ಣ ವಾಲೀಕಾರ, ಒಂದು ಗ್ರಾಮದ ಜಾನಪದೀಯ ಅಧ್ಯಯನ, ಅಕ್ಷರ ಪ್ರಕಾಶನ, ಹೆಗ್ಗೋಡು, ೧೯೯೧

೮. ಕಲಘಟಗಿ ಟಿ.ಜಿ., ಕರ್ನಾಟಕ ಜೈನಧರ್ಮ ಒಂದು ಅಧ್ಯಯನ, ಮೈಸೂರು ವಿಶ್ವವಿದ್ಯಾನಿಲಯ, ೧೯೭೯

೯. ಕಲಬುರ್ಗಿ ಎಂ.ಎಂ., ಕನ್ನಡ ಸಂಶೋಧನ ಶಾಸ್ತ್ರ, ಚೇತನ ಬುಕ್ ಹೌಸ್, ಬೆಂಗಳೂರು, ೧೯೯೨

೧೦. ಕಲಬುರ್ಗಿ ಎಂ.ಎಂ., ಕರ್ನಾಟಕ ಕೈಫಿಯತ್ತುಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೪

೧೧. ಕರೀಗೌಡ ಬೀಚನಹಳ್ಳಿ, ಜಾತ್ರೆಗಳು, ಬೆಂಗಳೂರು ವಿಶ್ವವಿದ್ಯಾನಿಲಯ, ಬೆಂಗಳೂರು

೧೨. ಕರೀಂಖಾನ್ ಎಸ್.ಕೆ., ಕರ್ನಾಟಕ ಜಾನಪದ, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು, ೧೯೮೯

೧೩. ಕೃಷ್ಣಪ್ಪ ಎಸ್., ಸಾಮಾಜಿಕ ಅಧ್ಯಯನಗಳು, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೧೯೮೯

೧೪. ಕೋದಂಡರಾಮ ಎನ್.ಕೆ., ಕನ್ನಡ ಕಥಾ ಸಾಹಿತ್ಯದಲ್ಲಿ ಸಾಂಸ್ಕೃತಿಕ ಸಂಘರ್ಷ, ಶ್ರೀ ರಾಜೇಂದ್ರ ಪ್ರಿಂಟರ್ಸ್, ಮೈಸೂರು, ೧೯೯೩

೧೫. ಗಂಗಾಧರನ್ ಹೆಚ್., ಶ್ರೀ ಗೋಸಲ ಪೀಠದ ಗುರುಪರಂಪರೆ, ಮೈಸೂರು ೧೯೯೭

೧೬. ಚಂದ್ರಪೂಜಾರಿ ಎಂ., ಸಂಶೋಧಕರು ಮತ್ತು ಕ್ಷೇತ್ರಕಾರ್ಯ, ಕನ್ನಡ ವಿಶ್ವವಿದ್ಯಾನಿಲಯ, ಹಂಪಿ-೨೦೦೫

೧೭. ಚಿದಾನಂದಮೂರ್ತಿ ಎಂ., ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೧೯೬೬

೧೮. ಚಿದಾನಂದಮೂರ್ತಿ ಎಂ., ವೀರಗಲ್ಲುಗಳು ಮತ್ತು ಮಾಸ್ತಿಗಲ್ಲುಗಳು, ಬೆಂಗಳೂರು, ೧೯೮೪

೧೯. ಚಂದ್ರಶೇಖರಯ್ಯ ಎಂ.ಜಿ., ಕಾರಮಕ್ಕ, ಬಿಳಿಗಿರಿ ರಂಗಪ್ಪನ ಬೆಟ್ಟದ ಸೋಲಿಗರ ಕುರಿತ ಕಾದಂಬರಿ

೨೦. ಗುಂಡಪ್ಪ ಡಿ.ವಿ., ಸಂಸ್ಕೃತಿ, ಕಾವ್ಯಾಲಯ ಪ್ರಕಾಶನ, ಮೈಸೂರು, ೧೯೫೩

೨೧. ಗುರುರಾಜರಾವ್ ಎ.ಕೆ., ಕರ್ನಾಟಕ ಶಿಲಾಯುಗ ಸಂಸ್ಕೃತಿಗಳು, ಪ್ರಚಾರ ಪುಸ್ತಕ ಮಾಲೆ ೧೭೨, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೧೯೭೦

೨೨. ತಪಸ್ವೀಕುಮಾರ್ ನಂ., ಸಂಸ್ಕೃತಿ ವಿಕಾಸ, ಜೆ.ಎಸ್.ಎಸ್.ಪ್ರಿಂಟರ್ಸ್, ಮೈಸೂರು, ೨೦೦೦

೨೩. ತಿಪ್ಪೇರುದ್ರಸ್ವಾಮಿ ಎಚ್., ಕರ್ನಾಟಕ ಸಂಸ್ಕೃತಿ ಸಮೀಕ್ಷೆ, ಗೀತಾಬುಕ್ ಹೌಸ್, ಮೈಸೂರು, ೧೯೬೮

೨೪. ದಾಸೇಗೌಡ, ಮೇಲುಕೋಟೆ ಸಾಂಸ್ಕೃತಿಕ ಅಧ್ಯಯನ, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು

೨೫. ಜವರೇಗೌಡ ದೇ., ಜಾನಪದ ಅಧ್ಯಯನ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೨೦೦೧

೨೬. ದೇವಿರಪ್ಪ ಹೆಚ್., ಲಕ್ಕಣ್ಣ ದಂಡೇಶನ ಶಿವತತ್ವ ಚಿಂತಾಮಣಿ, ಕರ್ನಾಟಕ ವಿಶ್ವವಿದ್ಯಾನಿಲಯ, ಧಾರವಾಡ, ೧೯೭೪

೨೭. ದೇವೇಂದ್ರ ಕುಮಾರ ಹಕಾರಿ, ಡೊಂಬರ ಸಂಸ್ಕೃತಿ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೯೩

೨೮. ದೇವಯ್ಯ ಹರವೆ, ದಲಿತ ಸಾಹಿತ್ಯ ಮತ್ತು ಇತರ ಲೇಖನಗಳು, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, ೧೯೯೧

೨೯. ದೇವುಡು ನರಸಿಂಹಶಾಸ್ತ್ರಿ, ಕರ್ನಾಟಕ ಸಂಸ್ಕೃತಿ, ದೇವುಡು ಪ್ರತಿಷ್ಠಾನ, ಬೆಂಗಳೂರು, ೧೯೩೫

೩೦. ನಂಜಯ್ಯ ಹೊಂಗನೂರು, ಚಾಮರಾಜನಗರ ತಾಲ್ಲೂಕಿನ ಸ್ಥಳನಾಮಗಳು: ಒಂದು ಅಧ್ಯಯನ

೩೧. ನಂಜಮ್ಮಣ್ಣಿ, ಭಾರತೀಯ ಸಾಮಾಜಿಕ ಸಂಸ್ಥೆಗಳು, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೯೮೨

೩೨. ನಾಗಯ್ಯ ಜೆ.ಎಂ. ಬಳ್ಳಾರಿ ಜಿಲ್ಲೆಯ ಸಾಂಸ್ಕೃತಿಕ ಇತಿಹಾಸ, ಬಳ್ಳಾರಿ, ೨೦೦೨

೩೩. ನಾಗರಾಜ್ ಡಿ.ಆರ್., ಸಂಸ್ಕೃತಿ ಕಥನ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೨೦೦೨

೩೪. ಪಳನಿಸ್ವಾಮಿ, ಗುಂಡ್ಲುಪೇಟೆ ತಾಲ್ಲೂಕು: ಒಂದು ಸಾಂಸ್ಕೃತಿ ಅಧ್ಯಯನ, ಶ್ರೀ ರಾಜೇಂದ್ರ ಪ್ರಿಂಟರ್ಸ್, ಮೈಸೂರು, ೨೦೧೧

೩೫. ಪದ್ಮಪ್ರಸಾದ್ ಎಸ್.ಪಿ., ಜೈನರ ಜನಪದ ಸಾಹಿತ್ಯ, ಬೆಂಗಳೂರು ವಿಶ್ವವಿದ್ಯಾನಿಲಯ, ೧೯೭೬

೩೬. ಪುರುಷೋತ್ತಮ ಬಿಳಿಮಲೆ, ಶಿಷ್ಟ-ಪರಿಶಿಷ್ಟ, ಮುಡಿಪ್ಪ ಪ್ರಕಾಶನ, ಮಂಗಳೂರು, ೧೯೯೨

೩೭. ಪರಮಶಿವಯ್ಯ ಜಿ.ಶಂ., ಕಂಸಾಲೆಯವರು, ಐ.ಬಿ.ಹೆಚ್. ಪ್ರಕಾಶನ, ಬೆಂಗಳೂರು, ೧೯೭೮

೩೮. ಬಸವರಾಜು ಎಲ್., ವೀರಶೈವ ತತ್ವ ಮತ್ತು ಆಚರಣೆ, ಶ್ರೀ ಬೃಹನ್ಮಠ ಸಂಸ್ಥಾನ, ಚಿತ್ರದುರ್ಗ, ೧೯೮೨

೩೯. ಬರಗೂರು ರಾಮಚಂದ್ರಪ್ಪ, ಸಂಸ್ಕೃತಿ ಮತ್ತು ಸೃಜನಶೀಲತೆ, ಸುನಾದ ಪ್ರಕಾಶನ, ಬೆಂಗಳೂರು, ೧೯೮೯

೪೦. ಬಸವರಾಜ ಸಬರದ, ಸಮುದಾಯ ಮತ್ತು ಸಂಸ್ಕೃತಿ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೦೨

೪೧. ಮಟ್ ಎಸ್.ಎನ್., ಜಿಲ್ಲೆಯ ಅಂಕಿ-ಅಂಶಗಳ ನೋಟ, ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳವರ ಕಛೇರಿ, ಚಾಮರಾಜನಗರ, ೨೦೦೯-೧೦

೪೨. ಮಹಾದೇವಿಬಾಯಿ, ಚಾಮರಾಜನಗರ ಸುತ್ತಿನ ಲಂಬಾಣಿಗರ ಸಂಪ್ರದಾಯಗಳು, ಮೈಸೂರು ವಿಶ್ವವಿದ್ಯಾನಿಲಯ, ೨೦೦೫

೪೩. ಮಂಜುನಾಥ ಬಿ., ಕನ್ನಡ ಜನಪದ ನಂಬಿಕೆಗಳು : ಒಂದು ಅಧ್ಯಯನ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು

೪೪. ಮಂಜುಳ ಹುಲ್ಲಹಳ್ಳಿ, ನಂಜನಗೂಡು: ಒಂದು ಸಾಂಸ್ಕೃತಿಕ ಅಧ್ಯಯನ, ಮೈಸೂರು, ೨೦೦೦

೪೫. ಮಲ್ಲಪ್ಪ ಪಿ., ಕರ್ನಾಟಕ ಭೂಗೋಳಶಾಸ್ತ್ರ, ಚೇತನ ಬುಕ್‌ಹೌಸ್, ಮೈಸೂರು, ೨೦೦೦

೪೬. ಮುಳಗುಂದ ಚ.ವಿ., ಹೆಗಡೆ ಜಿ.ಎಂ., ಸಮಾಜ ಮತ್ತು ಸಂಸ್ಕೃತಿ, ಸಾಹಿತ್ಯ ಪ್ರಕಾಶನ, ಹುಬ್ಬಳ್ಳಿ, ೨೦೦೫

೪೭. ಮಿರ್ಜಿ ಅಣ್ಣರಾಯ, ಕರ್ನಾಟಕದಲ್ಲಿ ಜೈನಧರ್ಮ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು

೪೮. ರಹಮತ್ ತರೀಕೆರೆ, ಪ್ರತಿ ಸಂಸ್ಕೃತಿ, ಧರಣಿ ಪ್ರಿಂಟರ್ಸ್, ಬೆಂಗಳೂರು, ೧೯೯೩

೪೯. ರಾಜಶೇಖರ್ ಪಿ.ಕೆ., ಜನಪದ ಮಹಾಕಾವ್ಯ ಸಂಪುಟ ೧ ಮತ್ತು ೨, ಮೈಸೂರು, ೧೯೭೩

೫೦. ರಾಜಶೇಖರ್ ಪಿ.ಕೆ., ಶಿವ ಸಂಪದ, ಶ್ರೀ ರಾಜೇಂದ್ರ ಪ್ರಿಂಟರ್ಸ್, ಮೈಸೂರು, ೨೦೦೧

೫೧. ರಂಗಸ್ವಾಮಿ ಡಿ.ಟಿ. ಭಾರತದ ಹಬ್ಬ-ಹರಿದಿನಗಳು, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೭೪

೫೨. ರಾಧ, ಹಸಸೋಗೆ: ಸಾಂಸ್ಕೃತಿಕ ಅಧ್ಯಯನ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು

೫೩. ರಾಮಕೃಷ್ಣ ಆರ್., ಚಾಮರಾಜನಗರ ತಾಲ್ಲೂಕು ದರ್ಶನ, ಐ.ಬಿ.ಎಸ್.ಪ್ರಕಾಶನ, ಬೆಂಗಳೂರು ೧೯೮೭

೫೪. ಲಿಂಗದೇವರು ಹಳೆಮನೆ, ದಕ್ಷಿಣ ಕರ್ನಾಟಕದ ಆಚರಣೆಗಳು, ರಾಜ್ಯ ಸಂಪನ್ಮೂಲ ಕೇಂದ್ರ, ಕರ್ನಾಟಕ ರಾಜ್ಯ ವಯಸ್ಕರ ಶಿಕ್ಷಣ ಸಮಿತಿ, ಮೈಸೂರು, ೧೮೮೯

೫೫. ಲೀಲಾ ಅಪ್ಪಾಜಿ, ಬಿಳಿಗಿರಿರಂಗಪ್ಪನ ಬೆಟ್ಟ: ಸಾಂಸ್ಕೃತಿಕ ಅಧ್ಯಯನ, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು

೫೬. ವೀರಣ್ಣದಂಡೆ, ಹಾಲುಮತ ಪುರಾಣ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೯೮

೫೭. ಶಿವರಾಮ ಅಸುಂಡಿ, ದಲಿತ ಸಾಂಸ್ಕೃತಿಕ ಲೋಕ, ಸಚಿನ್ ಪಬ್ಲಿಷರ್ಸ್, ಬೆಂಗಳೂರು, ೨೦೦೭

೫೮. ಶಿವತಾರಕ್ ಕೆ.ಬಿ., ಕರ್ನಾಟಕದ ಪುರಾತತ್ವ ನೆಲೆಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾನಿಲಯ, ಹಂಪಿ, ೨೦೦೧

೫೯. ಶಿವಾನಂದ ಗುಬ್ಬಣ್ಣವರ, ಕರ್ನಾಟಕದ ಕುರುಬರು, ಅಕ್ಷಯ ಪ್ರಕಾಶನ, ಧಾರವಾಡ

೬೦. ಶ್ರೀಪಾದ ಜೋಶಿ(ಮೂಲ), ಹಿರಿಯಣ್ಣಯ್ಯ(ಅನುವಾದ), ಮುಸ್ಲಿಂ ಉತ್ಸವಗಳು ಮತ್ತು ಸಂಸ್ಕಾರಗಳು, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿ.ವಿ., ಮೈಸೂರು, ೧೯೭೧

೬೧. ಶ್ರೀನಿವಾಸ, ಚಾಮರಾಜನಗರ ಜಿಲ್ಲೆಯ ಕೃಷಿ ವೃತ್ತಿ ಪದಗಳು: ಒಂದು ಭಾಷಿಕ ಅಧ್ಯಯನ, ಮೈಸೂರು ವಿಶ್ವವಿದ್ಯಾನಿಲಯ, ೨೦೦೬

೬೨. ಶಿವಕುಮಾರಸ್ವಾಮಿ ಸಿ.ಎಸ್., ಕರ್ನಾಟಕದ ಜಾತ್ರೆಗಳು, ಕನ್ನಡ ಅಧ್ಯಯನ ಸಂಸ್ಥೆ ಸ್ನಾತಕೋತ್ತರ ಕೇಂದ್ರ, ಬಿ.ಆರ್.ಪ್ರಾಜೆಕ್ಟ್, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೧೯೮೮

೬೩. ಸತೀಶ್ ಹೆಬ್ .ವಿ., ಹರದನಹಳ್ಳಿ ಸಾಂಸ್ಕೃತಿಕ ಅಧ್ಯಯನ, ಮೈಸೂರು ವಿಶ್ವವಿದ್ಯಾಲಯ, ೨೦೧೦

೬೪. ಸಿದ್ಧಲಿಂಗಸ್ವಾಮಿ ಬಿ., ಮಲೆಯಮಾದೇಶ್ವರ: ಒಂದು ಅಧ್ಯಯನ ಮೈಸೂರು ವಿಶ್ವವಿದ್ಯಾಲಯ, ಮೈಸೂರು-೧೯೮೭

೬೫. ಸಿದ್ಧಲಿಂಗಯ್ಯ, ಗ್ರಾಮದೇವತೆಗಳು, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು, ೧೯೯೭

೬೬. ಸುಭಾಷ್ ಭರಣಿ, ಧರೆಗೆ ದೊಡ್ಡವರು, ದ್ರಾವಿಡ ಪಬ್ಲಿಕೇಶನ್ಸ್, ಮೈಸೂರು, ೨೦೦೫

೬೭. ಸೋಮಣ್ಣ, ಕೊಂತಿಪೂಜೆ ಒಂದು ಅಧ್ಯಯನ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೧೯೯೬

೬೮. ಸುಬ್ಬಯ್ಯ ವೈ.ಬಿ.ಅಂಡ್ ಸನ್ಸ್, ಚಣ್ಣಪ್ಪ ನಡಕೇರಿಯಂಡ, ಕೊಡವರ ಪಟ್ಟೋಳೆ ಪಳಮೆ, ಬೆಂಗಳೂರು, ೧೯೨೪

೬೯. ಹಂಪ ನಾಗರಾಜಯ್ಯ, ಕರ್ನಾಟಕದ ಜಾತ್ರೆಗಳು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು

೭೦. ಹರೀಶ್ ಜಿ.ಬಿ., ಬೆಳಕಿನಾಟ, ಇಳಾ ಮುದ್ರಣ, ಬೆಂಗಳೂರು, ೨೦೦೫

೭೧. ಹಿರೇಮಠ ಎಸ್.ಎಸ್., ದಲಿತ ಸಂಸ್ಕೃತಿ, ಕನ್ನಡ ವಿಶ್ವವಿದ್ಯಾನಿಲಯ, ಪ್ರಸಾರಾಂಗ, ಹಂಪಿ, ೨೦೦೧

೭೨. ಹೆಗಡೆ ಎಲ್.ಆರ್., ಮೂಢನಂಬಿಕೆಗಳು, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೭೮

ಇಂಗ್ಲಿಷ್ ಗ್ರಂಥಗಳು

1. Anathakrishna Iyer L.K., **The Mysore Tribes & Caste,** Vo-III

2. Dubois.A, Hindu Manners, **Customs and Ceremonies** Oxford University press, Delhi, 1983

3. Hayavadana Rao.C, **Mysore Gazetteer,** New Edition B.R.Publishing, crop. Delhi, 1983

4. Jagadisha Ayar P.V., **South Indian Customs Sacord** A.E.S. Reprint, New Dilhi, 1985

5. Kothari C.R., **Research Methodalogy, Methods and Teachinques,** Wiley Eastern Limited, 1991

6. Nayak H.M. & Gopal B.R., **South Indian Studies,** Geetha Book House, Mysore, 1990

7. Prasada K.L., **Tribal Economy & Tribal population Distribution Chamarjanagar District A Geographical analysed.** University of Mysore, Dept. of Geography, 2002

8. Somasundaram H.N., **Soliga- The Tribe & Its stride,** Vivekananda Girijana Kendra, B.R.Hills, Chamarajanagara.

9. Suryanatha U Kamath, **Karnataka State Gazetter,** Mysore District, 1988

10. Thrusten E., **Caste & Tribes of Southern India,** 1909

11. Srinivas M.S., **Indian Village,** M.P.Publishers, Pvt. Ltd., Bombay, 1990

12. Basavaraj K.R., **History and Culture of Karnataka,** DAM in Karnataka, 1989

13. Gururaja Rao B.K., **Megalithi Culture in South India,** 1971, Prasaranga University of Mysore, 1971

## ವಿಶ್ವಕೋಶ ಮತ್ತಿತರ ಗ್ರಂಥಗಳು

೧. ಎಪಿಗ್ರಾಫಿಯ ಕರ್ನಾಟಿಕ, ಸಂಪುಟ ೪, ೧೯೯೫, ಸಂಪುಟ ೫, ೧೯೯೬, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು

೨. ಕನ್ನಡ ಜಾನಪದ ವಿಶ್ವಕೋಶ, ಸಂಪುಟ ೧ ಮತ್ತು ೨, ೧೯೮೫, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು

೩. ಕನ್ನಡ ವಿಶ್ವಕೋಶ, ೩ ಸಂಪುಟಗಳು, ಕುವೆಂಪು ಕನ್ನಡ ಅಧ್ಯಯನ, ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೨೦೦೦

೪. ಕನ್ನಡ ವಿಷಯ ವಿಶ್ವಕೋಶ, ಇತಿಹಾಸ ಮತ್ತು ಪುರಾತತ್ವ, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು,

೫. ಮಲೆಯೂರು ಗುರುಸ್ವಾಮಿ(ಸಂ), ಬಯಲು, ಜಯಂತಿ ಮಹೋತ್ಸವ ಸಮಿತಿ, ಚಾಮರಾಜನಗರ, ೧೯೯೫

೬. ಮಲೆಯೂರು ಗುರುಸ್ವಾಮಿ(ಸಂ), ಹೊಸ್ನುಹೊಳೆ, ಸ್ಮರಣ ಸಂಪುಟ, ಚಾಮರಾಜನಗರ, ೨೦೦೭

# ಅರ್ಕೇಶ್ವರ ದೇವಾಲಯ- ಆಲೂರು




ವಿನ್ಯಾಸ



ತಳ ವಿನ್ಯಾಸ

# ರಾಮೇಶ್ವರ ದೇವಾಲಯ ಆವರಣದ ಸುತ್ತಲಿರುವ ಗುಡಿಗಳು

## ನರಸ ಮಂಗಲ

SCALE of 1 METRE


ಸೋಮ ದೇವಾಲಯ



ಸಪ್ತ ಮಾತೃಕೆ


ಗಣೇಶ ದೇವಾಲಯ


ಸೂರ್ಯ ದೇವಾಲಯ


ನಂದಿ


ರಾಮೇಶ್ವರ ದೇವಾಲಯ


ಸ್ಕಂದ ದೇವಾಲಯ


ಭೈರವ ದೇವಾಲಯ


ದುರ್ಗ ದೇವಾಲಯ

## ರಾಮೇಶ್ವರ ದೇವಾಲಯ- ನರಸಮಂಗಲ- ತಳವಿನ್ಯಾಸ






ದೇಸೇಶ್ವರ ದೇವಾಲಯ- ತಳವಿನ್ಯಾಸ




ಲಕ್ಷ್ಮೀನಾರಾಯಣಸ್ವಾಮಿ ದೇವಾಲಯ- ಮಂಗಲ- ತಳವಿನ್ಯಾಸ



ದುರ್ಗಾ ದೇವಾಲಯ- ಚಾಮರಾಜನಗರ- ತಳವಿನ್ಯಾಸ

# ಅಧಿಷ್ಠಾನ, ಕಂಬ ಮತ್ತು ಅರೆಗಂಬಗಳ ಮಾದರಿಗಳು

SCALE of 0 50 CM



ಅಧಿಷ್ಠಾನ



ಕಂಬ



ಕಂಬ



ಅರೆಗಂಬ

## ಅಧಿಷ್ಠಾನ ಮತ್ತು ಕಂಬದ ಚಿತ್ರಗಳು

### ಅರ್ಕೇಶ್ವರ ದೇವಾಲಯ- ಆಲೂರು







ಶ್ರೀ ಚಾಮರಾಜೇಶ್ವರ ದೇವಸ್ಥಾನ, ಚಾಮರಾಜನಗರ





ಶಂಕರ ದೇವರ ಬೆಟ್ಟದ ಪರಿಸರ


ಕರಿವರದ ರಾಜನ ಬೆಟ್ಟದ ನಿರಂಜನ ಕೊಳ– ಚಾಮರಾಜನಗರ


ಸುವರ್ಣಾವತಿ ನದಿ ಅಣೆಕಟ್ಟು– ಅಟ್ಟುಗುಳಿಪುರ


ಸುವರ್ಣಾವತಿ ನದಿ ಅಣೆಕಟ್ಟೆಯ ಹೊರಹರಿವಿನ ಬಾಗಿಲು – ಅಟ್ಟುಗುಳಿಪುರ

# ಚಾಮರಾಜನಗರ ತಾಲೂಕಿನ ಪ್ರಮುಖ ಶಾಸನಗಳು


ಶಿವದೇವಾಲಯದ ದೇವಾಲಯದ ಹೊರವಲಯ ಶಾಸನ- ಅಮಚವಾಡಿ


ರಂಗನಾಥ ಸ್ವಾಮಿ ದೇವಾಲಯದ ಮುಂಭಾಗದ ಶಾಸನ-ಉಮ್ಮತ್ತೂರು


ಜಗತಿ ಶಾಸನ-ಕೂಡ್ಲೂರು

# ಚಾಮರಾಜನಗರ ತಾಲೂಕಿನ ಪ್ರಮುಖ ಶಾಸನಗಳು


ಜನಾರ್ಧನ ದೇವಾಲಯದ ಮುಂಭಾಗ ಶಾಸನ - ಹರಳಕೋಟೆ


ಕ್ಯಾತೆ ಲಿಂಗೇಶ್ವರ ದೇವಸ್ಥಾನದ ಶಾಸನ- ಮಂಗಲ


ನಾರಾಯಣ ಸ್ವಾಮಿ ದೇವಸ್ಥಾನದ ತಾಮ್ರ ಶಾಸನ - ಮಂಗಲ



ಶಂಕರ ದೇವರ ಬೆಟ್ಟದ ದೇವಾಲಯ-ಮಂಗಲ



ವೀರಭದ್ರೇಶ್ವರ ದೇವಾಲಯ-ಕಾಳನಹುಂಡಿ



ಆಲೂರಿನ ಅರ್ಕೇಶ್ವರ ದೇವಾಲಯ-ಆಲೂರು



ಅರ್ಕೇಶ್ವರ ದೇವಾಲಯದ ಮೂರ್ತಿ ಶಿಲ್ಪಗಳು-ಆಲೂರು



ನಾರಾಯಣ ಸ್ವಾಮಿ ದೇವಾಲಯದ ಒಳಾಂಗಣ-ಮಂಗಲ



ಅರ್ಕೇಶ್ವರ ದೇವಾಲಯದ ನಂದಿ ಮಂಟಪ- ಆಲೂರು



ವೀರಭದ್ರೇಶ್ವರ ದೇವಾಲಯ-ಗೋವಿಂದ ವಾಡಿ



ಶಿವದೇವಾಲಯ- ಹೊಮ್ಮ



ದೊಡ್ಡಬಸವ-ಕಲ್ಲೂರ



ಶ್ರೀ ಆದಿನಾಥಸ್ವಾಮಿ ಬಸದಿ-ಕುದೇರು



ಪಾರ್ಶ್ವನಾಥಸ್ವಾಮಿ- ಕನಕಗಿರಿ



ಪದ್ಮಾವತಿಯಕ್ಷಿ-ಮಲೆಯೂರು

## ಚಾಮರಾಜನಗರ ತಾಲೂಕಿನ ರಾವಣ ಶಿಲ್ಪಗಳು



ಕನ್ನೇಗಾಲ



ಕುದೇರು



ಬಾಗಲಿ



ಆಚಾರ್ಯ ಶ್ರೀ ಪೂಜ್ಯಪಾದರ ಚರಣ–ಕನಕಗಿರಿ



ದೊಡ್ಡಹನುಮಂತ – ಕೂಡ್ಲೂರು



ದೇವಾಲಯದ ಕಂಬ–ಉಮ್ಮತ್ತೂರು


ಬೆಣ್ಣೆ ಕೃಷ್ಣ – ಉಮ್ಮತ್ತೂರು


ಅರ್ಕೇಶ್ವರ ದೇವಾಲಯದ ಕಾಳಶಿಲ್ಪ– ಅಲೂರು


ನಾರಾಯಣ ಸ್ವಾಮಿ ಮೂರ್ತಿ – ಮಂಗಲ

ಚಾಮರಾಜ ನಗರ ತಾಲೂಕಿನ ಸಾಮಾಜಿಕ ಆಚರಣೆಗಳು


ಸೀಮಂತ ಶಾಸ್ತ್ರ-ಮಂಗಲ


ನಾಮಕರಣ ಶಾಸ್ತ್ರ-ಚಾಮರಾಜನಗರ


ತೊಟ್ಟಿಲು ಶಾಸ್ತ್ರ-ಚಾಮರಾಜನಗರ

# ಚಾಮರಾಜನಗರ ತಾಲೂಕಿನ ಜಾತ್ರಾ ಉತ್ಸವಗಳು


ಸಿದ್ಧಪ್ಪಾಜಿ ಉತ್ಸವ- ಅಂಡರಕಳ್ಳಿ ಮೋಳೆ


ಎತ್ತಿನ ಬಂಡಿ ಜಾತ್ರೆ- ಕಸ್ತೂರು


ಮಾರಮ್ಮನ ಉತ್ಸವ- ಬೆಂಡಾರವಾಡಿ

# ಚಾಮರಾಜನಗರ ತಾಲೂಕಿನ ಜಾತ್ರಾ ಉತ್ಸವಗಳು


ಮಾರಿಹಬ್ಬದ ಉತ್ಸವ- ಮಂಗಲ


ಬಸವನ ಉತ್ಸವ- ಕೆಂಪನಪುರ


ಎತ್ತಿನ ಹಬ್ಬ - ಮಂಗಲ


ನಾರಾಯಣ ಸ್ವಾಮಿ ಉತ್ಸವ-ಹರದನಹಳ್ಳಿ


ಮಾರಿ ಹಬ್ಬ - ಬೆಂಡರವಾಡಿ


ಒದೆ ಹಬ್ಬ- ಮಂಗಲ

